# ಬೆಡಗಿನ ವಚನಗಳು

## (ಟೀಕು ಸಹಿತ)

ಸಂಪಾದಕರು:
ಎಂ. ಜೀವನ

ಸಿಟಿ ಬುಕ್ ಸ್ಟಾಲ್, ಹುಬ್ಬಳ್ಳಿ

ಬೆಲೆ: ೩ ರೂ.

# ಮುನ್ನುಡಿ

ಹನ್ನೆರಡನೆಯ ಶತಮಾನವು ಭಾರತದ ಇತಿಹಾಸದಲ್ಲಿ ಸ್ವರ್ಣಾಕ್ಷರಗಳಿಂದ ಬರೆಯಿಡತಕ್ಕ ಕಾಲವಾಗಿದೆ. ಏಕೆಂದರೆ ಆಗ ಜನತೆಯ ಉದ್ಧಾರಕ್ಕಾಗಿ ಶ್ರಮಿಸಿ ದವರು, ಜನತೆಗಾಗಿ ಜನತೆಗೆ ತಿಳಿಯುವಂಥ ಸರಳ ಭಾಷೆಯಲ್ಲಿಯೇ ಆಣಿ ಮುತ್ತು ಗಳಂಥ ವಚನಗಳನ್ನು ಕನ್ನಡನಾಡಿಗೆ-ಇಡಿಯ ಜಗತ್ತಿಗೆ-ಅರ್ಪಿಸಿದ ಮಹಾನು ಭಾವರು ಆ ಕಾಲದಲ್ಲಿ "ಮಹಾ-ರಾಷ್ಟ್ರ" ವೆನ್ನಿಸಿಕೊಂಡಿದ್ದ ಕನ್ನಡನಾಡಿನಲ್ಲಿ ಆಗಿಹೋದರು.

ಮುಂದುವರೆದ ಶತಮಾನವೆಂದು ಕರೆಯಿಸಿಕೊಳ್ಳುವ ಈ ಶತಮಾನದ ಸಂತಾನಗಳು, ಆಶ್ಚರ್ಯದಿಂದ ಬೆರಳು ಕಚ್ಚುವಂಥ ಕಾರ್ಯಗಳನ್ನು ಇಂದಿಗೆ ಎಂಟು ನೂರು ವರುಷಗಳ ಹಿಂದೆ ಆ ಮಹಾನುಭಾವರು ಮಾಡಿಹೋದರು. ಒಂದು ವೇಳೆ ಅವರು ಕನ್ನಡನಾಡಿನಲ್ಲಿ ಜನಿಸದೆ ಬೇರಾವುದೋ ನಾಡಿನಲ್ಲಿ ಜನಿ ಸಿದ್ದರೆ ಆ ಮಹಿಮರ ವಾಣಿ ಜಗತ್ತಿನ ಮೂಲೆಮೂಲೆಗೂ ತಲುಪುತ್ತಿತ್ತು. ಆದರೆ ಮಾಡುವದೇನು? ಇಂದು ಆ ಶರಣರ ಜಯಂತಿಯ ಅಧಿಕೃತ ರಜೆಯನ್ನೂ ನಮ್ಮ ಸರಕಾರವು ಒದಗಿಸಲು ಸಿದ್ಧವಿಲ್ಲ.

ಆ ಮಹಾನುಭಾವರು ಅರ್ಥಾತ್ ಕಲ್ಯಾಣದ ಶರಣರು ಜನತೆ ಬದುಕಿ ಬಾಳಲಿ ಎಂದು ಆ ದಿಶೆಯಲ್ಲಿ ಹೆಣಗಿ ತಮ್ಮ ಸುವ ನೀಗಿದರು. ಆದರೆ ಅವರ ಆಣಿ ಮುತ್ತುಗಳು ಇಂದಿಗೂ-ಎಂದಿಗೂ-ನಮಗೆ ದಾರಿ ದೀಪವಾಗಬಲ್ಲವು. ಪ್ರಸ್ತುತ ಗ್ರಂಥದಲ್ಲಿ ಆ ಮಹಾನುಭಾವರ ವಚನಗಳು ಟೀಕು ಸಹಿತವಾಗಿ ಶೇಖ ರಿಸಲಾಗಿದೆ. ಆದರೆ ಇವು ಕೇವಲ ಬೆಡಗಿನ ವಚನಗಳು ಮಾತ್ರ.

ಬೆಡಗು ಶಬ್ದವು ಬಹು ವ್ಯಾಪಕಾರ್ಥವಾಗಿದೆ ಅದನ್ನು ಬೆಡಂಗು, ಸೋಗು, ವೈಯ್ಯಾರ, ಸೊಗಸು, ಸೊಬಗು, ಸೌಂದರ್ಯ, ಸೋಜಿಗ ಹಾಗು ರಹಸ್ಯ ಮುಂತಾಗಿ ವಿವರಿಸಬಹುದು. ಈ ಸಂಗ್ರಹದೊಳಗಿನ ವಚನಗಳನ್ನು ಹಾಗು ಅವುಗಳ ಅರ್ಥವನ್ನು ವೀಕ್ಷಿಸಿದರೆ ಆ ಶಬ್ದದಲ್ಲಿನ ಅರ್ಥಗರ್ಭಿತದ ಅರಿವಾಗ ದಿರದು. ಆದರೂ ಇವು "ಉಕ್ಕಿನ ಕಡಲೆಗಳು" ಎಂದು ನಾನು ಹೇಳಬಲ್ಲೆ.

ಇದರೊಳಗೆ-ಈ ಸಂಗ್ರಹದೊಳಗೆ-ಬರುವ ವಚನಕಾರರ ಪರಿಚಯವನ್ನು ಕೊಡಬೇಕಾಗಿತ್ತು ಆದರೆ ಈ ಮೊದಲೇ ನನ್ನಿಂದ ರಚಿತವಾಗಿದ್ದ "ಕಲ್ಯಾಣದ ಕ್ರಾಂತಿಕಾರರು" ಪುಸ್ತಕದಲ್ಲಿ ಕೆಲವರ ಚರಿತ್ರೆಗಳು ಬಂದಿದ್ದು ಉಳಿದವರ ಚರಿ ತ್ರೆಯ ಬೇರೊಂದು ಪುಸ್ತಕವನ್ನೇ ಬರೆಯಲಿದ್ದುದರಿಂದ ಇದರಲ್ಲಿ ಜೋಡಿಸಲಿಲ್ಲ.

ವಚನಗಳ ಸಂಪಾದನೆಯ ಕಾರ್ಯವನ್ನು ಮೊಟ್ಟ ಮೊದಲು ಪ್ರಾರಂಭಿಸಿ ಈಗಲೂ ಅದೇ ದಿಶೆಯಲ್ಲಿ ಮುನ್ನುಗ್ಗುತ್ತಿರುವವರಲ್ಲಿ ರಾ.ಬ.ಫ.ಗು. ಹಳಕಟ್ಟಿ ಯವರು, ಅವರ ನಂತರ ಶ್ರೀ ಉತ್ತಂಗಿ ಚನ್ನಪ್ಪನವರ ಹೆಸರುಗಳನ್ನು ಧಾರಾಳ ವಾಗಿ ಹೇಳಬಹುದು. ಅವರು ನಾಡಿಗೆ, ನಾಡಿಗರಿಗೆ, ಸಲ್ಲಿಸಿದ, ಸಲ್ಲಿಸುತ್ತಿದ್ದ, ಸಲ್ಲಿ ಸಲಿರುವ ಸೇವೆಯು ಅಪಾರವಾದುದು. ಈ ದಿಶೆಯಲ್ಲಿ ನನ್ನದು ತೀರ ಅಲ್ಪ ಕಾರ್ಯ. ಈ ಗ್ರಂಥವು ಜನಮೆಚ್ಚುಗೆಯನ್ನು ಪಡೆದರೆ ಅಕ್ಕ ಮಹಾದೇವಿಯವರ, ಚನ್ನಬಸವಣ್ಣನ, ಬಸವಣ್ಣನವರ ಹಾಗು ಪ್ರಭುದೇವರ ವಚನಗಳನ್ನು (ಟೀಕಾ ಸಹಿತ) ಸಂಪಾದಿಸಬೇಕೆಂಬ ಹಂಬಲವೂ ಇದೆ.

ಈ ಗ್ರಂಥದೊಳಗಿನ ವಚನಗಳಿಗೆ ಸಿಂಗಳದ ಸಿದ್ಧ ಬಸವರಾಜದೇವರು ಟೀಕು ಕೊಟ್ಟಿದ್ದಾರೆ. ಅವರಲ್ಲಿಯ ಪ್ರತಿಭೆಯನ್ನು ಈ ಸಂಗ್ರಹದಲ್ಲಿ ಕಾಣಬ ಹುದು. ಇದರ ಕೈ ಬರೆಹದ ಪ್ರತಿಯು ರಾಯಚೂರ ಜಿಲ್ಲೆಯ ಸಂತಿಕೆಲೂರ ಗ್ರಾಮದಲ್ಲಿದ್ದ ಘನಮಠದ ಶಿವಯೋಗಿಗಳ ಗದ್ದುಗೆಯ ಪರಿಚಾಕರರಿಂದ ದೊರೆ ಯಿತು. ಆ ಬಗ್ಗೆ ಗೆಳೆಯ ಚಂದ್ರಶೇಖರ ಹೆಸರೂರರಿಗೂ ಉಪಕೃತನಿದ್ದೇನೆ.

ಕೊನೆಯದಾಗಿ ಈ ಸಂಗ್ರಹವು ಅಂದವಾಗುವಂತೆ ಪರಿಶ್ರಮಿಸಿದ ರಾಯಲ್ ಪ್ರೆಸ್ಸಿನ ಕೆಲಸಗಾರರಿಗೆ ನನ್ನ ನೆನಕೆಗಳನ್ನು ಸಲ್ಲಿಸದಿದ್ದರೆ ಅಪಕಾರ ವಾದೀತು ಎಂದು—

**ಉಣಕಲ್ಲ**
**(ಹುಬ್ಬಳ್ಳಿ.)**

ವಂದನೆಗಳೊಂದಿಗೆ
**ಎಂ. ಜೀವನ.**

# ಅನುಕ್ರಮಣಿಕೆ

|| ಶ್ರೀ ಗುರು ಬಸವಲಿಂಗಾಯನಮು

# ಬೆಡಗಿನ ವಚನಗಳು

ಸರ್ವಗಣಂಗಳ ಬೆಡಗಿನ ಸಿಂಗಳದ ಸಿದ್ಧ ಬಸವರಾಜ ದೇವರು ವ್ಯಾಖ್ಯಾನವಂ ಮಾಡಿದ ಎಲ್ಲ ಪುರಾತನರ ವಚನ, ಬೆಡಗಿನ ವಚನ. ಪ್ರಥಮದಲ್ಲಿ......

## ಕೋಲಶಾಂತಯ್ಯನವರ ವಚನಗಳು

ಮೂರು ಮೊಲೆಯನುಂಡು ಬಂದವ ಈರೈದು ಕಂಡು ಬಂದವ
ನೀನಾರು ಹೇಳಾ |
ಸಂದಿಲ್ಲದ ಪಟ್ಟಣದಲ್ಲಿ ಬಂದು ನೊಂದೆಯಲ್ಲ
ಅಂದಿನ ಬೆಂಬಳಿಯ ಮರೆದು ಇಂದಿನ ಸಂದೇಹಕ್ಕೊಡಲಾಗಿ
ಈ ಉಭಯದ ಸಂದ ನಿನ್ನ ನೀನರಿ ಪುಣ್ಯಾರಣ್ಯದ
ಘನಭೀಮೇಶ್ವರ ಲಿಂಗ ನಿರಂಗ ಸಂಗ

**ಟೀಕು:**— ಸಂಸಾರ ವಿಷಯ ರಸೋದಕವ ತುಂಬಿಕೊಂಡಿಹ, ತನುತ್ರಯಗಳೆಂಬುವೀಗ ಮೂರು ಮೊಲೆ ಎಂಬ ಶಬ್ದಕ್ಕರ್ಥ. ಆ ತನುತ್ರಯ ಸಂಬಂಧವಾದ ಜೀವಾತ್ಮನು, ಆ ದೇಹೇಂದ್ರಿಯ ವಿಷಯ ಸುಖವನನುಭವಿಸುತ್ತಿರ್ದನೆಂಬುದೀಗ, ಉಂಡು ಎಂಬ ಶಬ್ದಕ್ಕರ್ಥ. ಆ ದೇಹೇಂದ್ರಿಯ ವಿಷಯನನುಭವಿಸುವಾತ್ಮನು ಪರಿಭವದಲ್ಲಿ ಬರುತ್ತಿರ್ದನೆಂಬುದೀಗ, ಬಂದವನೆಂಬ ಶಬ್ದಕ್ಕರ್ಥ. ದಶವಾಯುಗಳ ದಶಗುಣಗಳ ಪ್ರಕೃತಿಯಲ್ಲಿ ಸಿಲ್ಕಿ ಬರುತ್ತಿರ್ದನೆಂಬುದೀಗ, ಈರೈದು ಕಂಡು ಬಂದವನೆಂಬ ಶಬ್ದಕ್ಕರ್ಥ. ಇಂತಪ್ಪಾತ್ಮಂಗೆ ಸುಜ್ಞಾನೋದಯವಾಗಿ ತನ್ನ ನಿಜ ಸ್ವರೂಪ ಮರದುಭವರಾಟಳದೊಳಗೆ ಸಿಲುಕಿ ಕೆಟ್ಟನಲ್ಲ, ಎಂದು ವಿಲೇಕಿಸುತ್ತಿರ್ದನೆಂಬುದೀಗ, ಬಂದವ ನೀನಾರು ಹೇಳಾ ಎಂಬ ಶಬ್ದಕ್ಕರ್ಥ. ಅಂತು ಪ್ರಪಂಚಿನಲ್ಲಿ ಭಿನ್ನವಿಲ್ಲದಿರ್ದ ಪಂಚಭೂತ ಮುಖ್ಯವಾದ ತನುತ್ರಯದಲ್ಲಿ ಆತ್ಮನು ಸಿಲ್ಕಿ ಕಾಲ–ಕಾಮರ ಕೈಯಲ್ಲಿ ಬಡಿವಡದು ದುಃಖಪಟ್ಟನೆಂಬುದೀಗ, ಬಂದು ನೊಂದೆಯಲ್ಲ ಎಂಬ ಶಬ್ದಕ್ಕರ್ಥ. ಅಂತು ಅನಾದಿ ಪರಶಿವ ತತ್ವದಲ್ಲಿ ಭಿನ್ನವಿಲ್ಲದೆ ಕೂಡಿರ್ದ ಚಿದಾಂಶಿಕನಾದಾತ್ಮಂಗೆ, ಶಿವ ತನ್ನ ಪಂಚ ಮುಖದಿಂ ಪಂಚತತ್ವ ಸಂಬಂಧವಾದ ದೇಹವ ಆತ್ಮಂಗೆ ಸಂಬಂಧವ ಮಾಡಲು, ನಿಜವಂ ಮರದು ದೇಹೋಹಂ ಎಂದು ದೇಹೇಂದ್ರಿಯ ವಿಷಯ ಸುಖವ ಮೆಚ್ಚಿದ ಕಾರಣವೆಂಬುದೀಗ, ಅಂದಿನ ಬೆಂಬಳಿಯ ಮರದು ಎಂಬ ಶಬ್ದಕ್ಕರ್ಥ. ಇಂತಪ್ಪ ಸಂಕಲ್ಪಕ್ಕೊಡಲಾಗಿ ಜೀವ, ಭಾವ, ಭ್ರಾಂತಿಗೆ ಸಿಲ್ಕಿ ಕೆಟ್ಟಹನೆಂಬುದೀಗ ಇಂದಿನ, ಸಂದೇಹಕ್ಕೊಡ

ಲಾಗಿ ಎಂಬ ಶಬ್ದಕ್ಕರ್ಥ. ಅಂತಿರ್ಪಾತ್ಮಂಗೆ ಶಿವಜ್ಞಾನೋದಯವಾಗಿ ತನ್ನ ನಿಜವಪ್ಪ ಪರಬ್ರಹ್ಮವರಿದು ಸಂದೇಹ ಭ್ರಾಂತಿಯೊಡನೆ ತೊಳಲುವ ಸಕಲ ಪ್ರಪಂಚ ನಿವೃತ್ತಿಮಾಡಿ ಶ್ರೀಗುರು ಕಾರುಣ್ಯವಂ ಪಡೆದು ಶಿವಸತ್ಪಥದಲಿ ಆಚರಿಸುತ್ತಿರ್ದನೆಂಬುದೀಗ, ಇಂತಿ ಉಭಯದಸಂದ ನಿನ್ನ ನೀನರಿ ಎಂಬ ಶಬ್ದಕ್ಕರ್ಥ. ಇಂತಪ್ಪ ಶಿವ ಸತ್ಪಥದಲ್ಲಿ ಆಚರಿಸಿದ ಶರಣನು ಉಪಾಧಿಯ ಫಲ ಪದಂಗಳ ಜ್ಞಾನಾಗ್ನಿಯಿಂ, ದಹಿಸಿದನೆಂಬುದೀಗ, ಪುಣ್ಯಾರಣ್ಯದ ಘನ ಎಂಬ ಶಬ್ದಕ್ಕರ್ಥ. ಅಂತು ಅಹಂಕರಿಸಿದ ಕಾಲ-ಕಾಮರ ಮರ್ದಿಸಿದನೆಂಬುದೀಗ, ಭೀಮೇಶ್ವರ ಲಿಂಗವೆಂಬ ಶಬ್ದಕ್ಕರ್ಥ. ಆ ಚಿತ್‌ಸ್ವರೂಪವಾದ ಶರಣನು ಚಿದ್ಘನಲಿಂಗಕ್ಕೆ ಚಿತ್ಪ್ರಭಾಂಗ ಸ್ವರೂಪನಾದ ಕಾರಣ ನಿರಂಗ ಸಂಗನೆಂಬ ಶಬ್ದಕ್ಕರ್ಥ.

೨

ಜಲ ಮಡಿಕೆಯ ತುಂಬಿ
ಮೊಲೆ ನೀರ ಮೀವವರೆಲ್ಲರು ಆ ಮಲಿನಗುಣ ನೇಮವ
ಮಾತಾಡಲ್ಯಾಕೆ ಸುಮನೆಯ ಸುಖದೊಳಗೆ
ಲಯವಹರೆಲ್ಲರು ಆ ಸುಮನನ ಭಾವವ ವಿಘಟಿಸುವ ಪರಿ
ಇನ್ನಾವುದು,
ಬಾಲೆ ಭವಕ್ಕೆ ಬೀಜ ನಿರ್ಗತಿ ನಾಮರೂಪಿಲ್ಲ
ಇಂತೀ ಭೇದವ ನಿನ್ನ ನೀನರಿ ಪುಣ್ಯಾರಣ್ಯದ ಘನ ಭೀಮೇಶ್ವರ
ಲಿಂಗ ನಿರಂಗಸಂಗ

**ಟೀಕು:**— ಸಂಸಾರ ವಿಷಯ ರಸವೆಂಬುದೀಗ, ಜಲವೆಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ರಸವ ತನುತ್ರಯವೆಂಬ ಅನಿತಲ ಭಾಂಡದಲ್ಲಿ ತುಂಬಿ ಎಂಬುದೀಗ, ಜಲಮಡಿಕೆಯ ತುಂಬಿ ಎಂಬ ಶಬ್ದಕ್ಕರ್ಥ. ಮೊಲೆ ಎಂದೊಡೆ ತನುತ್ರಯಗಳೆಂಬ ಪರಿ, ಅಂತಪ್ಪ ತನುತ್ರಯದಲ್ಲಿ ತುಂಬಿರ್ದ, ಸಂಸಾರ ವಿಷಯ ಸುಖವನನುಭವಿಸುತ್ತಿರ್ದರೆಲ್ಲರು ಎಂಬುದೀಗ, ·ಮೊಲೆನೀರ ಮೀವವರೆಲ್ಲರು ಎಂಬ ಶಬ್ದಕ್ಕರ್ಥ. ಆ ಮಲಿನೆಂದೊಡೆ ಮಲತ್ರಯ ರಹಿತವಪ್ಪ ಅನಾದಿ ಪರಶಿವ ಲಿಂಗವು. ಆ ಪರಶಿವನ ಗುಣವೆಂದೊಡೆ, ದಶವಿಧ ಕಲ್ಯಾಣಗುಣ ನೇಮವೆಂದೊಡೆ ಆ ಭಿನ್ನ ಕ್ರಿಯಾಚಾರವು ಅಂತು ತಾವು ಅನಿತ್ಯವಾದ ಸಂಸಾರ ಸುಖವನನುಭವಿಸುತ್ತಿರ್ದು ಅವನರಿಯಲಿಲ್ಲ ವೆಂಬುದೀಗ, ಆ ಮಲಿನ ಗುಣ ನೇಮದ ಮಾಡಲ್ಯಾಕೆ ಎಂಬ ಶಬ್ದಕ್ಕರ್ಥ. ಸುಮನೆ ಎಂದೊಡೆ ಜಗನ್ಮೋಹಿನಿಯಪ್ಪ ಮಾಯೆ. ಅಂತಪ್ಪ ಮಾಯಾಸಂಬಂಧವ ದೇಹೇಂದ್ರಿಯ ವಿಷಯ ಸುಖವನನುವಿಸಿ, ಆ ಸುಖದಲ್ಲಿ ಪರವಶರಾಗಿಹರೆಲ್ಲ ಮೃತರಾದರೆಂಬುದೀಗ ಸುಮನೆಯ ಸುಖದೊಳಗೆ ಲಯವಹರೆಲ್ಲರು ಎಂಬ ಶಬ್ದಕ್ಕರ್ಥ. ಆ ಸುಮನನೆಂದೊಡೆ ಮಲತ್ರಯ ರಹಿತವಪ್ಪ ಪರಶಿವನು. ಅಂತಪ್ಪ ಪರಶಿವಭಾವ ಘಟಿಸದೆ ಹೋಯಿತ್ತಾತ್ಮಂಗೆ ಎಂಬುದೀಗ, ಆ ಸುಮನನ ಭಾವ ವಿಘಟಿಸುವ ಪರಿ ಇನ್ನಾವುದೆಂಬ

ಶಬ್ದಕ್ಕರ್ಥ. ಬಾಲೆ ಎಂದೊಡೆ ಮಾಯಾಶಕ್ತಿ. ಅಂತಪ್ಪ ಅಜ್ಞಾನ ಮಾಯಾ ಶಕ್ತಿಯು ಸಂಗವ ಬಯಸಿಪವರಿಗೆ ಭವಬೀಜ ಕೆಡವೆಂಬುದೀಗ ಬಾಲೆಭವಕ್ಕೆ ಬೀಜವೆಂಬ ಶಬ್ದಕ್ಕರ್ಥ. ಶ್ರೀಮಹೇಶ್ವರ ಶಿವನ ಕೃಪೆಯಿಂದ ಸುಜ್ಞಾನೋದಯ ವಾಗಿ ನಿಜವನರಿದು ಪರಶಿವ ಪದದಲ್ಲಿ ಬೆರಸಿದ ಶರಣಂಗೆ ಭಿನ್ನ ಕ್ರಿಯಾಚಾರ ವಳಿದು, ಅಭಿನ್ನ ಕ್ರಿಯಾಚಾರದಲ್ಲಿ ನಿರ್ಧರವಾದವೆಂಬುದೀಗ ನಿರ್ಗತಿ ಎಂಬ ಶಬ್ದಕ್ಕರ್ಥ. ಶರಣಲಿಂಗವೆಂಬ ಹೆಸರಡಗಿ ನಿರ್ನಾಮ ಸ್ವರೂಪನಾಗಿರ್ದನೆಂಬು ದೀಗ ನಾಮವಿಲ್ಲವೆಂಬ ಶಬ್ದಕ್ಕರ್ಥ. ನಿರಾಕಾರವಾದ ಪರಬ್ರಹ್ಮವೇ ಆ ಶರಣ ನೆಂಬುದೀಗ, ರೂಪಿಲ್ಲವೆಂಬ ಶಬ್ದಕ್ಕರ್ಥ. ಈ ಭೇದವ ಶರಣಸ್ವಾನುಭಾವದ ರುವಿಂದಲರಿದು ನಿರೂಪಿಸುತ್ತಿರ್ದನೆಂಬುದೀಗ ಇಂತಿ .ಭೇದವ•ನಿನ್ನ ನೀನರಿ, ಪುಣ್ಯಾರಣ್ಯದ ಘನಭೀಮೇಶ್ವರ ಲಿಂಗ ನಿರಂಗ ಸಂಗವೆಂಬ ಶಬ್ದಕ್ಕರ್ಥ.

೩

ಮಲೆಯ ಮಂದಿರದ ಕಾಳವ್ವೆಯ ಉದರದಲ್ಲಿ ಮೂವರು ಪುರೋಹಿತರು ಬಂದರು.

ಒಬ್ಬ ಇಹದಲ್ಲಿ ಗುಣವ ಬಲ್ಲವ;
ಒಬ್ಬ ಪರದಲ್ಲಿ ಗುಣವ ಬಲ್ಲವ;
ಮತ್ತೊಬ್ಬ ಇಹ-ಪರ ಉಭಯತಾ ಸಹಿತನಾಗಿ ಮೂರನರೆದು
ಅರಿಯುವವನ ತೋಳಿನ ಕೊಡಗೂಸು
ಕಾಳವ್ವೆಯ ಕತ್ತಲೆಯಲ್ಲಿ ತಳ್ಳಿ, ಮಲಿಗೆ ಕಿಚ್ಚನಹಾಕಿ
ಮಂದಿರವ ಹರಿದು ಹಾಕಿ, ಪುರೋಹಿತರ ಕಣ್ಣು ಕಳೆದು
ಕೊಡಗೂಸು ಕೊಡನೊಳಗಾದಳು.
ಇಂತಿವರೆಡೆಯ ಭೇದವನರಿ ಪುಣ್ಯಾರಣ್ಯದ
ಘನ ಭೀಮೇಶ್ವರಲಿಂಗ ನಿರಂಗ ಸಂಗ

**ಟೀಕು**:— ಭವಾರಣ್ಯವೆಂಬುದೀಗ, ಮಲೆ ಎಂಬ ಶಬ್ದಕ್ಕರ್ಥ. ಪಂಚ ಭೂತ ಸಂಬಂಧವಾದ ತನುವೆಂಬುದೀಗ,ಮಂದಿರವೆಂಬ ಶಬ್ದಕ್ಕರ್ಥ. ಅಂತಪ್ಪ ತನು ಮಧ್ಯದಲ್ಲಿ ಅಜ್ಞಾನ ಸ್ವರೂಪಿಣಿಯಪ್ಪಮಾಯಾಶಕ್ತಿ ಇರುತ್ತಿಹಳೆಂಬುದೀಗ, ಕಾಳವ್ವೆ ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯಾ ಸಂಬಂಧ ಕಲ್ಪಸಂಭೂತವಾದ ದೇಹದಲ್ಲಿ ವಿಶ್ವತೇಜಸ ಪ್ರಾಜ್ಞರೆಂಬ ಜೀವತ್ರಯಂಗಳುದಯಿಸಿದವು ಎಂಬು ದೀಗ, ಉದರದಲ್ಲಿ ಮೂವರು ಪುರೋಹಿತರು ಬಂದರು ಎಂಬ ಶಬ್ದಕ್ಕರ್ಥ. ಇಹ ವೆಂದೊಡೆ ಸ್ಥೂಲ ತನು ಸಂಬಂಧವಾದ ಜಾಗ್ರತಾವಸ್ಥೆ ಆ ಸುಖವನನುಭವಿ ಸುತ್ತಿಹನು ವಿಶ್ವನೆಂಬವನೀಗ, ಒಬ್ಬ ಇಹದಲ್ಲಿ ಗುಣವ ಬಲ್ಲವನೆಂಬ ಶಬ್ದಕ್ಕರ್ಥ. ಅಂತು ಜಾಗ್ರತಾವಸ್ಥೆಯ ಸುಖಕ್ಕೆ ಬೇರಾಗಿರ್ದ ಸೂಕ್ಷ್ಮತನುವಿನ ಸ್ವಪ್ನಾ ವಸ್ಥೆಯ ಸುಖವನನುಭವಿಸುತ್ತಿಹನು ತೈಜಸನೆಂಬುದೀಗ, ಒಬ್ಬ ಪರದಲ್ಲಿ ಗುಣ

ವ ಬಲ್ಲವನೆಂಬ ಶಬ್ದಕ್ಕರ್ಥ. ಮತ್ತೊಬ್ಬನೆಂದೊಡೆ ಪ್ರಾಜ್ಞನು. ಆ ಪ್ರಾಜ್ಞನು ಜಾಗ್ರತಾವಸ್ಥೆ, ಸ್ವಪ್ನಾವಸ್ಥೆಯೆಂಬ ಎರಡರ ಗುಣವಕೂಡಿಕೊಂಡು ಸುಷುಪ್ತಾವಸ್ಥೆಯಲ್ಲಿ ಪರವಶನಾದನೆಂಬುದೀಗ, ಮತ್ತೊಬ್ಬ ಇಹ ಪರ ಉಭಯತಾ ಸಹಿತಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪಾತ್ಮನು ಆ ತ್ರಿವಿಧಾವಸ್ಥೆಯಲ್ಲಿ ತೊಳಲುತ್ತಿಹನೆಂಬುದೀಗ, ಅರೆಯನೆಂಬ ಶಬ್ದಕ್ಕರ್ಥ. ಆ ಪ್ರಪಂಚ ನಿವೃತ್ತಿಯಂ ಮಾಡಿದ ಶರಣನ ತೋಳೆಂದೊಡೆ ಸದ್ಭಾವ. ಆ ಸದ್ಭಾವದಲ್ಲಿ ಸನ್ನಿಹಿತವಾಗಿರ್ಪಕೊಡಗೂಸೆಂದೊಡೆ ಜ್ಞಾನಶಕ್ತಿ. ಅಂತಪ್ಪ ಶಿವಜ್ಞಾನ ಪ್ರಕಾಶದಿಂದ ಅಜ್ಞಾನ ಸ್ವರೂಪಿಣಿಯಪ್ಪ ಮಾಯಾಶಕ್ತಿಯನು, ತಮೋ ಗುಣ ಸಮುದ್ಭವವಾದ ಮರವೆಯನು ನಿವೃತ್ತಿಯಂ ಮಾಡಿದನೆಂಬುದೀಗ, ಅರಿಯದವನ ತೋಳಿನ ಕೊಡಗೂಸು ಒಳಪ್ಪೆಯ ಕತ್ತಲೆಯಲ್ಲಿ ತಳ್ಳಿ ಎಂಬ ಶಬ್ದಕ್ಕರ್ಥ. ಅಂತು ಅಜ್ಞಾನ ಮಾಯೆ ನಷ್ಟವಾದಲ್ಲಿ ಭವಾರಣ್ಯವ ಮಹಾಜ್ಞಾನಾಗ್ನಿಯಿಂ ದಹನವ ಮಾಡಿದನೆಂಬುದೀಗ, ಮಲಿಗೆ ಕಿಚ್ಚನಡಾಕಿ ಎಂಬ ಶಬ್ದಕ್ಕರ್ಥ. ಅಂತು ಭವಾರಣ್ಯ ನಷ್ಟವಾದಲ್ಲಿ ತನುತ್ರಯ ಮುಖ್ಯವಾದ ಇಪ್ಪತ್ತೈದು ತತ್ವಂಗಳ, ದುಶ್ಚರಿತ್ರವ ನಷ್ಟವ ಮಾಡಿದನೆಂಬುದೀಗ, ಮಂದಿರ ಹಿರಿದು ಹಾಕಿ ಎಂಬ ಶಬ್ದಕ್ಕರ್ಥ. ಅಂತು ಜೀವತ್ರಯಂಗಳ ಭೋಗಾದಿ ಭೋಗಂಗಳಿಗೆ ಕರ್ತರಪ್ಪ ವಿಶ್ವತೈಜಸ ಪ್ರಾಜ್ಞರ, ಅಜ್ಞಾನದೃಷ್ಟಿಯ ನಷ್ಟವಮಾಡಿ, ಸುಜ್ಞಾನವ ಪ್ರಭಾವಿಸಿದ ನೆಂಬುದೀಗ, ಪುರೋಹಿತರ ಕಣ್ಣಕಳೆದು ಎಂಬ ಶಬ್ದಕ್ಕರ್ಥ. ಅಂತು ಜೀವತ್ರಯಂಗಳ ಅಜ್ಞಾನದೃಷ್ಟಿಯು ನಷ್ಟವಾದಲ್ಲಿ ಸುಜ್ಞಾನ ಸ್ವರೂಪನಾದ ಶರಣ ಸತಿಯು, ಭಕ್ತಿಭಾವದಿಂ, ಗುರೋಪಾವಸ್ಥೆಯ ಮಾಡಿ ಆ ಶ್ರೀ ಗುರು ಕರುಣಿಸಿ, ಚಿದ್ಘಾಂಡ ಸ್ವರೂಪವಾದ ಮಹಾಘನಲಿಂಗವ ಕರ, ಮನ, ಭಾವಂಗಳಲ್ಲಿ ಸಾಹಿತ್ಯವ ಮಾಡಲು ಆ ಲಿಂಗದಲ್ಲಿ ಸರ್ವಾಂಗ ಸಮರಸವ ಮಾಡಿದನೆಂಬುದೀಗ, ಕೊಡಗೂಸು ಕೊಡನೊಳಗಾದಳೆಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಂಗದಲಭಿನ್ನ ಕ್ರಿಯಾಚಾರವೆಂಬುದೀಗ, ಇಂತಿವರಡಿಯ ಭೇಧವನರಿ ಪುಣ್ಯಾರಣ್ಯದ ಘನಭೀಮೇಶ್ವರ ಲಿಂಗ ನಿರಂಗ ಸಂಗ ಎಂಬ ಶಬ್ದಕ್ಕರ್ಥ.

೪

ಹಿತ್ತಿಲ ಬಾಗಲಲ್ಲಿ ಹೋಹ ಹೆತ್ತ ತಾಯಿ
ಮಗಕೊಂದು ಸತ್ತಳೆಂದು ಅಳುತಿರ್ದ
ಸತ್ತವಳೆದ್ದು ಮಗನಕ್ಕಿಯ ಮಾಣಿಸಿ ಮೊತ್ತದ ಬಂಧುಗಳೆಲ್ಲರು
ಮತ್ತಿವರು ಬದುಕಿದರೆಂದು ಅಳುತಿರ್ದರು.
ಇಂತೀ ಚಿತ್ತದ ಭೇದವನರಿ ಪುಣ್ಯಾರಣ್ಯದ ಘನಭೀಮೇಶ್ವರಲಿಂಗ
ನಿರಂಗಸಂಗ.

**ಟೀಕು:—** ಹಿತ್ತಿಲ ಬಾಗಿಲೆಂದೊಡೆ ಪ್ರಪಂಚರೂಪವಾದ ಕರ್ಮೇಂದ್ರಿಯಂಗಳ ವ್ಯವಹಾರದಲ್ಲಿ ಸಂಚರಿಸುತ್ತಿಹಳು ಮಾಯೆ ಎಂಬುದೀಗ, ಹಿತ್ತಲ

ಬಾಗಿಲಲ್ಲಿ ಹೋಹ ಎಂಬ ಶಬ್ದಕ್ಕರ್ಥ. ಅಂತಪ್ಪಮಾಯೆಯ ಜೀವಂಗೆ ಮಾತೃಸ್ಥಾನವಾದ ಕಾರಣ ಹೆತ್ತ ತಾಯೆ, ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯಾ ಸಂಕಲ್ಪ ಸಂಭೂತವಾದ ಜೀವಂಗೆ, ಜೀವ ಜ್ಞಾನೋದಯವಾಗಲು, ತನ್ನ ನಿಜವೆ ಪರಬ್ರಹ್ಮವೆಂದರಿದ ಅನಿತ್ಯವಾದ ಮಾಯಾಸುಖಂಗಳ ನಿವೃತ್ತಿಯ ಮಾಡಿ ಸ್ವಸ್ಥಭಾವಿಯಾಗಿ ನಿಂದನೆಂಬುದೀಗ, ಹೆತ್ತ ತಾಯ ಮಗಕೊಂದನೆಂಬ ಶಬ್ದಕ್ಕರ್ಥ. ಅಂತಪ್ಪ ಪ್ರಪಂಚರೂಪವಾದ ಮಾಯಾಶಕ್ತಿಯಳಿದು ಹೋಯಿತ್ತೆಂಬುದೀಗ, ಸತ್ತಳೆಂದು ಎಂಬ ಶಬ್ದಕ್ಕರ್ಥ. ಅಂತಪ್ಪಮಾಯಾಶಕ್ತಿ ಅಳಿದಲ್ಲಿ, ತನ್ನ ನಿಜವಪ್ಪ ತನ್ನ ಪರಬ್ರಹ್ಮವ ಕೂಡಬೇಕೆಂದು ಗುರೂಪಾವಸ್ಥೆಯ ಮಾಡುತ್ತಿರ್ದನೆಂಬುದೀಗ. ಅಳುತ್ತಿರ್ದನೆಂಬ ಶಬ್ದಕ್ಕರ್ಥ. ಆ ಉಪಾವಸ್ಥೆಯ ಮಾಡುವ ಶಿಷ್ಯಂಗೆ ಮಾಯೆಯಳಿದು ನಿವೃತ್ತಿಮಾರ್ಗವನೆಯ್ದೆ. ಜ್ಞಾನಶಕ್ತಿ ಸ್ವರೂಪವಾದಲ್ಲಿ ಆ ಜ್ಞಾನವೇ ಕ್ರಿಯಾಘನ ಗುರುವಾಗಿ ಬಂದು ಶಿಷ್ಯನ ಆಣವಾದಿ ಮಲತ್ರಯಂಗಳಿಂದ ಕಳೆದು, ಸರ್ವಾಂಗಲಿಂಗ ಸಂಬಂಧವ ಮಾಡಿ ಸಮರಸೈಕ್ಯಕಳವ ತೋರಿದನೆಂಬುದೀಗ, ಸತ್ತವಳಿದ್ದು ಮಗನಕ್ಕೆಯ ಮಾಣಿಸಿ ಎಂಬ ಶಬ್ದಕ್ಕರ್ಥ. ಇಂತು ಸರ್ವಾಂಗಲಿಂಗ ಸಂಬಂಧಿಯಾದ ಶರಣನ ಸಕಲ ಕರಣಂಗಳೆಲ್ಲ ಅಮರಗಣತ್ವವನೆಯ್ದಿ ಲಿಂಗಕರಣಂಗಳಾದವೆಂಬುದೀಗ, ಸತ್ತವ ಬಂಧುಗಳೆಲ್ಲ ಎಂಬ ಶಬ್ದಕ್ಕರ್ಥ. ಇಂತು ಮಾಯೆಯಳಿದು ಜ್ಞಾನಶಕ್ತಿ ಸ್ವರೂಪವಾಗಿ ಜೀವನಳಿದು ಸಜೀವಸ್ವರೂಪವಾಗಿ, ಲಿಂಗಾಂಗ ಸಂಬಂಧ ಘಟಿಸಿ ನಿತ್ಯವಾದ ನಿತ್ಯಪದವನೆಯ್ದಿದು ಚೋದ್ಯವೆಂದು ಶಿವೋಹಂ ಭಾವದಿಂದಿರುತ್ತಿಹನೆಂಬುದೀಗ, ಸತ್ತವರು ಬದುಕಿದರೆಂದು ಅಳುತ್ತಿರ್ದರೆಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಂಬಂಧದ ಜ್ಞಾನಮಾರ್ಗವ ಸುಜ್ಞಾನ ದೃಷ್ಟಿಯಿಂದ ನಿರೀಕ್ಷಿಸುತ್ತಿಹನೆಂಬುದೀಗ, ಇಂತೀ ಚಿತ್ರದ ಭೇದವನರಿ, ಪುಣ್ಯಾರಣ್ಯದ ಘನ ಭೀಮೇಶ್ವರಲಿಂಗ ನಿರಂಗಸಂಗವೆಂಬ ಶಬ್ದಕ್ಕರ್ಥ.

೫

ಊರುಬಾರುಕನ ಬಾಗಿಲಲ್ಲಿ ಮಹಾರಾಜ ಕಾಯ್ದೈದಾನೆ.
ಅವನೋಲಗಕ್ಕೆ ಯಿಡಿತೆರಪಿಲ್ಲದೆ ಅವನರವ ಕಾಯ್ದೈದಾಳೆ.
ಅವ ಮನೆಯ ಹೊಕ್ಕು ಬವಣಿಗೆ ಬಹ ಬಾರುಕನ
ಭವಕ್ಕೊಳಗಾದನರಸು ವೊಡೆಯ ಭಂಟನಾದುದನರಿ
ಪುಣ್ಯಾರಣ್ಯದ ಘನಭೀಮೇಶ್ವರಲಿಂಗ ನಿರಂಗ ಸಂಗಾ.

**ಟೀಕು:**— ಊರೆಂದೊಡೆ ಪಂಚಭೂತ ಮಿಶ್ರವಾದ ದೇಹವೆಂಬುದೀಗ, ಊರೆಂಬ ಶಬ್ದಕ್ಕರ್ಥ. ಅಂತಪ್ಪ ದೇಹಕ್ಕೆ ಚೈತನ್ಯವಾಗಿಹನು ಜೀವನೆಂಬುದೀಗ, ಊರು ಬಾರುಕನೆಂಬ ಶಬ್ದಕ್ಕರ್ಥ. ಆ ದೇಹವನಾಶ್ರಯಿಸಿರ್ಪ ಇಂದ್ರಿಯಗಳೆಂಬುದೀಗ, ಬಾಗಿಲು ಎಂಬ ಶಬ್ದಕ್ಕರ್ಥ. ಮಹಾರಾಜನೆಂದೊಡೆ ಪರಮಾತ್ಮನು. ಆ ಪರಮಾತ್ಮನು ತನ್ನ ನಿಜವ ಮರದು ಇಂದ್ರಿಯಂಗಳ ವಿಷಯ

ಭೋಗವನಾಶ್ರಯಿಸಿಹನೆಂಬುದೀಗ, ಮಹಾರಾಜ ಕಾಯಿದ್ದೈದಾನೆ ಎಂಬ ಶಬ್ದಕ್ಕರ್ಥ. ಅವನೆಂದೊಡೆ ಜೀವಾತ್ಮನು. ಅಂತಪ್ಪ ಜೀವಾತ್ಮನು ಸಕಲ ಪ್ರಪಂಚದಲ್ಲಿ ಮುಳುಗಿರ್ದಕಾರಣ ಆ ಜೀವನ ನಿಲವ ಕಾಣಬಾರದೆಂಬುದೀಗ, ಅವನೋಲಗಕ್ಕೆ ಯಡೆದೆರಹಿಲ್ಲದೆ ಎಂಬ ಶಬ್ದಕ್ಕರ್ಥ. ಆ ಜೀವನ ನಾನಾ ದುಶ್ಚರಿತ್ರದ ಸುಖಕ್ಕೆ ಪರಮಾತ್ಮ ನಿಚ್ಛಿಸುತಿರ್ದನೆಂಬುದೀಗ, ಅವನವಸರವ ಕಾಯಿದ್ದೈದಾನೆ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವಾತ್ಮನು ತನುತ್ರಯ–ಷಡೇಂದ್ರಿಯಂಗಳ ವ್ಯವಹಾರದಲ್ಲಿ ಸಿಲುಕಿ ಸಂಸಾರ ವಿಷಯ ಸುಖವನುಂಡುಂಡು ಭವಕ್ಕೊಳಗಾದನೆಂಬುದೀಗ, ಅವ ಮನೆ ಮನೆಯ ಹೊಕ್ಕು ಬವಣೆಗ ಬದ ಬಾರುಕನೆಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ವ್ಯವಹಾರದಲ್ಲಿ ಸಿಲ್ಕಿದ ಪರಮಾತ್ಮನು ಭವಭಾರಕ್ಕೊಳಗಾದನೆಂಬುದೀಗ, ಭವಕ್ಕೊಳಗಾದನರಸ ಎಂಬ ಶಬ್ದಕ್ಕರ್ಥ. ಕರ್ತೃವಾಗಿರ್ದ ಪರಮಾತ್ಮನು ಆಶೆಯಿಂಭೃತ್ಯನಾಗಿರ್ದ ಜೀವನ ಬರಸಿದೊಡೆ, ಆ ಜೀವನಗುಣ ಕೆಡದೆ ಇಹುದೆಂಬುದೀಗ, ಒಡೆಯ ಭಂಟನಾದುದ ನರಿ ಪುಣ್ಯಾರಣ್ಯದ ಘನಭೀಮೇಶ್ವರಲಿಂಗ ನಿರಂಗ ಸಂಗವೆಂಬ ಶಬ್ದಕ್ಕರ್ಥ.

೬

ಬೇವಿನ ಮರದಲ್ಲಿ ಕಾಗೆ ಗೂಡಿಕ್ಕಿ
ಕೋಗಿಲು ಮರಿಯ ಹಾಕಿತ್ತು
ಗೂಗೆ ಆರೈಕೆಯ ಮಾಡಿ ಸಾಕಿತ್ತು
ಹಂಸ ತಂದೆಲರ ಕುಟುಕ ಕೊಟ್ಟು ಸಂಭ್ರಮವ ಮಾಡಿತ್ತು
ಅದು ಆರ ಹಂಗಿಲ್ಲದೆ ಹಾರಿ ಹೋಗುತ್ತ
ಎನಗೆ ಬೇವಿನ ಮರವೇ ತಾಯಿ ಎಂದಿತ್ತು
ಹಾಗೆಂದುದ ನಿನ್ನ ನೀನರಿ ಪುಣ್ಯಾರಣ್ಯದ ಘನ ಭೀಮೇಶ್ವರ
ಲಿಂಗ ನಿರಂಗ ಸಂಗಾ

**ಟೀಕು**:— ಸಂಸಾರ ವಿಷಯ ರಸದಲ್ಲಿ ಬದ್ಧವಾದ ಶರೀರ ವೆಂಬುದೀಗ, ಬೇವಿನ ಮರದಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ತನುವ, ಮಾಯೆಯಾಶ್ರಯವ ಮಾಡಿಕೊಂಡಿಹಳೆಂಬುದೀಗ, ಕಾಗೆ ಗೂಡಿಕ್ಕಿ ಎಂಬ ಶಬ್ದಕ್ಕರ್ಥ. ಅಂತು ಮಾಯೆಯು ತನುವನವ ಗ್ರಹಿಸಿಕೊಂಡಲ್ಲಿ ಜ್ಞಾನಶಕ್ತಿಯ ಭಾವದಿಂದ ಜೀವತ್ರಯಂಗಳು ಉದಯವಾದವೆಂಬುದೀಗ, ಕೋಗಿಲೆ ಮರಿಯ ಹಾಕಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವತ್ರಯಂಗಳ ಮಧ್ಯದಲ್ಲಿ ಸುಜ್ಞಾನೋದಯವಾಗಿ, ಸಕಲ ಪ್ರಪಂಚ ನಿವೃತ್ತಿಯ ಮಾಡಿ ಭಕ್ತಿಯಿಂದೆ, ಗುರೂಪಾವಸ್ಥೆಯ ಮಾಡಲು, ಗೂಗೆಯೆಂದೊಡೆ ಪ್ರಣವ ಸ್ವರೂಪವಪ್ಪ, ನಿಷ್ಕಲ ಗುರುತತ್ವ. ಅಂತಪ್ಪ ಶ್ರೀ ಗುರುದೀಕ್ಷಾ ತ್ರಯಂಗಳಿಂದ, ತನುತ್ರಯಂಗಳವ ನಷ್ಟವ ಮಾಡಿ, ತ್ರಿವಿಧ ಲಿಂಗ ಸಂಬಂಧವ ಮಾಡಿದನೆಂಬುದೀಗ, ಗೂಗೆ ಆರೈಕೆಯ

ಮಾಡಿ ಸಾಕಿತ್ತು ಎಂಬ ಶಬ್ದಕ್ಕರ್ಥ. ಆ ಶರಣನ ಹೃದಯ ಕಮಲದಲ್ಲಿ ಸಾಹಿತ್ಯವಾದ ಪರಮಾತ್ಮ ಲಿಂಗವೇ ಶರಣನ ಸರ್ವೇಂದ್ರಿಯಂಗಳಲ್ಲಿ ವೇದಿಸಿ ಷಡ್ವಿಧ ಪದಾರ್ಥವ ಕೈಕೊಂಡು, ಪರಮ ಪ್ರಸಾದವ ಕರುಣಿಸುತ್ತಿಹುದೆಂಬುದೀಗ, ಹಂಸ ತಂಬಿಲರ ಕುಟುಕು ಕೊಟ್ಟು, ಸಂಭ್ರಮದ ಮಾಡಿ ಸಾಕಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಮಹಾ ಘನಲಿಂಗ ಸಮಸ್ತನಾದ ಶರಣ ನೆರಡಿಟ್ಟು ಗುರುಭಕ್ತಿ ಲಿಂಗಭಕ್ತಿಯ ಮಾಡಿ ಫಲ ಪದಂಗಳ ಪಡೆಯಬೇಕೆಂಬ ವಾಂಛ್ಯವಿಲ್ಲದೆ ಹೋಯಿತ್ತೆಂಬುದೀಗ, ಹಾರಿ ಹೋಗುತ್ತ ಎಂಬ ಶಬ್ದಕ್ಕರ್ಥ. ಅನಿತ್ಯವಾದ ಸಕಲ ಪ್ರಪಂಚ ಬಿಟ್ಟು, ನಿತ್ಯವಾದ ಪರಶಿವ ತತ್ವದ ಭಕ್ತಿಜ್ಞಾನ ವೈರಾಗ್ಯವಿಡಿದು ಸಾಧಿಸುವಡೆ, ತನುವೇ ಮಾತೃಸ್ಥಾನವಾಗಿಹುದೆಂಬುದೀಗ, ಎನಗೆ ಬೇವಿನ ಮರವೇ ತಾಯಿ ಎಂದಿತ್ತು ಎಂಬ ಶಬ್ದಕ್ಕರ್ಥ. ಇಂತಪ್ಪ ಭೇದವ ನಿನ್ನ ಸ್ವಾನುಭಾವದಿಂದಲರಿಯೆಂಬುದೀಗ, ಹಾಗೆಂಬುದ ನಿನ್ನ ನೀನರಿ, ಪುಣ್ಯಾರಣ್ಯದ ಘನ ಭೀಮೇಶ್ವರಲಿಂಗ ನಿರಂಗ ಸಂಗವೆಂಬ ಶಬ್ದಕ್ಕರ್ಥ.

೭

ದಿನಚರಿಯೆಂಬ ಪಟ್ಟಣದಲ್ಲಿ
ಕನಕರತಿಯೆಂಬರಸು ಮನಸಿಜನೆಂಬ ಪ್ರಧಾನ ಕನಸ ಕಂಡಡೆ
ಅರಿವ ತಮಸೂನು ತಳವಾರ
ಇವರೆಲ್ಲರ ವಂಚಿಸಿ ಅರಸನ ಹೆಂಡತಿ,
ಹೆಂಡವ ಕುಡಿವವನ ಅಂಗದಲ್ಲಿ ಸಿಕ್ಕಿದಳು
ಪ್ರಧಾನ ಕಂಡ, ಅರಸು ತಳವಾರ ಕಂಡುದಿಲ್ಲ ಮನಸಿಜ ಕಂಡು
ಬದುಕಿಗೆ ಹೋಗೆಂದ ಅರಸಗೆ ಕೂಪನಾದ
ಮಾನಹಾನಿಗೆ ಕೇಡಿಲ್ಲದಂತೆ ಇಂತೀ ಭೇದವ ನಿನ್ನ
ನೀನರಿ ಪುಣ್ಯಾರಣ್ಯದ ಘನ ಭೀಮೇಶ್ವರ ಲಿಂಗ ನಿರಂಗ ಸಂಗ

**ಟೀಕು:**— ಪಂಚಭೂತ ಮುಖ್ಯವಾದ ದೇಹದ ಸೂತ್ರವು ದಶವಾಯುಗಳಿಂದ ತ್ರಿವಿಧಾವಸ್ಥೆಯ ಕೂಡಿಕೊಂಡು ಚರಿಸುತ್ತಿಹ ಕಾರಣವೆಂಬುದು, ದಿನಚರಿಯೆಂಬ ಪಟ್ಟಣದಲ್ಲಿ ಎಂಬ ಶಬ್ದಕ್ಕರ್ಥ. ಪಟ್ಟಣಕ್ಕೆ ಕರ್ತನಾಗಿ, ಕರ್ಮೋರ್ಮೀ ಕಮಲದಲ್ಲಿ ರತಿಯುಳ್ಳ ಜೀವನೆಂಬರಸು ಎಂಬುದೀಗ, ಕನಕರತಿಯೆಂಬರಸು ಎಂಬ ಶಬ್ದಕ್ಕರ್ಥ. ಆ ಜೀವಂಗೆ ಮನವು ಸಕಲ ಪ್ರಪಂಚಿನ ವ್ಯವಹಾರವ ಹುಟ್ಟಿಸುತ್ತಿಹ ಕಾರಣ ಮನವೇ ಪ್ರಧಾನನಾಗಿಹುದೆಂಬುದೀಗ, ಮನಸಿಜನೆಂಬ ಪ್ರಧಾನನೆಂಬ ಶಬ್ದಕ್ಕರ್ಥ. ಸ್ವಪ್ನ ದೃಷ್ಟಿಯ ಮುಂದೆ ತೋರುವ ಇಂದ್ರಿಯ ಭೋಗಂಗಳನೆ ನಿತ್ಯವೆಂದು ಅರಿಯುತ್ತಿಹನೆಂಬುದೀಗ, ಕನಸಕಂಡಡೆ ಅರಿವನೆಂಬ ಶಬ್ದಕ್ಕರ್ಥ. ತಮವೆಂದೊಡೆ ಅಜ್ಞಾನ. ಅಂತಪ್ಪ ಅಜ್ಞಾನದಿಂದ ಹುಟ್ಟಿದ ಭಿನ್ನಜ್ಞಾನವೇ, ಆ ದೇಹದಲ್ಲಿ ಎಚ್ಚತ್ತಿಹುದೆಂಬುದೀಗ, ತಮಸೂನು ತಳವಾರ ಎಂಬ ಶಬ್ದಕ್ಕರ್ಥ. ಇಂತಪ್ಪ ಜೀವನಿಗೆ ಸುಜ್ಞಾನೋದಯವಾಗಿ ಸಕಲತತ್ವ ಕರಣಂಗಳ

ಬಸಲೆಯ ಬಾಯಿಕಟ್ಟು ಹರಿದು ಆ ಸುರಾವುತನ
ವಳಕಿಸಲಯರಸಕ್ಕೊಳಗಾದ,
ಆದ್ಯಾತರಿಂದ ಹಾಗಾದನೆಂಬುದ
ನಿನ್ನ ನೀನರಿ ಪುಣ್ಯಾರಣ್ಯದ ಘನ ಭೀಮೇಶ್ವರಲಿಂಗ ನಿರಂಗಸಂಗ

**ಟೀಕು**:— ಒಡೆಯನ ಕುದುರೆಯೆಂದರೆ ದಶವಾಯುಗಳಿಂ, ಬುದ್ಧಿ ಕೃತವಾದ ದೇಹವೆಂಬುದೀಗ, ಒಡೆಯನ ಕುದುರೆಯೆಂಬ ಶಬ್ದಕ್ಕರ್ಥ. ಅಂತಪ್ಪ ದೇಹದ ಮೇಲೆ ಅಜ್ಞಾನವನೆ ಅಳವಡಿಸಿದ ನೆಂಬುದೀಗ, ಒಡೆಯನ ಕುದುರೆಯ ಮ್ಯಾಲೆ ಮಸಿಯ ಹಲ್ಲಣವಹಾಕಿ ಎಂಬ ಶಬ್ದಕ್ಕರ್ಥ. ಬಸಲೆಯೆಂಬುದು, ಅದೃಢವಾದ ಕಾರಣ, ಮಾಯಾಪಾಶವೆಂಬುದು ಅನಿತ್ಯವಾದ ಕಾರಣ, ಜೀವನ ಭಿನ್ನಾಪೇಕ್ಷೆಯೆಂಬ ಜಿಹ್ವೆಯಲ್ಲಿ ಬಂಧಿಸಿದನೆಂಬುದೀಗ, ಬಸಲೆಯೆಂಬ ಬಾಯಿಗೆ ಕಷ್ಟವೆಂಬ ಶಬ್ದಕ್ಕರ್ಥ. ಹೃದಯ ಕಮಲದ ಎಂಟು ಎಸಳುಗಳಲ್ಲಿ ಚರಿಸುತ್ತಿಹ, ಜೀವಾತ್ಮ ನೆಂಬುದೀಗ, ದೆಸಿವರಿವ ಅಸುರಾವುತನೆಂಬ ಶಬ್ದಕ್ಕರ್ಥ. ಇಂತಪ್ಪ ಆತ್ಮಂಗೆ ಶಿವಜ್ಞಾನೋದಯವಾಗಿ ಸಕಲ ಪ್ರಪಂಚ ನಿವೃತ್ತಿಯಮಾಡಿ ಗುರೋಪಾವಸ್ಥೆಯಂ ಮಾಡಲು ಆ ಶ್ರೀಗುರು ಕರುಣಿಸಿ ಸದಾಚಾರ ಸಂಪತ್ತು ಸಂಬಂಧವ ಮಾಡಿದಲ್ಲಿ ಪರಿಪೂರ್ಣಜ್ಞಾನವೆಂಬ ಬಲ್ಲೆಹವ ಸದ್ಭಾವ ಹಸ್ತದಲ್ಲಿ ಹಿಡಿದನೆಂಬುದೀಗ, ಜೋಲ್ಲೆಹದ ಬಲ್ಲೆಹವ ಹಿಡಿದು ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣಜ್ಞಾನವ ಸದ್ಭಾವ ಹಸ್ತದಲ್ಲಿ ದೃಢವಿಡಿದು, ಶರಣ ಸುಜ್ಞಾನ ಶಕ್ತಿಯಲ್ಲಿ ಸಮರಸವಾಗಿ ನಿಂದು, ಆ ಸುಜ್ಞಾನ ಶಸ್ತ್ರದಲ್ಲಿ ಸಕಲ ಕರಣಂಗಳ ಸಂಹರಿಸುತ್ತಿರ್ದನೆಂಬುದೀಗ. ಮುಗುಳು ನಗೆಯವಳಲ್ಲಿ ಏರಿ ತಿವಿಯೆ ಎಂಬ ಶಬ್ದಕ್ಕರ್ಥ. ಆ ಕರಣಂಗಳ ನಿವೃತ್ತಿಯ ಮಾಡಿದ ಶರಣನ ಸದಾಚಾರ ಯುಕ್ತವಾದ ಪರಿಪೂರ್ಣ ಜ್ಞಾನವನು ನಿಷ್ಪತ್ತಿಯಾಗಿತ್ತೆಂಬುದೀಗ, ಜೋಲ್ಲೆಹದ ಬಲ್ಲೆಹ ಮುರಿದು ಎಂಬ ಶಬ್ದಕ್ಕರ್ಥ. ಆ ಸದಾಚಾರ ಯುಕ್ತ ನಿಷ್ಪತ್ತಿಯಾದ ಶರಣನ ಅನಿತ್ಯವಾದ ದೇಹ ಭಾವ ನಷ್ಟವಾಗಿ ಸರ್ವಾಂಗವು ಚಿದಂಗ ಸ್ವರೂಪ ವಾಯಿತ್ತೆಂಬುದೀಗ, ಮೊಡಿನ ಕುದುರೆ ಮೊಡದು ಎಂಬ ಶಬ್ದಕ್ಕರ್ಥ. ಅಂತು ಸರ್ವಾಂಗವು ಚಿದಾಂಗ ಸ್ವರೂಪವಾದ ಶರಣಂಗೆ ಅಜ್ಞಾನ ನಿವೃತ್ತಿಯಾಗಿ ಹೋಗಿ ಸರ್ವಾಂಗವು ಸುಜ್ಞಾನ ಪ್ರಕಾಶವಾಯಿತ್ತೆಂಬುದೀಗ, ಮಸಿಯ ಹಲ್ಲಣ ನುಗ್ಗು ನುಸಿಯಾಗಿಯೆಂಬ ಶಬ್ದಕ್ಕರ್ಥ. ಅಂತು ಅಜ್ಞಾನ ನಷ್ಟವಾಗಿ ಸುಜ್ಞಾನ ಸ್ವರೂಪನಾದ ಶರಣಂಗೆ, ಭಿನ್ನಾಪೇಕ್ಷೆ ನಾಸ್ತಿಯಾಗಿ ಆ ದೃಢವಾದ ಮಾಯಾಪಾಶ ವೇದನವಾಯಿತ್ತೆಂಬುದೀಗ, ಬಸಲೆಯ ಬಾಯಿಕಟ್ಟು ಹರಿದು ಎಂಬ ಶಬ್ದಕ್ಕರ್ಥ. ಅಂತಪ್ಪ ಭವ ಪಾಶವ ಭೇದನವ ಮಾಡಿದ ಚೈತನ್ಯ ಸ್ವರೂಪವಾದ ಚಿದಾತ್ಮನೆಂಬುದೀಗ, ಅಸುರಾವುತನೆಂಬ ಶಬ್ದಕ್ಕರ್ಥ. ಅಂತು ಚಿದಾಂಗ ಸ್ವರೂಪನಾದ ಶರಣನು, ಅವಳೆಂದೊಡೆ ಜ್ಞಾನಶಕ್ತಿ, ಅಂತಪ್ಪ ಸುಜ್ಞಾನ ಶಕ್ತಿಯ ಮಧ್ಯದಲ್ಲಿರ್ದ ಪರಮಾಮೃತರಸನೆಯೆಂಬ ಪರಬ್ರಹ್ಮದಲ್ಲಿ ಸಮರಸವಾದ ಶರಣನೆಂಬುದೀಗ, ಅವಳ ಕಿಸಲಯ ರಸಕ್ಕೊಳ

ಗಾದನೆಂಬ ಶಬ್ದಕ್ಕರ್ಥ. ಆ ಪರಶಿವ ತತ್ವದಲ್ಲಿ ಸಮರಸೈಕ್ಯವಾದ ಜೀವವು ತನ್ನ ಸ್ವಾತ್ಮಜ್ಞಾನದಿಂದಲಾಯಿತ್ತೆಂಬುದೀಗ, ಅದ್ಯಾತರಿಂದ ಹಾಗಾದನೆಂಬುದ ನಿನ್ನ ನೀನರಿ ಪುಣ್ಯಾರಣ್ಯದ ಘನ ಭೀಮೇಶ್ವರ ಲಿಂಗ ನಿರಂಗ ಸಂಗ ಎಂಬ ಶಬ್ದಕ್ಕರ್ಥ.

೧೧

ಸತ್ತ ಹಾವು ಹೆಣನ ಕಚ್ಚಿ ಮತ್ತೆ ಸತ್ತಿತ್ತು
ಸತ್ತದ ಕಂಡು ಹದ್ದು ಎತ್ತಲಾಗಿ, ಎತ್ತುವ ಬೆಂಬಳಿಯಲ್ಲಿ,
ಹಾವಿನ ಜೀವ ಎದ್ದು ಹೆಡೆಯನೆತ್ತಿ ಆಡಲಾಗಿ,
ಹದ್ದು ಬಿಟ್ಟಿತ್ತು, ಹಾವು ಹಾವಡಿಗಂಗೀಡಾಯಿತ್ತು.
ಹದ್ದು ಹಿಡಿದು ಬಿಟ್ಟನಲ್ಲಾ ಎಂದು ಮರವೊರಗಿತ್ತು
ಹಾವು ಹದ್ದು ಮಾಡಿ ಬದುಕಿದನು
ಅದೇನು ಕಾರಣ ಹಾಗಾದನೆಂಬುದ ನರಿ,
ಪುಣ್ಯಾರಣ್ಯದ ಘನ ಭೀಮೇಶ್ವರ ಲಿಂಗ ನಿರಂಗ ಸಂಗ.

ಟೀಕು:— ಸುಜ್ಞಾನ ನಷ್ಟವಾದ ಶಂಕಾ ವಿಷ ಸಂಬಂಧಿಯಪ್ಪ ಮನಸೆಂಬುದೀಗ, ಸತ್ತಹಾವು ಎಂಬ ಶಬ್ದಕ್ಕರ್ಥ. ಅಂತಪ್ಪ ಮನೋಮಧ್ಯದಲ್ಲಿ, ಶಿವಜ್ಞಾನೋದಯವಾಗಿ ತನ್ನ ನಿಜವನರಿದು, ಹೆಣನೆಂದೊಡೆ ನಿಷ್ಪಾತಿ ಸ್ವರೂಪವಾದ ಪರಬ್ರಹ್ಮವು ಅಂತಪ್ಪ ಪರಬ್ರಹ್ಮವು. ನವಗ್ರಹಿಸಿತ್ತೆಂಬುದೀಗ, ಹೆಣನಕಚ್ಚಿತ್ತೆಂಬ ಶಬ್ದಕ್ಕರ್ಥ. ಆ ಮನಸು ಸದ್ರೂಪವಾದ ಪರಬ್ರಹ್ಮವೆ ಯಾಯಿತ್ತೆಂಬುದೀಗ, ಮತ್ತೆ ಸತ್ತಿತ್ತು ಎಂಬ ಶಬ್ದಕ್ಕರ್ಥ. ಆ ಮನ ಸದ್ವಿವೇಕ ಸ್ವರೂಪವಾದ ಜೀವವ ಪರಮಾಕಾಶಾಸ್ಥಾನದಲ್ಲಿರ್ದ ಪರಮಾತ್ಮ ಸ್ವರೂಪವಾದ ಶ್ರೀ ಗುರು ಸುಜ್ಞಾನ ದೃಷ್ಟಿಯಿಂದ ಕಂಡುಮೋಕ್ಷತ್ರಯಂಗಳ ಕರುಣಿಸಿ, ತನ್ನತ್ತಲಭಿಮುಖವ ಮಾಡಿಕೊಂಡನೆಂಬುದೀಗ, ಸತ್ತದ ಕಂಡು ಹದ್ದು ಎತ್ತಲಾಗಿ ಎಂಬ ಶಬ್ದಕ್ಕರ್ಥ. ಅಂತು ದೀಕ್ಷತ್ರಯಂಗಳ ಕರುಣಿಸಿ, ಭಕ್ತಿಮಾರ್ಗವ ತೋರಿ ಶಿಷ್ಯನ ಮನೋಮಧ್ಯದಲ್ಲಿ ಚೈತನ್ಯ ಸ್ವರೂಪ ವಾಗಿರ್ದ ಪರಮ ಚಿತ್ಕಲಾಲಿಂಗವ ಭಾವ ಮನ ದೃಕ್ಕಿಂ ಬಹಿಷ್ಕರಿಸಿ, ಕರಸ್ಥಲಕೆ ಕೊಟ್ಟನೆಂಬುದೀಗ, ಎತ್ತಿದ ಬೆಂಬಳಿಯಲ್ಲಿ ಹಾವಿನ ಜೀವ ಎದ್ದು, ಎಂಬ ಶಬ್ದಕ್ಕರ್ಥ. ಆ ಕರಸ್ಥಲದಲ್ಲಿ ಮೂರ್ತಿಗೊಂಡ ಚೈತನ್ಯ ಸ್ವರೂಪವಾದ ಪರಬ್ರಹ್ಮವು ಶರಣನ ಹೃದಯ ಕಮಲಕ್ಕೆ ಭೇದಿಸಿ, ಪಂಚೇಂದ್ರಿಯಂಗಳನೊಳಗೊಂಡು ಪ್ರಕಾಶಿಸುತ್ತಿಹುದೆಂಬುದೀಗ, ಹೆಡೆಯನೆತ್ತಿ ಎಂಬ ಶಬ್ದಕ್ಕರ್ಥ. ಅಂತು ಲಿಂಗೇಂದ್ರಿಯಂಗಳೆಲ್ಲ ಲಿಂಗೇಂದ್ರಿಯಂಗಳಾದ ಶರಣನು ಜ್ಞಾನ ಕ್ರೀಯಿಂದ, ಭಕ್ತಿಮಾರ್ಗವಿಡಿದು ಆಚರಿಸುತ್ತಿಹನೆಂಬುದೀಗ, ಆಡಲಾಗಿ ಎಂಬ ಶಬ್ದಕ್ಕರ್ಥ. ಅಂತು ಶಿವಾದ್ವೈತ ಭಕ್ತಿಯಲ್ಲಿ ನಿರ್ಭರವಾದ ಶಿಷ್ಯಂಗೆ ಶ್ರೀಗುರುಯಿದಿರಿಟ್ಟು ಬೋಧಿಸಲಿಲ್ಲವೆಂಬುದೀಗ, ಹದ್ದು ಬಿಟ್ಟಿತ್ತು ಎಂಬ ಶಬ್ದಕ್ಕರ್ಥ. ಅಂತು ಲಿಂಗದಲ್ಲಿ ಅವಿರಳ ಸಂಬಂಧವಾದ ಶರಣನ ಮನಸು, ಪ್ರಾಣಲಿಂಗದಲ್ಲಿ ಸಮರಸವಾಯಿತ್ತೆಂಬುದೀಗ, ಹಾವು

ಹಾವಡಿಗಂಗೀಡಾಯಿತ್ತೆಂಬ ಶಬ್ದಕ್ಕರ್ಥ. ಅಂತು ಸದ್ವಿವೇಕ ಸ್ವರೂಪವಾದ ಮನಸು ಪ್ರಾಣಲಿಂಗದಲ್ಲಿ ಲಿಯ್ಯವಾದ ಶಿಷ್ಯನ, ಪರಮಾತ್ಮ ಸ್ವರೂಪವಾದ ಗುರು ತತ್ವವ ಗ್ರಹಿಸಿದಲ್ಲಿ ಗುರು ಶಿಷ್ಯರೆಂಬ ಭಿನ್ನ ಭಾವ ನಷ್ಟವಾಯಿತ್ತೆಂಬುದೀಗ, ಹದ್ದ ಹಿಡಿದುಬಿಟ್ಟಿನಲ್ಲಾ ಎಂಬ ಶಬ್ದಕ್ಕರ್ಥ. ಆ ಪರಮಾತ್ಮ ಸ್ವರೂಪವಾದ ಗುರು ತತ್ವವು ಲಿಂಗದಲ್ಲಿ, ಸಮರಸೈಕಾಷ್ಟಿಯಾಯಿತ್ತೆಂಬುದೀಗ, ಮರಮೊರಸಿತ್ತು ಎಂಬ ಶಬ್ದಕ್ಕರ್ಥ. ಇಂತಪ್ಪ ಪರಮಾತ್ಮ ನರುವಿನಲ್ಲಿ ಮನಸ್ಸೇಕಾರ್ಥವಾಗಿ ಲಿಂಗದಲ್ಲಿ ಸಮರಸವಾದನೆಂಬುದೀಗ, ಹಾವು ಹದ್ದು ಕೂಡಿ ಬದುಕಿದವು. ಅದೇನು ಕಾರಣ ಹಾಗಾದನೆಂಬುದನರಿ ಪುಣ್ಯಾರಣ್ಯದ ಘನಭೀಮೇಶ್ವರ ಲಿಂಗ ನಿರಂಗ ಸಂಗ ಎಂಬ ಶಬ್ದಕ್ಕರ್ಥ.

೧೨

ಮದ್ದಿಗೆ ರುಜೆಯುಡಸಿ ಗಿರಿಗೆ ಬಾಯಾರಿ,
ಹಾವಿಗೆ ಹಲ್ಲಿಲ್ಲದೆ ವಿಷವುಂಟಾಗಿ,
ಬೇವಿನ ಮರದಲ್ಲಿ ಮಾವಿನ ಹಣ್ಣಾಗಿ,
ಆ ಮರನ ನೆರೆ ಮೆದ್ದವರನರಿ ಪುಣ್ಯಾರಣ್ಯದ
ಘನ ಭೀಮೇಶ್ವರ ಲಿಂಗ ನಿರಂಗಸಂಗ.

ಟೀಕು:— ದೇಹ ಸಂಬಂಧಿಯಾದ ಆತ್ಮನಲ್ಲಿರ್ದ, ಶಿವಜ್ಞಾನ ಪ್ರಕಾಶವ, ಭವರೋಗವಾವರಿಸಿತ್ತೆಂಬುದೀಗ, ಮದ್ದಿಗೆ ರುಜೆಯುಡಸಿ ಎಂಬ ಶಬ್ದಕ್ಕರ್ಥ. ಅಂತು ಭವರೋಗ ಎಡೆಗೊಂಡ ಮನದಲ್ಲಿ ಆಶಾ ತೃಷ್ಣೆ ಹೆಚ್ಚಿತ್ತೆಂಬುದೀಗ, ಗಿರಿ ಬಾಯಾರಿ ಎಂಬ ಶಬ್ದಕ್ಕರ್ಥ. ಅಂತು ಶಂಕಾ ವಿಷ ಸಂಬಂಧಿಯಪ್ಪ ಜೀವಂಗೆ ಶಿವಜ್ಞಾನೋದಯವಾದಲ್ಲಿ ಸಕಲ ಕರಣಂಗಳು ನಾಸ್ತಿಯಾದವೆಂಬುದೀಗ, ಹಾವಿಗೆ ಹಲ್ಲಿಲ್ಲದೆ ಎಂಬ ಶಬ್ದಕ್ಕರ್ಥ. ಆ ಕರಣಂಗಳು ನಿವೃತ್ತಿಯಾದಲ್ಲಿ, ಶಿವಜ್ಞಾನಾಮೃತ ರಸವುಂಟಾಗಿರ್ದತ್ತೆಂಬುದೀಗ, ವಿಷಯು ಉಂಟಾಗಿ ಎಂಬ ಶಬ್ದಕ್ಕರ್ಥ. ಆ ಜ್ಞಾನಾಮೃತ ಸರ್ವನೊಳಕೊಂಡಿರ್ದ, ಶರಣನ ಶರೀರವೆಂಬ ವೃಕ್ಷದಲ್ಲಿರ್ದ ಮುಕ್ತಿಫಳ ಸ್ವರೂಪವಾದ, ಚಿದ್ಘನ ಲಿಂಗವು ಗುರು ಕರುಣದಿಂ ಪ್ರತ್ಯಕ್ಷವಾಯಿತ್ತೆಂಬುದೀಗ, ಬೇವಿನ ಮರದಲ್ಲಿ ಮಾವಿನ ಹಣ್ಣಾಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗ ಸಂಬಂಧವಾದ ಆಚಾರಾಂಗವನು ಶರಣನು ಆಶ್ರಯಿಸಿ ನಿಂತನೆಂಬುದೀಗ, ಆ ಮರನನೇರಿ ಎಂಬ ಶಬ್ದಕ್ಕರ್ಥ. ಅಂತಪ್ಪ ಅಖಂಡ ಚಿದಾಮೃತ ಫಳಸ್ವರೂಪವಾದ ಚಿದ್ಘನಲಿಂಗವನು ಸದ್ವಿವೇಕ ಮುಖದಿಂ ಸ್ವೀಕರಿಸುವ ತ್ರಿವಿಧ ಲಿಂಗಾನುಭಾವಿಗಳ ಸುಜ್ಞಾನ ಮುಖದಿಂದರಿ ಎಂಬುದೀಗ, ಆ ಮರನನೇರಿ ಮೆದ್ದವರನರಿ ಪುಣ್ಯಾರಣ್ಯದ ಘನಭೀಮೇಶ್ವರಲಿಂಗ ನಿರಂಗ ಸಂಗವೆಂಬ ಶಬ್ದಕ್ಕರ್ಥ.

೧೩

ಬಾಳೆ ಬಲಿದು ಈಳೆಯ ಮರನಾಯಿತ್ತು.
ಆ ಈಳೆಯ ಮರನೇರಿ ಈರೇಳು ಲೋಕವ-
-ಕಂಡವನ ಕಂಗಳ ಮಧ್ಯದಲ್ಲಿ ನಿಂದವನಾರೆಂದರೆ
ಪುಣ್ಯಾರಣ್ಯದ ಘನ ಭೀಮೇಶ್ವರ ಲಿಂಗ ನಿರಂಗ ಸಂಗ.

**ಟೀಕು:—** ಸಂಸಾರ ವಿಷಯ ರಸವನೆ ತುಂಬಿಕೊಂಡಿರ್ದ ತನುವೆಂಬುದೀಗ, ಬಾಳೆಯೆಂಬ ಶಬ್ದಕ್ಕರ್ಥ. ಅಂತಪ್ಪ ದೇಹಸಂಬಂಧಿಯಾದಾತ್ಮಂಗೆ ಶಿವಧ್ಯಾನ ನಿರ್ಭರವಾಯಿತ್ತೆಂಬುದೀಗ, ಬಲಿದು ಎಂಬ ಶಬ್ದಕ್ಕರ್ಥ. ಅಂತಪ್ಪ ಶಿವಜ್ಞಾನ ಪ್ರಕಾಶ ನಿರ್ಭರವಾದಲ್ಲಿ, ಸದ್ವಿವೇಕ ವೃಕ್ಷ ತಲೆದೋರಿತ್ತೆಂಬುದೀಗ, ಈಳೆಯ ಮರನಾಯಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ ವೃಕ್ಷವನು ಆಶ್ರಯಿಸಿ ನಿಂದ ಶರಣನು, ಚತುರ್ದಶ ಭುವನವನೊಳಕೊಂಡಿರ್ಪ, ಪರಬ್ರಹ್ಮವ ತನ್ನ ಸುಜ್ಞಾನ ದೃಷ್ಟಿಯಿಂದ ಕಂಡನೆಂಬುದೀಗ, ಆ ಈಳೆಯ ಮರನ ಏರಿ ಈರೇಳು ಲೋಕವ ಕಂಡವನ ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣವಾದ ಪರ ಬ್ರಹ್ಮವೆ ಶರಣನ ಸುಜ್ಞಾನ ದೃಷ್ಟಿಯಲ್ಲಿ ಸ್ವಸ್ಥಿರವಾಯಿತ್ತೆಂಬುದೀಗ, ಕಂಗಳ ಮಧ್ಯದಲ್ಲಿ ನಿಂದವನೆಂಬ ಶಬ್ದಕ್ಕರ್ಥ. ಆ ಪರವಸ್ತುವೆ ನಿನ್ನ ನಿಜವೆಂದರಿವೆಂಬುದೀಗ, ಆರೆಂದರೆ ಪುಣ್ಯಾರಣ್ಯದ ಘನ ಭೀಮೇಶ್ವರಲಿಂಗ ನಿರಂಗ ಸಂಗ ಎಂಬ ಶಬ್ದಕ್ಕರ್ಥ.

೧೪

ತ್ರಿಸಂಧಿಯಲ್ಲಿ ನಿಂದು ತ್ರಿಗುಣಾತ್ಮನ ಕೊಂದು
ಕೆಲದಲ್ಲಿ ನಿಂದವ ನಾರೆಂಬುದುಳಿದು ನೋಡಿ
ಆಯಿಗಡಲ ನಂಗ ಮೂರು ಮುಡಿಯವನ-
-ಸಂಗ ಬ್ಯಾರೊಂದ ಹಿಡಿದು ನೋಡವನ ನಿಸ್ಸಂಗ
ತನ್ನ ತಾನರಿದಲ್ಲಿಯೆ ಕಾಣಬಂದಿತ್ತು
ಅದ ನಿನ್ನ ನೀನರಿ ಪುಣ್ಯಾರಣ್ಯದ ಘನಭೀಮೇಶ್ವರ ಲಿಂಗ
ನಿರಂಗ ಸಂಗ.

**ಟೀಕು:—** ಶಿಂವಾಶೀಕನಾದ ಆತ್ಮನು ತನುತ್ರಯ ಸಂಬಂಧಿಯಾಗಿರ್ದನೆಂಬುದೀಗ, ತ್ರಿಸಂಧಿಯಲ್ಲಿ ನಿಂದು ಎಂಬ ಶಬ್ದಕ್ಕರ್ಥ. ಆ ತನು ತ್ರಯ ಸಂಬಂಧವಾದಾತ್ಮಂಗೆ ಸ್ವಾನುಭಾವ ಜ್ಞಾನೋದಯವಾಗಲು, ಗುಣತ್ರಯ ಸಂಬಂಧವಾದ, ಜೀವಭಾವ ನಷ್ಟವಾಗಿ ಹೋಯಿತ್ತೆಂಬುದೀಗ, ತ್ರಿಗುಣಾತ್ಮನ ಕೊಂದು ಎಂಬ ಶಬ್ದಕ್ಕರ್ಥ. ಅಂತಪ್ಪ ಗುಣತ್ರಯ ಮೊದಲಾದ ಜೀವ ಭಾವ ನಷ್ಟವಾಗಿ ಹೋಯಿತ್ತೆಂಬುದೀಗ, ತ್ರಿಗುಣಾತ್ಮನಕೊಂದು ಎಂಬ ಶಬ್ದಕ್ಕರ್ಥ. ಅಂತಪ್ಪಗುಣತ್ರಯಮೊದಲಾದ ಜೀವಭಾವವಳಿದಲ್ಲಿ ಸಕಲಪ್ರಪಂಚಿಗೆ ವಿಲಕ್ಷಣ

ನಾದ ಶರಣನೆಂಬುದೀಗ, ಕೆಲದಲ್ಲಿ ನಿಂದವನಾರೆಂಬುದ ತಿಳಿದುನೋಡಿ ಎಂಬ ಶಬ್ದಕ್ಕರ್ಥ. ಪಂಚಭೂತಂಗಳನು ಪಂಚಾಕ್ಷರಿಯ ಮಂತ್ರರೂಪಿನೊಳಕೊಂಡಿರ್ಪ ಶ್ರೀ ಗುರುವಿನ ಆಚಾರಾಂಗವೆಂಬುದೀಗ, ಆಯಿಗಡಲನಂಗ ಎಂಬ ಶಬ್ದಕ್ಕರ್ಥ. ಆ ಶ್ರೀ ಗುರು ಕಾರುಣ್ಯವ ಪಡೆದ ಶರಣನು ತ್ರಿವಿಧ ಜ್ಞಾನವನೊಳಕೊಂಡಿರ್ಪ ಚಿದ್ಘನಲಿಂಗದಲ್ಲಿ ಅಭಿನ್ನ ಸಂಯೋಗವ ಮಾಡಿದನೆಂಬುದೀಗ, ಮೂರ ಮುಡಿಯುವನ ಸಂಗ ಎಂಬ ಶಬ್ದಕ್ಕರ್ಥ. ಪರಮಾತ್ಮನರಿವನು ಕೃತನಿಶ್ಚಯ ಹಸ್ತದಲ್ಲಿ ದೃಢವಿಡಿದು ಮೂಲಜ್ಞಾನ ದೃಷ್ಟಿಯಿಂದ ನೋಡುತ್ತಿರ್ಪ ಸುಜ್ಞಾನ ಜಂಗಮವೆಂಬುದೀಗ, ಬ್ಯಾರೊಂದು ಹಿಡಿದುನೋಡುವನ ಎಂಬ ಶಬ್ದಕ್ಕರ್ಥ. ಅಂತಪ್ಪ ಸುಜ್ಞಾನ ಜಂಗಮದಲ್ಲಿ ಸಮರಸವಾದ ಶರಣಂಗೆ ಆಚರಣೆ ಬಿಗಿನಿಷ್ಪತ್ತಿಯಾಯಿತ್ತೆಂಬುದೀಗ, ನಿಸ್ಸಂಗ ಎಂಬ ಶಬ್ದಕ್ಕರ್ಥ. ವೇದಾಗಮಂಗಳಲ್ಲಿ ಹೇಳುವ ಶೃತಜ್ಞಾನವ ಹೊದ್ದದೆ ಶರಣ ತನ್ನ ಸ್ವಾನುಭಾವದರವಿಂದ ಅರಿದನೆಂಬುದೀಗ, ತನ್ನ ತಾನರಿದಲ್ಲಿಯೆ ಕಾಣಬಂದಿತ್ತು, ಅದ ನಿನ್ನ ನೀನರಿ ಪುಣ್ಯಾರಣ್ಯದ ಘನ ಭೀಮೇಶ್ವರಲಿಂಗ ನಿರಂಗಸಂಗ ಎಂಬ ಶಬ್ದಕ್ಕರ್ಥ.

೧೫

ತತ್ಕಾಲವ ನರಿವ ಕುಕ್ಕುಟನ ಬಾಯತುತ್ತ
ಇಕ್ಕಿಸಿಕೊಂಡವರಾರಯ್ಯ
ಆ ತುತ್ತು ಮುತ್ತಟ್ಟಿತ್ತುದವರ ಮುಕ್ತಿಯ
ಬಲೆಗೀಡು ಮಾಡುವದು ಮತ್ತು ಮುಟ್ಟದೆ,
ಕುಕ್ಕುಟನ ಕುಲವ ಕರೆ, ಕರದಲ್ಲಿ ಬಂದು
ನಿಂದುಳಿಮೆ, ಆದರಂಗವ ನಾರೆಂದರಿಯೆ
ಪುಣ್ಯಾರಣ್ಯದ ಘನ ಭೀಮೇಶ್ವರಲಿಂಗ ನಿರಂಗಸಂಗ.

**ಟೀಕು:**— ಶರಣನ ಮೂಲ ಜ್ಞಾನವನೆಚ್ಚರಿಸಿಕೊಡುವ ಸತ್ಪ್ರಾಣವುವೆಂಬುದೀಗ, ತತ್ಕಾಲವನರಿವ ಕುಕ್ಕುಟನ ಎಂಬ ಶಬ್ದಕ್ಕರ್ಥ. ಅಂತಪ್ಪ ಸತ್ಪ್ರಾಣವ ಕೂಡಬೇಕೆಂಬ ಅದ್ವೈತ ಜ್ಞಾನಿಗಳು ಭಿನ್ನಾಪೇಕ್ಷೆಯಿಂದ ವೃತ್ತಿ ಜ್ಞಾನಾಮೃತಕ್ಕೆ ಇಚ್ಛಿಸುತ್ತಿಹುದೆಂಬುದೀಗ, ಬಾಯತುತ್ತಯಿಕ್ಕಿಸಿಕೊಂಡವರಾರಯ್ಯ ಎಂಬ ಶಬ್ದಕ್ಕರ್ಥ. ಶ್ರೀ ಗುರುಕಾರುಣ್ಯದಿಂ ಆ ಸರ್ವಾಂಗ ಲಿಂಗ ಸಂಬಂಧವಾಗಿ ಲಿಂಗ ಸ್ಪರ್ಶನವ ಮಾಡದೆಯಿರ್ಪ ಭಿನ್ನ ಜ್ಞಾನಿಗಳೂ ಎಂಬುದೀಗ, ಆ ತುತ್ತು ಮುತ್ತಿದವರಾ ಎಂಬ ಶಬ್ದಕ್ಕರ್ಥ. ಅಂತಪ್ಪ ಭಿನ್ನ ಜ್ಞಾನಿಗಳ ಭಿನ್ನ ಫಲ ಪದವೆಂಬ ಮಾಯಾ ಪಾಶಕ್ಕೆ ಒಳಗು ಮಾಡುತ್ತಿಹನೆಂಬುದೀಗ, ಮುಕ್ತಿಯ ಬಲೆಗೀಡು ಮಾಡುವದು ಎಂಬ ಶಬ್ದಕ್ಕರ್ಥ. ಸುಜ್ಞಾನೋದಯದಿಂ, ಸಕಲ ಪ್ರಪಂಚ ನಿವೃತ್ತಿಯ ಮಾಡಿ ಶ್ರೀಗುರು ಕಾರುಣ್ಯದಿಂ ಸರ್ವಾಂಗ ಲಿಂಗ ಸಂಬಂಧಿಯಾಗಿ ನಿಜಪದದಲ್ಲಿ ನಿಂದ ಶರಣನು ಖಂಡಿತ ಫಲ ಪದಂಗಳ ಸತ್ಕ್ರಿಯಾಚರಣದಿಂದ ಲಪಸ್ಯವ ಮಾಡಿದನೆಂಬುದೀಗ, ಮತ್ತ ಮುಟ್ಟದೆ ಎಂಬ

ಶಬ್ದಕ್ಕರ್ಥ. ಅಖಂಡಿತ ಫಲಪದಂಗಳ ನಿವೃತ್ತಿಯ ಮಾಡಿದ ಶರಣ ಕುಕ್ಕುಟನೆಂದೊಡನೆ ಸತ್ತ್ರಾಣವು ಜ್ಞಾನ. ಅಂತಪ್ಪ ಸತ್ತ್ರಾಣವುದಿಂ ತೋರುವ ಆಚಾರಾದಿ ಮಹಾ ಲಿಂಗಗಳ ತನ್ನ ಷಡ್ವಿಧ ಚಿದಾಂಗದಲ್ಲಿ ಧರಿಸಿ ಶಿವೋಹಂ, ಶಿವೋಹಂ ಎನ್ನುತ್ತಿರ್ದನೆಂಬುದೀಗ, ಕುಕ್ಕುಟನ ಕುಲವ ಕರೆ ಎಂಬ ಶಬ್ದಕ್ಕರ್ಥ. ಅಂತಪ್ಪ ಆಚಾರಾದಿ ಮಹಾಲಿಂಗಗಳನೊಳಕೊಂಡು ಕರಸ್ಥಲದಲ್ಲಿ ಇಷ್ಟಲಿಂಗವಾಗಿ ಮೂರ್ತಿಗೊಂಡಿತ್ತೆಂಬುದೀಗ, ಕರದಲ್ಲಿ ಬಂದು ನಿಂದುಳಿದು ಎಂಬ ಶಬ್ದಕ್ಕರ್ಥ. ಅಂತಪ್ಪ ಚಿಧ್ಘನ ಲಿಂಗಕ್ಕೆ ಚಿತ್ರಭಾಂಗ ಸ್ವರೂಪನೆ ಶರಣನೆಂದರಿ ಎಂಬುದೀಗ, ಅದರಂಗವ ನಾರೆಂದರಿ ಪುಣ್ಯಾರಣ್ಯದ ಘನ ಭೀಮೇಶ್ವರಲಿಂಗ ನಿರಂಗ ಸಂಗ ಎಂಬ ಶಬ್ದಕ್ಕರ್ಥ.

೧೬

ಜಲದ ಮಧ್ಯದಲ್ಲಿ ಐಮೂಲೆಯ ನೆಲದಲ್ಲಿ
ಒಂದು ಹೊಲ ಬೆಳೆಯಿತ್ತು.
ಆ ಬೆಳೆಯ ಮೇಯ ಬಂದ ಎರಳೆ ತನೆಯಿಲ್ಲದೆ ಮರಿಗಂಡಿತ್ತು.
ಆ ಮರೆ ಕಣ್ಣ ತೆಗೆದು ನೋಡಿ ಎನ್ನ-
ಹೆತ್ತ ತಾಯಲಾ ಎಂದು ಎರಳೆಯ ಮರಿ ನುಂಗಿತ್ತು
ಆ ಹೊಲದೊಡೆಯ ಬಂದು ನಿಂದು ನೋಡಿ ಮರಿಯ ಕಂಡಂಜಿ
ಹೊಲಬುದಪ್ಪಿದ; ಹೊಲದಣ್ಣ ಕಪ್ಪಿನಲ್ಲಿ ಬಿದ್ದ
ಆ ಹೊಲಬ ನಿನ್ನ ನೀನರಿ ಪುಣ್ಯಾರಣ್ಯದ
ಘನ ಭೀಮೇಶ್ವರಲಿಂಗ ನಿರಂಗ ಸಂಗ.

**ಟೀಕು:—** ಸಂಸಾರ ವಿಷಯ ರಸದ ಮಧ್ಯದಲ್ಲಿ ಎಂಬುದೀಗ, ಜಲದ ಮಧ್ಯದಲ್ಲಿ ಎಂಬ ಶಬ್ದಕ್ಕರ್ಥ. ಪಂಚಭೂತಂಗಳ ಅಗ್ರದಲ್ಲಿ ಎಂಬುದೀಗ, ಐಮೂಲೆಯ ನೆಲದಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಪಂಚ ಭೂತ ಮಿಶ್ರವಾದ ದೇಹವೆಂಬ ಕ್ಷೇತ್ರದಲ್ಲಿ ಪಂಚ ವಿಷಯ ಫಲಂಗಳು ತೋರುತ್ತಿಹವೆಂಬುದೀಗ, ಒಂದು ಹೊಲ ಬೆಳೆಯಿತ್ತೆಂಬ ಶಬ್ದಕ್ಕರ್ಥ. ಆ ಪಂಚ ವಿಷಯ ಫಲಂಗಳ ಅವಿವೇಕ ಮುಖದಿಂ ಭಕ್ಷಿಸುತ್ತಿಹಳು ಮಾಯೆಯೆಂಬ ಹರಿಣಿ ಎಂಬುದೀಗ, ಆ ಬೆಳೆಯ ಮೇಯಬಂದ ಎರಳೆ ಎಂಬ ಶಬ್ದಕ್ಕರ್ಥ. ಇಂತಪ್ಪ ದೇಹ ಮಧ್ಯದಲ್ಲಿ ಸುಜ್ಞಾನ ಪ್ರಭಾವಿಸಲು ಮಾಯೆಯುಳಿದು ನಿರ್ಮಾಯೆ ಸ್ವರೂಪವಾದಲ್ಲಿ ಚಿಚ್ಛಕ್ತಿಯಿಂದ ಜ್ಞಾನ ಕಲಾತ್ಮನುದಯಿಸಿದನೆಂಬುದೀಗ, ಮರಿಗಂಡಿತ್ತು ಎಂಬ ಶಬ್ದಕ್ಕರ್ಥ. ಆ ಸುಜ್ಞಾನೋದಯವಾದ ಶರಣನು ತನಗೆ ಮಾತೃಸ್ಥಾನವಾದ ಚಿತ್‌ಶಕ್ತಿಯ ಸುಜ್ಞಾನ ದೃಷ್ಟಿಯಿಂದ ನಿರೀಕ್ಷಿಸುತ್ತಿರ್ದನೆಂಬುದೀಗ, ಆ ಮರಿ ಕಣ್ಣ ತೆಗೆದು ನೋಡಿ ಎನ್ನ ಹೆತ್ತ ತಾಯಲಾ ಎಂಬ ಶಬ್ದಕ್ಕರ್ಥ. ಆ ನಿಷ್ಕಲ ಚಿತ್‌ಶಕ್ತಿಯ ಸುಜ್ಞಾನೋದಯವಾದ ಶರಣ, ತನ್ನ ಮಹಾನುಭಾವ ಮಧ್ಯದಲ್ಲಿ ಅವ ಗ್ರಹಿಸಿದನೆಂಬುದೀಗ, ಎರಳೆಯ ಮರಿ ನುಂಗಿತ್ತು ಎಂಬ ಶಬ್ದಕ್ಕರ್ಥ. ಆ ದೇಹ

ವೆಂಬ ಕ್ಷೇತ್ರದಲ್ಲಿ ವಿಷಯ ಫಲಂಗಳನುಂಟು ಮಾಡುತ್ತಿರುವ ಕಾಮನು ಶ್ರೀಗುರುಕಾರುಣ್ಯದಿಂ ಸರ್ವಾಂಗ ಲಿಂಗ ಸಂಬಂಧವಾಗಿ, ಶಿವಭಾವ ಘಟಿಸಿದ ಶರಣನ ಅಂತರಂಗವ ನಿಲುಕಿ ನೋಡುತ್ತಿಹನೆಂಬುದೀಗ, ಆ ಹೊಲದೊಡೆಯ ಬಂದು ನಿಂದು ನೋಡಿ ಎಂಬ ಶಬ್ದಕ್ಕರ್ಥ. ಸುಜ್ಞಾನ ಸನ್ನಹಿತವಾದ ಶರಣನಲ್ಲಿ ಕಾಮ ತನ್ನ ಮಾಯಾ ಜಾಲವ ಬೀಸುವದಕ್ಕೆ ತೆರನ ಕಾಣದೆ ದುಃಖಜೀವಿಯಾಗಿ ಭಯಂಗೊಂಡು ಭಿನ್ನವಾಗಿ ಹೋದನೆಂಬುದೀಗ, ಮರಿಯ ಕಂಡಂಜಿ ಹೊಲಬ ದಪ್ಪಿದನೆಂಬ ಶಬ್ದಕ್ಕರ್ಥ. ಪುಲ್ಲೆ ಎಂದೊಡೆ ಚಿಚ್ಛಕ್ತಿ. ಆ ಚಿಚ್ಛಕ್ತಿ ಕಾಮಂಗೆ ಕಾಣಬಾರದೆ ಹೋಯಿತ್ತೆಂಬುದೀಗ, ಪುಲ್ಲೆ ತಪ್ಪಿ ಎಂಬ ಶಬ್ದಕ್ಕರ್ಥ. ಅದು ಕಾರಣ ಕಾಮನು ಸಂಸಾರ ವಿಷಯ ಕೂಪದಲ್ಲಿ ಮಗ್ನವಾದನೆಂಬುದೀಗ, ಹೊಲ ದಣ್ಣ ಕಪ್ಪಿನಲ್ಲಿ ಬಿದ್ದ ಆ ಹೊಲಬ ನಿನ್ನ ನೀನರಿ ಪುಣ್ಯಾರಣ್ಯದ ಘನ ಭೀಮೇಶ್ವರ ಲಿಂಗ ನಿರಂಗ ಸಂಗ ಎಂಬ ಶಬ್ದಕ್ಕರ್ಥ.

೧೭

ಪಂಚವಳಿಯ ವಿಸ್ತೀರ್ಣದಲ್ಲಿ ಕಟ್ಟಿದ ಮೂರು ಪಟ್ಟಣ
ಕೆಲದಲ್ಲಿ ಹೊಲಗೇರಿ ಬಲದಲ್ಲಿ ಮಾದಿಗರ ಮನೆ
ನಡುವೆ ಹೆಬ್ಬಾರುವರ-ಜಿನಂಗಳ ಗುಡಿವಾಡ
ಹೊಲೆಯರ ಗೋವಧೆಯು ಮಾದಿಗರ ಮನೆಯನಾತ
ಹಾರುವರೂಟದ ಸುಖ ಲೇಸಾಯಿತ್ತು
ಜಗದ ಕೀಳು ಮ್ಯಾಲಿನ ಕೂಟ
ಅದ್ಯಾತರಿಂದ ಹಾಗಾಯಿತ್ತೆಂಬುದ
ನಿನ್ನ ನೀನರಿ ಪುಣ್ಯಾರಣ್ಯದ ಘನಭೀಮೇಶ್ವರಲಿಂಗ ನಿರಂಗಸಂಗ.

**ಟೀಕು**:— ಪಂಚವಳಿಯ ವಿಸ್ತೀರ್ಣವೆಂದೊಡೆ ಪಂಚಭೂತ ಗ್ರಾಮ ವೆಂದರ್ಥ. ಅಂತಪ್ಪ ದೇಹದಲ್ಲಿ ತನುತ್ರಯಂಗಳೆ ಪಟ್ಟಣವಾಗಿಹವೆಂಬುದೀಗ, ಕಟ್ಟಿದವು ಮೂರು ಪಟ್ಟಣಎಂಬ ಶಬ್ದಕ್ಕರ್ಥ. ಕೆಲನೆಂದೊಡೆ ಸ್ಥೂಲ. ತನುವಿನ ಕರ್ಮೇಂದ್ರಿಯಂಗಳೆಂಬುದೀಗ, ಕೆಲದಲ್ಲಿ ಹೊಲಗೇರಿ ಎಂಬ ಶಬ್ದಕ್ಕರ್ಥ. ಬಲನೆಂದೊಡೆ ಶರಣಂಗಳಿಗಾಶ್ರಯವಾದ ಕಾರಣ ತನುವೆಂಬುದೀಗ, ಬಲದಲ್ಲಿ ಮಾದಿಗರ ಮನೆಯೆಂಬ ಶಬ್ದಕ್ಕರ್ಥ. ನಡುವೆ ಎಂದೊಡೆ ಇಂದ್ರಿಯಂಗಳಿಗಾಶ್ರ ಯವಾದ ಸೂಕ್ಷ್ಮ ತನುವೆಂಬುದೀಗ, ನಡುವೆ ಹೆಬ್ಬಾರುವರ ಮಹಾ ಜಿನಂಗಳ ಗುಡಿವಾಡವೆಂಬ ಶಬ್ದಕ್ಕರ್ಥ. ಕರ್ಮೇಂದ್ರಿಯಂಗಳ ದುರ್ವರ್ತನೆ ಎಂಬುದೀಗ, ಹೊಲೆಯರ ಗೋವಧೆಯೆಂಬ ಶಬ್ದಕ್ಕರ್ಥ. ಸಕಲ ಕರಣಂಗಳಿಗಾಶ್ರಯವಾದ ಕಾರಣ ದೇಹದಮಾಯಾ ದುರ್ವಾಸನೆ ಎಂಬುದೀಗ, ಮಾದಿಗರ ಮನೆಯನಾತ ವೆಂಬ ಶಬ್ದಕ್ಕರ್ಥ. ಇಂದ್ರಿಯಂಗಳ ವಿಷಯ ಸ ಖವನನುಭವಿಸುತ್ತಿಹನೆಂಬು ದೀಗ, ಹಾರುವರೂಟದ ಸುಖಲೇಸಾಯಿತ್ತು ಎಂಬ ಶಬ್ದಕ್ಕರ್ಥ. ತನು ತ್ರಯಂಗಳ ಜ್ಞಾನಕರ್ಮೇಂದ್ರಿಯಂಗಳ ವ್ಯವಹಾರದೊಳಗೆ ಸಿಲ್ಕಿ ಕೋಟಲೆ

ಗೊಳ್ಳುತ್ತಿಹರೆಂಬುದೀಗ, ಜಗದ ಕೀಳು ಮ್ಯಾಲಿನ ಕೂಟವೆಂಬ ಶಬ್ದಕ್ಕರ್ಥ. ಶಿವಾಂಶೀಕನಾದಾತ್ಮನು, ದೇಹಸಂಬಂಧವಾದಲ್ಲಿ ತನ್ನ ನಿಜವ ಮರೆದು ಅಜ್ಞಾನಿಯಾದಲ್ಲಿಯೆ ಆಯಿತ್ತೆಂಬುದೀಗ, ಅದ್ಯಾತರಿಂದಾಯಿತ್ತೆಂಬುದ ನಿನ್ನ ನೀನರಿ, ಪುಣ್ಯಾರಣ್ಯದ ಘನಭೀಮೇಶ್ವರ ಲಿಂಗ ನಿರಂಗ ಸಂಗ ಎಂಬ ಶಬ್ದಕ್ಕರ್ಥ.

೧೮

ಊರೆಲ್ಲರು ಕೂಡಿಕೊಂಡು ತಿಂದರು ದನವಾ
ಆ ಖಂಡವನೊಲ್ಲದೆ ಕಾಲು ಕೊಳಗು ತಲೆಯುಕೊಂಬುವ
ಬೇಯಿಸಿತಿಂಬ ಶರಣ ತಿಂದ ಕೊಂಬುಕೊಳಗು ಅವನಂಗವ ನುಂಗಿತ್ತು
ಅಂಗ ಸುಸಂಗಲಿಯ್ಯವಾಯಿತ್ತು
ಲಿಯ್ಯ ನಿಜದಲ್ಲಿ ನಿಂದು ನಿರ್ಲೇಪ್ತವಾಯಿತ್ತು
ಆ ಗುಣ ಇದ್ಯಾರಿಂದಾಯಿತ್ತೆಂಬುದ
ನಿನ್ನ ನೀನರಿ ಪುಣ್ಯಾರಣ್ಯದ ಘನಭೀಮೇಶ್ವರಲಿಂಗ ನಿರಂಗ ಸಂಗ.

**ಟೀಕು:**— ದ್ವೈತಾ ದ್ವೈತಯೋಗ ಕಾಂಡಿ ಮೊದಲಾದವರೆಲ್ಲರು ಅಷ್ಟಾಂಗ ಯೋಗದಿಂ ದೇಹದಂಡಣೆಯಿಂದ ಜೀವನ ನಿಗ್ರಹಿಸುತ್ತಿಹರೆಂಬುದೀಗ, ಊರೆಲ್ಲರು ಕೂಡಿಕೊಂಡು ತಿಂದರು ದನವಾ ಎಂಬ ಶಬ್ದಕ್ಕರ್ಥ. ಶ್ರೀ ಗುರು ಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧಿಯಾದ ಶರಣನು ಭಿನ್ನ ಭಿನ್ನ ಯೋಗಗಳಿಂದ ಆತ್ಮ ನಿಗ್ರಹವ ಮಾಡದೆ ಎಂಬುದೀಗ, ಆ ಖಂಡವನೊಲ್ಲದೆ ಎಂಬ ಶಬ್ದಕ್ಕರ್ಥ. ಕಾಲುಎಂದೊಡೆ ಕ್ರಿಯ್ಯ. ಕೊಳಗ ಎಂದೊಡೆ ಚರಿಯಾರ್ಪಾದ. ತಲೆ ಎಂದೊಡೆ ಭಿನ್ನಜ್ಞಾನ. ಕೊಂಬ ಎಂದೊಡೆ ಅಹಂಕಾರ. ಈ ಚತುರ್ವಿಧವ ನಿವೃತ್ತಿಯ ಮುಖಕ್ಕೆ ತಂದು ಮಹಾಜ್ಞಾನಾಗ್ನಿಯಲ್ಲಿ ಸಮರಸಪಾಕವ ಮಾಡಿ ಲಿಂಗ ಮುಖದಲ್ಲಿ ನಿವೇದಿಸಿ ಅನುಭವಿಸುತ್ತಿಹನೆಂಬುದೀಗ, ಕಾಲು, ಕೊಳಗು ವ ತಲೆಯು, ಕೊಂಬುವ ಬೇಯಿಸಿ ತಿಂಬಶರಣನೆಂಬ ಶಬ್ದಕ್ಕರ್ಥ. ಆ ಬಿದಾಹಂಕಾರ ಚರಿಯು ಪಾದವೆರಡು ಶರಣನ ದೇಹ ಪ್ರಾಣಂಗಳ ಅವಗ್ರಹಿಸಿದವೆಂಬುದೀಗ, ತಿಂದಕೊಂಬು ಕೊಳಗು ಅವನಂಗವ ನುಂಗಿತ್ತೆಂಬ ಶಬ್ದಕ್ಕರ್ಥ. ಆ ಶರಣನ ಅಂಗ–ಪ್ರಾಣಂಗಳೆರಡು ಲಿಂಗ ಜಂಗಮದಲ್ಲಿ ಸಂಬಂಧವಾದವೆಂಬುದೀಗ, ಅಂಗ ಸುಸಂಗಲಿಯ್ಯವಾಯಿತ್ತೆಂಬ ಶಬ್ದಕ್ಕರ್ಥ. ಆ ಲಿಂಗ ಜಂಗಮವನೊಳಕೊಂಡ ಶರಣನು, ನಿಷ್ಕಲ ಪರ ಬ್ರಹ್ಮದಲ್ಲಿ. ನಿಷ್ಪತಿಯಾದನೆಂಬುದೀಗ, ಲಿಯ್ಯ ನಿಜದಲ್ಲಿ ನಿಂದು ನಿರ್ಲೇಪವಾಯಿತ್ತು, ಆ ಗುಣವ್ಯಾತರಿಂದಾಯಿತ್ತೆಂಬುದನರಿ, ಪುಣ್ಯಾರಣ್ಯದ ಘನಭೀಮೇಶ್ವರಲಿಂಗ ನಿರಂಗಸಂಗ ಎಂಬ ಶಬ್ದಕ್ಕರ್ಥ.

೧೯

ಕಾಳಿಯ ಹೊಲದ ವ್ರೊಣೆಯ ದಾರಿಯಲ್ಲಿ ಮೂವ್ವರು ಕಳ್ಳರು ಕಟ್ಟಿ
ಬೆಳಗೊಬ್ಬನ ಆ ಕಳ್ಳರು ಹಿಡಿಯಲಾಗಿ ಬೆಳ್ಳಗೆ ಬೆಳುವೆ ತಾಗಿ
ಕಳ್ಳರೊಮ್ಮೆ ಮರೆದು ಮೂರು ಹಳ್ಳದಲ್ಲಿ ಬಿದ್ದರು
ಬಿದ್ದು ಸಾವವರ ಕೊಲ್ಲಲೊಲ್ಲದೆ ಬೆಳ್ಳನಲ್ಲಿಯೆ
ಅಡಗಿದವನಾರೆಂದರೆ, ಪುಣ್ಯಾರಣ್ಯದ ಘನಭೀಮೇಶ್ವರಲಿಂಗ
ನಿರಂಗಸಂಗ.

**ಟೀಕು:**— ಅಜ್ಞಾನ ಸ್ವರೂಪಿಣಿಯಾದ ಮಾಯೆಯೆಂಬುದೀಗ, ಕಾಳಿ ಎಂಬ ಶಬ್ದಕ್ಕರ್ಥ. ಆ ಮಾಯೆಯ ಸಂಬಂಧವಾದ ದೇಹವೆಂಬುದೀಗ, ಕಾಳಿಯ ಹೊಲದ ಎಂಬ ಶಬ್ದಕ್ಕರ್ಥ. ಅಂತಪ್ಪ ತನುಸಂಬಂಧವಾದ ಇಂದ್ರಿಯಂಗಳ ಮಾರ್ಗದಲ್ಲಿ ಎಂಬುದೀಗ, ವ್ರೊಣೆಯ ದಾರಿಯಲ್ಲಿ ಎಂಬ ಶಬ್ದಕ್ಕರ್ಥ. ಆ ತನು ತ್ರಯಯುಕ್ತವಾದ ಪಾರಮಾರ್ಥ ಪಂಚಕರಪ್ಪ ಜೀವತ್ರಯಂಗಳೆಂಬುದೀಗ ಮೂವರು ಕಳ್ಳರು ಎಂಬ ಶಬ್ದಕ್ಕರ್ಥ. ಆ ಜೀವತ್ರಯ ಸಂಬಂಧಿವಾದಿಗಳಾದ ಅದ್ವೈತ ಜ್ಞಾನಿಗಳು ಶಿವಜ್ಞಾನವನವಗ್ರಹಿಸುತ್ತಿರಲು ಎಂಬುದೀಗ, ಕಳ್ಳರು ಕಟ್ಟಿ ಬೆಳ್ಳನೊಬ್ಬನ ಹಿಡಿಯಲಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಶಿವಜ್ಞಾನವ ನರಿಯಬೇಕೆಂಬ ಮರವಿಯ ತಮ್ಮಾನವ ಗ್ರಹಿಸಲು ಆ ಮರವಿಯಲ್ಲಿ ಮಗ್ನವಾದ ರೆಂಬುದೀಗ, ಬೆಳ್ಳನ ಬೆಳುವೆತಾಗಿ ಕಳ್ಳರೊಮ್ಮೆ ಮರೆದು ಎಂಬ ಶಬ್ದಕ್ಕರ್ಥ. ಅಂತಪ್ಪ ಮರವೆಗೊಳಗಾದ ಅದ್ವೈತ ಜ್ಞಾನಿಗಳು ಮಲತ್ರಯದಲ್ಲಿ ಸಿಲ್ಕಿ ಮಗ್ನ ವಾದರೆಂಬುದೀಗ, ಮೂರು ಹಳ್ಳದಲ್ಲಿಬಿದ್ದರು ಎಂಬ ಶಬ್ದಕ್ಕರ್ಥ. ಅಂತಪ್ಪ ಮಲ ತ್ರಯದ ಪ್ರಪಂಚಿನಲ್ಲಿ ಸಿಲ್ಕಿದ ಅದ್ವೈತಜ್ಞಾನಿಗಳ ಜೀವಭಾವವನು ಸಂಹರಿಸದೆ ಶಿವಜ್ಞಾನ ಅಲ್ಲಿಯೆ ನಷ್ಟವಾಯಿತ್ತೆಂಬುದೀಗ, ಅಡಗಿದವನಾರೆಂದರೆ ಪುಣ್ಯಾ ರಣ್ಯದ ಘನ ಭೀಮೇಶ್ವರಲಿಂಗ ನಿರಂಗಸಂಗ ಎಂಬ ಶಬ್ದಕ್ಕರ್ಥ.

೨೦

ಅಲಗನೇರಿ ಹೂವ್ವ ಕೊಯ್ದು
ಭಾವಿಯ ನುಂಗಿ ನೀರ ಕುಡಿದು
ಹಣ್ಣಹಾಕಿ ಮರನ ಮೆದ್ದವರಾರಯ್ಯ !
ಹೆತ್ತವನಕೊಂದು ಅಂಗಳ ಕೆಳೆಗೊಂಡು
ಬದುಕಿದವನಾರೆಂಬುದ ನಿನ್ನ ನೀನರಿ
ಪುಣ್ಯಾರಣ್ಯದ ಘನಭೀಮೇಶ್ವರಲಿಂಗ ನಿರಂಗಸಂಗ.

**ಟೀಕು:**— ಸುಜ್ಞಾನ ಸ್ವರೂಪವಾದ ಶರಣನು ಅಹಂಕಾರವೆಂಬಲನ ಸತ್ಕ್ರಿಯಾ ಚರಣದಲ್ಲಿ ಮೆಟ್ಟಿದನೆಂಬುದೀಗ, ಅಲಗನೇರಿ ಎಂಬ ಶಬ್ದಕ್ಕರ್ಥ- ಅಂತಪ್ಪ ಸತ್ಕ್ರಿಯಾ ಚರಣದಿಂದ ಅಹಂಕಾರ ನಷ್ಟವಾದ ಶರಣನು ತನ್ನ ಹೃದಯ ಕಮಲ

ವೆಂಬ ಸದ್ವಾಸನ ಕುಸುಮವನು ಸುಜ್ಞಾನ ಹಸ್ತದಲ್ಲಿ ಕೊಯ್ದು ಪ್ರಾಣಲಿಂಗ ಪೂಜೆಯ ಮಾಡುತ್ತಿಹನೆಂಬುದೀಗ, ಹೂವ್ವಕೊಯ್ದು ಎಂಬ ಶಬ್ದಕ್ಕರ್ಥ. ಆ ಪ್ರಾಣಲಿಂಗ ಪೂಜೆಯಲ್ಲಿ ತತ್ಪರನಾದ ಶರಣನು, ಸಂಸಾರ ವಿಷಯರಸ ಕೂಪವ ತನ್ನ ಮಹಾಜ್ಞಾನದ ಮಧ್ಯದಲ್ಲಿ ಅಡಗಿಸಿದನೆಂಬುದೀಗ, ಭಾವಿಯ ನುಂಗಿ ಎಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ರಸಕೂಪದ ನಷ್ಟ ಮಾಡಿದ ಶರಣನು ಪರಮಶಾಂತಿಸ್ವರೂಪವಾದ ಸದ್ವಿವೇಕ ಜಲವನು ಚಿದ್ವಾರದಿಂ ಸ್ವೀಕರಿಸಿದನೆಂಬುದೀಗ, ನೀರ ಕುಡಿದು ಎಂಬ ಶಬ್ದಕ್ಕರ್ಥ. ಆ ಪರಮಾನಂದ ಜಲವ ಸ್ವೀಕರಿಸಿದ ಶರಣನು ಭಿನ್ನ ಫಲ ಪದಂಗಳ ನಿವೃತ್ತಿಯ ಮಾಡಿದನೆಂಬುದೀಗ, ಹಣ್ಣಹಾಕಿ ಎಂಬ ಶಬ್ದಕ್ಕರ್ಥ. ಮರನೆಂದೊಡೆ ಸದ್ವಿವೇಕ ಸ್ವರೂಪವಾದ ಪರ ಬ್ರಹ್ಮ ವೃಕ್ಷ. ಅಂತಪ್ಪ ಪರಬ್ರಹ್ಮವ ಸರ್ವಾಂಗದಲ್ಲಿ ಸಾಹಿತ್ಯವ ಮಾಡಿಕೊಂಡು, ಲಿಂಗಾಂಗ ಸಮರಸಾನಂದವಿರಳ ಜ್ಞಾನ ಪ್ರಸಾದವನಾರೋಗಿಸುತ್ತಿರ್ದನೆಂಬುದೀಗ, ಮರನ ಮೆದ್ದವರಾರಯ್ಯ ಎಂಬ ಶಬ್ದಕ್ಕರ್ಥ. ಹೆತ್ತವನೆಂದೊಡೆ ಬ್ರಹ್ಮನು. ಗುರುಕರಜಾತನಾದ ಶರಣನು ಬ್ರಹ್ಮನ ಸೃಷ್ಟಿಯ ನಷ್ಟವ ಮಾಡಿದನೆಂಬುದೀಗ, ಹೆತ್ತವನಕೊಂದು ಎಂಬ ಶಬ್ದಕ್ಕರ್ಥ. ಆ ಉತ್ಪತ್ಯ ನಷ್ಟವಾದ ಶರಣಂಗೆ ಹಗೆಗಳಾದ ಸಕಲ ಕರಣಂಗಳನು ಲಿಂಗ ಕರಣಂಗಳ ಮಾಡಿದನೆಂಬುದೀಗ, ಅರಿಗಳ ಕೆಳೆಗೊಂಡು ಎಂಬ ಶಬ್ದಕ್ಕರ್ಥ. ಆ ಕರಣಂಗಳ ನಿವೃತ್ತಿಯ ಮಾಡಿ, ಉತ್ಪತ್ಯ, ಸ್ಥಿತಿ, ಲಯಂಗಳ ಜಯಿಸಿ ನಿತ್ಯವಾದ ನಿಜಪದದಲ್ಲಿರ್ದ ಶರಣನೆಂಬುದೀಗ, ಬದುಕಿದವನಾರೆಂಬುದ ನಿನ್ನ ನೀನರಿ ಪುಣ್ಯಾರಣ್ಯದ ಘನಭೀಮೇಶ್ವರಲಿಂಗ ನಿರಂಗಸಂಗ ಎಂಬ ಶಬ್ದಕ್ಕರ್ಥ.

೨೧

ಕೋಣನ ಕಿವಿಯಲ್ಲಿ ಮೂರು ಹಸುತನೆ ತುಂಬಿ
ಕರು ಎಂದನೆಯಿತ್ತು, ಕರುತಾಯ ನೆರೆನೋಡಿ
ಹಾಲಿಗೆ ಹೋಡಿಯಲಿಲ್ಲವೆಂದು ಪ್ರಾಣವ ಬಿಟ್ಟಿತ್ತು
ಕರುವಿನ ಹರಣವನರಿ, ಅರಿದಡೆ ನಿನ್ನ ನೀನೇ
ಭಿನ್ನ ಭಾವವಿಲ್ಲ ಪುಣ್ಯಾರಣ್ಯದ ಘನಭೀಮೇಶ್ವರಲಿಂಗ
ನಿರಂಗಸಂಗ.

**ಟೀಕು:**— ಅನಿತ್ಯವಾದ ದೇಹದಲ್ಲಿ, ಜೀವನನೆಂಬ ಪಶುವೆಂಬುದು ಕೋಣನೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಶಿವಸಂಸ್ಕಾರ ಒದಗೆ ಸುಜ್ಞಾನೋದಯವಾದಲ್ಲಿ ಸದ್ವಿವೇಕವ ತಲೆದೋರಿ, ಆ ಸದ್ವಿವೇಕದ್ವಾರದಲ್ಲಿ ಇಚ್ಛಾಜ್ಞಾನ ಕ್ರಿಯೆಯೆಂಬ ತ್ರಿವಿಧ ಶಕ್ತಿಗಳ ಸಮರಸ ಸಂಯೋಗದಿಂ ಚಿದ್ಗರ್ಭದ ಚಿಸ್ಥ ತೋರಿತ್ತೆಂಬುದೀಗ, ಕೋಣನ ಕಿವಿಯಲ್ಲಿ ಮೂರು ಹಸು ತನೆ ತುಂಬಿ ಎಂಬ ಶಬ್ದಕ್ಕರ್ಥ. ಅಂತಪ್ಪ ಇಚ್ಛಾಜ್ಞಾನ ಕ್ರಿಯ್ಯ ಮುಂದುಗೊಂಡು ಗುರೋಪಾವಸ್ಥೆಯಂ ಮಾಡುವ ಶಿಷ್ಯಂಗೆ ಜ್ಞಾನ ಗುರು ಕರುಣಿಸಿ, ನಿರಾಕಾರವಪ್ಪ ಪರಬ್ರಹ್ಮವ

ಸಾಕಾರವ ಮಾಡಿ ಶಿಷ್ಯನ ಕರಸ್ಥಲದಲ್ಲಿ ಕೊಟ್ಟನೆಂಬುದೀಗ, ಕರುವಂದನೆಯಿತ್ತು ಎಂಬ ಶಬ್ದಕ್ಕರ್ಥ. ಮತ್ತೆ ಕರುವೆಂದೊಡೆ ಜ್ಞಾನಕೂತ್ತನಾದ ಶರಣ ತನಗೆ ಮಾತೃಸ್ಥಾನವಾದ, ಮಹಾಘನಲಿಂಗವ ಸುಜ್ಞಾನ ದೃಷ್ಟಿಯಿಂದ ನಿರೀಕ್ಷಿಸುತ್ತಿರ್ದನೆಂಬುದೀಗ, ಕರು ತಾಯ ನೆರೆನೋಡಿ ಎಂಬ ಶಬ್ದಕ್ಕರ್ಥ. ಆ ಚಿದಾಮೃತ ಸ್ವರೂಪವಾದ ಮಹಾಘನಲಿಂಗಕ್ಕೆ ಮತ್ತೊಂದು ವಸ್ತು ಸರಿ ಇಲ್ಲವೆಂಬುದೀಗ, ಹಾಲಿಗೆ ಪೊಡೆಯಿಲ್ಲವೆಂದು ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಸ್ವರೂಪನಾದ ಶರಣನ ಚಿತ್ಪ್ರಾಣವನು ಚಿದ್ಘನ ಲಿಂಗದಲ್ಲಿ ಸಮರಸವಾಯಿತ್ತೆಂಬುದೀಗ, ಪ್ರಾಣವ ಬಿಟ್ಟಿತ್ತೆಂಬ ಶಬ್ದಕ್ಕರ್ಥ. ಆ ಸುಜ್ಞಾನ ಸ್ವರೂಪವಾದ ಶರಣಂಗೆ, ಚೈತನ್ಯ ಸ್ವರೂಪವಾಗಿರ್ಪುದ ಮಹಾಘನಲಿಂಗವೆಂದರಿ ಎಂಬುದೀಗ, ಕರುವಿನ ಮರಣವ ನರಿ ಅರಿವಡೆ ನಿನ್ನ ನೀನೆ ಭಿನ್ನ ಭಾವವಿಲ್ಲ, ಪುಣ್ಯಾರಣ್ಯದ ಘನಭೀಮೇಶ್ವರಲಿಂಗ ನಿರಂಗ ಸಂಗ ಎಂಬ ಶಬ್ದಕ್ಕರ್ಥ.

೨೨

ಮರೆಯ ಮನೆಯ ಮಧ್ಯದಲ್ಲಿ, ಮನೋವಿಕಾರದ ಮಾನಿನಿ
ಹುಟ್ಟಿದಳು
ಹಗಲಿಗೆ ಹಾದರಗಿತ್ತಿ, ಇರುಳಿಗೆ ಸಜ್ಜನೆಯಾಗಿ
ಪುರುಷನೊಡಗೂಡಿಪ್ಪಳು
ಅವಳಂಗದ ಬಸುರು, ಯೋನಿಯ ಕಂಗಳು,
ಮನದ ಮೊಲೆ, ವಿಪರೀತದ ಮಂಡೆಯ ತುರುಬು
ತುರುಗಿತ್ತು ಮೂರಡಿಯಲ್ಲಿ, ಅವಳ ನೊಡಗೂಡುವ ನಾರೆಂದಲ್ಲಿ,
ನಿನ್ನ ನೀ ತಿಳಿ, ಪುಣ್ಯಾರಣ್ಯದ ಘನ ಭೀಮೇಶ್ವರಲಿಂಗ
ನಿರಂಗ ಸಂಗ

ಟೀಕು:-- ಅಷ್ಟಾಂಗ ಯೋಗದಿಂ ಸಾಧಿಸಿಹೆನೆಂಬ ಭಿನ್ನ ಜ್ಞಾನಿಗಳಿಗೆ ಕಾಣಬಾರದೆಯಿರ್ದ ಶರಣನ ನಿಜಾಂತರಂಗವೆಂಬ ನಿಳಯ ಒಪ್ಪುತ್ತಿಹುದೆಂಬುದೀಗ, ಮರೆಯ ಮನೆ ಎಂಬ ಶಬ್ದಕ್ಕರ್ಥ. ಆ ನಿಜಾನು ಭಾವಾಂತರಂಗದಲ್ಲಿರ್ಪ ನಿಷ್ಕಲ ಚಿಚ್ಛಕ್ತಿ, ಉನ್ಮನಿ ತತ್ವ ಸ್ವರೂಪವಾದ ಮನಸ್ಸಿನಿಂದ ಶಿವತತ್ವದಲ್ಲಿ ಕೂಡಬೇಕೆಂಬ, ತುರಿಯಾವಸ್ಥೆಯ ಹುಟ್ಟಿಸುತ್ತಿಹಳೆಂಬುದೀಗ, ಮಧ್ಯದಲ್ಲಿ ಮನೋವಿಕಾರದಮಾನಿನಿ ಹುಟ್ಟಿದಳೆಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪವಾದ ಶರಣ ಸತಿಯು ಇಷ್ಟಲಿಂಗದ ಸತ್ಕ್ರಿಯಲ್ಲಿ ಒಡಗೂಡುತ್ತಿಹಳೆಂಬುದೀಗ, ಹಗಲಿಗೆ ಹಾದರಗಿತ್ತಿ ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪವಾದ ಶರಣ ಸತಿಯು, ಚಿದ್ರೂಪವಾದ ಪ್ರಾಣಲಿಂಗದಲ್ಲಿ ಅಭಿನ್ನ ಭಾವದಿಂದೊಡಗೂಡಿ ಪರವಶ ಭಾವದಿಂದಿರುತ್ತಿಹಳೆಂಬುದೀಗ, ಇರುಳಿಗೆ ಸಜ್ಜನೆಯಾಗಿ ಪುರುಷನೊಡಗೂಡಿಪ್ಪಳು ಎಂಬ ಶಬ್ದಕ್ಕರ್ಥ. ಆ ಶರಣ ಸತಿಯು, ಪ್ರಸಾದ ಕಾಯವನೊಳಕೊಂಡು ಚಿದ್ಗರ್ಭದ ಚಿಹ್ನದೋರುತ್ತಿಹಳೆಂಬುದೀಗ ಅವಳಂಗದ ಬಸುರು ಎಂಬ ಶಬ್ದಕ್ಕರ್ಥ. ಆ

ಶರಣ ಸತಿಯು ನಿಜ ಸುಷುಪ್ತಿಯನೊಳಕೊಂಡಿರ್ಪ ಅವಿರಳ ಜ್ಞಾನದೃಷ್ಟಿಯೆಂಬುದೀಗ, ಯೋನಿಯುಕಂಗಳೆಂಬ ಶಬ್ದಕ್ಕರ್ಥ. ಆ ಚಿದ್ರೂಪವಾದ ಶರಣ ಸತಿಯ ಮನೋಮಧ್ಯದಲ್ಲಿ ಅಮೃತ ಕುಂಭ ಸ್ವರೂಪನಿಂದೊಪ್ಪುವ ಪ್ರಾಣಲಿಂಗವಿರ್ಪುದೆಂಬುದೀಗ, ಮನದ ಮೊಲೆ ಎಂಬ ಶಬ್ದಕ್ಕರ್ಥ. ಆ ಶರಣ ಸತಿಗೆ ಪರಿಪೂರ್ಣ ಜ್ಞಾನವೆ ಮುಡಿಯಾಗುತ್ತಿಹುದೆಂಬುದೀಗ, ವಿಪರೀತದ ಮಂಡೆಯು ತುರುಬು ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣ ಜ್ಞಾನ ಪ್ರಕಾಶ ಶರಣನ ಸರ್ವಾಂಗವೊಳ ಹೊರಗೆ ಕಿಕ್ಕಿಂದವಾಗಿದ್ದಿರ್ಕ್ಕೆಂಬುದೀಗ, ತುರುಗಿತ್ತು ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪವಾದ ಶರಣಸತಿಯು ಕರ್ಮ, ಭಕ್ತಿ, ಜ್ಞಾನ ಪಿಡಿದು ತ್ರಿವಿಧಲಿಂಗದಲ್ಲಿ ಆಚರಿಸಿ ಗುರುಸ್ವರೂಪವಾದ ಆ ನಿಷ್ಕಲ ಚಿಚ್ಛಕ್ತಿಯಲ್ಲಿ ಏಕಾರ್ಥವಾದನೆಂಬುದೀಗ, ಮೂರು ಮುಡಿಯಲ್ಲಿ ಅವಳನೊಡಗೂಡುವನಾರೆಂದಲ್ಲಿ ನಿನ್ನ ನೀ ತಿಳಿ ಪುಣ್ಯಾರಣ್ಯದ ಘನಭೀಮೇಶ್ವರಲಿಂಗ ನಿರಂಗಸಂಗ ಎಂಬ ಶಬ್ದಕ್ಕರ್ಥ.

## ೨೩

ಕಣ್ಣಿನೊಳಗಣ ಮತ್ಸ್ಯಕ್ಕೆ ಬಲೆಯ ಬೀಸಿ
ಹದ್ದಿನ ಬಾಯ ಹಾವಿಂಗೆ ಹೋಳಿಗೆಯ ಮಾಡಿ
ಕಾಣಬಾರದ ಬಯಲಿಂಗೆ ಮನೆಯ ಕಟ್ಟಿ
ಬಾಳುತ್ತಿರ್ದವನ ನಿನ್ನ ನೀನರಿ ಪುಣ್ಯಾರಣ್ಯದ ಘನ
ಭೀಮೇಶ್ವರಲಿಂಗ ನಿರಂಗ ಸಂಗ

**ಟೀಕು:**— ಶ್ರೀಗುರು ಕಾರುಣ್ಯದಿಂ ಸರ್ವಾಂಗ ಲಿಂಗ ಸಂಬಂಧವಾದ ಶರಣನು, ತನ್ನ ಸುಜ್ಞಾನ ದೃಷ್ಟಿಯ ಮುಂದೆ ತೋರುವ ಇಷ್ಟಲಿಂಗದಲ್ಲಿ ಭಕ್ತಿ ಪಿಡಿದು ಆಚರಿಸುತಿರ್ದನೆಂಬುದೀಗ, ಕಣ್ಣಿನೊಳಗಣ ಮತ್ಸ್ಯಕ್ಕೆ ಬಲೆಯ ಬೀಸಿ ಎಂಬ ಶಬ್ದಕ್ಕರ್ಥ. ಅಂತು ಭಕ್ತಿ ಪಿಡಿದು ಆಚರಿಸಿದ ಶರಣಂಗೆ, ಹದ್ದೆಂದೊಡೆ ಪರಮಾತ್ಮನು. ಅಂತಪ್ಪ ಪರಮಾತ್ಮನು ಶಿವಾಪೇಕ್ಷೆಯಿಂ ಮನವಳಿದು ಮನೋಮೂರ್ತಿ ಪ್ರಾಣಲಿಂಗವಾಯಿತ್ತೆಂಬುದೀಗ, ಹದ್ದಿನ ಬಾಯ ಹಾವೆಂಬ ಶಬ್ದಕ್ಕರ್ಥ. ಅಂತಪ್ಪ ಪ್ರಾಣಲಿಂಗಕ್ಕೆ ಶರಣ ತನ್ನ ನಿಜಾಂತರಂಗವನೆ ಆಶ್ರಯ ಮಾಡಿದನೆಂಬುದೀಗ, ಹೋಳಿಗೆಯ ಮಾಡಿ ಎಂಬ ಶಬ್ದಕ್ಕರ್ಥ. ಅಂತು ಪ್ರಾಣಲಿಂಗಕ್ಕೆ ಆಶ್ರಯ ಮಾಡಿದ ಶರಣನು, ವಾಙ್ಮನಕ್ಕಗೋಚರವಾದ ಭಾವಲಿಂಗಕ್ಕೆ ಕಾರಣಂಗವನೆ ಚಿದ್ಗೃಹವ ಮಾಡಿದನೆಂಬುದೀಗ, ಕಾಣಬಾರದ ಬಯಲಿಗೆ ಮನೆಯ ಕಟ್ಟಿ ಎಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧ ಲಿಂಗಕ್ಕೆ ತ್ರಿವಿಧ ಕ್ರಿಯ್ಯವಾದಿ, ತ್ರಿವಿಧ ಪದಾರ್ಥವನರ್ಪಿಸಿ, ತ್ರಿವಿಧ ಪ್ರಸಾದವ ಸ್ವೀಕರಿಸಿದ ಶರಣನೆ, ಜನನ–ಮರಣ ರಹಿತವಾದ ಪರಶಿವನೆಂಬುದೀಗ, ಬಾಳುತ್ತಿರ್ದವನ ನಿನ್ನ ನೀನರಿ ಪುಣ್ಯಾರಣ್ಯದ ಘನ ಭೀಮೇಶ್ವರ ಲಿಂಗ ನಿರಂಗ ಸಂಗ ಎಂಬ ಶಬ್ದಕ್ಕರ್ಥ.

೨೪

ಆರು ಇಲ್ಲದ ಠಾವಿನಲ್ಲಿ ಊರು ಕಟ್ಟಿ
ಊರವರೆಲ್ಲರು ಒಳಗೆ ತಾ ಹೊರಗಾಗಿ
ಕೆರೆಯ ಕಟ್ಟಿ ಕೆರೆಯ ಬಾಗಿಲ ಊರೊಳಗೆ
ಮನೆ ಹೊರಗಾಗಿ ಎಡೆಯಾಡುತ್ತಿರ್ದಾತನ
ನೀತಿಯನರಿ ಪುಣ್ಯಾರಣ್ಯದ ಘನ ಭೀಮೇಶ್ವರಲಿಂಗ ನಿರಂಗ ಸಂಗ

ಟೀಕು:— ಶಿವಜ್ಞಾನೋದಯವಾಗಿ ಶ್ರೀ ಗುರು ಕಾರುಣ್ಯವ ಪಡೆದ ಶರಣನು, ಸಕಲ ಕರಣಂಗಳ ನಿವೃತ್ತಿಯ ಮಾಡಿ ತನ್ನ ನಿಜಾನುಭಾವಂತರಂಗವನೆ ಪ್ರಾಣಲಿಂಗಕ್ಕಾಶ್ರಯವ ಮಾಡಿದನೆಂಬುದೀಗ, ಆರುಇಲ್ಲದ ಠಾವಿನಲ್ಲಿ ಊರುಕಟ್ಟಿ ಎಂಬ ಶಬ್ದಕ್ಕರ್ಥ. ಆ ನಿಜಾನುಭಾವಾಂತರಂಗದಲ್ಲಿರ್ಪ ಸಕಲ ಕರಣಂಗಳೆಲ್ಲ ಪ್ರಾಣಲಿಂಗದಲ್ಲಿ ಸನ್ನದ್ಧರಾಗಿಹರೆಂಬುದೀಗ, ಊರವರೆಲ್ಲ ಒಳಗು ಎಂಬ ಶಬ್ದಕ್ಕರ್ಥ. ಆ ಸುಜ್ಞಾನಿ ಶರಣನು ಬಹಿರಂಗದ ಸತ್ಕ್ರಿಯಾಚಾರದಲ್ಲಿ ತತ್ಪರನಾಗಿಹನೆಂಬುದೀಗ, ತಾ ಹೊರಗಾಗಿ ಎಂಬ ಶಬ್ದಕ್ಕರ್ಥ. ಆ ಚಿತ್ಸ್ವರೂಪವಾದ ಶರಣ ಅಂಗೇಂದ್ರಿಯಂಗಳ ನಿವೃತ್ತಿಯ ಮಾಡಿ ಲಿಂಗೇಂದ್ರಿಯ ಸ್ವರೂಪವ ಮಾಡಿದನೆಂಬುದೀಗ, ಕೆರೆಯ ಕಟ್ಟಿ ಎಂಬ ಶಬ್ದಕ್ಕರ್ಥ. ಆ ಲಿಂಗೇಂದ್ರಿಯಂಗಳನೊಳಕೊಂಡಿರ್ಪ ಸುಜ್ಞಾನದ್ವಾರವು, ತನ್ನ ನಿಜಾಂತರಂಗದಲ್ಲಿ ವೇದಿಸಿಹುದೆಂಬುದೀಗ, ಕೆರೆಯ ಬಾಗಿಲು ಊರೊಳಗೆ ಎಂಬ ಶಬ್ದಕ್ಕರ್ಥ. ಆ ಶರಣನ ನಿಜಾಂತರಂಗದ ಸುಜ್ಞಾನ ಪ್ರಕಾಶವು, ಬಹಿರಂಗದ ಸತ್ಕ್ರಿಯಾಚಾರದಲ್ಲಿ ಕೂಡಿರುತ್ತಿಹುದೆಂಬುದೀಗ, ಮನೆಹೊರಗಾಗಿ ಎಡೆಯಾಡುತ್ತಿರ್ದವನ ನೀತಿಯನರಿ ಪುಣ್ಯಾರಣ್ಯದ ಘನಭೀಮೇಶ್ವರಲಿಂಗ ನಿರಂಗಸಂಗ ಎಂಬ ಶಬ್ದಕ್ಕರ್ಥ.

೨೫

ಕಣ್ಣಿಲ್ಲದ ಕುರುಡ ಕನ್ನಡಿಯ ನೋಡಿ
ತನ್ನಯ ಕಣ್ಣ ಕಂಡ; ಕಾಲಿಲ್ಲದ ಆದವ
ಕಠಾರವ ಹಿಡಿದು ಮೂಗಾವುದ ತಿರುಗಿಬಂದ;
ನಪುಂಸಕ ಬೆಸಲಾಗಿ, ಒಂದು ಹುಸಿಯ ಕೂಸು ಹುಟ್ಟಿತ್ತು
ಮಸನಿತ್ತು ಮೊಲೆ, ಹೊಲಗೇರಿಯಲ್ಲಿ ಹೊಲೆ ಮೊಲೆಯನುಂಡು
ಬೆಳೆದವನರಿ ಪುಣ್ಯಾರಣ್ಯದ ಘನ ಭೀಮೇಶ್ವರಲಿಂಗ ನಿರಂಗ ಸಂಗ

ಟೀಕು:— ಶಿವಾಂಶೀಕನಾದಾತ್ಮಂಗೆ, ದೇಹ ಸಂಬಂಧವಾದಲ್ಲಿ, ಸುಜ್ಞಾನ ದೃಷ್ಟಿ ನಷ್ಟವಾಯಿತ್ತೆಂಬುದೀಗ ಕಣ್ಣಿಲ್ಲದ ಕುರುಡನೆಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮಂಗೆ ಶಿವಕೃಪೆಯಿಂದ ಸದ್ವಿವೇಕಜ್ಞಾನ ತಲೆದೋರಿ ಮೂಲ ಜ್ಞಾನ ದೃಷ್ಟಿ ಕಾಣಬಂದಿತ್ತೆಂಬುದೀಗ, ಕನ್ನಡಿಯ ನೋಡಿ ತನ್ನಯ ಕಣ್ಣ ಕಂಡನೆಂಬ ಶಬ್ದಕ್ಕರ್ಥ. ಭಿನ್ನಕ್ರಿಯಾಚಾರವಳಿದು, ಅಭಿನ್ನ ಕ್ರಿಯಾಚಾರದಲ್ಲಿ ತತ್ಪರನಾದ ಅಂತ

ರಾತ್ಮನೆಂಬುದೀಗ, ಕಾಲಿಲ್ಲದ ಅದವನೆಂಬ ಶಬ್ದಕ್ಕರ್ಥ. ಕಠಾರವೆಂದೊಡೆ ಪರಿಪೂರ್ಣಜ್ಞಾನ. ಅಂತಪ್ಪ ಪರಿಪೂರ್ಣ ಜ್ಞಾನವ, ಕೃತನಿಶ್ಚಯ ಹಸ್ತದಲ್ಲಿ ದೃಢವಿಡಿದು, ಕ್ರಿಯಾಜ್ಞಾನ ಭಾವವಿಡಿದು ಆಚರಿಸುತ್ತಿಹನೆಂಬುದೀಗ, ಕಠಾರವ ಹಿಡಿದು ಮೂಗಾವುದವ ತಿರುಗಿ ಬಂದನೆಂಬ ಶಬ್ದಕ್ಕರ್ಥ. ನಪುಂಸಕನೆಂದೊಡೆ ಮನಸ್ಸು. ಅಂತಪ್ಪ ಮನೋಮಧ್ಯದಲ್ಲಿ ಸುಜ್ಞಾನೋದಯವಾಗಿ, ಚಿದ್ಗರ್ಭದ ಚಿನ್ಹ ತಲೆದೋರಿತ್ತೆಂಬುದೀಗ, ನಪುಂಸಕ ಬಸಲಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಮನೋಮಧ್ಯದಲ್ಲಿ, ಸಾಕಾರವಲ್ಲದ ನಿರಾಕಾರವಾದ ಪರಬ್ರಹ್ಮವ ಶ್ರೀಗುರು ಶಿಷ್ಯನ ಕರಸ್ಥಲಕ್ಕೆ ತಂದು ಕೊಟ್ಟನೆಂಬುದೀಗ, ಒಂದು ಹುಸಿಯ ಕೂಸು ಹುಟ್ಟಿತ್ತೆಂಬ ಶಬ್ದಕ್ಕರ್ಥ. ಅಂತು ಅಮೃತ ಕುಂಭ ಸ್ವರೂಪನಿಂದೊಪ್ಪುತ್ತಿರ್ದ ಇಷ್ಟಲಿಂಗವೇ ಕರ್ಮೇಂದ್ರಿಯಂಗಳನೊಳಕೊಂಡು, ಪ್ರಕಾಶಿಸುತ್ತಿಹುದೆಂಬುದೀಗ, ಮನನಿತ್ತು ಮೊಲೆ ಹೊಲೆಗೇರಿಯಲ್ಲಿ ಎಂಬ ಶಬ್ದಕ್ಕರ್ಥ. ಆ ಲಿಂಗ ಸುಖ ಪ್ರಸನ್ನ ಪ್ರಸಾದವ ಇಂದ್ರಿಯಂಗಳನುಭವಿಸುತ್ತಿಹವೆಂಬುದೀಗ, ಹೊಲೆ ಮೊಲೆಯನುಂಡು ಬೆಳವವನನರಿ ಪುಣ್ಯಾರಣ್ಯದ ಘನ ಭೀಮೇಶ್ವರ ಲಿಂಗ ನಿರಂಗ ಸಂಗ ಎಂಬ ಶಬ್ದಕ್ಕರ್ಥ.

**೨೬**

ದಾಳಿಹೋದ ಆಳಿನ ಉಸುರಿನಲ್ಲಿ ಒಂದು ವೇಣು ಹುಟ್ಟಿತ್ತು.
ಮೂರು ಗೇಣು ಹದಿನಾರು ಹೊಟ್ಟೆ ಹತ್ತುಕಳದು,
ಆರರ ಮ್ಯಾಲೆ ನಿಂದುದು; ಐದರನೆಲೆ ಐದುಗೂಡಿ ನಿಂದುದು,
ಇಪ್ಪತ್ತರ ಭಾವತತ್ವ ಶಕ್ತಿಯಲ್ಲಿ ಅಡಗಿ
ಆಳುವೇಣು ಹತ್ತು, ಆರು ಐದು
ಇಪ್ಪತ್ತೈದು ಕೂಡಿ ನಿಶ್ಚಯವಾಯಿತ್ತು.
ಇದರಂಗ ಭೇದಿಸಿ ತತ್ವವನರಿ ಪುಣ್ಯಾರಣ್ಯದ
ಘನ ಭೀಮೇಶ್ವರಲಿಂಗ ನಿರಂಗ ಸಂಗ

**ಟೀಕು:**— ಶಿವಾಂಶೀಕನಾದಾತ್ಮನು, ದೇಹಸಂಬಂಧವಾದಲ್ಲಿ ತನ್ನ ನಿಜವ ಮರದು ಅಜ್ಞಾನಿಯಾಗಿ ಪರಿಭವದತ್ತ ಹೋದನೆಂಬುದೀಗ, ದಾಳಿಹೋದ ಆಳಿನ ಎಂಬ ಶಬ್ದಕ್ಕರ್ಥ. ಅಂತಪ್ಪ ಪ್ರಾಣವಾಯು ವಿಕಾರದಿಂ ಬದ್ಧವಾದ ಶರೀರವೆಂಬುದೀಗ, ಉಸುರಿನಲ್ಲಿ ಒಂದು ವೇಣುಹುಟ್ಟಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪದೇಹದಲ್ಲಿ ಗುಣತ್ರಯ ಸಂಬಂಧವಾದ ತನು ತ್ರಯವೆಂಬುದೀಗ, ಮೂರುಗೇಣೆಂಬ ಶಬ್ದಕ್ಕರ್ಥ. ಅಂತಪ್ಪ ತನುತ್ರಯದಲ್ಲಿ ಅಷ್ಟಮದಂಗಳು, ಬಹಿರಂಗದ ಅಷ್ಟಮದಂಗಳೆಂಬುದೀಗ, ಹದಿನಾರು ಹೊಟ್ಟೆಯೆಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮಂಗೆ ಸುಜ್ಞಾನೋದಯವಾಗಿ ಗುರೂಪಾವಸ್ಥೆಯ ಮಾಡಿ, ಆ ಶ್ರೀಗುರು ಸರ್ವಾಂಗಲಿಂಗ ಸಂಬಂಧವ ಮಾಡಿದಲ್ಲಿ ದಶವಾಯುಗಳ ಪ್ರಕೃತಿ ನಷ್ಟವಾಗಿ, ಸರ್ವಾಂಗವು ಮಂತ್ರ ಸ್ವರೂಪವಾಯಿತ್ತೆಂಬುದೀಗ, ಹತ್ತುಕಳದು ಎಂಬ

ಶಬ್ದಕ್ಕರ್ಥ. ಅಂತಪ್ಪ ದಶವಾಯುಗಳ ನಿವೃತ್ತಿಯ ಮಾಡಿದ ಶರಣನ ಮಹಾನು ಭಾವದರಿವು, ಷಡೇಂದ್ರಿಯಂಗಳನೊಳಕೊಂಡು, ತೋರುತ್ತಿಹುದೆಂಬುದೀಗ, ಆರರವ್ಯಾಲೆ ನಿಂದು ಎಂಬ ಶಬ್ದಕ್ಕರ್ಥ. ಅಂತಪ್ಪ ಸುಜ್ಞಾನಿ ಶರಣನ ಪಂಚೇಂದ್ರಿಯಂಗಳಲ್ಲಿ, ಪಂಚಲಿಂಗ ಸಂಬಂಧವಾಗಿ ಕರ್ಮೇಂದ್ರಿಯಂಗಳ ನೊಳಗೊಂಡು ತೋರುತ್ತಿಹುದೆಂಬುದೀಗ, ಐದರ ನೆಲೆ ಐದು ಗೂಡಿ ನಿಂದುದು ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣನ ದಶೇಂದ್ರಿಯ ದಶವಾಯುಗಳು ಶಿವತತ್ವವನಾಶ್ರಯಿಸಿ, ಸರ್ವಜ್ಞಾನ ಶಕ್ತಿಯ ಮಧ್ಯದಲ್ಲಿ ಲಯವಾದವು ಎಂಬು ದೀಗ, ಇಪ್ಪತ್ತರ ಭಾವತತ್ವ ಶಕ್ತಿಯಲ್ಲಡಗಿ ಎಂಬ ಶಬ್ದಕ್ಕರ್ಥ. ಆಳೆಂದೊಡೆ ಆತ್ಮನು. ಪೇಣು ಎಂದೊಡೆ ತನು. ಪತ್ತೆಂದೊಡೆ ದಶವಾಯು. ಆರೆಂದೊಡೆ ಅರಿ ಷಡ್ವರ್ಗಂಗಳು. ಐದು ಎಂದೊಡೆ ಪಂಚೇಂದ್ರಿಯಂಗಳು. ಪಂಚ ವಿಂಶತಿ ತತ್ವಂಗಳು- ಇಂತಿವೆಲ್ಲವು ಲಿಂಗದಲ್ಲಿ ಸಮರಸದಿಂದ ಏಕಾರ್ಥವಾದ ಭೇದವನರಿ ಎಂಬುದೀಗ, ಆಳು ಪೇಣು ಪತ್ತು ಆರು ಐದು ಗೂಡಿನಿಂದುದು ಇಪ್ಪತ್ತೈದು ಗೂಡಿ ನಿಶ್ಚಯವಾಯಿತ್ತು ಇದರಂಗ ಭೇದಿಸಿ ತತ್ವವನರಿ ಪುಣ್ಯಾರಣ್ಯದ ಘನ ಭೀಮೇಶ್ವರ ಲಿಂಗ ನಿರಂಗಸಂಗ ಎಂಬ ಶಬ್ದಕ್ಕರ್ಥ.

೨೭

ಆರಿಗೆಯು ತೋರದ ಅಂಬರದಲ್ಲಿ
ಒಂದು ಎರಳೆಯು ಮರಿಯನಿಕ್ಕಿ ಸತ್ತಿತ್ತು
ಮರಿಯ ಮಂಡಿಯ ದೆಸೆಯಲ್ಲಿ;
ಮರಿ ತಾಯಿಯನೇರಿ ನೋಡಿ
ಸತ್ತುದನರಿಯದೆ ಗೊತ್ತು ಮೂಸುತ್ತಿದ್ದಿತ್ತು
ಹೊಲಸಿನ ಗವಲು ನಾಸಿಕವ ತಾಗಿ
ಸತ್ತುದೆಂಬುದನರಿದು ಮರಿ ಬಚ್ಚಬಯಲಾಯಿತ್ತು
ಬಯಲ ತಿಳಿದರಿ ನಿನ್ನ ನೀ ಪುಣ್ಯಾರಣ್ಯದ ಘನಭೀಮೇಶ್ವರಲಿಂಗ
ನಿರಂಗಸಂಗ.

ಟೀಕು:— ದ್ವೈತಾ ದ್ವೈತಿಗಳಿಗೆ ಕಾಣಬಾರದೆ ಇರ್ದ ಚಿದಾಕಾಶ ಸ್ಥಾನ ವೆಂಬುದೀಗ, ಆರಿಗೆಯು ತೋರದ ಅಂಬರದಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಬ್ರಹ್ಮ ರಂಧ್ರದಲ್ಲಿ ನಿಷ್ಕಳ ಚಿತ್‌ಶಕ್ತಿ ಇರುತ್ತಿಹಳೆಂಬುದೀಗ, ಒಂದು ಎರಳೆಯು ಎಂಬ ಶಬ್ದಕ್ಕರ್ಥ. ಅಂತಪ್ಪ ನಿಷ್ಕಳ ಚಿಚ್ಛಕ್ತಿಯಿಂ ಚಿದ್ರೂಪನಾದ ಶರಣನು ಉದಯವಾದನೆಂಬುದೀಗ, ಮರಿಯನಿಕ್ಕಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಸುಜ್ಞಾನ ಸನ್ನಿಹಿತವಾದ ಮಹಾಜ್ಞಾನದ ಮಧ್ಯದಲ್ಲಿ, ಆ ಚಿತ್ಶಕ್ತಿ ನಿಷ್ಪತಿಯಾದ ಳೆಂಬುದೀಗ, ಸತ್ತಿತ್ತು ಮರಿಯ ಮಂಡಿಯದೆಸೆಯಲ್ಲಿ ಎಂಬ ಶಬ್ದಕ್ಕರ್ಥ. ಆ ಶರಣ ತನಗೆ ಮಾತೃಸ್ಥಾನವಾದ ಮಹಾಜ್ಞಾನ ಚಿತ್ತನು, ಅವಿರಳ ಜ್ಞಾನ ದೃಕ್ಕಿ (ಷ್ಟಿ?)ಂದ ನಿರೀಕ್ಷಿಸುತ್ತಿರ್ದನೆಂಬುದೀಗ, ಮರಿ ತಾಯಿಯ ನೇರಿ ನೋಡಿ ಎಂಬ

ಶಬ್ದಕ್ಕರ್ಥ. ಆ ನಿಷ್ಕಲ ಚಿಚ್ಛಕ್ತಿ ತನ್ನ ಮಹಾಜ್ಞಾನದ ಮಧ್ಯದಲ್ಲಿ ನಿಷ್ಪತ್ತಿಯಾದ ಭೇದವ, ತಾ ಭಿನ್ನವಿಟ್ಟರಿಯಲಿಲ್ಲವೆಂಬುದೀಗ, ಸತ್ತುದನರಿಯದೆ ಎಂಬ ಶಬ್ದಕ್ಕರ್ಥ. ಆ ಶರಣನು ಇಷ್ಟಲಿಂಗದಲ್ಲಿ ಸತ್ಕ್ರಿಯಾ ಜ್ಞಾನವಿಡಿದು, ಆಚರಿಸುತ್ತಿರ್ದನೆಂಬುದೀಗ, ಗೊತ್ತು ಮೂಸುತ್ತಿದ್ದಿತ್ತೆಂಬ ಶಬ್ದಕ್ಕರ್ಥ. ಆ ಶಿವಸದ್ಭಾವನೆ ಸ್ವಾನುಭಾವವನವಗ್ರಹಿಸಿ ಸಮರಸವಾಯಿತ್ತೆಂಬುದೀಗ, ಹೊಲಸಿನ ಗವಲು ನಾಸಿಕವ ತಾಗಿ ಎಂಬ ಶಬ್ದಕ್ಕರ್ಥ. ಆ ನಿಷ್ಕಲಚಿಚ್ಛಕ್ತಿ ತನ್ನ ಮಹಾಜ್ಞಾನದಲ್ಲಿ ಸಮರಸವಾದ ಭೇದವನರಿದು, ಆ ನಿಷ್ಕಲ ಪರಬ್ರಹ್ಮದಲ್ಲಿ ಶರಣ ನಿಷ್ಪತಿಯಾದನೆಂಬುದೀಗ, ಸತ್ತುದನರಿದು ಮರಿ ಬಚ್ಚ ಬಯಲಾಯಿತ್ತು, ಬಯಲು ತಿಳಿದರಿ ನಿನ್ನ ನೀ, ಪುಣ್ಯಾರಣ್ಯದ ಘನ ಭೀಮೇಶ್ವರ ಲಿಂಗನಿರಂಗ ಸಂಗ ಎಂಬ ಶಬ್ದಕ್ಕರ್ಥ.

೨೮

ಒಂದಿರಹಿನ ಗೂಡಿನಲ್ಲಿ ಐದಾನೆ ಮರಿಯನಿಕ್ಕಿ
ಹೋದವು ತಮ್ಮ ಕಾಡಿಗೆ; ಇರುಹು ಮರಿಯ ಕಣ್ಣ ಕಚ್ಚಿ
ಮರಿಯ ತೆಗೆದು ಹಾಕಿದವು ತಮ್ಮ ಗೃಹದಿಂದ;
ಆನಿ ಬಂದು ನಿಂದು ನೋಡಿ
ಇದೇನಾಯಿತ್ತು ಮರಣ ಎಂದದಕ್ಕೆ ಮೊದಲೇ
ಆನಿ ಸತ್ತು ಇರುಹಿನ ಹಗೆ ಬಿಟ್ಟಿತ್ತು;
ಆರರಿವವನ ಅರಿದು ನೋಡು ಪುಣ್ಯಾರಣ್ಯದ ಘನಭೀಮೇಶ್ವರಲಿಂಗ
ನಿರಂಗಸಂಗ

**ಟೀಕು:—** ಇರುಹೆಂದೊಡೆ ಪರಿಪೂರ್ಣ ಜ್ಞಾನ. ಅಂತಪ್ಪ ಜ್ಞಾನವನೊಳಕೊಂಡಿರ್ದ ದೇಹದಲ್ಲಿ ಎಂಬುದೀಗ, ಒಂದಿರಹಿನ ಗೂಡಿನಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ಅಹಂಕಾರ ಯುಕ್ತವಾದ ಪಂಚಭೂತಂಗಳಿಂದ ಜೀವತ್ರಯಂಗಳು ಉದಯಿಸಿದವೆಂಬುದೀಗ, ಐದಾನೆ ಮರಿಯ ನಿಕ್ಕಿ ಎಂಬ ಶಬ್ದಕ್ಕರ್ಥ. ಆ ಪಂಚಭೂತಂಗಳು ಭವಾರಣ್ಯ ಪ್ರವೇಶಿಗಳಾಗಿಹವೆಂಬುದೀಗ, ಹೋದವು ತಮ್ಮ ಕಾಡಿಗೆ ಎಂಬ ಶಬ್ದಕ್ಕರ್ಥ. ಆ ಪಿಂಡದಲ್ಲಿರ್ದ ಪರಿಪೂರ್ಣ ಜ್ಞಾನ ಪ್ರಭಾವಿಸಿ, ಜೀವ ತ್ರಯಂಗಳ ನಿವೃತ್ತಿ ಜ್ಞಾನ ನಷ್ಟವ ಮಾಡಿತ್ತೆಂಬುದೀಗ, ಇರುಹು ಮರಿಯ ಕಣ್ಣ ಕಚ್ಚಿ ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣ ಜ್ಞಾನ ಪ್ರಕಾಶದಿಂದ ಜೀವ ತ್ರಯಂಗಳ ಪ್ರವರ್ತನೆ ನಷ್ಟವಾಯಿತ್ತೆಂಬುದೀಗ, ಮರಿಯ ತೆಗೆದು ಹಾಕಿದವು ತಮ್ಮ ಗೃಹದಿಂದ ಎಂಬ ಶಬ್ದಕ್ಕರ್ಥ. ಆ ಭವಾರಣ್ಯ ಪ್ರವೇಶಿಗಳಾಗಿರ್ದ, ಅಹಂಕಾರ ಯುಕ್ತವಾಗಿರ್ದ, ಪಂಚಭೂತಂಗಳು ಬಂದು ನಿಂದು ನೋಡಿ ಶ್ರೀಗುರುಕಾರುಣ್ಯದಿಂ, ಸರ್ವಾಂಗಲಿಂಗ ಸಂಬಂಧವಾದ ನಿವೃತ್ತಿಯನೆ ಇಷ್ಟಲಿಂಗದಲ್ಲಿ ಸಮರಸೈಕ್ಯವಾದ ಭೇದವ ಕಂಡು ಎಂಬುದೀಗ, ಆನಿಯು ಬಂದು ನಿಂದು ನೋಡಿ ಎಂಬ ಶಬ್ದಕ್ಕರ್ಥ. ಇಂತು ಸದ್ವಿವೇಕ ಮುಖದಿಂ ವಿಚಾರಿಸುತ್ತಿರಲು, ಆ ಪಂಚ ಭೂತಂಗಳ ಅಹಂಕಾರ ಕೆಟ್ಟು ಚಿದಹಂಕಾರ ಸ್ವರೂಪವಾಯಿ

ತ್ತೆಂಬುದೀಗ, ಇದೇನಾಯಿತ್ತು ಮರಣವೆಂಬುದಕ್ಕೆ ಮೊದಲೆ ಆನು ಸತ್ತು ಎಂಬ ಶಬ್ದಕ್ಕರ್ಥ. ಅಂತು ಪಂಚ ಭೂತ ಜೀವತ್ರಯಂಗಳು ನಿವೃತ್ತಿಯಾಗಿ ಲಿಂಗದಲ್ಲಿ ಏಕಾರ್ಥವಾದಲ್ಲಿ ಆ ಪರಿಪೂರ್ಣಜ್ಞಾನದಿಂ ತತ್ವಗಳು ನಿವೃತ್ತಿಯ ಮಾಡಬೇಕೆಂಬುದಿಲ್ಲದೆ ಹೋಯಿತ್ತೆಂಬುದೀಗ, ಇರುಹಿನ ಹಗೆ ಬಿಟ್ಟಿತ್ತು ಆದರಿದವನ ಅರಿದು ನೋಡು ಪುಣ್ಯಾರಣ್ಯದ ಘನ ಭೀಮೇಶ್ವರ ಲಿಂಗ ನಿರಂಗ ಸಂಗ ಎಂಬ ಶಬ್ದಕ್ಕರ್ಥ.

## ೨೯

ಮಹಾಮನೆಯ ಮಂಟಪದಲ್ಲಿ ನಾಲ್ಕು ನಡುವಣಕಂಭ,
ನಡುವಣಕಂಭದಲ್ಲಿ ಒಂದೊರಲೆ ಮನೆಯ ಮಾಡಿತ್ತು.
ಅದಕ್ಕೆ ಎಂಟು ಕಂಭ, ಒಂಭತ್ತು ಬಾಗಿಲು, ಹತ್ತು ಕದ,
ಮಿಗಿಲೊಂದ ಮುಚ್ಚುವದಕ್ಕೆ ಬಾಗಿಲಿಲ್ಲ,
ತುಂಬಿಯಲ್ಲಿ ಹಾರಿತ್ತು:
ಆ ಆತ್ಮನ ನೆಲೆಯನರಿ ಪುಣ್ಯಾರಣ್ಯದ ಘನ ಭೀಮೇಶ್ವರ
ನಿರಂಗ ಸಂಗ

ಟೀಕು:— ಸಕಲ ತತ್ವಂಗಳಿಗಾಶ್ರಯವಾದ ಚಿದಾಲಯದಲ್ಲಿ, ಚಿದ್ಘನಲಿಂಗ ವಿಪ್ಪುದೆಂಬುದೀಗ, ಮಹಾಮನೆಯ ಮಂಟಪದಲ್ಲಿ ಎಂಬ ಶಬ್ದಕ್ಕರ್ಥ. ನಾದ, ಬಿಂದು, ಕಳೆ, ಕಳಾತ್ಮಿತ ನಾಲ್ಕರ ಮಧ್ಯದಲ್ಲಿರ್ಪ ತುರಿಯಾವಸ್ಥೆ. ಆ ತುರಿಯಾವಸ್ಥೆಯ ಭಾವ, ಒಂದೆಂಬುದೀಗ, ನಾಲ್ಕು ನಡುವಣ ಕಂಭದ ನಡುವಣಕಂಭದಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಭಾವದಿಂದ ಶಿವಾಂಶೀಕನಾದಾತ್ಮನುದಯವಾಗಿ, ಅಸತ್ಯವಾದ ದೇಹವನಾಶ್ರಯ ಮಾಡಿದನೆಂಬುದೀಗ, ಒಂದೊರಲೆ ಮನೆಯಮಾಡಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹಕ್ಕೆ ಅಷ್ಟತನುಗಳೇ ಕಂಭವಾಗಿಹುದೆಂಬುದೀಗ, ಅದಕ್ಕೆ ಎಂಟು ಕಂಭವೆಂಬ ಶಬ್ದಕ್ಕರ್ಥ. ಅಂತಪ್ಪ ಅಷ್ಟತನುಯುಕ್ತವಾದ ದೇಹಕ್ಕೆ, ನವದ್ವಾರಂಗಳೇ ಬಾಗಿಲುವಾಡ ವಾಗಿಹವೆಂಬುದೀಗ, ಒಂಭತ್ತು ಬಾಗಿಲು ಎಂಬ ಶಬ್ದಕ್ಕರ್ಥ. ಅಂತಪ್ಪ ನವದ್ವಾರಂಗಳ ದಶವಾಯುಗಳು ಬಂಧಿಸಿಕೊಂಡಿಹುವೆಂಬುದೀಗ, ಹತ್ತು ಕದವೆಂಬ ಶಬ್ದಕ್ಕರ್ಥ. ಮಿಗಿಲೊಂದು ಬಾಗಿಲೆಂದೊಡೆ, ಪಶ್ಚಿಮ ದ್ವಾರವಪ್ಪ ಸುಷುಮ್ನನಾಳ. ಆ ಸುಷುಮ್ನದ್ವಾರ, ಸುಜ್ಞಾನೋದಯವಾದ ಶರಣಂಗೆ ತೆರೆದಿಹುದಾಗಿ ಎಂಬುದೀಗ, ಮಿಗಿಲೊಂದು ಮುಚ್ಚುವದಕ್ಕೆ ಬಾಗಿಲಿಲ್ಲ ಎಂಬ ಶಬ್ದಕ್ಕರ್ಥ. ಶ್ರೀಗುರು ಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧಿಯಾದ ಶರಣನು, ತನ್ನ ಮೂಲಜ್ಞಾನ ದೃಷ್ಟಿಯಿಂದ ನಿರವಯ ಪರಬ್ರಹ್ಮದಲ್ಲಿ ಯೈದುತ್ತಿರ್ಪನೆಂಬುದೀಗ, ತುಂಬಿಯಲ್ಲಿ ಹಾರಿತ್ತು ಆ ಆತ್ಮನ ನೆಲೆಯನರಿ ಪುಣ್ಯಾರಣ್ಯದ ಘನಭೀಮೇಶ್ವರಲಿಂಗ ನಿರಂಗಸಂಗ ಎಂಬ ಶಬ್ದಕ್ಕರ್ಥ.

## ೩೦

ಸಂಪಗೆಯ ತಂಬೆಲರಿನಲ್ಲಿ ಒಂದು ಭೃಂಗ ತತ್ತಿಯ ಸಿಕ್ಕಿತ್ತು
ತನ್ನ ಬಾಳು ಕುಸುಮದ ವಾಸನೆ ಒಳವನ್ನಕ್ಕ ತುಂಬಿ ಇದ್ದಿತ್ತು
ವಾಸನೆತೋರಿ ತುಂಬಿ ಸತ್ತಿತ್ತು; ಮರಿ ಹಾರಿ ಹೋಯಿತ್ತು
ಆ ಮರಿಯ ಅರಿವ ನಿನ್ನ ನೀನರಿ ಪುಣ್ಯಾರಣ್ಯದ
ಘನಘೋಮೋಕ್ಷರಲಿಂಗ ನಿರಂಗಸಂಗ.

ಟೀಕು:— ಸ್ವಾನುಭಾವ ಸದ್ವಾಸನೆಯ ನೊಳಕೊಂಡಿಪ್ಪ ದೇಹವೆಂಬುದೀಗ, ಸಂಪಗೆಯ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿರ್ದ ಆತ್ಮನ ಇಂದ್ರಿಯಂಗಳ ಪ್ರವರ್ತನೆಯಿಂದ ಜೀವತ್ರಯಂಗಳು, ಉದಯವಾದವೆಂಬುದೀಗ, ತಂಬೆಲರಿನಲ್ಲಿ ಒಂದು ಭೃಂಗ ತತ್ತಿಯ ಸಿಕ್ಕಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮನು ಸುಜ್ಞಾನೋದಯ ವಾಗುವನ್ನಕ್ಕರ ಪ್ರಾರಬ್ಧಭೋಗಂಗಳನು ಭುಜಿಸುತ್ತಿರ್ದನೆಂಬುದೀಗ, ತನ್ನ ಬಾಳು ಕುಸುಮದ ವಾಸನೆ ಬಳಿವನ್ನಕ್ಕ ತುಂಬಿ ಇದ್ದಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪಾತ್ಮಂಗೆ ಸ್ವಾನುಭಾವ ಜ್ಞಾನ ಉದಯವಾದಾಕ್ಷಣವೆ, ಜೀವ ಭಾವ ನಿವೃತ್ತಿಯಾಗಿ ಶ್ರೀ ಗುರು ಕಾರುಣ್ಯದಿಂ ಸರ್ವಾಂಗ ಸಂಬಂಧವಾಯಿತ್ತೆಂಬುದೀಗ, ವಾಸನೆತೋರಿ ತುಂಬಿ ಸತ್ತಿತ್ತು ಎಂಬ ಶಬ್ದಕ್ಕರ್ಥ. ಅಂತು ಜೀವಭಾವ ನಿವೃತ್ತಿಯಾದ ಜ್ಞಾನ ಕಳಾತ್ಮನು ಇಷ್ಟ. ಪ್ರಾಣ ಲಿಂಗದಲ್ಲಿ ಕ್ರಿಯಾಜ್ಞಾನವಿಡಿದಾಚರಿಸಿ ಪರಶಿವ ತತ್ವದಲ್ಲಿ ಐಕ್ಯವಾಗುತ್ತಿರ್ದನೆಂಬುದೀಗ, ಮರಿಹಾರಿಹೋಯಿತ್ತು, ಆ ಮರಿಯ ಅರಿವ ನಿನ್ನ ನೀನರಿ ಪುಣ್ಯಾರಣ್ಯದ ಘನಘೋಮೋಕ್ಷರಲಿಂಗ ನಿರಂಗಸಂಗ ಎಂಬ ಶಬ್ದಕ್ಕರ್ಥ.

## ೩೧

ಹುಟ್ಟಿದ ಮರದಲ್ಲಿ ಹಾರದಪಕ್ಷಿ ತಲೆದೋರುತ್ತದೆ
ಆಗದ ಹಣ್ಣ ಕುಟುಕಿ-ರಸತಾಗದೆ ನುಂಗುತ್ತದೆ
ಅದು ನಾಗಲಿಕ ಪಕ್ಷಿ ಹಾರಿಹೋಯಿತ್ತು
ಅದರಾಗತವನರಿ ಆತ್ಮನಿರವ
ನಿನ್ನ ನೀನರಿ ಪುಣ್ಯಾರಣ್ಯದ ಘನಘೋಮೋಕ್ಷರಲಿಂಗ ನಿರಂಗಸಂಗ.

ಟೀಕು:— ಜನನಾಂಕುರವಿಲ್ಲದ ಸದ್ವಿವೇಕ ವೃಕ್ಷ, ಶರಣನ ನಿಜಾಂತರಂಗದಲ್ಲಿ ಇರುತ್ತಿಹುದೆಂಬುದೀಗ, ಹುಟ್ಟಿದ ಮರದಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ ವೃಕ್ಷದಲ್ಲಿ ಭಿನ್ನ ಫಲ ಪದಂಗಳ ಬಯಕೆಯಿಲ್ಲದ ಪರಮಾತ್ಮ ನೆಂಬಪಕ್ಷಿ, ಶಿವಜ್ಞಾನ ದೃಷ್ಟಿಗೆ ತೋರುತ್ತಿಹುದೆಂಬುದೀಗ. ಹಾರದ ಪಕ್ಷಿ ತಲೆದೋರುತ್ತದೆ ಎಂಬ ಶಬ್ದಕ್ಕರ್ಥ ಅಂತಪ್ಪ ಪರಮಾತ್ಮನು ವೇದಾಗಮಂಗಳಿಗೆ ಅಸಾಧ್ಯವಾದ ಮುಕ್ತಾಫಳ ಸ್ವರೂಪವಾದ ಚಿನ್ಮಲಿಂಗವನವಗ್ರಹಿಸಿತ್ತೆಂಬುದೀಗ, ಆಗದ ಹಣ್ಣ ಕುಟುಕಿ ಎಂಬ ಶಬ್ದಕ್ಕರ್ಥ. ಅಂತಪ್ಪ ಚಿದಾಮೃತ ರಸವನು ಭಿನ್ನವಿಟ್ಟು

ಸೋಂಕದೆ ಸುಜ್ಞಾನ ಮುಖದಿಂ ಸ್ವೀಕರಿಸುತ್ತಿಹುದೆಂಬುದೀಗ, ರಸತಾಗದೆ ನುಂಗುತ್ತದೆ ಎಂಬ ಶಬ್ದಕ್ಕರ್ಥ. ಆ ಚಿದಾಮೃತ ರಸವಂ ಸುಜ್ಞಾನ ಮುಖದಿಂ ಸ್ವೀಕರಿಸಿದ ಪರಮಾತ್ಮನು ಶಿವಾಂಶೀಕನೆಂಬುದೀಗ, ಅದು ನಾಗಲೀಕ ಪಕ್ಷಿಯೆಂಬ ಶಬ್ದಕ್ಕರ್ಥ. ಆ ಚಿದಾತ್ಮನು ಕ್ರಿಯಾವಿಡಿದಾಚರಿಸಿ ಅವಿರಳ ಪರಬ್ರಹ್ಮದಲ್ಲಿ ಏಕಾರ್ಥವಾಗಿ ಹೋದುದಾಶ್ಚರ್ಯ ಎಂಬುದೀಗ, ಹಾರಿಹೋಯಿತ್ತು ಅದ ರಾಗತವನರಿ ಆತ್ಮನಿರವ ನಿನ್ನ ನೀನರಿ ಪುಣ್ಯಾರಣ್ಯದ ಘನಭೀಮೇಶ್ವರಲಿಂಗ ನಿರಂಗಸಂಗ ಎಂಬ ಶಬ್ದಕ್ಕರ್ಥ.

೩೨

ಕಾಮಧೇನುವಿನ ನಡುವೆ ಒಂದು ಕೋಣ ಕಟ್ಟಿತ್ತು
ಕೋಣನ ಗವಲುತಾಗಿ ಕಾಮಧೇನು ಕೆಡುತ್ತದೆ
ಕೋಣನ ಡೋಣಿಗೆ ತಳ್ಳಿ ಕಾಮಧೇನು ಕಾಣವಂತೆಮಾಡು
ಅರಿವು ಅಜ್ಞಾನವ ನಿನ್ನ ನೀನರಿ ಪುಣ್ಯಾರಣ್ಯದ
ಘನಭೀಮೇಶ್ವರಲಿಂಗ ನಿರಂಗಸಂಗ.

**ಟೀಕು:—** ಚಿತ್ತೆಂಬ ಸುರಧೇನು ಈಗ, ಕಾಮಧೇನುವೆಂಬ ಶಬ್ದಕ್ಕರ್ಥ. ಅಂತಪ್ಪ ಚಿತ್ತಿನ ಮಧ್ಯದಲ್ಲಿ ಆ ದೇಹ ಸಂಬಂಧಿಯಾದ ಜೀವನು, ಭವಪಾಶದಲ್ಲಿ ಬಿಗಿ ವಡದಿರುತ್ತಿಹನೆಂಬುದೀಗ, ಕಾಮಧೇನುವಿನ ನಡುವೆ ಒಂದು ಕೋಣ ಕಟ್ಟಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಮಾಯಾ ದುರ್ವಾಸನೆ ಚಿತ್ತವ ನವಗ್ರಹಿಸಲು, ಮುಸುಳಿಸುತ್ತಿಹುದು ಎಂಬುದೀಗ, ಕೋಣನ ಗವಲು ತಾಕಿ ಕಾಮಧೇನು ಕೆಡುತ್ತದೆ ಎಂಬ ಶಬ್ದಕ್ಕರ್ಥ. ಶಿವ ದೃಷ್ಟಿಯಿಂದ ಸಮ್ಯಜ್ಞಾನೋದಯವಾದ ಶರಣಂಗೆ ಶ್ರೀಗುರು ಕಾರುಣ್ಯದಿಂ ಲಿಂಗ ಸಂಬಂಧವಾಗಿ, ವಿಷಯ ಕೂಪ ನಷ್ಟವಾದಲ್ಲಿ ಜೀವ ಭಾವ ನಿವೃತ್ತಿಯಾಯಿತ್ತೆಂಬುದೀಗ, ಕೋಣನ ಡೋಣಿಗೆ ತಳ್ಳಿ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವ ಭಾವವಳಿದು, ಸಜ್ಜೀವ ಸ್ವರೂಪವಾದ ಶರಣಂಗೆ, ಆ ಚಿತ್ತು ಇದಿರಿಟ್ಟು ತೋರಲಿಲ್ಲವೆಂಬುದೀಗ, ಕಾಮಧೇನು ಕಾಣದಂತೆ ಮಾಡು ಎಂಬ ಶಬ್ದಕ್ಕರ್ಥ. ಅಂತಪ್ಪ ಅಜ್ಞಾನ ಸ್ವರೂಪವಾದ ಜೀವಭಾವ ನಿವೃತ್ತಿಯ ಮಾಡಿ, ಅರಿವು ಸ್ವರೂಪವಾದ ಚಿತ್ತವನವ ಗ್ರಹಿಸಿ, ಎಂಬುದೀಗ, ಅರಿವು ಅಜ್ಞಾನವ ನಿನ್ನ ನೀನರಿ ಪುಣ್ಯಾರಣ್ಯದ ಘನ ಭೀಮೇಶ್ವರ ಲಿಂಗ ನಿರಂಗ ಸಂಗ ಎಂಬ ಶಬ್ದಕ್ಕರ್ಥ.

೩೩

ಅಣು ಇರುಹಿನ ಮರಿ ಬ್ರಹ್ಮನ ಅಂಡವನೂರಿ
ವಿಷ್ಣುವಿನ ಪಿಂಡವ ನುಂಗಿತ್ತು
ಅದು ತನ್ನ ಒಡಲಿಗೆಯ್ದದೆ ರುದ್ರನ ತೊಡಿಯ

ಮುಡಿಯುವಳ ಆತ ಸಹಿತಾಗಿ ನುಂಗಿತ್ತು
ಅದ್ಯಾತರ ಸೂತ್ರವೆಂದಾತ್ಮನ ಭೇದವನರಿ
ಪುಣ್ಯಾರಣ್ಯದ ಘನ ಭೀಮೇಶ್ವರಲಿಂಗ ನಿರಂಗಸಂಗ.

**ಟೀಕು:—** ಸೂಕ್ಷ್ಮವಾದ ಪರಿಪೂರ್ಣ ಜ್ಞಾನದಿಂ, ಚಿತ್ ಸ್ವರೂಪನಾದ ಚಿದಾತ್ಮನು ಉದಯವಾದನೆಂಬುದೀಗ, ಅಣು ಇರುಹಿನ ಮರಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಸ್ವರೂಪನಾದ ಚಿದಾತ್ಮನು ರಜೋಗುಣ ಸಂಬಂಧವಾದ ಸ್ಥೂಲ ತನುವ ನಷ್ಟವ ಮಾಡಿದನೆಂಬುದೀಗ, ಬ್ರಹ್ಮನಂಡವನೂರಿ ಎಂಬ ಶಬ್ದಕ್ಕರ್ಥ. ಆ ಚಿದಾತ್ಮನು ಸಾತ್ವಿಕ ಗುಣಸಂಬಂಧವಾದ ಸೂಕ್ಷ್ಮತನುವ ನಷ್ಟವಮಾಡಿದನೆಂಬುದೀಗ, ವಿಷ್ಣುವಿನ ಪಿಂಡವ ನುಂಗಿತ್ತೆಂಬ ಶಬ್ದಕ್ಕರ್ಥ. ಆ ಚಿದಾತ್ಮನ ಚಿದ್ ಗರ್ಭಯುಕೆಯ್ಯುದೇ ತಮೋಗುಣ ಸಂಬಂಧವಾದಕಾರಣ ದೇಹವ ನವಗ್ರಹಿಸಿತ್ತೆಂಬುದೀಗ, ಅದು ತನ್ನ ಒಡಲಿಗೆಯ್ಯುದೆ ರುದ್ರನ ತೊಡಿಯ ಮುಡಿಯುವಳ ಆತ ಸಹಿತ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ತತ್ವತ್ರಯ ಸಂಬಂಧವಾದ ಉತ್ಪತ್ತ್ಯ, ಸ್ಥಿತಿ, ಲಯಂಗಳು ಗುರುಕರುಣದಿಂ ನಷ್ಟವಾದುದು, ಸ್ವಾನುಭಾವ ಸೂತ್ರದಿಂದಲೆ ಎಂಬುದೀಗ, ಅದ್ಯಾತರಸೂತ್ರ ವೆಂದಾತ್ಮನ ಭೇದವನರಿ ಪುಣ್ಯಾರಣ್ಯದ ಘನಭೀಮೇಶ್ವರಲಿಂಗ ನಿರಂಗಸಂಗ ಎಂಬ ಶಬ್ದಕ್ಕರ್ಥ.

೩೪

ಆಡಿನ ಕಾಲ ಮುರಿದು ಕೋಡಗನ ಹಲ್ಲ ಕಿತ್ತು
ಉಡವಿನ ಕುಡಿನಾಲಗೆಯ ಕೊಯಿದು
ಬಳ್ಳುವಿನ ಸುಲ್ಲನರಿದು ಇವೆಲ್ಲವ ನಿನ್ನಲ್ಲಿಗೆ ತಂದೆ. .
ಇವ ಬಲ್ಲವ ನೀನಲ್ಲದಿಲ್ಲ.
ನನಗೆ ಅಲ್ಲಿಯೇ ಇಲ್ಲಿಯೇ ಅಂದು ನೀ ಹೇಳಿದಲ್ಲಿಯೂ,
ಎಂಬುದ ನಾನರಿಯೆ. ನೀ ಹೇಳು ಪುಣ್ಯಾರಣ್ಯದ
ಘನ ಭೀಮೇಶ್ವರಲಿಂಗ ನಿರಂಗಸಂಗ

**ಟೀಕು:—** ಶಿವಜ್ಞಾನೋದಯವಾದ ಶರಣನು ರಜೋಗುಣ ಸಂಬಂಧವಾದ ಸ್ಥೂಲ ತನುವಿನಲ್ಲಿ ದುಶ್ಚರಿತ್ರಂಗಳ ನಷ್ಟವ ಮಾಡಿದ ನೆಂಬುದೀಗ, ಆಡಿನ ಕಾಲು ಮುರಿದು ಎಂಬ ಶಬ್ದಕ್ಕರ್ಥ. ಮನಸ್ಸಿನ ಅದು ಮದುತೆಗಳೆಂಬ ದಂತವ ಭನ್ನವ ಮಾಡಿದವೆಂಬುದೀಗ, ಕೋಡಗದ ಹಲ್ಲಕಿತ್ತು ಎಂಬ ಶಬ್ದಕ್ಕರ್ಥ. ತಮೋಗುಣ ಸಂಬಂಧವಾದ ಕಾರಣ ದೇಹದ ಅರಿವು ಮರವೆಯೊಡನೆ ಕೂಡಿದ ಭಿನ್ನಾಪೇಕ್ಷೆಯ ಕೆಡಿಸಿದನೆಂಬುದೀಗ, ಉಡವಿನ ಕುಡಿನಾಲಗೆಯ ಕೊಯ್ದು ಎಂಬ ಶಬ್ದಕ್ಕರ್ಥ. ಆ ಸತ್ಗುಣವದಿಂ ತೋರುವ ಶಿವೋಹಂಭಾವ ತನ್ನ ನಿಜಾಂತರಂಗದಲ್ಲಿ ಉಂಟೆಂದರಿದನೆಂಬುದೀಗ, ಬಳ್ಳುವಿನ ಸೊಲ್ಲನರಿದು ಎಂಬ ಶಬ್ದಕ್ಕರ್ಥ. ಆ ಸಕಲ ತತ್ವಂಗಳೆಲ್ಲವನು ನಿವೃತ್ತಿಯ ಮುಖಕ್ಕೆ ತಂದು ಶ್ರೀ ಗುರುವಿಂಗುಪಾವಸ್ಥೆಯುಂ ಮಾಡು

ತ್ತಿರ್ದನೆಂಬುದೀಗ ಇವನೆಲ್ಲವ ನಿಮ್ಮಲ್ಲಿಗೆ ತಂದೆನೆಂಬ ಶಬ್ದಕ್ಕರ್ಥ. ಆ ಉಪಾವಸ್ಥೆಯ ಮಾಡುವ ಶಿಷ್ಯನ ಅಂಗತತ್ವಂಗಳ ನಿವೃತ್ತಿಯ ಮಾಡಿ, ಲಿಂಗ ತತ್ವ ಸ್ವರೂಪವ ಮಾಡುವವು ಶ್ರೀ ಗುರುವಿಂಗಲ್ಲದೆ ಮತ್ತಾರಿಗೂ ಇಲ್ಲವೆಂಬುದೀಗ, ಇವ ಬಲ್ಲವ ನೀನಲ್ಲದಿಲ್ಲವೆಂಬ ಶಬ್ದಕ್ಕರ್ಥ. ಸರ್ವಾಂಗ ಲಿಂಗ ಸಂಬಂಧಿಯಾದ ಶರಣನು ಚೈತನ್ಯ ಸ್ವರೂಪವಾದ ಪ್ರಾಣಲಿಂಗದಲ್ಲಿಯೂ ಸಾಕಾರವಾದ ಇಷ್ಟಲಿಂಗದಲ್ಲಿಯೂ ಅಂದು ಪರಶಿವಂಗೆ ನಿಜಮನೋರಮ ಮಹಾಜ್ಞಾನ ಚಿತ್ತುವಿನಲ್ಲಿ ಸಮರಸವನೆಯ್ದಿಪೆನು ಎಂದು ಶ್ರೀ ಗುರುವು ಬೆಸಗೊಳುತ್ತಿರ್ದನೆಂಬುದೀಗ, ಎನಗಲ್ಲಿಯೋ ಇಲ್ಲಿಯೋ ಅಂದು ನೀ ಹೇಳಿದಲ್ಲಿಯೋ ಎಂಬ ಶಬ್ದಕ್ಕರ್ಥ. ಈ ತ್ರಿವಿಧವನೊಳಕೊಂಡಿರ್ದ ಮಹಾಘನಲಿಂಗದಲ್ಲಿ ಐಕ್ಯವಹ ಭೇದವ ಕೃಪೆಯ ಮಾಡು ಎಂದು ಶ್ರೀ ಗುರುವಿಂಗೆ ಬಿನ್ನೈಸುತ್ತಿರ್ದನೆಂಬುದೀಗ. ಎಂಬುದ ನಾನರಿಯೆ ಹೇಳಾ ಪುಣ್ಯಾರಣ್ಯದ ಘನ ಭೀಮೇಶ್ವರ ಲಿಂಗ ನಿರಂಗ ಸಂಗ ಎಂಬ ಶಬ್ದಕ್ಕರ್ಥ.

೩೫

ಆ ಕಾಯದ ಕಣ್ಣಿನಲ್ಲಿ ನೋಡಿ ವಿಕಾರವಳಿದ ಸುಖ ಪಟ್ಟಣವ ಕಂಡೆ
ಆ ಪಟ್ಟಣದರಸಿಂಗೆ ಭಾವ ಕಾಲಿಲ್ಲ.
ಪ್ರಧಾನಂಗೆ ಪಾದುವತ್ತಕ್ಕೆ ನುಡಿವರೆ ಬಾಯಿಲ್ಲ
ತಳವಾರ ತಿರುಗುವದಕ್ಕೆ ಕಣ್ಣಿಲ್ಲ.
ಆ ಪಟ್ಟಣದಲ್ಲಿ ಮೂವ್ವರಿಗೆ ಕರ್ತನೊಬ್ಬರಸು
ಆ ಅರಸು ಕಣ್ಣಿನಲ್ಲಿ ಕಾಣಲಿಲ್ಲ. ಎಲ್ಲಿದ್ದನೆಂದು ಕೇಳಲಿಲ್ಲ.
ಇದ್ದ ಠಾವಿಂಗೆ ಒಬ್ಬರು ಹೋದ್ದಲಿಲ್ಲ.
ಆ ಅರಸಿನ ಆಜ್ಞೆ (ಜ್ಞೆ) ಬಹುಮಿಹು
ಮುಲಗಕ್ಕೆ ತೆರಪಿಲ್ಲ, ಜೀವಿತಕ್ಕೆ ಅವಹಿಲ್ಲ.
ಎನ್ನ ಬಡತನವ ಇನ್ನಾರಿಗೆ ಹೇಳುವೆ,
ಭಂಟರು ಸತ್ತು ಅರಸು ನಷ್ಟವಾದ ಆ ಉಭಯದ ಭೇದವ
ನಾನರಿಯೆ,
ನೀ ಹೇಳು ಪುಣ್ಯಾರಣ್ಯದ ಘನ ಭೀಮೇಶ್ವರಲಿಂಗ ನಿರಂಗಸಂಗ

**ಟೀಕ** : — ಶರಣ ತನ್ನ ಸೂಕ್ಷ್ಮಾಂತರಂಗದೊಳು ಉದಯವಾದ ಸುಜ್ಞಾನ ದೃಷ್ಟಿಯಿಂ ನಿರೀಕ್ಷಿಸುತ್ತಿರ್ದನೆಂಬುದೀಗ, ಆ ಕಾಯದ ಕಣ್ಣಿನಲ್ಲಿ ನೋಡಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ದೃಷ್ಟಿಯಿಂದ ಕಾಮವಿಕಾರವಳಿದ ಶರಣನ ನಿಜಾಂತರಂಗವೆಂಬ ಶಿವಪುರವಪ್ರಾಪ್ತ್ರುತ್ತಿರ್ದೆಂಬುದೀಗ, ವಿಕಾರವಳಿದ ಸುಖಪಟ್ಟಣವ ಕಂಡೆನೆಂಬ ಶಬ್ದಕ್ಕರ್ಥ. ಆ ನಿಜಾಂತರಂಗವೆಂಬ ಶಿವಪುರಕ್ಕೆ ಕರ್ತೃವಾದ ಮಹಾಘನಲಿಂಗಕ್ಕೆ ಕ್ರಿಯಾಭಾವಂಗಳೆರಡು ನಿಷ್ಪತ್ತಿಯಾದವೆಂಬುದೀಗ, ಆ ಪಟ್ಟಣದರಸಂಗೆ ಭಾವ ಕಾಲಿಲ್ಲವೆಂಬ ಶಬ್ದಕ್ಕರ್ಥ. ಶರಣನ ಉನ್ಮನಿ ಸ್ವರೂಪವಾದ ಮನಸ್ಸು

ಮಹಾಘನಲಿಂಗದಲ್ಲಿ ಸಮರಸವಾದ ಬಳಿಕ ಶಿವೋಹಂ ಭಾವದಿಂ, ಶಿವಾದೀಕ್ಷೆಯು ಮುಂದುಗೊಂಡಾಚರಿಸಲಿಲ್ಲವೆಂಬುದೀಗ, ಪ್ರಧಾನಂಗೆ ಪಾರುಪತ್ಯಕ್ಕೆ ನುಡಿವರೆ ಬಾಯಿಲ್ಲ ಎಂಬ ಶಬ್ದಕ್ಕರ್ಥ. ಆ ಏಕಾಗ್ರಚಿತ್ತಸ್ವರೂಪನಾದ ಶರಣನ ಸುಜ್ಞಾನ ಪ್ರಕಾಶವು ಮಹಾಘನಲಿಂಗದಲ್ಲಿ ನಿಷ್ಪತ್ತಿಯಾಯಿತ್ತೆಂಬುದೀಗ, ತಳವಾರ ತಿರುಗುವದಕ್ಕೆ ಕಣ್ಣಿಲ್ಲವೆಂಬ ಶಬ್ದಕ್ಕರ್ಥ. ಆ ಶಿವಪುರದಲ್ಲಿ ಒಪ್ಪುತ್ತಿರ್ದ ಮಹಾ ಘನ ಲಿಂಗವು ಜೀವತ್ರಯಂಗಳಿಗೆ ಒಡೆಯನಾಗಿಹನೆಂಬುದೀಗ, ಆ ಪಟ್ಟಣದಲ್ಲಿ ಮೂವರಿಗೆ ಕರ್ತನೊಬ್ಬನು ಎಂಬ ಶಬ್ದಕ್ಕರ್ಥ. ಆ ಮಹಾಘನಲಿಂಗವು ಭಿನ್ನ ಜ್ಞಾನ ದೃಷ್ಟಿಗೆ ಕಾಣಬಾರದೆಂಬುದೀಗ, ಆ ಅರಸು ಕಣ್ಣಿನಲ್ಲಿ ಕಾಣಲಿಲ್ಲವೆಂಬ ಶಬ್ದಕ್ಕರ್ಥ. ಆ ಮಹಾ ಘನಲಿಂಗದ ನಿಜ ಸ್ವರೂಪವನು ಭಿನ್ನವಿಟ್ಟು, ಶ್ರುತ, ಪ್ರಮಾಣಂಗಳಿಂ, ಕೇಳಲಿಲ್ಲವೆಂಬ ಶಬ್ದಕ್ಕರ್ಥ. ಆ ಮಹಾಘನಲಿಂಗದಲ್ಲಿ ಬೆರಸಿಹೆನೆಂದೊಡೆ ದ್ವೈತಾದ್ವೈತಿಗಳಿಗಸಾಧ್ಯವೆಂಬುದೀಗ, ಇದ್ದ ಠಾವಿಂಗೆ ಒಬ್ಬರು ಹೊದ್ದಲಿಲ್ಲವೆಂಬ ಶಬ್ದಕ್ಕರ್ಥ. ಸಕಲ ಮಾಯಾ ಪ್ರಪಂಚು ಹೊಗದ ಹಾಗೆ ಆ ಮಹಾ ಘನಲಿಂಗದ ಕಟ್ಟು ಬಹಳ ಪ್ರಪಂಚಿಗೆ ತೆರಪಿಲ್ಲವೆಂಬುದೀಗ, ಆ ಅರಸಿನ ಆಜ್ಞ(ಜ್ಞೆ)ಯು ಬಲುಹೆಂಬ ಶಬ್ದಕ್ಕರ್ಥ. ಆ ಶರಣ ಸೇವೆ, ಸೇವಕತ್ವದಿಂದ ಆಚರಿಸಿಹೆನೆನಲಲ್ಲವೆಂಬುದೀಗ, ಹಾಲಗಕ್ಕೆ ತೆರಪಿಲ್ಲ ಎಂಬ ಶಬ್ದಕ್ಕರ್ಥ. ಆ ಸೇವೆ, ಸೇವಕತ್ವನಳಿದಾ ಶರಣನು ಲಿಂಗ ಭೋಗೋಪಭೋಗವ ಭೋಗಿಸುವದಕ್ಕೆ, ತತ್ವ ಪದಾರ್ಥವಿಲ್ಲವೆಂಬುದೀಗ, ಜೀವಿತಕ್ಕೆ ಅದಿಲ್ಲವೆಂಬ ಶಬ್ದಕ್ಕರ್ಥ. ಆ ಶರಣನ ಸಕಲ ಕರಣಂಗಳೆಲ್ಲ ಲಿಂಗ ಕರಣಂಗಳಾಗಿ, ಲಿಂಗದಲ್ಲಿ ನಿಷ್ಪತ್ತಿಯಾದವೆಂಬುದೀಗ, ಎನ್ನ ಬಡತನವ ಇನ್ನಾರಿಗೆ ಹೇಳುವನೆಂಬ ಶಬ್ದಕ್ಕರ್ಥ. ಆ ಶರಣನ ಭಕ್ತಾದ್ಯೈಕ್ಯಾಂತವಾದ ಷಡುಸ್ಥಲಂಗಳೆಲ್ಲವೂ ಲಿಂಗದಲ್ಲಿ ನಿಷ್ಪತ್ತಿಯಾದವು ಎಂಬುದೀಗ, ಭಂಟರು ಸತ್ತು ಎಂಬ ಶಬ್ದಕ್ಕರ್ಥ. ಅಂತು ಷಡುಸ್ಥಲಂಗಳು ನಿಷ್ಪತ್ತಿಯಾದಲ್ಲಿ ಆ ಘನ ಲಿಂಗವು ಶರಣನಲ್ಲಿ ಸಮರಸವಾಯಿತ್ತೆಂಬುದೀಗ, ಅರಸು ನಷ್ಟವಾದನೆಂಬ ಶಬ್ದಕ್ಕರ್ಥ. ಅಂತು ಸತಿ ಪತಿಯೆಂಬ ಉಭಯವಳಿದು ನಿಜದಲ್ಲಿ ನಿರ್ವಯಲಾದ ಭೇದವ ಶ್ರೀಗುರು ಕರುಣದಿಂ ಕೇಳುತ್ತಿರ್ದನೆಂಬುದೀಗ, ಆ ಉಭಯದ ಭೇದವ ನಾನರಿಯೆ ನೀ ಹೇಳು ಪ್ರಸನ್ನಾರಣ್ಯದ ಘನ ಭೀಮೇಶ್ವರ ಲಿಂಗ ನಿರಂಗ ಸಂಗ ಎಂಬ ಶಬ್ದಕ್ಕರ್ಥ.

೩೬

ಮನ ಮಂಗಳಾಂಗಿಯೆಂಬ ಹೆಂಗಸಿನ ಕೈಯಲ್ಲಿ
ತ್ರಿವಿಧ ಬಂಧವೆಂಬ ಗಡಿಗೆ ಇದ್ದಿತ್ತು.
ಆ ಗಡಗಿಯಕೊಂಡು ಹೋಗಿ ಅವಿನತ ಭಾವಿಯಲ್ಲಿ
ರವಿಶಶಿಯರೆಂಬ ನೀರ ತುಂಬಿ, ಬ್ರಹ್ಮಂಗೆರೆಯಲಾಗಿ ಬಾಯಿ
ಮುಚ್ಚಿತ್ತು.
ವಿಷ್ಣುವಿಗೆ ಉಂಬ ಕೈಗೆರೆಯಲಾಗಿ ಕೈ ಖಂಡಿಸಿ ಬಿದ್ದಿತ್ತು.

ರುದ್ರನ ಮಂಡಿಗೆ ಮಜ್ಜನವ ಮಾಡಲಾಗಿ
ಲಿಂಗ ಕರಗಿ ಅವಳಂಗೈಯ ಗಡಗಿಯಲ್ಲಿ ಅಡಗಿತ್ತು
ಎನಗಿನ್ನು ಅಂಗವಳಿವ ಠಾವಹೇಳಾ,
ನಿರಂಗಮಯ ಪುಣ್ಯಾರಣ್ಯದ ಘನ ಭೀಮೇಶ್ವರಲಿಂಗ ನಿರಂಗಸಂಗ

**ಟೀಕ**.:— ಮನೋವರ್ತನೆಯಿಳಿದು ನಿರ್ಮಲ ಸ್ವರೂಪವಾದ ಶರಣ ಸತಿಯ ಸದ್ಭಾವ ಹಸ್ತದಲ್ಲಿ ಎಂಬುದೀಗ, ಮನಮಂಗಳಾಂಗಿ ಎಂಬ ಹೆಂಗಸಿನ ಕೈಯಲ್ಲಿ ಎಂಬ ಶಬ್ದಕ್ಕರ್ಥ. ಸಚ್ಚಿದಾನಂದಂಗಳ ನೊಳಕೊಂಡಿರ್ಪ ಚಿತ್ತಿನ ಸಪ್ಪಟಿವೆಂಬುದೀಗ, ತ್ರಿವಿಧ ಬಂಧನವೆಂಬ ಗಡಿಗೆ ಇರ್ದಿತ್ತು ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣನು ಆ ಚಿದ್ಭಾಂಡವ ಪರಮಾಮೃತ ಕೂಪದಲ್ಲಿ ಅವಿರಳ ಸಂಬಂಧವ ಮಾಡಿದನೆಂಬುದೀಗ, ಆ ಗಡಿಗೆಯಕೊಂಡುಹೋಗಿ ಎಂಬ ಶಬ್ದಕ್ಕರ್ಥ. ಆ ಪರಮಾಮೃತ ಕೂಪದಲ್ಲಿ ತುಂಬಿರ್ದ ಚಿದಾದಿತ್ಯನಪ್ಪ ಪರಶಿವ ಲಿಂಗವೆಂಬ ಪರಮಾನಂದ ಜಲವ ಚಿದ್ಭಾಂಡದಲ್ಲಿ ಅವಗ್ರಹಿಸಿದನೆಂಬುದೀಗ, ಅವಿನತವೆಂಬ ಭಾವಿಯಲ್ಲಿ ರವಿಶೇಖರನೆಂಬ ನೀರತುಂಬಿ ಎಂಬ ಶಬ್ದಕ್ಕರ್ಥ. ಆ ಚಿದ್ಭಾಂಡದಲ್ಲಿ ತುಂಬಿರ್ದ ಪರಶಿವಲಿಂಗವೆಂಬ ಪರಮಾನಂದ ಜಲವ ಶ್ರೀ ಗುರು ಕ್ರಿಯಾದೀಕ್ಷೆಯಿಂದ ಶಿಷ್ಯನ ರಜೋಗುಣ ಸಂಬಂಧವಾದ, ಸ್ಥೂಲತನು ವಿನ ಉತ್ಪತ್ಯವ ನಷ್ಟವಮಾಡಿ ಇಷ್ಟಲಿಂಗವ ಸಾಹಿತ್ಯವ ಮಾಡಿದನೆಂಬುದೀಗ, ಬ್ರಹ್ಮಂಗೆರೆಯಲಾಗಿ ಬಾಯಿಮುಚ್ಚಿತ್ತೆಂಬ ಶಬ್ದಕ್ಕರ್ಥ. ಆ ಶ್ರೀ ಗುರು ಮಂತ್ರ ದೀಕ್ಷೆಯಿಂ ಸಾತ್ವೀಕ ಗುಣ ಸಂಬಂಧವಾದ ಸೂಕ್ಷ್ಮ ತನುವಿನ ಪ್ರಾರಬ್ಧಭೋಗವ ನುಂಬ, ಮನೋಹಸ್ತವ ನಷ್ಟವಮಾಡಿ, ಪ್ರಾಣಲಿಂಗ ಸಂಬಂಧವ ಮಾಡಿದ ನೆಂಬುದೀಗ, ವಿಷ್ಣುವಿನ ಉಂಬ ಕೈಗೆರೆಯಲಾಗಿ ಕೈ ಹಿಂಡಿಸಿ ಬಿದ್ದಿತ್ತೆಂಬ ಶಬ್ದಕ್ಕರ್ಥ. ಆ ಶ್ರೀ ಗುರು ವೇದಾದೀಕ್ಷೆಯಿಂದ ತಮೋಗುಣ ಸಂಬಂಧವಾದ ಕಾರಣ ತನುವ ಮರವೆಯ ನಷ್ಟವ ಮಾಡಿದ ಅರಿವಿನಲ್ಲಿ ಭಾವಲಿಂಗ ಸಂಬಂಧವ ಮಾಡಿದನೆಂಬುದೀಗ, ರುದ್ರನ ಮಂಡಿಗೆ ಮಜ್ಜನವ ಮಾಡಲಾಗಿ ಎಂಬ ಶಬ್ದಕ್ಕರ್ಥ. ಅಂತು ತ್ರಿವಿಧಾಂಗದಲ್ಲಿ ತ್ರಿವಿಧಲಿಂಗ ಸಂಬಂಧವಾದ ಶರಣನ ಆಚಾರ ಸ್ವರೂಪವಾದ ಪ್ರಸಾದ ಕಾಯವು ಕರಸ್ಥಲದಲ್ಲಿರ್ಪ ಚಿದ್ಭಾಂಡ ಸ್ವರೂಪವಾದ ಇಷ್ಟ ಲಿಂಗದಲ್ಲಿ ಸಮರಸವಾಯಿತ್ತೆಂಬುದೀಗ, ಲಿಂಗಕರಗಿ ಅವಳಂಗೈಯ ಗಡಿಗೆಯಲ್ಲಿ ಅಡಗಿತ್ತೆಂಬ ಶಬ್ದಕ್ಕರ್ಥ. ಆ ಶರಣನು ತನ್ನಾತ್ಮಾಂಗದ ಮಹಾಘನಲಿಂಗದಲ್ಲಿ ಬೆರಸುವ ಭೇದವ ಕೃಪೆಮಾಡೆಂದು ಶ್ರೀ ಗುರುವಿಗೆ ಬಿನ್ನೈಸುತ್ತಿರ್ದನೆಂಬುದೀಗ, ಎನಗಿನ್ನು ಅಂಗವಳಿವ ಠಾವ ಹೇಳಾ ನಿರಂಗಮಯ ಪುಣ್ಯಾರಣ್ಯದ ಘನಭೀಮೇ ಶ್ವರಲಿಂಗ ನಿರಂಗ ಸಂಗ ಎಂಬ ಶಬ್ದಕ್ಕರ್ಥ.

# ಮಧುವಯ್ಯನವರ ವಚನಗಳು

ಆಕಾಶದ ಮಧ್ಯದಲ್ಲಿ ಒಂದು ಭೇಕ ನುಡಿವುತ್ತದೆ
ಅದು ಅನೇಕ ಗೀತವಾದ್ಯ ನೃತ್ಯಂಗಳಿಂದ ಆಡುತ್ತಿದ್ದಿತ್ತು
ಎನ್ನಾಟವ ನೋಡುವರಿಲ್ಲವೆಂದು ನೆಲಿಗಳ ಇತ್ತು
ತನ್ನಂಗವ ಅದು ನಿಜಾರ್ತನ ಒಲುಮೆ
ಅರ್ಕೇಶ್ವರ ಲಿಂಗವನರಿವುದಕ್ಕೆ ತೆರಪಾಗಿರಣ್ಣಾ.

**ಟೀಕು:**— ಬ್ರಹ್ಮರಂಧ್ರ ಸ್ಥಾನದಲ್ಲಿ ಎಂಬುದೀಗ, ಆಕಾಶದ ಮಧ್ಯದಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಬ್ರಹ್ಮರಂಧ್ರ ಸ್ಥಾನದಲ್ಲಿ ಪರಮಶಾಂತಿ ಸ್ವರೂಪವಾದ ಚಿದ್ಬಿಂದು ಶಿವೋಹಂ ಶಿವೋಹಂ ಎನ್ನುತ್ತಿರ್ದಿತೆಂಬುದೀಗ, ಒಂದು ಭೇಕ ನುಡಿವುತ್ತದೆ ಎಂಬ ಶಬ್ದಕ್ಕರ್ಥ. ಅಂತಪ್ಪ ಶಿವೋಹಂ ಭಾವದಲ್ಲಿರ್ದ ಚಿತ್ ಸ್ವರೂಪನಾದ ಶರಣನು ಪ್ರಣವನುಚ್ಚರಿಸುತ್ತಿರ್ದನೆಂಬುದೀಗ, ಅದು ಅನೇಕ ಗೀತವೆಂಬ ಶಬ್ದಕ್ಕರ್ಥ. ಆ ಪ್ರಣವನುಚ್ಚರಿಸುತ್ತಿರ್ದ ಶರಣಂಗೆ, ಪಂಚಬ್ರಹ್ಮವ ನೊಳಕೊಂಡು ಪಂಚಾಕ್ಷರಂಗಳು ತೋರುತ್ತಿರ್ದವೆಂಬುದೀಗ, ವಾದ್ಯವೆಂಬ ಶಬ್ದಕ್ಕರ್ಥ ಆ ಶರಣನು ಅಭಿನ್ನ ಕ್ರಿಯಾಚಾರವಿಡಿದಾಚರಿಸುತ್ತಿರ್ದನೆಂಬುದೀಗ, ನೃತ್ಯಂಗಳಿಂದ ಆಡುತ್ತಿದ್ದಿತ್ತೆಂಬ ಶಬ್ದಕ್ಕರ್ಥ. ಸರ್ವಾಂಗಲಿಂಗ ಸಂಬಂಧಿಯಾಗಿ ಅಭಿನ್ನ ಕ್ರಿಯವಿಡಿದಾಚರಿಸುತ್ತಿರ್ದ ಶರಣನ ಚರಿತ್ರವು ದ್ವೈತಾದ್ವೈತಗಳಿಗಸಾಧ್ಯವೆಂಬುದೀಗ, ಎನ್ನಾಟವ ನೋಡುವರಿಲ್ಲವೆಂದು ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣ ತನ್ನ ಜ್ಞಾನಕಾಯವನು ಚಿದ್ಘನಲಿಂಗ ಏಕಾರ್ಥವ ಮಾಡುವದು, ಜನನ ಮರಣರಹಿತವಾದ ಶ್ರೀ ಗುರುವಿನ ಕೃಪೆಯೆಂಬುದೀಗ, ನೆಲಿಗಳ ಇತ್ತು ತನ್ನಂಗವ ಅದು ನಿಜಾರ್ತನ ಒಲುಮೆ ಅರ್ಕೇಶ್ವರ ಲಿಂಗವನರಿವುದಕ್ಕೆ ತೆರಪಾಗಿರಣ್ಣಾ ಎಂಬ ಶಬ್ದಕ್ಕರ್ಥ.

೨

ಕಲ್ಲು ಬೆಂಕಿ ಕೂಡಿ ಉರಿವಾಗ—
ಹುಲ್ಲು ಕತ್ತಿದುದಿಲ್ಲ, ಮೆಲ್ಲನೆ ಉರುಹುವಾತನ
ಸೊಲ್ಲಿನ ಬಲ್ಲತನ ಅಲ್ಲಿಯೇ ಬೆಂದಿತ್ತು
ಅರ್ಕೇಶ್ವರಲಿಂಗವ ನರಿಯಿರಣ್ಣಾ.

**ಟೀಕು:**— ಕಲು ಹೃದಯವಾದ ದೇಹವೆಂಬುದೀಗ, ಕಲ್ಲು ಎಂಬ ಶಬ್ದಕ್ಕರ್ಥ. ತಾಪತ್ರ್ಯ ಅಗ್ನಿಯೀಗ, ಬೆಂಕಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹವು ತಾಪತ್ರಯಾಗ್ನಿಯು ಏಕವಾಗಿ ಪ್ರವರ್ತಿಸುತ್ತಿಹುದೆಂಬುದೀಗ, ಕಲ್ಲು-ಬೆಂಕಿ ಕೂಡಿ ಎಂಬ ಶಬ್ದಕ್ಕರ್ಥ. ಆ ತಾಪತ್ರಯಾಗ್ನಿಯು ಪ್ರವರ್ತಿಸುವಲ್ಲಿ, ಹುಲ್ಲಿಂದೊಡೆ ವಿಷಯಂಗಳು. ಅಂತಪ್ಪ ವಿಷಯಂಗಳು ಸುಗೆಯಾಗದೆ ಇರುತ್ತಿಹವೆಂಬುದೀಗ,

ಉರಿವಾಗ ಹುಲ್ಲು ಕತ್ತಿದುದಿಲ್ಲವೆಂಬ ಶಬ್ದಕ್ಕರ್ಥ. ಆ ಬ್ರಹ್ಮವೆಂಬ ದ್ವೈತಜ್ಞಾನಿಗಳು ತಾಪತ್ರಯದಲ್ಲಿ ಕೂಡಿ ವರ್ತಿಸುತ್ತಿಹವೆಂಬುದೀಗ, ಮೆಲ್ಲನೆ ಉರುಹುವಾತನೆಂಬ ಶಬ್ದಕ್ಕರ್ಥ. ಅಂತಪ್ಪಆತ್ಮ ಜ್ಞಾನಿಗಳ ವಾಗಾದ್ವೈತದರಿವೆಲ್ಲವು ತಾಪತ್ರ್ಯಾಗ್ನಿಯಲ್ಲಿ ದಗ್ಧವಾಯಿತ್ತೆಂಬುದೀಗ, ಸೊಲ್ಲಿನ ಬಲ್ಲತನ ಅಲ್ಲಿಯೆ ಬೆಂದಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ವಾಗಾದ್ವೈತವ ನಷ್ಟವ ಮಾಡಿ ಶಿವಾದ್ವೈತ ಭಕ್ತಿವಿಡಿದಾಚರಿಸಿ ಪರಶಿವ ತತ್ವದಲ್ಲಿ ಏಕಾರ್ಥವನೆಯ್ದಿ ಎಂಬುದೀಗ, ಅರ್ಕೇಶ್ವರಲಿಂಗವ ನರಿಯಿರಣ್ಣಾ ಎಂಬ ಶಬ್ದಕ್ಕರ್ಥ.

೩

ಕಾಡಿನೊಳಗಣ ವರಾಹನ ಊರು
ಕುರ್ಕರ ಕೊಲುವಾಗ, ಊರಿಗೂ ಕಾಡಿಗೂ ಯಾತರ ಹಗೆ ?
ಅದರ ಭೇದವು ಅಲ್ಲಿಯೆ ಅಡಗಿತ್ತು
ಅರ್ಕೇಶ್ವರಲಿಂಗವ ನರಿಯಣ್ಣ.

ಟೀಕು:— ಕಾಡೆಂದೊಡೆ ಭವಾರಣ್ಯ. ಅಂತಪ್ಪ ಭವಾರಣ್ಯದ ಪ್ರದೇಶವಾದ ಜೀವನೆಂಬುದೀಗ, ಕಾಡಿನೊಳಗಣ ವರಾಹನೆಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಇಂದ್ರಿಯಂಗಳೆಂಬ ಶ್ವಾನಂಗಳು ಆವಗ್ರಹಿಸಿಕೊಂಡು ಘಾಸಿ ಮಾಡುತ್ತಿಹವೆಂಬುದೀಗ, ಊರು ಕುರ್ಕರ ಕೊಲುವಾಗ ಎಂಬ ಶಬ್ದಕ್ಕರ್ಥ. ಶಿವಾಂಶೀಕನಾದಾತ್ಮನು ದೇಹ ಸಂಬಂಧವಾದಲ್ಲಿ ತನ್ನ ನಿಜವ ಮರದು ಅಜ್ಞಾನಿಯಾಗಿ ಇಂದ್ರಿಯಂಗಳ ಕೂಡೆ, ಕರಣ ಕರ್ಕಶದಿಂದಿರುತ್ತಿರ್ದನೆಂಬುದೀಗ, ಊರಿಗೂ ಕಾಡಿಗೂ ಏತರ ಹಗೆ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಶಿವಜ್ಞಾನೋದಯವಾದಲ್ಲಿ ಆ ಇಂದ್ರಿಯಂಗಳ ಕರಣ ಕರ್ಕಶ ನಷ್ಟವಾಗಿ ತನ್ನ ನಿಜವಪ್ಪ ಪರಶಿವ ತತ್ವವ ನರಿಯುತ್ತಿರ್ದನೆಂಬುದೀಗ, ಅದರ ಭೇದವು ಅಲ್ಲಿಯೆ ಅಡಗಿತ್ತು, ಅರ್ಕೇಶ್ವರ ಲಿಂಗವ ನರಿಯಿರಣ್ಣಾ ಎಂಬ ಶಬ್ದಕ್ಕರ್ಥ.

೪

ಬೆಲ್ಲವ ಮೆಲುವಾತನ ಹಲ್ಲು ಕಂಹಿಯಾಗಿ
ಹಲ್ಲು ಕಲ್ಲಿಯೊಳಗಾಗಿ ಅಲ್ಲಿಯೆ ಅಡಗಿ ನೋಗುತ್ತದೆ
ಅದ ನಾವ ನೀವು ಅರಿವ ಬನ್ನಿ
ಅರ್ಕೇಶ್ವರ ಲಿಂಗವ ಬಲ್ಲವರಹರೆ.

ಟೀಕು:— ಅಖಂಡ ಪರಿಪೂರ್ಣ ಜ್ಞಾನವಪ್ಪ ಚಿಧ್ಘನ ಲಿಂಗವೆಂಬುದೀಗ, ಬೆಲ್ಲವ ಎಂಬ ಶಬ್ದಕ್ಕರ್ಥ. ಅಂತಪ್ಪ ಚಿಧ್ಘನಲಿಂಗವ ಭಿನ್ನ ವಿಟ್ಟರ್ಚಿಸಿ, ಪೂಜಿಸಿ ಫಲ ಪದಂಗಳ ಪಡೆದು ಭೋಗಿಸುತ್ತಿಹರು ದ್ವೈತಿಗಳೆಂಬುದೀಗ, ಬೆಲ್ಲವ ಮೆಲುವಾತನ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಸಕಲ ಕರಣಂಗಳೆಲ್ಲವೂ ವಿಷಯ ಪ್ರಪಂಚಿನಲ್ಲಿ ಮಗ್ನವಾಗಿಹರೆಂಬುದೀಗ, ಹಲ್ಲು ಕಂಹಿಯಾಗಿ ಎಂಬ ಶಬ್ದಕ್ಕರ್ಥ.

ಅಂತಪ್ಪ ವಿಷಯ ರೂಪವಾದ ಕರಣಂಗಳೆಲ್ಲ ಅಹಂಪೆಂಬ ಅಹಂಕಾರಕ್ಕೀಡಾಗಿ ರುತ್ತಿಹವೆಂಬುದೀಗ, ಹಲ್ಲುಕಲ್ಲಿನೊಳಗಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾರದಲ್ಲಿ ಲಯವಾದ ಜೀವನು ಭಿನ್ನ ಜ್ಞಾನದಿಂ, ಲಿಂಗವನೆರದಿಟ್ಟು ನೋಡುತ್ತಿಹನೆಂಬುದೀಗ, ಅಲ್ಲಿಯೆ ಅಡಗಿ ನೋಡುತ್ತದೆ ಎಂಬ ಶಬ್ದಕ್ಕರ್ಥ. ಸುಜ್ಞಾನೋದಯವಾದ ಶರಣನು ಎರಡಿಟ್ಟಾಚರಿಸುವ ಭಿನ್ನ ಕ್ರಿಯಾಚಾರವ ನಷ್ಟವಮಾಡಿ ಶ್ರೀಗುರುಕಾರುಣ್ಯದಿಂ, ಸರ್ವಾಂಗ ಲಿಂಗ ಸಂಬಂಧವಾಗಿ ಜ್ಞಾನ ಕ್ರಿವಿಡಿದಾಚರಿಸುವ ಶರಣರು ಮುಮುಕ್ಷುಗಳಾದ ಭಕ್ತ ಜನಂಗಳಿಗೆ, ಅನ್ಯೋಪದೇಶವಾಗಿ ನಿರೂಪಿಸುತ್ತಿರ್ದರೆಂಬುದೀಗ, ಅದು ನಾವು ನೀವು ಅರಿವ ಬನ್ನಿ ಅರ್ಕೇಶ್ವರಲಿಂಗವ ಬಲ್ಲವರಹರೆ ಎಂಬ ಶಬ್ದಕ್ಕರ್ಥ.

೫

ನೊಣ, ರಣವಹೊಕ್ಕು ಶೋಣಿತವ ಭುಂಜಿಸುವಾಗ
ಕೇಣಸರದ ಘಟರೆಲ್ಲರು ನೊಣದ ರಾವಡಿಗಂಜಿ
ಹೇಳದೆ ಹೋದರು, ಅರ್ಕೇಶ್ವರಲಿಂಗವ ನರಿಯಿರಣ್ಣಾ.

**ಟೀಕು:**— ಜಿಗುಪ್ಸಾ ಮಯವಾದ ಮಾಯೆಯೆಂಬುದೀಗ, ನೊಣವೆಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆ ಜೀವನ್ಮೃತವಾದ ಸಕಲ ಕರಣಂಗಳ ನವಗ್ರಹಿಸಿದಳೆಂಬುದೀಗ, ನೊಣ ರಣವ ಹೊಕ್ಕು ಎಂಬ ಶಬ್ದಕ್ಕರ್ಥ. ಸಂಸಾರ ವಿಷಯ ರಸವ ಸೇವಿಸುತ್ತಿಹಳು ಮಾಯೆ ಎಂಬುದೀಗ, ಶೋಣಿತವ ಭುಂಜಿಸುವಾಗ ಎಂಬ ಶಬ್ದಕ್ಕರ್ಥ. ನಾಘನ, ತಾಘನ ವೆಂದು ಪಂಥ ಪರಾಕ್ರಮವ ನುಡಿವ ಅದ್ವೈತ ಜ್ಞಾನಿಗಳೆಲ್ಲರು ಎಂಬುದೀಗ, ಕೇಣಸರದ ಘಟರೆಲ್ಲರು ಎಂಬ ಶಬ್ದಕ್ಕರ್ಥ. ಅಂತಪ್ಪ ಅದ್ವೈತ ಜ್ಞಾನಿಗಳೆಲ್ಲರು ಮಾಯಾ ಭಯಕ್ಕಂಜಿ, ಶಿವೋಹಂ ಭಾವವಿಲ್ಲದೆ ಅಹಂಕಾರದಲ್ಲಿ ಲಯವಾಗಿ ಹೋದರೆಂಬುದೀಗ, ನೊಣದ ರಾವಡಿಗಂಜಿ ಹೇಳದೆ ಹೋದರು, ಅರ್ಕೇಶ್ವರಲಿಂಗವ ನರಿಯಿರಣ್ಣಾ ಎಂಬ ಶಬ್ದಕ್ಕರ್ಥ.

೬

ಬಲೆಯ ಮೀರಿದ ಮೃಗ ಸತ್ತಿತ್ತು.
ಕೋಲು ಹೋದಾತ ಹಲವು ಅರಿವ ತಲೆಯಂ ಕಂಡು
ಹೊಲಬುದಪ್ಪಿದ ಅರ್ಕೇಶ್ವರ ಲಿಂಗವ ನರಿಯಿರಣ್ಣಾ.

**ಟೀಕು:**— ದೇಹ ಸಂಬಂಧಿಯಾಗಿರ್ಪ ಜೀವಾತ್ಮಂಗೆ ಶಿವಜ್ಞಾನ ಪ್ರಕಾಶಿಸಲು, ಮಾಯಾಪಾಶ ನಷ್ಟವಾಗಿ ಶ್ರೀಗುರು ಕಾರುಣ್ಯದಿಂ, ಸರ್ವಾಂಗಲಿಂಗ ಸಂಬಂಧವಾಗಲು ಸತ್ತು ರೂಹುವಾದ ಪರಬ್ರಹ್ಮವೇ ಆಯಿತ್ತೆಂಬುದೀಗ, 'ಬಲೆಯ ಮೀರಿದ ಮೃಗ ಸತ್ತಿತ್ತು ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಂಬಂಧವ ನರಿಯದಿರ್ಪ ಅದ್ವೈತ ಜ್ಞಾನಿಗಳು ಜೀವ ಭಾವದ ನಿವೃತ್ತಿಯ ಮಾಡಿಹೆನೆಂದು ಹೋಗಲು ಅಲ್ಲಿ ಭಿನ್ನ ಜ್ಞಾನವೆ ಇದಿರಿಟ್ಟು ತೋರುತ್ತಿಹುದೆಂಬುದೀಗ, ಕೋಲು

ಹೋದಾತ ಹಲವು ಅರಿವ ತಲೆಯ ಕಂಡು ಎಂಬ ಶಬ್ದಕ್ಕರ್ಥ ಅಂತಪ್ಪ ಭಿನ್ನ ಜ್ಞಾನಿಗಳು ಮೋಕ್ಷಮಾರ್ಗಕ್ಕೆ ದೂರವಾದರೆಂಬುದೀಗ, ಹೊಲಬು ತಪ್ಪಿದರೆಂಬ ಶಬ್ದಕ್ಕರ್ಥ. ಅಂತಪ್ಪ ಅದ್ವೈತ ಜ್ಞಾನವ ನಿವೃತ್ತಿಯ ಮಾಡಿದ ಶರಣನು, ಶಿವಾದ್ವೈತ ಭಕ್ತಿವಿಡಿದಾಚರಿಸಿ ಪರಶಿವ ತತ್ವದಲ್ಲಿ ಸಮರಸೈಕ್ಯವನೆಯ್ದ ಬೇಕೆಂಬ ಬಯಕೆಯಲ್ಲಿರುತಿರ್ದನೆಂಬುದೀಗ, ಅರ್ಕೇಶ್ವರ ಲಿಂಗವ ನರಿಯಿರಣ್ಣಾ ಎಂಬ ಶಬ್ದಕ್ಕರ್ಥ.

೭

ಕಣ್ಣಕಾಡುವ ಗುಂಗುರ ತಿಂದು
ಬಾಯಕಾಡುವ ಕೈಯತಿಂದು
ಅಪ್ಪಾಯನ ಪಡಗಿಸಿದ ಹೊಟ್ಟೆಯತಿಂದು
ಮತ್ತಿವರ ಹುಟ್ಟು ಮೆಟ್ಟನರಿಯಲ್ಯಾತಕ್ಕೆ
ಅರ್ಕೇಶ್ವರಲಿಂಗವನರಿಯಿರಣ್ಣಾ.

**ಟೀಕು:**— ಶಿವಜ್ಞಾನ ಪ್ರಕಾಶವೆಂಬುದೀಗ, ಕಣ್ಣು ಎಂಬ ಶಬ್ದಕ್ಕರ್ಥ. ಅಂತಪ್ಪ ಸುಜ್ಞಾನ ಪ್ರಕಾಶವ ಅತ್ಯಂತಸೂಕ್ಷ್ಮವಾದ ಮಾಯೆ ಆವಗ್ರಹಿಸಿಕೊಂಡಿಹಳೆಂಬುದೀಗ, ಕಣ್ಣುಕಾಡುವ ಗುಂಗುರು ಎಂಬ ಶಬ್ದಕ್ಕರ್ಥ. ಸ್ವಾನುಭಾವ ಉದಯವಾದ ಶರಣ ಆ ಪರಿಪೂರ್ಣ ಜ್ಞಾನಪ್ರಕಾಶದಿಂದ ಮಾಯೆಯನವಗ್ರಹಿಸಿದನೆಂಬುದೀಗ, ಗುಂಗುರು ತಿಂದು ಎಂಬ ಶಬ್ದಕ್ಕರ್ಥ. ಶಿವತತ್ವದಲ್ಲಿ ಬೆರಸಬೇಕೆಂಬ ಶಿವಾಪೇಕ್ಷೆಯೆಂಬ ಬಾಯನು, ನಷ್ಟವಮಾಡುವ ಸಂಕಲ್ಪರೂಪವಾದ ಮನೋಹಸ್ತವನು ಪೇರಿಸಿದನೆಂಬುದೀಗ, ಬಾಯಕಾಡುವ ಕೈಯತಿಂದು ಎಂಬ ಶಬ್ದಕ್ಕರ್ಥ. ಭಿನ್ನಾಪೇಕ್ಷೆಯಿಂ ಹುಟ್ಟುವ ಪ್ರಾರಬ್ಧ ಭೋಗವ ನಷ್ಟಮಾಡಿದನೆಂಬುದೀಗ, ಅಪ್ಪಾಯನ ಪಡಗಿಸಿದ ಹೊಟ್ಟೆಯತಿಂದು ಎಂಬ ಶಬ್ದಕ್ಕರ್ಥ. ಅಂತಪ್ಪ ತತ್ವಂಗಳೆಲ್ಲಿ ಲಿಂಗತತ್ವದಲ್ಲಿ ಲಿಯ್ಯವಾದ ಶರಣಂಗೆ ಇನ್ನು ತತ್ವಂಗಳ ವಿಭಾಗೆಯ ಮಾಡಲಿಲ್ಲವೆಂಬುದೀಗ, ಮತ್ತಿವರ ಹುಟ್ಟು ಮೆಟ್ಟ ನರಿಯಲ್ಯಾತಕ್ಕೆ ಅರ್ಕೇಶ್ವರಲಿಂಗವ ನರಿಯಿರಣ್ಣಾ ಎಂಬ ಶಬ್ದಕ್ಕರ್ಥ.

೮

ಹಾವನು ಹದ್ದನು ಕೂಡಿ ಮೆದ್ದು
ಬೇವನು ಬೆಲ್ಲವನು ಕೂಡಿ ಕಲಸಿ
ಸಾಗರದಲ್ಲಿ ಸಾಧನೆಯ ಮಾಡುವದ-
ಬ್ಯಾಗ ನೋಡಿ ಅರ್ಕೇಶ್ವರ ಲಿಂಗವ ನರಿವುದಕ್ಕೆ.

**ಟೀಕು:**— ಸಮ್ಯಜ್ಞಾನೋದಯವಾದ ಶರಣನು ಜೀವ, ಪರಮರೆಂಬು ಭಯವನು ಜ್ಞಾನಾಗ್ನಿಯಲ್ಲಿ ಸಮರಸಪಾಕವಮಾಡಿ ಭಕ್ತಿಯಿಂ ಪ್ರಾಣಲಿಂಗಾರ್ಪಿತವ ಮಾಡಿ, ಪ್ರಸಾದವ ಸ್ವೀಕರಿಸುತ್ತಿಹನೆಂಬುದೀಗ ಹಾವನು ಹದ್ದನು

ಕೂಡೆವೆದ್ದು ಎಂಬ ಶಬ್ದಕ್ಕರ್ಥ. ಆ ಜೀವ–ಪರಮರ ಪ್ರಾಣಲಿಂಗದಲ್ಲಿ ಏಕಾರ್ಥವ ಮಾಡಿದ ಶರಣನ ಪಂಚವಿಷಯಂಗಳಲ್ಲಿ, ಪರಬ್ರಹ್ಮವೆ ಪಂಚವಿಧವಾಗಿ, ಸಮರಸವಾಗಿಹುದೆಂಬುದೀಗ, ಬೇವನು ಬೆಲ್ಲವನು ಕೂಡೆ ಕಲಸಿ ಎಂಬ ಶಬ್ದಕ್ಕರ್ಥ. ಆ ಲಿಂಗಸಂಬಂಧವಾದ ಶರಣನ ಸಂಸಾರ ಸಾಗರದಲ್ಲಿ, ದೇಹವಿಡಿದರ್ಪಡೆ ಆ ದೇಹ ಸಂಸಾರವ ಹೊದ್ದದೆ ಜ್ಞಾನ ಕ್ರಿಯಿಂದಾಚರಿಸಿ ಪರವಸ್ತುವ ಸಾಧಿಸುತ್ತಿಹ ತ್ರಿವಿಧಲಿಂಗಾನುಭಾವಿಗಳ ಕಂಡವರೆಲ್ಲ ಕೃತಾರ್ಥ ಜೀವಿಗಳೆಂಬುದೀಗ, ಸಾಗರದಲ್ಲಿ ಸಾಧನೆಯ ಮಾಡುವರ ಬ್ಯಾಗ ನೋಡಿ, ಅರ್ಕೇಶ್ವರಲಿಂಗವ ನರಿವುದಕ್ಕೆ ಎಂಬ ಶಬ್ದಕ್ಕರ್ಥ.

೯

ಗುಬ್ಬಿ ಗುಂಬವನೊಡದು ವೊಬ್ಬುಳಿತೆಯಾಯಿತ್ತು
ತನ್ನ ಸದ್ಬುದ್ಧಿಯ ಬಿಟ್ಟು ಕಬ್ಬಕ್ಕಿಯ ಹಿಂಡನೊಲ್ಲದೆ
ನಿಬ್ಬದ್ಧಿಯಾಗಿ ಅಲ್ಲಿಯೆ ಹೋಯಿತ್ತು
ಅರ್ಕೇಶ್ವರ ಲಿಂಗವನರಿಯಿತ್ತು.

ಟೀಕು:— ಜೀವನೆಂಬುದೀಗ ಗುಬ್ಬಿಯೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಸುಜ್ಞಾನೋದಯವಾಗಲು ದೇಹ ಭಾವವ ನಷ್ಟವ ಮಾಡಿದನೆಂಬುದೀಗ, ಗುಬ್ಬಿಗುಂಬವನೊಡದು ಎಂಬ ಶಬ್ದಕ್ಕರ್ಥ. ಅಂತು ಸುಜ್ಞಾನೋದಯದಿಂ ದೇಹಭಾವ ನಷ್ಟವಾಗಿ ಗುರೋಪಾವಸ್ಥೆಯ ಮಾಡಲು ಆ ಶ್ರೀ ಗುರು ಕರುಣಿಸಿ ಸರ್ವಾಂಗಲಿಂಗ ಸಂಬಂಧವ ಮಾಡಿದನೆಂಬುದೀಗ, ವೊಬ್ಬುಳಿತೆಯಾಯಿತ್ತೆಂಬ ಶಬ್ದಕ್ಕರ್ಥ. ಆ ಚಿಘನಲಿಂಗದಲ್ಲಿ ಒಡಗೂಡಿದ ಶರಣಂಗೆ ತಾನು ಜೀವನೆಂಬ ಸಂಕಲ್ಪ ವಿಕಲ್ಪ ನಷ್ಟವಾಯಿತ್ತೆಂಬುದೀಗ, ತನ್ನ ಸದ್ಬುದ್ಧಿಯ ಬಿಟ್ಟು ಎಂಬ ಶಬ್ದಕ್ಕರ್ಥ. ಅಂತು ಜೀವಭಾವ ನಿವೃತ್ತಿಯಾಗಿ ಶಿವಭಾವ ಘಟಿಸಿದ ಶರಣನು ಸಕಲ ಕರಣಂಗಳ ಪ್ರವರ್ತನೆಯ ನಿವೃತ್ತಿಯ ಮಾಡಿದನೆಂಬುದೀಗ, ಕಬ್ಬಕ್ಕಿಯ ಹಿಂಡನ್ನೊಲ್ಲದೆ ಎಂಬ ಶಬ್ದಕ್ಕರ್ಥ. ಆ ಕರಣಂಗಳು ನಿವೃತ್ತಿಯಾಗಲು ತಾನೆ ಶಿವನೆಂಬ ಧಿಟ ಘಟಿಸಿ ಆ ಪರಶಿವತತ್ವದಲ್ಲಿ ಜ್ಞಾನಕ್ರಿಯಿಂದಾಚರಿಸಿ ನಿರ್ವಯಲಾಯಿತ್ತೆಂಬುದೀಗ, ನಿಬ್ಬದ್ಧಿಯಾಗಿ ಅಲ್ಲಿಯೇ ಹೋಯಿತ್ತು, ಅರ್ಕೇಶ್ವರ ಲಿಂಗವ ನರಿಯಿತ್ತು ಎಂಬ ಶಬ್ದಕ್ಕರ್ಥ.

೧೦

ಕಂಗಳಸೂತಕವ ಯೋನಿ ತಡದು
ಬಾಯಿ ಬಸುರಾಗಿ ಕೈ ಬೆಸಲಾಯಿತ್ತು
ಕೈಯ ಶಿಸುವ ಕಂಗಳ ತಾಯಿಯೆತ್ತಿ
ಭಾವದ ದಾದಿಯ ಕೈಯಲ್ಲಿಕೊಟ್ಟು
ಅರ್ಕೇಶ್ವರಲಿಂಗವು ತೊಟ್ಟಿಲಲ್ಲಿ ಬೆಳವುತ್ತದೆ.

**ಟೀಕು:** — ಕಂಗಳೆಂದೊಡೆ ಜ್ಞಾನ ದೃಷ್ಟಿಯೆಂಬುದರ್ಥ. ಆ ಸುಜ್ಞಾನ ಪ್ರಕಾಶದಿಂ, ಪರಶಿವ ತತ್ವದಲ್ಲಿ ಕೂಡಬೇಕೆಂಬ ನೆನಹು ದೋರಿ, ಆ ನೆನಹು ತನ್ನ ನಿಜ ಸುಷುಪ್ತಿಯಲ್ಲಿ ನಿರ್ಧಾರವಾಯಿತ್ತೆಂಬುದೀಗ, ಕಂಗಳ ಸೂತಕವ ಯೋನಿ ತಡದು ಎಂಬ ಶಬ್ದಕ್ಕರ್ಥ. ಆ ನೆನಹು ನಿರ್ಧಾರವಾದ ಶರಣನು ಶಿವಾಪೇಕ್ಷೆಯು ಮುಂದುಗೊಂಡಲ್ಲಿ ಮಹಾಲಿಂಗದ ನಿಜಸ್ವರೂಪನೊಳಕೊಂಡು ಅಂತರಂಗದಲ್ಲಿ ಚಿದ್ಗರ್ಭವಾಯಿತ್ತೆಂಬುದೀಗ, ತಾಯಿ ಬಸುರಾಗಿ ಎಂಬ ಶಬ್ದಕ್ಕರ್ಥ. ಆ ಚಿತ್‌ಸ್ವರೂಪನಾದ ಶರಣನ ನಿಜಾಂತರಂಗದಲ್ಲಿರ್ದ ಪರವು ಚಿತ್ಕಲಾ ಲಿಂಗವೇ ಶ್ರೀಗುರು ಮುಖದಿಂ ಬಹಿಷ್ಕರಿಸಿ ಕರಸ್ಥಲಕ್ಕೆ ಇಷ್ಟಲಿಂಗವಾಗಿ ಬಂದಿತ್ತೆಂಬುದೀಗ, ಕೈ ಬೆಸಲಾಯಿತ್ತೆಂಬ ಶಬ್ದಕ್ಕರ್ಥ. ಆ ಶರಣನ ಕರಸ್ಥಲದಲ್ಲಿರ್ದ, ಸತ್ಕ್ರಿಯಾ ಲಿಂಗವನು ಸುಜ್ಞಾನಕೆ ಮಾತೃಸ್ಥಾನವಾದ ಶರಣನು ತನ್ನ ನಿಜಾಂತರಂಗಕ್ಕೆ ವೇದಿಸಿ, ಪ್ರಾಣಲಿಂಗ ಸಾಹಿತ್ಯವ ಮಾಡಿಕೊಂಡನೆಂಬುದೀಗ, ಕೈಯು ಶಿಸುವ ಕಂಗಳ ತಾಯಿ ಎತ್ತಿ ಎಂಬ ಶಬ್ದಕ್ಕರ್ಥ. ಆ ಮನೋಮಧ್ಯದಲ್ಲಿ ಸಂಬಂಧವಾದ ಪ್ರಾಣಲಿಂಗವನು ಶರಣ ಇಚ್ಛಾಶಕ್ತಿ ಸ್ವರೂಪವಾದ ಸದ್ಭಾವಹಸ್ತದಲ್ಲಿ ತೃಪ್ತಿ ಲಿಂಗ ಸಂಬಂಧವ ಮಾಡಿಕೊಂಡನೆಂಬುದೀಗ, ಭಾವ ದಾದಿಯ ಕೈಯಲ್ಲಿ ಕೊಟ್ಟು ಎಂಬ ಶಬ್ದಕ್ಕರ್ಥ. ಆ ಒಂದೇ ಮಹಾ ಘನಲಿಂಗವು ತ್ರಿವಿಧ ಲಿಂಗ ಸ್ವರೂಪವಾಗಿ ಶರಣನ ಆಚಾರಾಂಗವನೊಳಕೊಂಡು ಪ್ರಕಾಶಿಸುತ್ತಿಹುದೆಂಬುದೀಗ, ಅರ್ಕೇಶ್ವರ ಲಿಂಗವು ತೊಟ್ಟಿಲಲ್ಲಿ ಬೆಳೆವುತ್ತದೆ ಎಂಬ ಶಬ್ದಕ್ಕರ್ಥ.

## ೧೧

ಅಣ್ಣನ ಮೂರು ಕುತ್ತಿನಲ್ಲಿ ಅಕ್ಕ ಮೂರು ಮಕ್ಕಳು ಹೆತ್ತು
ಅಪ್ಪನ ಕೈಯಲು ಕೊಡಲು;
ಅಣ್ಣ ಹಣ್ಣಿದ ಜಗಳ ಅಕ್ಕನ ಹೊಟ್ಟೆಯ ಕೇಡು
ಅಕ್ಕನ ಕೂಸು ಅಪ್ಪನ ತಿಂದು
ಎತ್ತಹೋಯಿತ್ತೆಂಬದರಿಯೆ ಅರ್ಕೇಶ್ವರ ಲಿಂಗವ ಕೇಳುವ ಬನ್ನಿ.

**ಟೀಕು:** — ಅಣ್ಣನೆಂದೊಡೆ ಚಿತ್‌ಸ್ವರೂಪವಾದ ಶ್ರೀಗುರು ತತ್ವವೆಂಬುದೀಗ, ಅಣ್ಣನೆಂಬ ಶಬ್ದಕ್ಕರ್ಥ. ಜ್ಞಾನಶಕ್ತಿ ಸ್ವರೂಪವಾದ ಶರಣ ಸತಿಯಲ್ಲಿ ದೀಕ್ಷ ತ್ರಯಂಗಳಿಂದ ಶ್ರೀಗುರು ಅವಿರಳ ಸಂಗವ ಮಾಡಲು ತನುತ್ರಯಂಗಳು ನಷ್ಟವಾಗಿ, ಲಿಂಗತ್ರಯಂಗಳುದಯಿಸಿದವೆಂಬುದೀಗ, ಅಣ್ಣನ ಮೂರು ಕುತ್ತಿನಲ್ಲಿ ಅಕ್ಕ ಮೂರು ಮಕ್ಕಳ ಹೆತ್ತು ಎಂಬ ಶಬ್ದಕ್ಕರ್ಥ. ಆ ಶರಣ ಸತಿಯು ಲಿಂಗ ತ್ರಯವನು ತನಗೆ ಜನಕನಪ್ಪ ಮಹಾಧ್ಯಾನದ ಮಧ್ಯದಲ್ಲಿ ಸಂಬಂಧವ ಮಾಡಿದನೆಂಬುದೀಗ, ಅಪ್ಪನ ಕೈಯಲ್ಲಿ ಕೊಡಲು ಎಂಬ ಶಬ್ದಕ್ಕರ್ಥ. ಆ ಶ್ರೀಗುರು ತತ್ವದಿಂ ಹುಟ್ಟಿದ ಕ್ರಿಯಾಧ್ಯಾನ ಮಥನದಿಂ ಲಿಂಗ ಭೋಗೋಪಭೋಗಿಯಾದ ಶರಣ ಸತಿಯ ಪ್ರಾರಬ್ಧ ಸ್ಥಿತಿ ನಷ್ಟವಾಯಿತ್ತೆಂಬುದೀಗ, ಅಣ್ಣ ಹಣ್ಣಿದ ಜಗಳ ಅಕ್ಕನ ಹೊಟ್ಟೆಯ ಕೇಡು ಎಂಬ ಶಬ್ದಕ್ಕರ್ಥ. ಆ ಶರಣನ ಸಂಬಂಧವಾದ ಮಹಾ ಘನ

ಲಿಂಗವು ತನಗೆ ಜನಕನಪ್ಪ ಮಹಾಜ್ಞಾನವನವಗ್ರಹಿಸಿ ನಿಷ್ಪತಿಯಾಯಿತ್ತೆಂಬುದೀಗ, ಅಕ್ಕನ ಕೂಸು ಅಪ್ಪನ ತಿಂದು ಎತ್ತ ಹೋಯಿತ್ತೆಂಬುದರಿಯೆನೆಂಬ ಶಬ್ದಕ್ಕರ್ಥ. ಈ ನಿಷ್ಪತಿಯಾದ ಭೇದವ ಸುಜ್ಞಾನಿ ಶರಣನು ಪರಶಿವ ಮುಖದಿಂದ ಲರಿಯುತ್ತಿರ್ದನೆಂಬುದೀಗ, ಅರ್ಕೇಶ್ವರ ಲಿಂಗವ ಕೇಳುವ ಬನ್ನಿ ಎಂಬ ಶಬ್ದಕ್ಕರ್ಥ.

೧೨

ಮತ್ಸ್ಯಹೊಳೆಯನುಂಗಿ, ಮೊಸಳೆ ಮಡುವು ನುಂಗುವಾಗ
ಅಡಗಿರ್ದನೋಡಿ ಕಂಡೆ ಕೊಡಗೂಸು
ಅಡಗುವ ಠಾವ ಒಡಗೂಡಿದಲ್ಲದೆ—
—ಕಾಣಬಾರದು ಅರ್ಕೇಶ್ವರ ಲಿಂಗವ ನರಿವುದಕ್ಕೆ.

**ಟೀಕು:—** ಜೀವಾತ್ಮನೆಂಬುದೀಗ ಮತ್ಸ್ಯವೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಶಿವಕೃಪೆಯಿಂ ಸಮ್ಯಜ್ಞಾನೋದಯವಾಗಲು, ಸಂಸಾರ ರಸಾಂಬುಧಿಯ ನವಗ್ರಹಿಸಿ, ನಷ್ಟವಮಾಡಿದನೆಂಬುದೀಗ, ಮತ್ಸ್ಯ ಹೊಳೆಯನುಂಗಿಎಂಬ ಶಬ್ದಕ್ಕರ್ಥ. ಅಂತಪ್ಪ ಸಂಸಾರ ಸಾಗರ ನಷ್ಟವಾಗಲು, ಶರಣ ತನ್ನ ಶಿವಭಾವದಿಂ ಸೂತಕವ ಕಾಣಬಾರದೆ ಇರ್ದವೂಯಾ ಪ್ರಪಂಚವ ನಷ್ಟವಮಾಡಿದನೆಂಬುದೀಗ,ಮೊಸಳೆ ಮಡುವು ನುಂಗುವಾಗ ಎಂಬ ಶಬ್ದಕ್ಕರ್ಥ. ಆ ಪ್ರಪಂಚು ನಿವೃತ್ತಿಯಾಗಲು ಚಿತ್ ಸ್ವರೂಪನಾದ ಶರಣ ತನಗೆ ಮಾತೃ ಸ್ಥಾನವಾದ ಜ್ಞಾನಶಕ್ತಿಯನು ಸುಜ್ಞಾನ ದೃಷ್ಟಿಯಿಂ ಕಂಡನೆಂಬುದೀಗ, ಅಡಗಿರ್ದ ನೋಡಿ ಕಂಡೆ ಕೊಡಗೂಸು ಎಂಬ ಶಬ್ದಕ್ಕರ್ಥ. ಆ ಶರಣ ನಡಗುವ ಠಾವೆಂದೊಡೆ ಮಹಾಜ್ಞಾನಚಿತ್ತ. ಆ ಚಿಚ್ಛಕ್ತಿಯಲ್ಲಿ ಸಮರಸವಾದಲ್ಲದೆ ತನ್ನ ನಿಜವಪ್ಪ ಪರಬ್ರಹ್ಮವ ನರಿಯಬಾರದೆಂಬುದೀಗ, ಅಡಗುವ ಠಾವ ಒಡಗೂಡಿದಲ್ಲದೆ ಕಾಣಬಾರದು ಅರ್ಕೇಶ್ವರ ಲಿಂಗವ ನರಿವುದಕ್ಕೆ ಎಂಬ ಶಬ್ದಕ್ಕರ್ಥ.

೧೩

ಕುದುರೆಯ ನರಿ ಕೊಂದು
ನರಿಯ ಇರುಹೆ ತಿಂದು ಆ ಇರುಹೆ
ತನ್ನ ತಾ ಸತ್ತಿತ್ತು ಅರ್ಕೇಶ್ವರ ಲಿಂಗವ ನರಿವುದಕ್ಕೆ.

**ಟೀಕು:—** ಸತ್ತ್ರಣವು ಜ್ಞಾನ ಉದಯವಾದಲ್ಲಿ ಪ್ರಾಣವಾಯು ವಿಕಾರ ನಷ್ಟವಾಯಿತ್ತೆಂಬುದೀಗ, ಕುದುರೆಯ ನರಿಕೊಂದು ಎಂಬ ಶಬ್ದಕ್ಕರ್ಥ. ಆ ಸತ್ತ್ರಣವುವ ಶರಣನ ಸೂಕ್ಷ್ಮವಾದ ಪರಿಪೂರ್ಣ ಜ್ಞಾನವನವಗ್ರಹಿಸಿತ್ತೆಂಬುದೀಗ, ನರಿಯ ಇರುಹೆ ತಿಂದು ಎಂಬ ಶಬ್ದಕ್ಕರ್ಥ. ಆ ಸತ್ತ್ರಣವುನವ ಗ್ರಹಿಸಿದ ಶರಣನ ಪರಿಪೂರ್ಣಜ್ಞಾನವು ಆ ಪರವಸ್ತುವಿನಲ್ಲಿ ನಿಷ್ಪತಿಯಾಯಿತ್ತೆಂಬುದೀಗ, ಆ ಇರುಹೆ ತನ್ನ ತಾ ಸತ್ತಿತ್ತು ಅರ್ಕೇಶ್ವರ ಲಿಂಗವನರಿವುದಕ್ಕೆ ಎಂಬ ಶಬ್ದಕ್ಕರ್ಥ.

೧೪

ನಾಯಿಗೆ ಕಾಲಕೊಟ್ಟು, ತೋಳಗೆ ಹೊಟ್ಟೆಯಕೊಟ್ಟು
ಹುಲಿಗೆ ತಲೆಯಕೊಟ್ಟು ನೊಲಿಸಿಗೊಂಬವರೆಲ್ಲರು
ಬಲವಂತ ತನವೆ, ಅವರ ಸಲೆ, ಒಲುಮೆ
ಅರ್ಕೇಶ್ವರ ಲಿಂಗವ ನರಿದವರಿಗಲ್ಲದೆ ಆಗದು.

**ಟೀಕು:**— ನಾಯಿಯೆಂದೊಡೆ ಇಂದ್ರಿಯಂಗಳು. ಅಂತಪ್ಪ ಇಂದ್ರಿಯಂಗಳ ಪ್ರವರ್ತನೆಯಿಂ ಸತ್ಕ್ರಿಯ್ಯೆಯ ನಷ್ಟವ ಮಾಡಿದನೆಂಬುದೀಗ, ನಾಯಿಗೆ ಕಾಲು ಕೊಟ್ಟು ಎಂಬ ಶಬ್ದಕ್ಕರ್ಥ. ವ್ಯಾಧಿ ಬಂದು ಆತ್ಮನ ನವಗ್ರಹಿಸಿದಲ್ಲಿ ಅಂತರಂಗದ ಸುಜ್ಞಾನ ನಷ್ಟ ವಾಯಿತ್ತೆಂಬುದೀಗ ತೋಳಗೆ ಹೊಟ್ಟೆಯಕೊಟ್ಟು ಎಂಬ ಶಬ್ದಕ್ಕರ್ಥ. ಕಾಲ ವ್ಯಾಪ್ತನ ಬಾಧೆಯಿಂದಾತ್ಮಂಗೆ, ಶಿವಜ್ಞಾನ ನಷ್ಟವಾಗಿ ಹೋಯಿತ್ತೆಂಬುದೀಗ, ಹುಲಿಗೆ ತಲೆಯಕೊಟ್ಟು ಎಂಬ ಶಬ್ದಕ್ಕರ್ಥ. ಇಂದ್ರಿಯಂಗಳೆಂಬ ಸತ್ಕ್ರಿಯ್ಯೆಯು ವ್ಯಾಧಿಯಿಂ ತನ್ನ ನಿಜದರಿವನು ಕಾಲನಿಂ ಶಿವಜ್ಞಾನವ ನಷ್ಟವ ಮಾಡುವರೆಲ್ಲಕ್ಕು ಜ್ಞಾನದ ಸಮರ್ಥಿಕೆ ಇಲ್ಲದೆಂಬುದೀಗ, ನೊಲಿಸಿ ಕೊಂಬವರೆಲ್ಲರು ಬಲವಂತ ತನವೆ ಎಂಬ ಶಬ್ದಕ್ಕರ್ಥ. ಇಂದ್ರಿಯಂಗಳು ಮೊದಲಾದ ಸಕಲ ಪ್ರಪಂಚ ಗೆಲುವದು ಶಿವ ಕೃಪಾ ಪ್ರಸನ್ನತ್ವವುಳ್ಳ ಶರಣರಿಗಲ್ಲದೆ ಸಾಧ್ಯವಾಗದೆಂಬುದೀಗ, ಅವರ ಸಲೆ ಬಲುಮೆ ಅರ್ಕೇಶ್ವರ ಲಿಂಗವ ನರಿದವರಿಗಲ್ಲದೆ ಆಗದು ಎಂಬ ಶಬ್ದಕ್ಕರ್ಥ.

೧೫

ಆರು ಕಂಭದ ಮಾಳಿಗೆಯ ನಡುವೆ, ಒಂದು—
ಮೂರು ಮುಖದ ಹೆಗ್ಗಣ ತೋಡಿ ಕಂಡಿತ್ತು
ತೊಡೊಲೆಗಳವ ಸಾಗರದ ಮಂದಿರವ
ಅದು ತನ್ನಿರವ ತೋರುವದಕ್ಕೆ ಮೊದಲೇ ಮಾಳಿಗೆ ಜಾರಿತ್ತು
ಅರ್ಕೇಶ್ವರಲಿಂಗವ ಕೇಳುವ ಬನ್ನಿ.

**ಟೀಕು:**— ಷಟ್ಕರಣ ಯುಕ್ತವಾದ ದೇಹ ಮಧ್ಯದಲ್ಲಿ ಎಂಬುದೀಗ, ಆರು ಕಂಭದ ಮಾಳಿಗೆಯ ನಡುವೆ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ತ್ರಿವಿಧಾವಸ್ಥೆಯ ಮುಖವಾಗಿರ್ದ ಜೀವಾತ್ಮ ನಿರುತ್ತಿಹನೆಂಬುದೀಗ ಒಂದು ಮೂರು ಮುಖದ ಹೆಗ್ಗಣವೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಾತ್ಮನು ದೇಹಾದಿ ಪ್ರಪಂಚನುಂಟುಮಾಡಿಕೊಂಡು ದ್ವೈತಾಭಾವದಿಂ ಭಿನ್ನ ಕ್ರಿಯಾಚಾರವಿಡಿದು ಆಚರಿಸುತ್ತಿಹನೆಂಬುದೀಗ, ತೋಡಿಕಂಡಿತ್ತು ತೊಡೊಲೆಗಳವ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನು ಭಿನ್ನ ಕ್ರಿಯೆವಿಡಿದಾಚರಿಸಿ ಭಿನ್ನ ಫಲ ಪದಂಗಳ ಪಡೆದು ಭವಾಂಬುಧಿಗೊಳಗಾಗಿ ದೇಹವಿಡಿದಿರ್ದನೆಂಬುದೀಗ, ಸಾಗರದ ಮಂದಿರವ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಶಿವ ಕೃಪೆಯಿಂ ಸುಜ್ಞಾನೋದಯವಾಗಿ ತನ್ನ ನಿಜವ ತಿಳಿದು ಗುರು ಕರುಣದಿಂ ಸರ್ವಾಂಗ ಲಿಂಗ ಸಂಬಂಧವಾದಾಕ್ಷಣ

ವಲ್ಲಿ ದೇವಭಾವ ನಷ್ಟವಾಯಿತ್ತೆಂಬುದೀಗ, ಅದು ತನ್ನಿರವ ತೋರುವದಕ್ಕೆ ಹೊವಲಿ ಮಾಳಿಗೆ ಜಾರಿತ್ತು ಅರ್ಕೇಶ್ವರ ಲಿಂಗವ ಕೇಳುವ ಬನ್ನಿ ಎಂಬ ಶಬ್ದಕ್ಕರ್ಥ.

## ೧೬

ಸೊನೆಗಾರನ ಮನೆಯಲ್ಲಿ ಮೂವರು ಹಂದಿಗಳು ಹೊಕ್ಕು
ಹೇಳ ಹೆಸರಿಲ್ಲದೆ ಕೊಂದರೆಲ್ಲರ
ಸೊನೆಗಾರ ಏನೂ ಎನ್ನದಿರ್ದ
ಕೇಳುವ ಬನ್ನಿ ಅರ್ಕೇಶ್ವರ ಲಿಂಗವ

ಟೀಕು:— ಸಕಲ ಪ್ರಾಣಿಗಳ ಸಂಹರಿಸುತ್ತಿಹ ಜೀವನೆಂಬುದೀಗ, ಸೊನೆಗಾರನೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಸಂಬಂಧವಾದ ದೇಹವೆಂಬುದೀಗ, ಮನೆಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಪಿಂಡದಲ್ಲಿ ಸುಜ್ಞಾನೋದಯವಾಗಿ ಶ್ರೀಗುರೋಪಾವಸ್ಥೆಯ ಮಾಡಲು ಗುರುತ್ರಯವು ಕರುಣಿಸಿ ದೀಕ್ಷಾತ್ರಯಂಗಳಿಂ ಬೆರಸಿ ಲಿಂಗತ್ರಯದ ಸಂಬಂಧವ ಮಾಡಿ ಸಕಲ ಪ್ರಪಂಚೆಲ್ಲವ ನಷ್ಟವ ಮಾಡಿದರೆಂಬುದೀಗ, ಮೂವರು ಹಂದಿಗಳು ಹೊಕ್ಕು ಹೇಳ ಹೆಸರಿಲ್ಲದೆ ಕೊಂದರೆಲ್ಲರ ಎಂಬ ಶಬ್ದಕ್ಕರ್ಥ. ಆ ಸಕಲ ಪ್ರಪಂಚು ನಷ್ಟವಾಗಲು ಶಬ್ದಜಾಲಂಗಳಳಿದು ಆ ಸಜ್ಜೀವನು ಚಿಲ್ಲಿಂಗದಲ್ಲಿ ಶಬ್ದಮುಗ್ಧವಾಗಿರ್ದನೆಂಬುದೀಗ, ಸೊನೆಗಾರ ಏನೂ ಎನ್ನದಿರ್ದ ಕೇಳುವ ಬನ್ನಿ ಅರ್ಕೇಶ್ವರ ಲಿಂಗವ ಎಂಬ ಶಬ್ದಕ್ಕರ್ಥ.

## ೧೭

ಸತ್ತವನ ಮನೆಯಲ್ಲಿ,
ಹೊತ್ತವರೆಲ್ಲರು ಅಳುತ್ತಿರ್ದರು
ಮತ್ತೊಬ್ಬನ ಮದುವೆಗೆ ನಿಬ್ಬಣಕ್ಕೆ ಬಂದು
ಮದವಣಿಗನ ಕಾಣದೆ ಮನೆ ಮನೆಯ ಹೊಕ್ಕು
ಸುತ್ತುತ್ತಿದಾರೆ; ಕೇಳುವ ಬನ್ನಿ ಅರ್ಕೇಶ್ವರ ಲಿಂಗವ

ಟೀಕು:— ಶಿವಜ್ಞಾನ ನಷ್ಟವಾಗಿರ್ದ ಜೀವಂಗಾಶ್ರಯವಾದ ದೇಹವೆಂಬುದೀಗ, ಸತ್ತವನ ಮನೆಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ಸಾಕಾರವಾದ ಇಷ್ಟಲಿಂಗವ ಭಿನ್ನವಿಟ್ಟು ಧರಿಸಿಕೊಂಡು ಭಿನ್ನ ಕ್ರೀಯನಾಚರಿಸಿ ಭಿನ್ನ ಫಲಪದ ಭೋಗಂಗಳ ಪಡೆದು ಸಂಸಾರದಲ್ಲಿ ಮುಖಜೀವಿಗಳಾಗುತ್ತಿಹರು ಪ್ರವೃತ್ತಿಗಳು ಎಂಬುದೀಗ, ಹೊತ್ತವರೆಲ್ಲರು ಅಳುತ್ತಿರ್ದರೆಂಬ ಶಬ್ದಕ್ಕರ್ಥ. ಮತ್ತೊಬ್ಬನೆಂದೊಡೆ ಚೈತನ್ಯ ಸ್ವರೂಪನಾದ ಪ್ರಾಣಲಿಂಗವು. ಅಂತಪ್ಪ ಪ್ರಾಣಲಿಂಗದಲ್ಲಿ ಸಮರಸವನೆಯ್ದು ದೀಕಿಸುತ್ತಿಹರು ಅಪ್ರವೃತ್ತಿಗಳೆಂಬುದೀಗ, ಮತ್ತೊಬ್ಬನ ಮದುವೆಗೆ ನಿಬ್ಬಣಕ್ಕೆ ಬಂದು ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವು ಅದ್ವೈತ ಜ್ಞಾನಕ್ಕೆ ಅಸಾಧ್ಯವಾಯಿತ್ತೆಂಬುದೀಗ, ಮದವಣಿಗನ ಕಾಣದೆ ಎಂಬ ಶಬ್ದಕ್ಕರ್ಥ.

ಅಂತಪ್ಪ ಅಸಾಧ್ಯವಾದ ಪರಬ್ರಹ್ಮವ ಷಡಾಧಾರ ಚಕ್ರದಲ್ಲಿ ಷಡು ಸೋಪಾನವಿಟ್ಟಿರಸುತ್ತಿಹರೆಂಬುದೀಗ, ಮನೆಮನೆಯ ಹೊಕ್ಕು ಸುತ್ತುತ್ತೈದಾರೆ ಎಂಬ ಶಬ್ದಕ್ಕರ್ಥ. ಇಂತಪ್ಪ ದ್ವೈತಕ್ಕೆ ಅದ್ವೈತ ಜ್ಞಾನವ ಶಿವಾದ್ವೈತ ಭಕ್ತಿಯಿಂ ಕೆಡೆಮುಟ್ಟಿ ಶ್ರೀಗುರು ಕರುಣದಿಂ, ಸರ್ವಾಂಗಲಿಂಗ ಸಂಬಂಧವಾಗಿ ಶಿವತತ್ವದಲೆಯ್ದುವ ಮೋಕ್ಷ ಮಾರ್ಗವ ಜ್ಞಾನ ಗುರುಮುಖದಿಂ ಬೆಸಗೊಳುತ್ತಿರ್ದರೆಂಬುದೀಗ, ಕೇಳುವ ಬನ್ನಿ ಅರ್ಕೇಶ್ವರ ಲಿಂಗವ ಎಂಬ ಶಬ್ದಕ್ಕರ್ಥ.

೧೮

ಊರೆಲ್ಲರೂ ಕೂಡಿ ಬ್ಯಾಟೆಗೆ ಹೋಗಿ ಹಾರುವನ ಕೊಂದರು
ತಲೆ ಉಳಿದು ಕಾಲು ಖಂಡಿಸಿ ಕರುಳಡಗಿತ್ತು
ಬ್ಯಾಟೆ ಬೆಲೆಯಾದುದಿಲ್ಲ ಕೇಳುವ ಬನ್ನಿ ಅರ್ಕೇಶ್ವರ ಲಿಂಗವ.

**ಟೀಕು:**— ಅಂತರಂಗದಲ್ಲಿ ಸುಜ್ಞಾನೋದಯವಾಗಿ ಗುರು ಕರುಣದಿಂ ಸರ್ವಾಂಗಲಿಂಗ ಸಂಬಂಧಿಗಳಾದ ಷಟ್‌ಸ್ಥಲ ಬ್ರಹ್ಮಿಗಳೆಂಬುದೀಗ, ಊರೆಲ್ಲರು ಕೂಡಿ ಎಂಬ ಶಬ್ದಕ್ಕರ್ಥ. ಅಂತಪ್ಪ ಮಹಾನುಭಾವಿಗಳು ಅಭಿನ್ನ ಜ್ಞಾನ ಕ್ರಿಯೆಯಿಂದಾಚರಿಸುತ್ತಿಹರೆಂಬುದೀಗ, ಬ್ಯಾಟೆಗೆ ಹೋಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಶಿವಾದ್ವೈತ ಭಕ್ತಿಯಿಂದಾಚರಿಸಿದ ಶರಣರು ಪರಧನ, ಪರಸ್ತ್ರೀಯರಿಗೆ ಹಾರೈಸುತ್ತಿರ್ದ ಜೀವನ ಅಜ್ಞಾನಭಾವವ ಸಂಹರಿಸುತ್ತಿಹರೆಂಬುದೀಗ, ಹಾರುವನ ಕೊಂದರು ಎಂಬ ಶಬ್ದಕ್ಕರ್ಥ. ಅಂತು ಜೀವ ಭಾವ ನಷ್ಟವಾದಲ್ಲಿ ಅಭಿನ್ನ ಜ್ಞಾನವೇ ಉಳಿಯಿತ್ತೆಂಬುದೀಗ, ತಲೆ ಉಳಿದು ಎಂಬ ಶಬ್ದಕ್ಕರ್ಥ. ಅಂತಪ್ಪ ಅಭಿನ್ನ ಜ್ಞಾನ ಪ್ರಕಾಶದಿಂ, ಜೀವನ ದುಶ್ಚರಿತ್ರವೆಂಬ ಚರಣವನು ಸಕಲ ಕರಣಂಗಳನು ನಿವೃತ್ತಿ ಮಾಡಿದನೆಂಬುದೀಗ, ಕಾಲು ಖಂಡಿಸಿ ಕರುಳಡಗಿತ್ತು ಎಂಬ ಶಬ್ದಕ್ಕರ್ಥ. ಆ ಜೀವಭಾವವ ನಿವೃತ್ತಿಯ ಮಾಡಿದ ಸಜ್ಜೀವ ಸ್ವರೂಪನಾದ ಶರಣನ ಪರಿಪೂರ್ಣ ಜ್ಞಾನವು ಫಲಪದಂಗಳಿಗೊಳಗಾಗದೆ, ಪರಶಿವತತ್ವದಲ್ಲಿ ಸಮರಸವಾಯಿತ್ತೆಂಬುದೀಗ, ಬ್ಯಾಟೆ ಬೆಲೆಯಾದುದಿಲ್ಲ ಕೇಳುವ ಬನ್ನಿ ಅರ್ಕೇಶ್ವರ ಲಿಂಗವ ಎಂಬ ಶಬ್ದಕ್ಕರ್ಥ.

೧೯

ಆಡಿನ ಕಾಲು ಕಡಿದು, ಕೊಡಗದ ಹಲ್ಲುಕಿತ್ತು
ಉಡುವಿನ ಕುಡಿನಾಲಗೆಯ ಒಡಗೂಡಿ ತಿಂದು-
ಮತ್ತೊಡೆಯನನರಿಯಬೇಕು ಅರ್ಕೇಶ್ವರಲಿಂಗವ

**ಟೀಕು:**— ರಜೋಗುಣ ಸಂಬಂಧವಾದ ಸ್ಥೂಲ ತನುವಿನಲ್ಲಿರ್ಪ ಜೀವನು ದುಶ್ಚರಿತ್ರವೆಂಬ ಚರಣವ ಸುಜ್ಞಾನದಿಂ ಛೇದಿಸಿದನೆಂಬುದೀಗ, ಆಡಿನ ಕಾಲು ಕಡಿದು ಎಂಬ ಶಬ್ದಕ್ಕರ್ಥ. ಆ ಜೀವನ ದುಶ್ಚರಿತ್ರ ನಷ್ಟವಾಗಲು ಮನಸ್ಸಿನ ಸಂಕಲ್ಪ ವಿಕಲ್ಪವೆಂಬ ದಂತವ ಭಗ್ನವ ಮಾಡಿದನೆಂಬುದೀಗ, ಕೊಡಗದ ಹಲ್ಲು ಕಿತ್ತು ಎಂಬ ಶಬ್ದಕ್ಕರ್ಥ. ಅಂತು ಮನಸ್ಸಿನ ಸಂಕಲ್ಪ ವಿಕಲ್ಪ ನಷ್ಟವಾಗಲು

ತಮೋಗುಣ ಸಂಬಂಧವಾದ ಕಾರಣ ತನುವಿನ ಭಿನ್ನಾಪೇಕ್ಷೆಯು ಮಹಾ ಜ್ಞಾನದಲ್ಲಿ ಅವಗ್ರಹಿಸಿದನೆಂಬುದೀಗ, ಉಡುವಿನ ಕುದಿನಾಲಗೆಯು ಬಡಗೂಡಿ ತಿಂದು ಎಂಬ ಶಬ್ದಕ್ಕರ್ಥ. ಅಂತು ತತ್ವಂಗಳು ನಿವೃತ್ತಿಯಾದಲ್ಲಿ ತನ್ನ ನಿಜವಪ್ಪ ಪರಬ್ರಹ್ಮವ ಕೂಡಬೇಕೆಂದು ಭಕ್ತಿಯಿಂದುಪಾವಸ್ಥೆಯು ಮಾಡುತ್ತಿರ್ದನೆಂಬುದೀಗ, ಮತ್ತೊದೆಯನರಿಯಬೇಕು ಅರ್ಕೇಶ್ವರ ಲಿಂಗವ ಎಂಬ ಶಬ್ದಕ್ಕರ್ಥ.

## ೨೦

ಮೂರು ಸುರೆಯ ಕುಡಿದು
ಅಡಗಿಸಿದವನೆನ್ನ ಗುರು; ಕಾಳಾದ ಕಣಕಿತ್ತು
ಎರಳೆಯ ತಿರುಳ ತಿಂದು,
ದಿನಸವ ಕಳಿದುಳಿದವನೆನ್ನ ಗುರು
ಆತ ಅರ್ಕೇಶ್ವರ ಲಿಂಗಕ್ಕೆ ಸಿಕ್ಕಿದವ.

ಟೀಕು:— ಮೂರು ಸುರೆ ಎಂದೊಡೆ, ಅನ್ನಪಾನ ಐಶ್ವರ್ಯಪಾನ, ಅಧರಪಾನವೆಂಬ ತ್ರಿವಿಧವನು, ನಿವೃತ್ತಿಯ ಮಾಡಿದಾತ ಸುಜ್ಞಾನ ಸ್ವರೂಪವಾದ ಶ್ರೀ ಗುರುವೆಂಬುದೀಗ, ಮೂರು ಸುರೆಯ ಕುಡಿದು ಎಂಬ ಶಬ್ದಕ್ಕರ್ಥ. ಆವ ಊರನು ನಿವೃತ್ತಿಯ ಮಾಡಿದೆನೆಂಬ ಚಿದಹಂಕಾರವನು ನಿವೃತ್ತಿಯಮಾಡಿದಾತನೆ ಶ್ರೀ ಗುರುವೆಂಬುದೀಗ, ಅಡಗಿಸಿದವನೆನ್ನ ಗುರು ಎಂಬ ಶಬ್ದಕ್ಕರ್ಥ. ಆ ಚಿದಹಂಕಾರವ ನಿವೃತ್ತಿಯ ಮಾಡಿದಾತನೆ ಶ್ರೀ ಗುರು. ಆ ಜ್ಞಾನ ಸಂಬಂಧಿಯಪ್ಪ, ಜೀವನ ವೃತ್ತಿ ಜ್ಞಾನವ ನಷ್ಟವ ಮಾಡಿದನೆಂಬುದೀಗ, ಕಾಳಾದ ಕಣ್ಣಕಿತ್ತು ಎಂಬ ಶಬ್ದಕ್ಕರ್ಥ. ಅಂತು ಜೀವನ ಅಜ್ಞಾನ ನಿವೃತ್ತಿಯಾದಲ್ಲಿ ಅಂತರಾತ್ಮನೊಳಗಿರ್ಪ ಸಕಲಕರಣಂಗಳ ಸುಜ್ಞಾನ ಮುಖದಿಂ ನಿವೃತ್ತಿಯಮಾಡಿದನೆಂಬುದೀಗ, ಎರಳೆಯ ತಿರುಳ ತಿಂದು ಎಂಬ ಶಬ್ದಕ್ಕರ್ಥ. ಅಂತಪ್ಪ ಶ್ರೀ ಗುರುವಿನ ಕಾಲಕಲ್ಪಿತಂಗಳ ಕಳಿದು ಲಿಂಗದಿಂದೊದಗುವ ಭಿನ್ನ ಫಲ ಪದಂಗಳ ನಿವೃತ್ತಿಮಾಡಿ ನಿತ್ಯ ಸ್ವರೂಪನಾಗಿರ್ದನೆಂಬುದೀಗ, ದಿನಸವ ಕಳಿದುಳಿದವನೆನ್ನ ಗುರು ಆತ ಅರ್ಕೇಶ್ವರ ಲಿಂಗಕ್ಕೆ ಸಿಕ್ಕಿದವ· ಎಂಬ ಶಬ್ದಕ್ಕರ್ಥ.

## ೨೧

ಬೆತ್ತಲೆಯ ಹುತ್ತದಲ್ಲಿ, ಕತ್ತಲೆಯ ಹೆಡೆಯ ಸರ್ಪ
ತೆಕ್ಕೆಯ ಮಡಿಯಲರಿಯದೆ ಸಿಕ್ಕಿ
ಅದೇ ಹುತ್ತದ ಬಾಯಲ್ಲಿ,
ಕಪ್ಪೆ ಹರಿದು ಬಂದು ಸರ್ಪನ ನುಂಗಿತ್ತು.
ಹುತ್ತ ಬಚ್ಚಬಯಲಾಯಿತ್ತು
ಅರ್ಕೇಶ್ವರ ಲಿಂಗವ ಗೊತ್ತು.

**ಟೀಕ** :— ಅಭಿನ್ನ ಕ್ರಿಯಾಚಾರ ಬಾಹ್ಯವಾದ ನವದ್ವಾರ ಯುಕ್ತವಾದ ದೇಹವೆಂಬುದೀಗ, ಚಿತ್ತಲೆಯ ಹುತ್ತದಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪದೇಹ ದಲ್ಲಿ ಅಜ್ಞಾನವೆ ಸಿರಸ್ಥಾಗಿರ್ಪ ಮನವು ಮಹಾ ಘನಲಿಂಗದಲ್ಲಿ ಸಹಜರಸದಿಂದೊ ಬ್ಬುಳಿಯಾಗಲರಿಯದೆ, ದೇಹಭಾವದ ಪ್ರಪಂಚಿನಲ್ಲಿ ಇರುತ್ತಿಹುದೆಂಬುದೀಗ, ಕತ್ತಲೆಯ ಹಡೆಯ ಮಡಿಯಲರಿಯದೆ ಸಿಕ್ಕಿ ಬಿದೆ ಎಂಬ ಶಬ್ದಕ್ಕರ್ಥ. ಅಂತಪ್ಪ ಪಿಂಡದಲ್ಲಿ ಸುಜ್ಞಾನೋದಯವಾಗಲು ಬ್ರಹ್ಮರಂಧ್ರ ಸ್ಥಾನದಲ್ಲಿರ್ಪ ಪರಮ ಶಾಂತಿಯ ಚಿದ್ ಬಿಂದುವೆ ಸುಷುಮ್ನ ದ್ವಾರದಿಂದೊಸರಿ, ಗುರುವಿನ ಭಾವ, ಮನದ್ರುಕ್ಕು ನೋಳಗೊಂಡು ಇಷ್ಟಲಿಂಗವಾಗಿ ಶರಣನಾಚಾರಾಂಗದಲ್ಲಿ ಮೂರ್ತಿ ಗೊಂಡಿತ್ತೆಂಬುದೀಗ, ಹುತ್ತದ ಬಾಯಲ್ಲಿ ಕಪ್ಪೆ ಹರಿದು ಬಂದು ಎಂಬ ಶಬ್ದ ಕ್ಕರ್ಥ. ಅಂತಪ್ಪ ಇಷ್ಟಲಿಂಗದಲ್ಲಿ ಚಿತ್ಕಳೆ ಅಂತರಂಗಕ್ಕೆ ವೇಧಿಸಿ ಘನವನೊಳ ಕೊಂಡು ಪ್ರಾಣಲಿಂಗವಾಗಿ ಮೂರ್ತಿಗೊಂಡಿತ್ತೆಂಬುದೀಗ, ಸರ್ಪನ ನುಂಗಿತ್ತು ಎಂಬ ಶಬ್ದಕ್ಕರ್ಥ. ಆ ಮಹಾ ಘನಲಿಂಗವು ಶರಣನ ಸರ್ವಾಂಗವ ನವಗ್ರಹಿಸಿ ದಲ್ಲಿ, ದೇಹ ನಿರ್ದಯಲಾಯಿತ್ತೆಂಬುದೀಗ, ಹುತ್ತ ಬಚ್ಚ ಬಯಲಾಯಿತ್ತು ಅರ್ಕೇಶ್ವರ ಲಿಂಗವ ಗೊತ್ತು ಎಂಬ ಶಬ್ದಕ್ಕರ್ಥ.

೨೨

ಕಂಜನಾಭಿಯಲ್ಲಿ ಕುಂಜರ ಬಂದು
ಮುಂದಿರದವರೆಲ್ಲರ ಕೊಂದಿತ್ತು
ಕುಂಜರನ ಬೆಂಬಳಿಯವರಲ್ಲದೆ, ಕುಂಜರನ ಸಂದ ಮುರಿವವರಿಲ್ಲ
ಅರ್ಕೇಶ್ವರ ಲಿಂಗದ ಒಲುಮೆ ಇದ್ದವರಿಗಲ್ಲದೆ ಸಾಧ್ಯವಾಗದು.

**ಟೀಕು**:— ದಶದಳ ಪದ್ಮವನುಳ್ಳ ಮಣಿಪೂರಕ ಚಕ್ರದಲ್ಲಿ ಎಂಬುದೀಗ, ಕಂಜನಾಭಿಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಮಣಿಪೂರಕ ಚಕ್ರದಲ್ಲಿ ಅಹಂಕಾರಸ್ಥಾ ರುದ್ರಾ ಎಂದುದಾಗಿ, ಅಂತಪ್ಪ ರುದ್ರನಿಂದ ಅಹಂಕಾರ ಹುಟ್ಟಿತ್ತೆಂಬುದೀಗ, ಕಂಜನಾಭಿಯಲ್ಲಿ ಕುಂಜರ ಬಂದು ಎಂಬ ಶಬ್ದಕ್ಕರ್ಥ. ದೇಹಸಂಬಂಧಿಗಳಪ್ಪ ಸಕಲ ಜೀವರುಗಳನು ಆ ಅಹಂಕಾರವೆ ಅವಗ್ರಹಿಸಿ ಕೊಂಡು ಮರ್ದಿಸಿತ್ತೆಂಬುದೀಗ, ಮುಂದಿರದವರೆಲ್ಲರ ಕೊಂದಿತ್ತೆಂಬ ಶಬ್ದ ಕ್ಕರ್ಥ ಸಕಲಾತ್ಮರುಗಳು ಅಹಂಕಾರದಲ್ಲಿ ವರ್ತಿಸುತ್ತಿಹರಲ್ಲದೆ, ಆ ಅಹಂಕಾರವ ನಿವೃತ್ತಿಯ ಮಾಡಲರಿಯರೆಂಬುದೀಗ, ಕುಂಜರನ ಸಂದ ಮುರಿವವರಿಲ್ಲವೆಂಬ ಶಬ್ದಕ್ಕರ್ಥ. ಶಿವನ ಕೃಪೆಯುಳ್ಳ ಶಿವಶರಣರಿಗಲ್ಲದೆ ಅಹಂಕಾರವಳಿದು ನಿರ ಹಂಕಾರ ನೆಲೆಗೊಳ್ಳದೆಂಬುದೀಗ, ಅರ್ಕೇಶ್ವರ ಲಿಂಗದ ಒಲುಮೆ ಇದ್ದವರಿಗಲ್ಲದೆ ಸಾಧ್ಯವಾಗದು ಎಂಬ ಶಬ್ದಕ್ಕರ್ಥ.

೨೩

ಪಂಜರದ ಕೋಳಿ ಮಾರ್ಜಾಲನ ಕೊಂದು ತಿಂದು
ಬಂಧುಗಳ ಹೊಂದದೆ ತಾನೊಂದೆ ಹೊಂದಿತ್ತು
ಪಂಜರ ಹೊರಗೆ ಅರ್ಕೇಶ್ವರ ಲಿಂಗವನರಿದ ಕಾರಣ.

ಟೀಕು:—ಪಂಚಭೂತಾಶ್ರಯವಾದ ದೇಹದಲ್ಲಿರ್ಪ ಸತ್ವಗುಣವು ಎಂಬುದೀಗ, ಪಂಜರದ ಕೋಳಿ ಎಂಬ ಶಬ್ದಕ್ಕರ್ಥ. ಅಂತಪ್ಪ ಸತ್ವಗುಣವು ಜ್ಞಾನೋದಯವಾಗಿ ಮನೋ ಮಾರ್ಜಾಲ ನವಗ್ರಹಿಸಿತ್ತೆಂಬುದೀಗ, ಮನೋ ಮಾರ್ಜಾಲ ಕೊಂದು ತಿಂದು ಎಂಬ ಶಬ್ದಕ್ಕರ್ಥ. ಆ ಮನವ ನವಗ್ರಹಿಸಿದ ಸತ್ವಗುಣವು ಸಕಲಕರಣಂಗಳ ವ್ಯವಹಾರವ ಹೊದ್ದದೆಂಬುದೀಗ, ಬಂಧುಗಳ ಹೊಂದದೆ ಎಂಬ ಶಬ್ದಕ್ಕರ್ಥ. ಆ ಸತ್ವಗುಣವು ಜ್ಞಾನಲಿಂಗದಲ್ಲಿ ನಿಷ್ಪತ್ತಿಯಾದಲ್ಲಿ ಶರಣನ ಸರ್ವಾಂಗವು ಮಹಾಘನಲಿಂಗದಲ್ಲಿ ಸಮರಸಭಾವದಿಂದಡಗಿತ್ತೆಂಬುದೀಗ, ಪಂಜರದ ಹೊರಗೆ ಅರ್ಕೇಶ್ವರ ಲಿಂಗವ ನರಿದ ಕಾರಣ ಎಂಬ ಶಬ್ದಕ್ಕರ್ಥ.

೨೪

ಕವಿಯಂ ಕಾಳಗದಲ್ಲಿ, ರವಿ ಭಂಟನಾಗಿ
ಶಶಿ ಬೆಸಿಗೆಟ್ಟು. ಅರಸು ಭಂಟರ ಬಿಟ್ಟೋಡಿದ
ರವಿ ರಥ ತುಡುಕಿ ಅವಿರಥವಾದ
ಅರ್ಕೇಶ್ವರ ಲಿಂಗದಲ್ಲಿ ಕವಿ ಕವಲಾಯಿತ್ತು.

ಟೀಕು:— ಸಕಲ ಶಾಸ್ತ್ರಂಗಳ ಕಲಿತು ಮತಿಯು ಹವಣದೆ ಕವಿತ್ವವ ಮಾಡುತ್ತಿಹರೆಂಬುದೀಗ, ಕವಿಯಾ ಎಂಬ ಶಬ್ದಕ್ಕರ್ಥ. ಆ ಕವಿತ್ವ ಸಾಧಕರು ಅಹುದಲ್ಲವೆಂದು ತರ್ಕಿಸುತ್ತಿಹರೆಂಬುದೀಗ, ಕವಿಯಂ ಕಾಳಗದಲ್ಲಿ ಎಂಬ ಶಬ್ದಕ್ಕರ್ಥ. ಆ ಮಥಿಸುತ್ತಿರ್ಪ ಜೀವರುಗಳಲ್ಲಿ ಕೋಪಾಗ್ನಿ ಪ್ರಭಾವಿಸಿತ್ತೆಂಬುದೀಗ, ರವಿ ಭಂಟನಾಗಿ ಎಂಬ ಶಬ್ದಕ್ಕರ್ಥ. ಆ ಕೋಪಾಗ್ನಿ ಪಟುತರವಾದಲ್ಲಿ ಪರಮ ಶಾಂತಿಯ ನಿಲವು ತಪ್ಪಿತ್ತೆಂಬುದೀಗ, ಶಶಿ ಬೆಸೆಗೆಟ್ಟು ಎಂಬ ಶಬ್ದಕ್ಕರ್ಥ. ಆ ಪರಮ ಶಾಂತಿ ನಷ್ಟವಾಗಲು ಮಹಾಘನಲಿಂಗದ ನಿಲವು ಕಾಣಬಾರದೆಂಬುದೀಗ, ಅರಸು ಭಂಟರ ಬಿಟ್ಟೋಡಿದನೆಂಬ ಶಬ್ದಕ್ಕರ್ಥ. ಅಂತು ಮಹಾ ಲಿಂಗದ ನಿಜವು ಭಿನ್ನವಾಗಲು ಕೋಪಾಗ್ನಿ ದೇಹವೆಂಬ ರಥವನವಗ್ರಹಿಸಿ ಅನುಶ್ರುತವಿಹುದೆಂಬುದೀಗ, ರವಿ ರಥವ ತುಡುಕಿ ಅವಿರಥವಾದನೆಂಬ ಶಬ್ದಕ್ಕರ್ಥ. ಆ ಕ್ರೋಧ ವಡೆಗೊಂಡಲ್ಲಿ ಕವಿತ್ವ ಸಾಧಕರು ಲಿಂಗಕ್ಕೆ ಸಲ್ಲದೆ ಭಿನ್ನವಾಗಿ ಹೋದರೆಂಬುದೀಗ, ಅರ್ಕೇಶ್ವರ ಲಿಂಗದಲ್ಲಿ ಕವಿಕವಲಾಯಿತ್ತು ಎಂಬ ಶಬ್ದಕ್ಕರ್ಥ.

೨೫

ಮೂವರು ಸಮಗಾರರ ಬಾಗಿಲಲ್ಲಿ
ಐವರು ಹಾರುವರು ಹಾರೈಸುತ್ತೈದಾರೆ
ಒಬ್ಬನಿಗೆ ಕೊಂಬ ಕೊಟ್ಟು, ಒಬ್ಬನಿಗೆ ಕೊಳಗವ ಕೊಟ್ಟು
ಒಬ್ಬನಿಗೆ ಕರುಳ ಕೊಟ್ಟು, ಒಬ್ಬನಿಗೆ ಗರ್ಭವ ಕೊಟ್ಟು
ಒಬ್ಬನಿಗೆ ಏನೂ ಇಲ್ಲದೆ ತಬ್ಬುಬ್ಬಿಯಾಯಿತ್ತು.
ಆ ಮಾದಿಗನ ಮನೆಯ ಹೊಕ್ಕು ಮಾದಗಿತ್ತಿಯು ಅದ ತಿಂದ
ಅರ್ಕೇಶ್ವರ ಲಿಂಗವ ನರಿತ ಕಾರಣ.

**ಟೀಕು:**— ನಾಯಾ ಮಾರ್ಗಸ್ಥಯುಳ್ಳಿರ್ದ ಜೀವತ್ರಯಂಗಳೆಂಬುದೀಗ, ಮೂವರು ಸಮಗಾರರು ಎಂಬ ಶಬ್ದಕ್ಕರ್ಥ. ಆ ಜೀವ ತ್ರಯಂಗಳು ವರ್ತಿಸುವ ಪಂಚೇಂದ್ರಿಯ ದ್ವಾರಂಗಳಲ್ಲಿ ಎಂಬುದೀಗ, ಮೂವರು ಸಮಗಾರರ ಬಾಗಿಲಲ್ಲಿ ಎಂಬ ಶಬ್ದಕ್ಕರ್ಥ. ಪಂಚೇಂದ್ರಿಯ ದ್ವಾರಂಗಳಲ್ಲಿ ಪಂಚಕರಣಂಗಳು ನಿಂದು ಪಂಚ ವಿಷಯ ಪದಾರ್ಥಂಗಳ ನಿಚ್ಚನುತ್ತಿಹರೆಂಬುದೀಗ, ಐವರು ಹಾರುವರು ಹಾರೈಸುತ್ತೈದಾರೆ, ಒಬ್ಬನಿಗೆ ಕೊಂಬ ಕೊಟ್ಟು, ಒಬ್ಬನಿಗೆ ಕೋಳಗ ಕೊಟ್ಟು, ಒಬ್ಬನಿಗೆ ಕರುಳ ಕೊಟ್ಟು, ಒಬ್ಬನಿಗೆ ಗರ್ಭವ ಕೊಟ್ಟು ಎಂಬ ಶಬ್ದಕ್ಕರ್ಥ. ಆ ನಾಲ್ಕು ಕರಣಂಗಳಲ್ಲಿ ನಾಲ್ಕು ವಿಷಯ ಸಂಬಂಧವಾಗಲು, ಜ್ಞಾನ ಕರಣ ಸ್ವರೂಪಿ ಆತ್ಮನಾಗಿ ಅಂತರಾತ್ಮನಿಗೆ ಸುಜ್ಞಾನೋದಯವಾದಲ್ಲಿ ಸಕಲ ವಿಷಯ ಪ್ರಪಂಚು ನಷ್ಟವಾಯಿತ್ತೆಂಬುದೀಗ, ಒಬ್ಬನಿಗೆ ಏನೂ ಇಲ್ಲದೆ ಎಂಬ ಶಬ್ದಕ್ಕರ್ಥ. ಆ ಜೀವನ ಸಕಲ ಪ್ರಪಂಚಿನ ವರ್ತನೆಯೆಲ್ಲವು ಶ್ರೀಗುರು ಕಾರುಣ್ಯದಿಂ ನಿವರ್ತನೆಯಾಯಿತ್ತೆಂಬುದೀಗ, ತುಬ್ಬುಬ್ಬಿಯಾಯಿತ್ತೆಂಬ ಶಬ್ದಕ್ಕರ್ಥ. ಸರ್ವ ಸೂತಕ ರಹಿತವಾಗಿರ್ದ ನಿಷ್ಕಲ ಪರಶಿವನ ಚಿದಾಲಯವೆಂಬುದೀಗ, ಮಾದಿಗನ ಮನೆಯೆಂಬ ಶಬ್ದಕ್ಕರ್ಥ. ಆ ಚಿದಾಲಯಕ್ಕೆ ಶರಣ ತನ್ನ ಸುಜ್ಞಾನ ಮುಖದಿಂದೆ ಯ್ದಿದನೆಂಬುದೀಗ, ಆ ಮಾದಿಗನ ಮನೆ ಹೊಕ್ಕು ಎಂಬ ಶಬ್ದಕ್ಕರ್ಥ. ಸರ್ವ ಸೂತಕ ರಹಿತವಾದ ನಿಷ್ಕಲ ಚಿಚ್ಛಕ್ತಿಯ ನಿಜ ಸುಷುಪ್ತಿ ಸ್ಥಾನದಲ್ಲಿರ್ದ ಪರ ವಸ್ತುವ ನವ ಗ್ರಹಿಸಿದನೆಂಬುದೀಗ, ಮಾದಗಿತ್ತಿಯ ಅವ ತಿಂದ ಅರ್ಕೇಶ್ವರ ಲಿಂಗವ ನರಿತ ಕಾರಣ ಎಂಬ ಶಬ್ದಕ್ಕರ್ಥ.

೭೬

ಊರೊಳಗಣ ದೇವಾಲಯದಲ್ಲಿ
ಐವರು ಹೊಲೆಯರು ಹೊಕ್ಕು, ದೇವರ ಪೂಜಿಸುತ್ತೈದಾರೆ
ಹೊಲೆಯರು ಮುಟ್ಟಿ ದೇವಾಲಯ ಹೊರಗಾಯಿತ್ತು
ದೇವರೊಳಗಡೆ ಕುಲಜರು ಹೊಲಬುದಪ್ಪಿ
ಹೊಲಗೊಳಗಾಯಿತ್ತು; ಅರ್ಕೇಶ್ವರ ಲಿಂಗವ ನರಿತ ಕಾರಣ.

**ಟೀಕು:**— ಪಂಚಭೂತ ಯುಕ್ತವಾದ ದೇಹವೆಂಬ ಗ್ರಾಮವೆಂಬುದೀಗ, ಊರೆಂಬ ಶಬ್ದಕ್ಕರ್ಥ. ಆ ದೇಹದ ಮಧ್ಯದಲ್ಲಿ ನಿಜಾಂತರಂಗ ಚಿದಾಲಯವಿರುತ್ತಿಹುದೆಂಬುದೀಗ, ಊರೊಳಗಣ ದೇವಾಲಯವೆಂಬ ಶಬ್ದಕ್ಕರ್ಥ. ಆ ಚಿದಾಲಯದಲ್ಲಿರ್ದ ಚಿದ್ಘನಲಿಂಗವ ಕೂಡಬೇಕೆಂದು ಪಂಚಕರಣಂಗಳು ಸುಜ್ಞಾನ ಮಾರ್ಗವಿಡಿದೊಯ್ದು, ಹೃದಯ ಕಮಲವೆಂಬ ಸದ್ವಾಸನಾ ಪುಷ್ಪವನು ಸುಜ್ಞಾನ ಹಸ್ತದಿಂ ಕೊಯ್ದು ಪೂಜಿಸುತ್ತಿಹರೆಂಬುದೀಗ, ಐವರು ಹೊಲೆಯರು ಹೊಕ್ಕು ದೇವರ ಪೂಜಿಸುತ್ತೈದಾರೆ. ಎಂಬ ಶಬ್ದಕ್ಕರ್ಥ. ಆ ಪಂಚಕರಣಂಗಳು ಪ್ರಾಣ ಲಿಂಗದಲ್ಲಿ ಸಮರಸವಾಗಲು, ಶರಣನ ಚಿದಾಲಯವು ಬಹಿರಂಗದ ಅಭಿನ್ನ ಕ್ರಿಯಾಚಾರದಲ್ಲಿ ಸಂಬಂಧವಾಯಿತ್ತೆಂಬುದೀಗ, ಹೊಲೆಯರು ಮುಟ್ಟಿ ದೇವಾಲಯ

ಹೊರಗಾಯಿತ್ತೆಂಬ ಶಬ್ದಕ್ಕರ್ಥ. ತನ್ನ ನಿಜವಪ್ಪ ಪರಬ್ರಹ್ಮವು ಶರಣನಂತರಂಗದಲ್ಲಿ ಸಾಹಿತ್ಯವಾಗಿಹುದೆಂಬುದೀಗ, ದೇವರೊಳಗದೆ ಎಂಬ ಶಬ್ದಕ್ಕರ್ಥ. ಶಿವ ಸತ್ಕುಲಜರಪ್ಪ ಸಕಲ ಕರಣಂಗಳ ಖಂಡಿತ ಹೊಲಬುತಪ್ಪಿ, ಸರ್ವಸೂತಕ ರಹಿತವಾದ ಪರವಸ್ತುವಿನಲ್ಲಿ ಏಕಾರ್ಥವಾದ ಎಂಬುದೀಗ, ಕುಲಜರು ಹೊಲಬುದಪ್ಪಿ ಹೊಲೆಗೊಳಗಾಗಿತ್ತು ಅರ್ಕೇಶ್ವರ ಲಿಂಗವ ನರಿತ ಕಾರಣ ಎಂಬ ಶಬ್ದಕ್ಕರ್ಥ.

## ೧೨

ಕಂಗಳ ಮಧ್ಯದ ಮಳೆಯಲ್ಲಿ
ಒಂದು ನಿಸ್ಸಂಗ ಶೃಂಗಿ ಮೇವುತ್ತದೆ
ಅಂಬೊಂದು ಹಿಳುಕು ಮೂರು ಅಲಗಾರು
ಮೊನೆ ಐದು ಕೂಡಿ ಘನ ನಾಲ್ಕು ಹಿಡಿದು
ನಾರಿಯೊಂಟಿಕೂಡಿ ಸರ ಸಂಧಾನವಲಿಸಿಯೆ
ಶೃಂಗಿ ಬಿದ್ದಿತ್ತು. ಅಸು ಬದುಕಿತ್ತು
ಅರ್ಕೇಶ್ವರ ಲಿಂಗವ ನರಿತ ಕಾರಣ

**ಟೀಕು:**— ಚಿತ್‌ಸ್ವರೂಪನಾದ ಶರಣನ ಸುಜ್ಞಾನ ದೃಷ್ಟಿಯು ಮುಂದೆ ಸದ್ವಿವೇಕ ವೃಕ್ಷ ಸ್ವರೂಪವಾಗಿ ತೋರುವ ಷಡಾಧಾರ ಚಕ್ರಂಗಳಲ್ಲಿ ಎಂಬುದೀಗ, ಕಂಗಳ ಮಧ್ಯದ ಮಳೆಯಲ್ಲಿ ಎಂಬ ಶಬ್ದಕ್ಕರ್ಥ. ಆ ಚಿದಾರಣ್ಯ ಮಧ್ಯದಲ್ಲಿ ದೇಹೇಂದ್ರಿಯಂಗಳ ಸಂಗವಿಲ್ಲದ ನಿಷ್ಕಲ ಚಿಚ್ಛಕ್ತಿ ಸುಜ್ಞಾನಾಂಕುರವ ಸವಿಯುತ್ತಿಹಳೆಂಬುದೀಗ, ಒಂದು ನಿಸ್ಸಂಗಶೃಂಗಿ ಮೇವುತ್ತದೆ ಎಂಬ ಶಬ್ದಕ್ಕರ್ಥ. ಆ ನಿಷ್ಕಲ ಚಿಚ್ಛಕ್ತಿಯಲ್ಲಿ ಶರಣ ಸಮರಸವ ನೆಯ್ದುವುದಕ್ಕೆ ಮೂಲಜ್ಞಾನವೆ ಅಂಬಾಗಿಹುದೆಂಬುದೀಗ, ಅಂಬೊಂದು ಎಂಬ ಶಬ್ದಕ್ಕರ್ಥ. ಅದಕ್ಕೆ ಕ್ರಿಯಾ ಜ್ಞಾನ ಭಾವಂಗಳೆ ಹಿಳುಕಳೆಂಬುದೀಗ, ಹಿಳುಕು ಮೂರು ಎಂಬ ಶಬ್ದಕ್ಕರ್ಥ. ಅದಕ್ಕೆ ಸುಜ್ಞಾನ ಸ್ವರೂಪವಾದ ಷಟ್‌ಸ್ಥಲಂಗಳೆ ಅಲಗಾರಾಗಿಹುದೆಂಬುದೀಗ, ಅಲಗಾರು ಎಂಬ ಶಬ್ದಕ್ಕರ್ಥ. ಆ ಷಟ್‌ಸ್ಥಲಂಗಳಲ್ಲಿ ಪಂಚಾಕ್ಷರಿ ಸ್ವರೂಪವಾದ ಪಂಚಾಚಾರ ಸಂಬಂಧವಾಗಿರುತ್ತಿಹುದೆಂಬುದೀಗ, ಮೊನೆ ಐದು ಕೂಡಿ ಎಂಬ ಶಬ್ದಕ್ಕರ್ಥ. ಆ ಪಂಚಾಚಾರಂಗಳಲ್ಲಿ ಚತುರ್ವಿಧ ಭಕ್ತಿ ಸಂಬಂಧವಾಗಿಹವೆಂಬುದೀಗ, ನಾರಿಯೊಂಟಿಮಾಡಿ ಎಂಬ ಶಬ್ದಕ್ಕರ್ಥ. ಆ ಸದಾಚಾರ ಸಂಪತ್ತು ವಿದಿದಿರ್ದ ಶರಣನು ಸುಜ್ಞಾನವೆಂಬ ಸರಳಿಂ ಪ್ರಯೋಗಿಸಲು ಆ ಚಿಚ್ಛಕ್ತಿ ಶರಣನ ಸುಜ್ಞಾನದಲ್ಲಿ ಸಮರಸವನೆಯ್ದಿತ್ತೆಂಬುದೀಗ, ಸರಸಂಧಾನದ ಲಿಸಿಯೆ ಶೃಂಗಿಬಿದ್ದಿತ್ತೆಂಬ ಶಬ್ದಕ್ಕರ್ಥ. ಆ ಚಿಚ್ಛಕ್ತಿಯು ನಿಗ್ರಹಿಸಿಪ್ಪ ಶರಣನ ಚಿದಾತ್ಮನು ನಿತ್ಯವಾದ ಶಿವಪದವ ನೆಯ್ದಿತ್ತೆಂಬುದೀಗ, ಅಸು ಬದುಕಿತ್ತು ಅರ್ಕೇಶ್ವರ ಲಿಂಗವ ನರಿತ ಕಾರಣ ಎಂಬ ಶಬ್ದಕ್ಕರ್ಥ.

೨೮

ಅಂಗೈಯಲ್ಲಿ ಬೇರು ಹುಟ್ಟಿ ಮುಂಗೈಯಲ್ಲಿ ಮೊಳೆದೋರಿ
ಹಿಂಗಾಲಲ್ಲಿ ಮರ ಬಲಿಯಿತ್ತು
ಮುಂಗಾಲಲ್ಲಿ ಫಲ ಮೂಡಿ, ಅಂಗೈಯಲ್ಲಿ ಹಣ್ಣಾಯಿತ್ತು
ಕಂಗಳ ಕೂಸು ಹಣ್ಣು ಮೆದ್ದಿತ್ತು.
ಕೂಸಿನ ಅಂಗವನರಿ ಅರ್ಕೇಶ್ವರ ಲಿಂಗದ ಸಂಗವ ಮಾಡು.

**ಟೀಕು:—** ಚಿದ್ರೂಪನಾದ ಶರಣನ ಸದ್ಭಾವ ಹಸ್ತದಲ್ಲಿ ಮೂಲ ಜ್ಞಾನ ಉದಯವಾಯಿತ್ತೆಂಬುದೀಗ, ಅಂಗೈಯಲ್ಲಿ ಬೇರು ಹುಟ್ಟಿ ಎಂಬ ಶಬ್ದಕ್ಕರ್ಥ. ಆ ಮೂಲಜ್ಞಾನ ಮನೋಹಸ್ತದಲ್ಲಿ ಅಂಕುರಿಸಿತ್ತೆಂಬುದೀಗ, ಮುಂಗೈಯಲ್ಲಿ ಮೊಳೆದೋರಿ ಎಂಬ ಶಬ್ದಕ್ಕರ್ಥ. ಆ ಮನೋಮಧ್ಯದ ಲಂಕುರಿಸಿದ ಮೂಲ ಜ್ಞಾನವು ಶರಣನ ಚರಿಯ ಪಾದದಲ್ಲಿ ಸದ್ವಿವೇಕ ವೃಕ್ಷಸ್ವರೂಪದಿಂ ಸಿರ್ಥರ ವಾಯಿತ್ತೆಂಬುದೀಗ, ಹಿಂಗಾಲಲ್ಲಿ ಮರ ಬಲಿಯಿತ್ತು ಎಂಬ ಶಬ್ದಕ್ಕರ್ಥ. ಆ ಸದ್ವಿವಿವೇಕ ವೃಕ್ಷದಲ್ಲಿ ತೋರಿದ ಮುಕ್ತಿ ಫಳ ಸ್ವರೂಪವಾದ ಚಿದ್ಘನಲಿಂಗವು ಶ್ರೀ ಗುರು ಕಾರುಣ್ಯದಿಂ ಪ್ರತ್ಯಕ್ಷವಾಗಿ, ಶರಣನ ಕ್ರಿಯಾಪಾದದಲ್ಲಿ ಸಂಬಂಧವಾಯಿತ್ತೆಂಬುದೀಗ, ಮುಂಗಾಲಲ್ಲಿ ಫಲಮೂಡಿ ಎಂಬ ಶಬ್ದಕ್ಕರ್ಥ. ಆ ಸತ್ಕ್ರಿಯಾ ಚಾರದಲ್ಲಿ ಸಂಬಂಧವಾದ ಮುಕ್ತಿ ಫಳಸ್ವರೂಪವಾದ ಚಿದ್ಘನ ಲಿಂಗವೆ ಶರಣನ ಕರಸ್ಥಲದಲ್ಲಿ ಚಿದಾಮೃತ ಚಿತ್ಫಳ ಸ್ವರೂಪಿನಿಂ ಪ್ರಸನ್ನವಾಗಿ ಇಷ್ಟಲಿಂಗ ಮೂರ್ತಿಗೊಂಡಿತ್ತೆಂಬುದೀಗ, ಅಂಗೈಯಲ್ಲಿ ಹಣ್ಣಾಯಿತ್ತು ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣನು ಮುಕ್ತಾಫಳ ಸ್ವರೂಪವಾದ ಪರಬ್ರಹ್ಮದ ಸರ್ವಾಂಗವ ಲವಗ್ರಹಿಸಿ ಲಿಂಗಾಂಗ ಸಮರಸಾನಂದ ಸುಖವ ಸ್ವೀಕರಿಸುತ್ತಿಹನೆಂಬುದೀಗ, ಕಂಗಳಕೂಸು ಹಣ್ಣುಮೆದ್ದಿತ್ತು, ಕೂಸಿನ ಅಂಗವನರಿ ಅರ್ಕೇಶ್ವರ ಲಿಂಗದ ಸಂಗವಮಾಡು ಎಂಬ ಶಬ್ದಕ್ಕರ್ಥ.

೨೯

ವನದ ಬಾಳೆಯ ಗೊನೆಯ ಕೊಯ್ದು
ಕಳ್ಳನ ಅಡಿವಜ್ಜೆಯಲ್ಲಿ ಹೋಗಿ,
ಹೆಡಗುಡಿಯ ಕಟ್ಟಿ ಬಾಧಿಸಿ ಗೊನೆಯ ತೋರೆಂದೊಡೆ
ಗೊನೆ ಮನೆಯೊಳಗದೆ ಯೆಂದ ಮನೆಯಾಕೆಯ ಕೇಳಿದಡೆ
ಗೊನೆಯ ನಾತಿಂದೆ, ಕಳ್ಳನ ತಲೆಯ ಕುಟ್ಟಿ
ಎನ್ನದ ಕೊಯ್ದುಕೊಳ್ಳಿ ಎಂದಳು
ಅರ್ಕೇಶ್ವರ ಲಿಂಗವ ಬಲ್ಲಡೆ.

**ಟೀಕು:—** ಚಿದಾರಣ್ಯ ಸ್ವರೂಪವಾದ ಷಡಾಧಾರ ಚಕ್ರಂಗಳೆಂಬವೀಗ, ವನ ವೆಂಬ ಶಬ್ದಕ್ಕರ್ಥ. ಆ ಚಕ್ರಂಗಳಿಗೆ ಮಧ್ಯಸ್ಥಲವಾದ ಹೃದಯ ಕಮಲವೆಂಬು

ದೀಗ ಬಾಳೆಯೆಂಬ ಶಬ್ದಕ್ಕರ್ಥ. ಆ ಹೃತ್ಕಮಲ ಕರ್ಣಿಕಾಮಧ್ಯದಲ್ಲಿ ಮುಕ್ತಿ ಫಳ ಸ್ವರೂಪವಾದ ಪರಮಾತ್ಮ ಲಿಂಗವಿರುತ್ತಿಹುದೆಂಬುದೀಗ, ಗೊನೆಯು ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವ ಸಮಗ್ರಹಿಸಿಕೊಂಡಿರ್ಪಾತನೆ ಸಕಲ ಪ್ರಪಂಚಿಗೆ ವಿಲಕ್ಷಣವಾದ ಜ್ಞಾನ ಗುರು ತತ್ವವೆಂಬುದೀಗ, ಗೊನೆಯ ಹೊಯ್ದ ಕಳ್ಳನಾ ಎಂಬ ಶಬ್ದಕ್ಕರ್ಥ. ಆ ಜ್ಞಾನ ಗುರು ಆಚರಿಸುತ್ತಿರ್ದ ಸತ್ಪಥ ಮಾರ್ಗ ವಿಡಿದು ಶರಣನೆಯ್ದುತ್ತಿರ್ದನೆಂಬುದೀಗ, ಅಡವಿಯಲ್ಲಿ ಹೋಗಿ ಎಂಬ ಶಬ್ದಕ್ಕರ್ಥ. ಆ ಗುರು ಮಾರ್ಗಾಚಾರ ವಿಡಿದೆಯ್ದುತ್ತಿರ್ದನೆಂಬುದು, ಶರಣನು ಆ ಜ್ಞಾನ ಗುರು ತತ್ವ ತನ್ನ ಸ್ವಾನುಭಾವ ಸೂತ್ರದಲ್ಲಿ ಸಂಬಂಧಿಸಿದನೆಂಬುದೀಗ, ಹೆಡಗುಡಿಯನ್ನ ಕಟ್ಟಿ ಎಂಬ ಶಬ್ದಕ್ಕರ್ಥ. ತನ್ನ ಸ್ವಾನುಭಾವದಲ್ಲಿ ಸಂಬಂಧವಾದ ಜ್ಞಾನ ಗುರುವಿಂಗ ಭಕ್ತಿಯಿಂದುಪಾವಸ್ತೆಯ ಮಾಡಿ ತನ್ನ ನಿಜವಸ್ತು ಪರಬ್ರಹ್ಮವ ಬೆಸಗೊಳ್ಳುತ್ತಿರ್ದನೆಂಬುದೀಗ. ಬಾಧಿಸಿ ಗೊನೆಯ ಕೊಯ್ದೆಂದೊಡೆ ಎಂಬ ಶಬ್ದಕ್ಕರ್ಥ. ಆ ಮುಕ್ತಿ ಫಳ ಸ್ವರೂಪವಾದ ಚಿನ್ಮಯ ಲಿಂಗವು ನಿನ್ನ ನಿಜಾಂತರಂಗದಲ್ಲಿದೆ ಯೆಂದು ಅರುಹಿ ಕೊಡುತ್ತಿರ್ದನೆಂಬುದೀಗ, ಗೊನೆ ಮನೆಯೊಳಗದೆ ಎಂಬ ಶಬ್ದಕ್ಕರ್ಥ. ಆ ಜ್ಞಾನ ಗುರು ಮುಖದಿಂ ವಿಚಾರಿಸುತ್ತಿರಲು ಅಂತರಂಗದಲ್ಲಿರ್ದ ಜ್ಞಾನ ಶಕ್ತಿ ತನ್ನ ನಿಜ ವಸ್ತು ಪರಬ್ರಹ್ಮವ ಸಮಗ್ರಹಿಸಿ ಭೇದವ ಶರಣಂಗರುಹುತ್ತಿರ್ದಳೆಂಬುದೀಗ, ಮನೆಯಾಕೆಯು ಕೇಳಿದೊಡೆ ಗೊನೆಯು ನಾ ತಿಂದೆನೆಂಬ ಶಬ್ದಕ್ಕರ್ಥ. ಆ ಜ್ಞಾನ ಗುರು ತತ್ವವ ತನ್ನಿಂ ಭಿನ್ನವಿಟ್ಟರಿಯದೇಕೆಂಬ ವೃತ್ತಿ ಜ್ಞಾನವೆಂಬ ಶಿರಸ್ಸು ಛೇದಿಸಿದನೆಂಬುದೀಗ, ಕಳ್ಳನ ತಲೆಯ ಕುಟ್ಟಿ ಎಂಬ ಶಬ್ದಕ್ಕರ್ಥ. ಆ ಜ್ಞಾನ ಶಕ್ತಿ ತನ್ನ ನಿಜ ಸ ಸ್ವಸ್ಥಾನದಲ್ಲಿ ನಿರಮಯ ಪರಬ್ರಹ್ಮವ ಸಾಧ್ಯವ ಮಾಡಿಕೊ ಎಂದು ಅರುಹುತ್ತಿರ್ದಳು ಶರಣಂಗೆ ಎಂಬುದೀಗ, ಎನ್ನದ ಕೊಯ್ದು ಕೊಳ್ಳಿ ಎಂದಳು ಅರ್ಕೇಶ್ವರ ಲಿಂಗವ ಬಲ್ಲಡೆ ಎಂಬ ಶಬ್ದಕ್ಕರ್ಥ.

೩೦

ಬಂಧುಗಳ ಬೆಂಬಳಿಯ ಕಳ್ಳನ ಹೆಂಡತಿಗೆ
ಭಗ ಮೂರು, ಬಾಯಿ ಆರು, ಪೃಷ್ಟ ಎಂಭತ್ತುನಾಲ್ಕುಲಕ್ಷ
ರೋಮ ಎಂಟು ಕೋಟಿ, ಹಲ್ಲು ಹದಿನಾರು
ನಾಲಿಗೆ ಏಳು, ಕಿವಿ ಇಪ್ಪತ್ತೈದು
ಮೂಗು ಮೂವತ್ತೇಳು, ಕಾಲು ಎಂಟು ಭುಜವೆರಡು
ಕೈಯ್ಯೊಂದೆ, ಹಿಂದೆ-ಮುಂದೆ ನೋಡುವ ಕಣ್ಣು
ಅಭಿ ಸಂದಿಯೊಳಗೊಂದೆ ಅದೆ
ಅರ್ಕೇಶ್ವರ ಲಿಂಗವ ಕಾಣಬಾರದು

ಟೀಕು:— ಸಕಲ ಶರಣಂಗಳ ವ್ಯವಹಾರದಲ್ಲಿ ಕೂಡಿರ್ದ ಪಾರಮಾರ್ಥಕ್ಕೆ ವಂಚಕನಾದ ಜೀವನೆಂಬುದೀಗ, ಬಂಧುಗಳ ಬೆಂಬಳಿಯ ಕಳ್ಳನೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಸತಿಯಾಗಿರ್ದಳು ಮಾಯೆ ಎಂಬುದೀಗ, ಹೆಂಡತಿ

ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆಗೆ ಮಲತ್ರಯಂಗಳೆಂಬ ಯೋನಿಗಳಾಗಿರುತ್ತಿಹ ವೆಂಬುದೀಗ, ಭಗ ಮೂರು ಎಂಬ ಶಬ್ದಕ್ಕರ್ಥ. ಆ ಮಾಯೆಗೆ ಷಡೇಂದ್ರಿಯಂಗಳೇ ಬಾಯಾಗಿಹವೆಂಬುದೀಗ, ಬಾಯಿ ಆರು ಎಂಬ ಶಬ್ದಕ್ಕರ್ಥ. ಆ ಮಾಯೆ ಎಂಬತ್ತು ನಾಲ್ಕು ಲಕ್ಷಮುಟ್ಟಿ, ಹುಟ್ಟಿ ಬರುತ್ತಿಹಳೆಂಬುದೀಗ, ಪೃಷ್ಟ ಎಂಬತ್ತು ನಾಲ್ಕು ಲಕ್ಷ ಎಂಬ ಶಬ್ದಕ್ಕರ್ಥ ಆ ಮಾಯಾ ಸಂಬಂಧವಾದ ದೇಹದಲ್ಲಿ ಎಂಟುಕೋಟಿ ರೋಮಂಗಳಿರುತ್ತವೆಂಬುದೀಗ, ರೋಮ ಎಂಟುಕೋಟಿ ಎಂಬ ಶಬ್ದಕ್ಕರ್ಥ. ಆ ಮಾಯೆಗೆ ಅಂತರಂಗ ದಷ್ಟಮದ, ಬಹಿರಂಗ ದಷ್ಟಮದಂಗಳೆಂಬ ಮಥನ ದಂತಗಳಾಗಿರುತ್ತಿಹವೆಂಬುದೀಗ, ಹಲ್ಲು ಹದಿನಾರೆಂಬ ಶಬ್ದಕ್ಕರ್ಥ. ಆ ಮಾಯೆಗೆ ಸಪ್ತ ವ್ಯಸನಂಗಳೆ ವ್ಯಸನಂಗಳ ಸ್ವೀಕರಿಸುವದಕ್ಕೆ ನಾಲಗೆಯಾಗಿಹವೆಂಬುದೀಗ, ನಾಲಗೆ ಏಳು ಎಂಬ ಶಬ್ದಕ್ಕರ್ಥ. ಇಪ್ಪತ್ತೈದು ತತ್ವಂಗಳೆ ಆ ಮಾಯೆಗೆ ಅಶೃತ ಕರ್ಣಂಗಳಾಗಿಹುವೆಂಬುದೀಗ. ಕಿವಿಇಪ್ಪತ್ತೈದು ಎಂಬ ಶಬ್ದಕ್ಕರ್ಥ. ಗುಣತ್ರಯ ಮೊದಲಾದ ತತ್ವವಿಪ್ಪತ್ತೊಂಭತ್ತು ಅಷ್ಟತನುಗಳ ಮದವೆಂಟು, ಈ ಮೂವತ್ತೇಳು ತತ್ವ ಮಾಯೆಗೆ ದುರ್ವಾಸನೆ ಸ್ವೀಕಾರವಾಗಿಹವೆಂಬುದೀಗ, ಮೂಗು ಮೂವತ್ತೇಳು ಎಂಬ ಶಬ್ದಕ್ಕರ್ಥ. ಆ ಮಾಯೆಗೆ ಅಷ್ಟತನುಗಳೆ ದುಶ್ಚರಿತ್ರಂಗಳೆಂಬ ಚರಣವಾಗಿಹವೆಂಬುದೀಗ, ಕಾಲು ಎಂಟು ಎಂಬ ಶಬ್ದಕ್ಕರ್ಥ. ಆ ಮಾಯೆಗೆ, ಅಹಂಕಾರ ಮಮಕಾರಂಗಳೆ, ಭುಜಂಗಳಾಗಿಹುವೆಂಬುದೀಗ, ಭುಜವೆರಡು ಎಂಬ ಶಬ್ದಕ್ಕರ್ಥ. ಆ ಮಾಯೆಗೆ ಸಕಲ ಪ್ರಪಂಚ ಹಿಡಿವ ಕುಚಿತ್ತವೆಂಬ ಹಸ್ತವಂದೆ ಎಂಬುದೀಗ, ಕೈಯ್ಯೊಂದೇ ಎಂಬ ಶಬ್ದಕ್ಕರ್ಥ. ಆ ಮಾಯೆ ದೇಹ ದೇಹಿಗಳಗಿದಿರಿಟ್ಟುಕೊಂಡು ಅಜ್ಞಾನ ದೃಷ್ಟಿಯಿಂ ನೋಡುತ್ತಿಹಳೆಂಬುದೀಗ, ಹಿಂದೆ-ಮುಂದೆ ನೋಡುವ ಕಣ್ಣುಎಂಬ ಶಬ್ದಕ್ಕರ್ಥ. ಆ ದೇಹ-ಪ್ರಾಣಂಗಳ ಮಧ್ಯದಲ್ಲಿರ್ಪ ಆ ಜ್ಞಾನ ದೃಷ್ಟಿಯಿಂ ಮಹಾಘನಲಿಂಗದ ನಿಜವು ಕಾಣಬಾರದೆಂಬುದೀಗ, ಅಭಿ ಸಂದಿಯೊಳಗೊಂದೆ ಅದೆ; ಅರ್ಕೇಶ್ವರ ಲಿಂಗವ ಕಾಣಬಾರದು ಎಂಬ ಶಬ್ದಕ್ಕರ್ಥ.

೩೧

ಮಧುರವಾಣಿಯ ಉದರದಲ್ಲಿ
ಒಂದು ನಿಜ ಕುಕ್ಕುಟ ಕೂಗುತ್ತದೆ.
ಮೂವರ ಮೊಲೆಯನುಂಡು ಮರಮೊರಗ ಬೇಡೆಂದು ಬೆಳಗಾಯಿತ್ತು
ಅರ್ಕೇಶ್ವರ ಲಿಂಗವ ನೋಡುವ ಬನ್ನಿ ಎಂದು ಕೂಗುತ್ತಿದ್ದಿತ್ತು

ಟೀಕು:— ಭಕ್ತಿಯುಕ್ತವಾದ ಜ್ಞಾನ ಶಕ್ತಿಯು ನಿಜಾಂತರಂಗದಲ್ಲಿ ಎಂಬುದೀಗ, ಮಧುರವಾಣಿಯ ಉದರದಲ್ಲಿ ಎಂಬ ಶಬ್ದಕ್ಕರ್ಥ. ಆ ನಿಜಾಂತರಂಗದಲ್ಲಿರ್ಪ ಸತ್ಪ್ರಣವು ಜ್ಞಾನ ಉದಯವಾಗಿ ಶಿವೋಹಂ ಶಿವೋಹಂ ಎಂದು ಧ್ವನಿಗೆಯ್ಯುತ್ತಿಹುವೆಂಬುದೀಗ, ಒಂದು ನಿಜ ಕುಕ್ಕುಟ ಕೂಗುತ್ತದೆ ಎಂಬ ಶಬ್ದಕ್ಕರ್ಥ. ಇಚ್ಛಾ ಜ್ಞಾನಕ್ರಿಯೆಂಬ ತ್ರಿಶಕ್ತಿಗಳಿಂದುದಯವಾದ ಹೊನ್ನು-ಹೆಣ್ಣು-

ಮಣ್ಣೆಂಬ ತ್ರಿವಿಧ ಸ್ಥಲವ ಸ್ವೀಕರಿಸಿ ನಿನ್ನ ನಿಜವ ಕೊಟ್ಟು ಮರಮ ಮಾಯಾ ಪ್ರಪಂಚಿನಲ್ಲಿ ಮಗ್ನವಾಗಬೇಡ ಎಂದು ಉಚ್ಚರಿಸುತ್ತಿಹುದೆಂಬುದೀಗ, ಪೂರ್ವದ ಹೊಲೆಯನುಂಡು ಮರದೊರಗಬೇಡೆಂದು ಎಂಬ ಶಬ್ದಕ್ಕರ್ಥ. ಆ ಶರಣನಂತರಂಗದಲ್ಲಿ ಶಿವಜ್ಞಾನ ಪ್ರಕಾಶವಾಗಲು ಆ ಸತ್ಪ್ರಾಣವು ಲಿಂಗದ ನಿಜವನೆ ಚೇತರಿಸಿಕೊಟ್ಟು ಶಿವೋಹಂ ಭಾವದಿಂ ಧ್ವನಿಗೆಯ್ಯುತ್ತಿಹುದೆಂಬುದೀಗ, ಬೆಳಗಾಯಿತ್ತು ಅರ್ಕೇಶ್ವರ ಲಿಂಗವ ನೋಡುವ ಬನ್ನಿ ಎಂದು ಕೂಗುತ್ತಿರ್ದಿತ್ತು ಎಂಬ ಶಬ್ದಕ್ಕರ್ಥ.

೩೨

ಶುಕ್ಲ ಶೋಣಿತದಾಶ್ರಯದಲ್ಲಿ ಕುಕ್ಕುಟ ಮರದಿರಲಾಗಿ
ಬೆಕ್ಕು ನುಂಗ ಬಂದಿತ್ತು, ಬೆಕ್ಕಿನ ಕುಕ್ಕುಟನ ಕುಕ್ಕುರ ನಂಡಿಸಿತ್ತು
ಕುಕ್ಕುಟನ ಬೆಕ್ಕು ಕಾಲಜ್ಞಾನಿ ಎಚ್ಚತ್ತು
ಅರ್ಕೇಶ್ವರ ಲಿಂಗವ ನರಿತಕಾರಣ

**ಟೀಕು:** — ತಂದೆ-ತಾಯಿಗಳ ಶುಕ್ಲ-ಶೋಣಿತದಿಂದುದಯವಾದ ದೇಹದಲ್ಲಿ ಎಂಬುದೀಗ, ಶುಕ್ಲಶೋಣಿತದಾಶ್ರಯದಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ಪ್ರಾಣವು ಸ್ವರೂಪವಾದ ಚಿದಾತ್ಮನು ತನ್ನ ನಿಜವ ಮರೆದು ದೇಹಿಯಾಗಿರ್ದನೆಂಬುದೀಗ, ಕುಕ್ಕುಟ ಮರದಿರಲಾಗಿ ಎಂಬ ಶಬ್ದಕ್ಕರ್ಥ. ಆ ದೇಹದ ಮರವೆಯಲ್ಲಿರ್ಪ ಚಿದಾತ್ಮನು, ಮನೋಮಾರ್ಜಾಲ ಸಂಕಲ್ಪ ಭಾವದಿಂದವಗ್ರಹಿಸುತ್ತಿಹುದೆಂಬುದೀಗ, ಕುಕ್ಕುಟ ಮರದಿರಲಾಗಿ ಬೆಕ್ಕು ನುಂಗ ಬಂದಿತ್ತೆಂಬ ಶಬ್ದಕ್ಕರ್ಥ. ಆ ಮನೋಮಾರ್ಜಾಲನ, ಆ ಚಿದಾತ್ಮನ ಇಂದ್ರಿಯಂಗಳ ನವಗ್ರಹಿಸಿಕೊಂಡು ಘಾಸಿ ಮಾಡುತ್ತಿಹವೆಂಬುದೀಗ, ಬೆಕ್ಕಿನ ಕುಕ್ಕುಟನ ಕುಕ್ಕುರ ನಂಡಿಸಿತ್ತು ಎಂಬ ಶಬ್ದಕ್ಕರ್ಥ. ಇಂತಪ್ಪ ಪಿಂಡದಲ್ಲಿ ಶಿವ ಕೃಪೆಯಿಂ ಮೂಲ ಜ್ಞಾನ ಪ್ರಭಾವಿಸಲು, ಆ ಸತ್ಪ್ರಾಣವು ಜ್ಞಾನ ಪ್ರಕಾಶದಿಂ ಇಂದ್ರಿಯಂಗಳ ಪ್ರವರ್ತನೆ ಮನೋವರ್ತನೆ ಎರಡೂ ಅಳಿದು ಶ್ರೀಗುರುಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧವಾಯಿತ್ತೆಂಬುದೀಗ, ಕುಕ್ಕುಟನ ಬೆಕ್ಕು ಕಾಲಜ್ಞಾನ ಎಚ್ಚತ್ತು ಅರ್ಕೇಶ್ವರ ಲಿಂಗವ ನರಿತ ಕಾರಣ ಎಂಬ ಶಬ್ದಕ್ಕರ್ಥ.

೩೩

ಭವಸಾಗರವೆಂಬ ಸಮುದ್ರದಲ್ಲಿ
ಸಾಕಾರವೆಂಬ ಹಡಗು, ಚೇತನವೆಂಬ ಅಷ್ಟಕಟ್ಟು ಬರುತ್ತಿರಲಾಗಿ,
ತ್ರಿವಿಧವ ಬಲುಗಿರಿಯು ಹಾಯ್ದು ಹಡಗೊಡೆಯಿತ್ತು
ಲಾಯದ ಅಷ್ಟ ನೀರನೊಡಗೂಡಿತ್ತು
ಹಡಗಿನ ಸಿಟ್ಟಿ ಪರಪತಿ ಗಡಹಿಲ್ಲಾ ಎಂದು
ಕುಮರಿಯು ನೊಡಗೂಡಿ ಅರ್ಕೇಶ್ವರ ಲಿಂಗವ ನೋಡುವ ಬನ್ನಿ

**ಟೀಕು:**— ಭವಾಂಬುಧಿ ಎಂಬುದೀಗ, ಭವಸಾಗರವೆಂಬ ಹಾಗು ಸಮುದ್ರದಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಸಾಗರ ವಿಷಯ ರಸಾಂಬುಧಿಯ ಮಧ್ಯದಲ್ಲಿ ಪಂಚಭೌತಿಕ ಸಂಬಂಧವಾದ ದೇಹವಿರುತ್ತಿಹುದೆಂಬುದೀಗ, ಸಾಕಾರವೆಂಬ ಹಡಗು ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ಜೀವಾತ್ಮನೆಂಬ ಕುದುರೆ ಮಾಯಾ ಪಾಶದಿಂ ಬಿಗಿವಡೆದು ಭವಕ್ಕೆ ಬರುತ್ತಿಹನೆಂಬುದೀಗ, ಚೇತನವೆಂಬ ಅಶ್ವಕಟ್ಟಿ ಬರುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪಾತ್ಮಂಗೆ ಸುಜ್ಞಾನೋದಯವಾಗಿ, ಗುರೋಪಾವಸ್ಥೆಯ ಮಾಡಲು ಶ್ರೀ ಗುರು ಕಾರುಣ್ಯದಿಂದಂತರ್ಗತವಾಗಿರ್ದ ಸಚ್ಚಿದಾನಂದ ಸ್ವರೂಪವಾದ ಗುರುಲಿಂಗ ಜಂಗಮವೇ ಪ್ರಭಾವಿಸಿ ಅಂಗತ್ರಯಂಗಳ ನಿಗ್ರಹಿಸಿದಲ್ಲಿ ದೇಹಭಾವ ನಷ್ಟವಾಯಿತ್ತೆಂಬುದೀಗ, ತ್ರಿವಿಧದ ಬಲುಗಿರಿಯ ಹಾಯ್ದು ಹಡಗೊಡೆಯಿತ್ತೆಂಬ ಶಬ್ದಕ್ಕರ್ಥ. ಆ ದೇಹಭಾವ ನಷ್ಟವಾದಲ್ಲಿ ಅಂತರಂಗದಲ್ಲಿರ್ದ ಜೀವಾತ್ಮನು, ಪರಮಾನಂದ ಸ್ವರೂಪವಾದ ಸದ್ವಿವೇಕ ಜಲದಲ್ಲಿ ಸಮರಸವಾದನೆಂಬುದೀಗ, ಲಾಯುವ ಅಶ್ವ ನೀರ ನೊಡಗೂಡಿತ್ತೆಂಬ ಶಬ್ದಕ್ಕರ್ಥ. ದೇಹಭಾವ ನಷ್ಟವಾಗಿ, ಸರ್ವಾಂಗವು ಚಿದಂಗ ಸ್ವರೂಪವಾದ ಶರಣನು ಇದಿರಿಟ್ಟು ಬಾಹ್ಯಕ್ರಿಯೆಗಳ ಮಾಡಿ ಫಲಪದಂಗಳ ಪಡೆಯಲಿಲ್ಲವೆಂಬುದೀಗ, ಹಡಗಿನ ಸಿಟ್ಟಿ ಪರಪತಿ ಗಡಬಿಲ್ಲಾ ಎಂದು ಎಂಬ ಶಬ್ದಕ್ಕರ್ಥ. ಆ ಭಿನ್ನ ಮುಕ್ತಿಯ ಕಾಯಿಸದೆ ಇರ್ದ ಶರಣನು ತನ್ನಾತ್ಮ ಚೈತನ್ಯ ಸ್ವರೂಪವಾದ ಸಪ್ರಮಾಣದಲ್ಲಿ ಹಿತಾರ್ಥವಾಗಿ ಲಿಂಗವ ಬೆಸಗೊಳ್ಳುತ್ತಿರ್ದನೆಂಬುದೀಗ, ಕುದುರೆಯು ನೊಡಗೂಡಿ ಅಕೆರ್ಗೀತ್ರದ ಲಿಂಗವ ಕೇಳುವ ಬಸ್ಸಿ ಎಂಬ ಶಬ್ದಕ್ಕರ್ಥ.

# ಬಿಬ್ಬಿ ಬಾಚಯ್ಯನವರ ವಚನಗಳು

೧

ಉರಿಯ ಮೊನೆಯ ಮೇಲೆ ಅರಗಿನ ಬೊಂಬೆ ತಿರುಗಾಡುತ್ತದೆ.
ಉರಿ ಕರಗಿ ಬೊಂಬೆ ಉಳಿಯಿತ್ತು
ಏಣಾಂಕಧರ ಸೋಮೇಶ್ವರ ಲಿಂಗವ ನಿದಿರಿಗಿಟ್ಟುಕೊಂಡು

ಟೀಕು:— ಜ್ಞಾನಾಗ್ನಿ ಪ್ರಕಾಶದ ಅಗ್ರದಲ್ಲಿ ಎಂಬುದೀಗ, ಉರಿಯ ಮೊನೆಯ ಮೇಲೆ ಎಂಬ ಶಬ್ದಕ್ಕರ್ಥ. ಶರಣನ ಜ್ಞಾನಾಗ್ನಿ ಪ್ರಕಾಶವನೊಳಕೊಂಡು ನಿರ್ಭಾವ ಸ್ವರೂಪವಾದ ಪರಬ್ರಹ್ಮವು ಸಂಬಂಧವಾಗಿಹುದೆಂಬುದೀಗ, ಅರಗಿನ ಬೊಂಬೆ ತಿರುಗಾಡುತ್ತದೆ ಎಂಬ ಶಬ್ದಕ್ಕರ್ಥ. ಆ ಶರಣನ ಚಿದಾಗ್ನಿ ಪ್ರಕಾಶವು ಪರಬ್ರಹ್ಮದಲ್ಲಿ ವಿಶ್ರಾಂತಿಯನೆಯ್ದಲು ಆ ಪರಬ್ರಹ್ಮ ಒಂದೇ ಉಳಿಯಿತ್ತು ಎಂಬುದೀಗ, ಉರಿಕರಗಿ ಬೊಂಬೆ ಉಳಿಯಿತ್ತೆಂಬ ಶಬ್ದಕ್ಕರ್ಥ. ಶರಣನ ನಿಷ್ಕ ಜ್ಞಾನ ಪ್ರಕಾಶದ ನೊಳಕೊಂಡಿರ್ದ ಪರಬ್ರಹ್ಮವೆ ಕರಸ್ಥಲದಲ್ಲಿ ಇಷ್ಟಲಿಂಗವಾಗಿ ಮೂರ್ತಿಗೊಂಡು ಸತ್ಕ್ರಿಯೋಪಚಾರಂಗಳ ಕೈಕೊಳ್ಳುತ್ತಿಹುದೆಂಬುದೀಗ, ಏಣಾಂಕಧರ ಸೋಮೇಶ್ವರ ಲಿಂಗವ ನಿದಿರಿಟ್ಟುಕೊಂಡು ಎಂಬ ಶಬ್ದಕ್ಕರ್ಥ.

೨

ರವಿಯ ರಶಿನುಂಗಿ, ಉಕ್ಕಿನ ಘಟ್ಟಿಯ ಮೃತ್ತಿಕೆಯ
ಜಣಕಡಿಯಿತ್ತು
ಕಪ್ಪೆಯ ವಿಷತಾಗಿ ಹಾವು ಸತ್ತಿತ್ತು,
ಏಣಾಂಕಧರ ಸೋಮೇಶ್ವರ ಲಿಂಗವನರಿತು

ಟೀಕು:— ಚಿದಾದಿತ್ಯ ಸ್ವರೂಪವಾದ ಚಿನ್ಮಯ ಲಿಂಗವನು ಪರಮಶಾಂತಿ ಸ್ವರೂಪವಾದ ಶರಣನವಗ್ರಹಿಸಿದನೆಂಬುದೀಗ, ರವಿಯ ರಶಿ ನುಂಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮದ ಸರ್ವಾಂಗದಲ್ಲಿ ಅವಗ್ರಹಿಸಿರ್ದ ಚಿತ್‌ಸ್ವರೂಪನಾದ ಶರಣನು ಅಜ್ಞಾನ ಕಾಳಿಗೆ ಮುಸುಕಿದ ಚಿತ್ರದ ಘಟ್ಟಿಯನ್ನು ತನ್ನಾಚಾರಂಗದಲ್ಲಿ ಸಂಬಂಧವಾದ ಅರುಹೆಂಬ ಚಿಣದಿಂ ಭೇದಿಸಿದನೆಂಬುದೀಗ, ಉಕ್ಕಿನ ಘಟ್ಟಿಯ ಮೃತ್ತಿಕೆಯ ಜಣ ಕಡಿಯಿತ್ತೆಂಬ ಶಬ್ದಕ್ಕರ್ಥ. ಆ ಪರಮ ಶಾಂತಿಯ ಚಿದ್ ಬಿಂದುವಿನಿಂದುದಯವಾದ ಚಿದಾಮೃತ ರಸವನವಗ್ರಹಿಸಲು ಶಂಕಾ ವಿಷ ಸಂಬಂಧಿಯಪ್ಪ ಜೀವನ ಜೀವ ಭಾವ ನಷ್ಟವಾಯಿತ್ತೆಂಬುದೀಗ, ಕಪ್ಪೆಯ ವಿಷತಾಗಿ ಹಾವು ಸತ್ತಿತ್ತು, ಏಣಾಂಕಧರ ಸೋಮೇಶ್ವರ ಲಿಂಗವ ನರಿತು ಎಂಬ ಶಬ್ದಕ್ಕರ್ಥ.

೩

ನೊಣ ಲೋಕವ ನುಂಗಿ,
ತ್ರಿನಯನನ ಗುಂಗುರುಕೊಂಡು ಗುಂಗುರು ಗಾಳಿಯಲ್ಲಿ ನೊಂದಿತ್ತು

ಗಾಳಿಘಟ ಹೇಳದೆ ಹೋಯಿತ್ತು,
ಏಣಾಂಕಧರ ಸೋಮೇಶ್ವರ ಲಿಂಗವ ನರಿವುದಕ್ಕೆ

**ಟೀಕು:**— ಸಂಸಾರ ವ್ಯಾಪ್ತಿಯು ಜಿಗುಪ್ಸೆ ಚತುರ್ದಶ ಭುವನಂಗಳ ನವಗ್ರಹಿಸಿತ್ತೆಂಬುದೀಗ, ನೊಣ ಲೋಕವನುಂಗಿ ಎಂಬ ಶಬ್ದಕ್ಕರ್ಥ. ತ್ರಿಪುಟಿ ಜ್ಞಾನ ಸಂಬಂಧಿಯಾದ ಜೀವನನು ಅತಿಸೂಕ್ಷ್ಮವಾದ ಮಾಯೆ ಅವಗ್ರಹಿಸಿದಳೆಂಬುದೀಗ, ತ್ರಿನಯನನ ಗುಂಗುರು ಕೊಂದು ಎಂಬ ಶಬ್ದಕ್ಕರ್ಥ. ಚೈತನ್ಯ ಸ್ವರೂಪವಾದ ಚಿತ್ಪ್ರಣವು ಜ್ಞಾನ ಪ್ರಭಾವಿಸಲು ಆ ಮಾಯೆಯುಳಿದುಳಿದು ಹೋಯಿತ್ತೆಂಬುದೀಗ, ಗುಂಗುರು ಗಾಳಿಯಲ್ಲಿ ನೊಂದಿತ್ತೆಂಬ ಶಬ್ದಕ್ಕರ್ಥ. ಚಿತ್ಪ್ರಣವಾಂಗ ಸ್ವರೂಪವಾದ ಶರಣನು ಶಬ್ದಜಾಲಂಗಳಳಿದು ಪರಬ್ರಹ್ಮದಲ್ಲಿ ಸಮರಸವ ನೆಯ್ದಿದನೆಂಬುದೀಗ, ಗಾಳಿಘಟ ಹೇಳದೆ ಹೋಯಿತ್ತು, ಏಣಾಂಕಧರ ಸೋಮೇಶ್ವರ ಲಿಂಗವ ನರಿವುದಕ್ಕೆ ಎಂಬ ಶಬ್ದಕ್ಕರ್ಥ.

೪

ಬೆಳಗಿನ ಘಟವ ತಮದ ಕುಡಿಕೆ ನುಂಗಿತ್ತು
ಉಭಯದ ಘಟವ ಕೊಡಗೂಡಿನ ಕೂಸುಡಯಿತ್ತು
ಏಣಾಂಕಧರ ಸೋಮೇಶ್ವರ ಲಿಂಗವನರಿತು.

**ಟೀಕು:**— ಪರ ಶಿವಂಗೆ ಲೀಲಾವಿನೋದ ದೋರಿದಲ್ಲಿ ಚಿದಾಂಶಿಕನಾದಾತ್ಮನುದಯವಾದನೆಂಬುದೀಗ, ಬೆಳಗಿನ ಘಟವ ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನ ಕಲಾತ್ಮಂಗೆ ಶಿವಾಜ್ಞೆಯಿಂ ದೇಹ ಸಂಬಂಧವಾಗಲು ಅಜ್ಞಾನ ತಮಸ್ಸು ಅವಗ್ರಹಿಸಿತ್ತೆಂಬುದೀಗ, ತಮದ ಕುಡಿಕೆ ನುಂಗಿತ್ತು ಎಂಬ ಶಬ್ದಕ್ಕರ್ಥ. ಅಜ್ಞಾನಶಕ್ತಿ ಸ್ವರೂಪ ಶರಣನ ಅಂತರಂಗದಲ್ಲಿರ್ದ ಪರಮ ಚಿತ್ಕಳೆಯು, ಗುರುಮುಖದಿಂ ಇಷ್ಟಲಿಂಗವಾಗಿ ಬಂದು ಸರ್ವಾಂಗವ ನವಗ್ರಹಿಸಿದಲ್ಲಿ ದೇಹ ಪ್ರಾಣಂಗಳ ವರ್ತನೆ ನಷ್ಟವಾಯಿತ್ತೆಂಬುದೀಗ, ಉಭಯದ ಘಟವ ಕೊಡಗೂಸಿನ ಕೂಸುಡಯಿತ್ತು, ಏಣಾಂಕಧರ ಸೋಮೇಶ್ವರ ಲಿಂಗವ ನರಿತು ಎಂಬ ಶಬ್ದಕ್ಕರ್ಥ.

೫

ಒಂದು ಎರಡ ನುಂಗಿ, ಮೂರು ಐದ ನುಂಗಿ,
ಐದರೆಯಾಗಿ ಪ್ರೇರದಲ್ಲಿದೆ
ಏಣಾಂಕಧರ ಸೋಮೇಶ್ವರ ಲಿಂಗವ ನರಿತೆನೆಂದು

**ಟೀಕು:**— ಸುಜ್ಞಾನೋದಯವಾದ ಶರಣನ ಮಹಾನುಭಾವಾಂತರಂಗದಲ್ಲಿರ್ದ ಏಕಮೇವ ಪರಬ್ರಹ್ಮವೇ ಶ್ರೀ ಗುರು ಕಾರುಣ್ಯದಿಂ ಪ್ರತ್ಯಕ್ಷವಾಗಿಬಂದು ಶರಣನ ಅಂಗ ಪ್ರಾಣವ ನವಗ್ರಹಿಸಿಕೊಂಡು ತೋರುತ್ತಿಹುದೆಂಬುದೀಗ, ಒಂದು ಎರಡನುಂಗಿ ಎಂಬ ಶಬ್ದಕ್ಕರ್ಥ. ಆ ನಿಷ್ಕಲ ಪರ ಬ್ರಹ್ಮವೆ ತ್ರಿವಿಧಲಿಂಗ ಸ್ವರೂಪವಾಗಿ ತ್ರಿವಿಧಾಂಗವನೊಳಕೊಂಡು ಪಂಚೇಂದ್ರಿಯಂಗಳ ನವಗ್ರಹಿಸಿ

ಪಂಚಲಿಂಗ ಸಂಬಂಧವಾದಲ್ಲಿ ಪಂಚೇಂದ್ರಿಯಂಗಳ ವರ್ತನೆ ತಿಳಿಯಿತ್ತೆಂಬುದೀಗ, ಮೂರು ಐದನುಂಗಿ ಐದರೆಯಾಗಿ ಎಂಬ ಶಬ್ದಕ್ಕರ್ಥ. ಅಂತು ಲಿಂಗೇಂದ್ರಿಯಂಗಳಿದುಳಿದು, ಲಿಂಗೇಂದ್ರಿಯ ಸ್ವರೂಪನಾದ ಶರಣ ತನ್ನ ನಿಜಸ್ವರೂಪವನು ಸುಜ್ಞಾನ ಮುಖದಿಂ ವಿವೇಕಿಸುತ್ತಿರ್ದನೆಂಬುದೀಗ, ಹೊರವಲ್ಲದೆ ಏಣಾಂಕಧರ ಸೋಮೇಶ್ವರ ಲಿಂಗವ ನರಿತೆನೆಂದು ಎಂಬ ಶಬ್ದಕ್ಕರ್ಥ.

೬

ಹಲವು ಬಲೆಯೊಳಗಾದ ಎರಳೆ, ಕೊಲುವನ ಅಲಗ ನುಂಗಿತ್ತು.
ಅಲಗರಗಿ ಬಲೆಯುಳಿಯಿತ್ತು, ಹುಲ್ಲೆಯ ಹೊಲಬು ಲೇಸಾಯಿತ್ತು
ಏಣಾಂಕಧರ ಸೋಮೇಶ್ವರ ಲಿಂಗವ ನರಿತು

**ಟೀಕು:—** ಮಲತ್ರಯಂಗಳೆಂಬ ಪಾಶದಲ್ಲಿ ಸಿಕ್ಕಿರ್ದ ಜೀವಾತ್ಮನೆಂಬುದೀಗ, ಹಲವು ಬಲೆಯೊಳಗಾದ ಎರಳೆಯೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಶಿವ ಕೃಪೆಯಿಂ ಸುಜ್ಞಾನೋದಯವಾಗಲು, ಯಮನ ಸಂಹಾರದಿಂದೊದಗಿದ ಅಹಂಕಾರವೆಂಬಲಗನವಗಗ್ರಹಿಸಿ ನಷ್ಟವ ಮಾಡಿತ್ತೆಂಬುದೀಗ, ಕೊಲುವನ ಅಲಗನುಂಗಿತ್ತು, ಅಲಗರಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾರ ನಿವೃತ್ತಿಯಾದಲ್ಲಿ ಮಾಯಾಪಾಶ ಅಳಿದು ಹೋಯಿತ್ತೆಂಬುದೀಗ, ಬಲೆಯುಳಿಯಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಸಕಲ ಮಾಯಾ ಪ್ರಪಂಚು ನಿವೃತ್ತಿಮಾಡಿದ ಚಿದಾತ್ಮನು ತನ್ನ ನಿಜವಪ್ಪ ಪರಬ್ರಹ್ಮವ ಶ್ರೀ ಗುರುಕಾರುಣ್ಯದಿಂ ಪ್ರತ್ಯಕ್ಷವ ಮಾಡಿಕೊಂಡು ಸುಜ್ಞಾನ ಕ್ರೀವಿಡಿದಾಚರಿಸಿ ಮೋಕ್ಷವನೆಯ್ದುದುದು ಚೋದ್ಯವೆಂಬುದೀಗ, ಹುಲ್ಲೆಯ ಹೊಲಬು ಲೇಸಾಯಿತ್ತು, ಏಣಾಂಕಧರ ಸೋಮೇಶ್ವರ ಲಿಂಗವನರಿತು ಎಂಬ ಶಬ್ದಕ್ಕರ್ಥ.

೭

ಕಣ್ಣಿನೊಳಗಣ ಕವಲು ಮೂವರು ಅಣ್ಣಂದಿರ ಮನೆಯಾಯಿತ್ತು
ಮನೆಯ ಮರುಳು ನುಂಗಿ ಕವಡಿಕೆಯ ಕವಲು ಹಿಸಿಯಿತ್ತು
ಕಣ್ಣು ಕಂಡಲ್ಲಿಯೇ ಅಡಗಿತ್ತು ಏಣಾಂಕಧರ
ಸೋಮೇಶ್ವರ ಲಿಂಗದಲ್ಲಿ.

**ಟೀಕು:—** ಸುಜ್ಞಾನ ದೃಷ್ಟಿಯಿಂ ಪರವಸ್ತುವ ನೆರಡಿಟ್ಟು ನೋಡುತ್ತಿರಲು, ಅಲ್ಲಿ ಭಿನ್ನಭಾವ ತಲೆದೋರಿ ಜ್ಞಾನಾ-ಜ್ಞಾನವುದಯವಾದವೆಂಬುದೀಗ, ಕಣ್ಣಿನೊಳಗಣ ಕವಲು ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನಾ-ಜ್ಞಾನಯುಕ್ತವಾದ ದೇಹವು, ಜೀವತ್ರಯಂಗಳಿಗಾಶ್ರಯವಾಯಿತ್ತೆಂಬುದೀಗ, ಮೂವರು ಅಣ್ಣಂದಿರ ಮನೆಯಾಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಅಜ್ಞಾನ ಸಂಬಂಧವಾದ ದೇಹವನು, ಮಾಯಾಭ್ರಾಂತು ಆವಗ್ರಹಿಸಿತ್ತೆಂಬುದೀಗ, ಮನೆಯ ಮರುಳು ನುಂಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯಾ ಭ್ರಾಂತಿ ಜೀವಂಗೆ ಶಿವಕೃಪೆಯಿಂ ಶಿವಜ್ಞಾನೋದಯವಾಗಲು, ಜ್ಞಾನಾ-ಜ್ಞಾನ ಭಿನ್ನಭಾವ ನಷ್ಟವಾಯಿತ್ತೆಂಬುದೀಗ, ಕವಡಿ

ಕೆಯು ಕಪಲು ಒಸಿಯಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನಾ-ಜ್ಞಾನ ಭಿನ್ನ ಭಾವವಳಿಯಲು ತನ್ನ ನಿಜವಪ್ಪ ಪರಬ್ರಹ್ಮದಲ್ಲಿ ಶರಣನ ಸುಜ್ಞಾನ ದೃಷ್ಟಿ ಲಿಯ್ಯವಾಯಿತ್ತೆಂಬುದೀಗ, ಕಣ್ಣು ಕಂಡಲ್ಲಿಯೆ ಅಡಗಿತ್ತು ಏಣಾಂಕಧರ ಸೋಮೇಶ್ವರ ಲಿಂಗದಲ್ಲಿ ಎಂಬ ಶಬ್ದಕ್ಕರ್ಥ.

೮

ಮರನ ಹೂ ನುಂಗಿ ಅಡಿಯೊಳಡಗಿಸಿ ಹಣ್ಣಾಯಿತ್ತು
ಹಣ್ಣು ಎಳೆಗಾಯಿ ನುಂಗಿತ್ತು
ಹೂ ಮರನ ಉಗಳಿತ್ತು
ಮರ, ಮರಣಕ್ಕೆ ತೆರಹಿಲ್ಲದೆ ಏಣಾಂಕಧರ ಸೋಮೇಶ್ವರ
ಲಿಂಗವನರಿತಿಹೆನೆಂದು.

**ಟೀಕು:—** ಸದ್ವಿವೇಕ ವೃಕ್ಷವದು ಶರಣನ ಸ್ವಾನುಭಾವ ಸದ್ವಾಸನೆಯ ನವ ಗ್ರಹಿಸಿ ಎಂಬುದೀಗ, ಮರನ ಹೂ ನುಂಗಿ ಎಂಬ ಶಬ್ದಕ್ಕರ್ಥ, ಆ ಸ್ವಾನುಭಾವ ಸದ್ವಾಸನೆಯ ನೊಳಕೊಂಡಿರ್ದ ಪರಬ್ರಹ್ಮವೆ ಶ್ರೀಗುರು ಕಾರುಣ್ಯದಿಂ ಪ್ರತ್ಯಕ್ಷವಾಗಿ ಶರಣನ ಸತ್ಕ್ರಿಯಾಚಾರದಲ್ಲಿ ಮುಕ್ತಿ ಫಲ ಸ್ವರೂಪಿಸಿ ಸಂಬಂಧವಾಯಿತ್ತೆಂಬುದೀಗ, ಅಡಿಯೊಳಗಡಗಿ ಹಣ್ಣಾಯಿತ್ತೆಂಬ ಶಬ್ದಕ್ಕರ್ಥ. ಆ ಚಿದಾಮೃತ ಚಿತ್ಫಲ ಸ್ವರೂಪವಪ್ಪ ಪರಬ್ರಹ್ಮವದು ಶರಣನ ಸುಜ್ಞಾನವನು ಗ್ರಹಿಸಿತ್ತೆಂಬುದೀಗ, ಆ ಹಣ್ಣು ಎಳೆಗಾಯಿ ನುಂಗಿತ್ತೆಂಬ ಶಬ್ದಕ್ಕರ್ಥ. ಆ ಪ್ರಾಣಲಿಂಗ ಸಂಬಂಧಿಯಾದ ಶರಣನ ಸ್ವಾನುಭಾವ ಸದ್ವಾಸನೆ ಸರ್ವಾಂಗವ ಸಮಗ್ರಹಿಸಿದಲ್ಲಿ ದೇಹಭಾವ ನಷ್ಟವಾಯಿತ್ತೆಂಬುದೀಗ, ಹೂ ಮರನ ಉಗಳಿತ್ತೆಂಬ ಶಬ್ದಕ್ಕರ್ಥ. ಆ ದೇಹಭಾವ ನಷ್ಟವಾದಲ್ಲಿ ಪರಬ್ರಹ್ಮ ವೃಕ್ಷಸ್ವರೂಪನಾದ ಶರಣ ಲಯೋ ಧರ್ಮವಳಿದು ನಿತ್ಯ ಸ್ವರೂಪನಾಗಿರ್ದನೆಂಬುದೀಗ, ಮರ ಮರಣಕ್ಕೆ ತೆರಹಿಲ್ಲದೆ ಏಣಾಂಕಧರ ಸೋಮೇಶ್ವರ ಲಿಂಗವ ನರಿತಿಹೆನೆಂದು ಎಂಬ ಶಬ್ದಕ್ಕರ್ಥ.

೯

ಆರು ಇಲ್ಲದ ಅಡವಿಯಲ್ಲಿ ಬೇರೊಂದು ಮನೆಯ ಮಾಡಿ
ಐವರು ಹಾರುವರು ಕೂಡಿ
ಮೂವರು ಗೆಯ್ವವರು ಕೂಡಿ ಆರಂಭವನೆಯ್ದುತ್ತಿರಲಾಗಿ
ಬೆಳೆ ಬೆಳೆಯಿತ್ತು ಮೃಗಫಲವಾಗಲೀಸವು
ಬ್ಯಾಡರ ಆಗಪ ಘನವೆಂದು ಬೇಡಬಿಟ್ಟಿತ್ತು ಏಣಾಂಕಧರ
ಸೋಮೇಶ್ವರಲಿಂಗದಲ್ಲಿ.

**ಟೀಕು:—** ನಿರ್ಜನ ಪ್ರದೇಶವಪ್ಪ ಭವಾರಣ್ಯವೆಂಬುದೀಗ, ಆರು ಇಲ್ಲದ ಅಡವಿಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಭವಾರಣ್ಯಕ್ಕೆ ಬೇರೆಯಾದ ಕಾಯವನೆ ಶರಣನಾಶ್ರಯದ ಮಾಡಿಕೊಂಡನೆಂಬುದೀಗ, ಬೇರೊಂದು ಮನೆಯ ಮಾಡಿ,

ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನ ಕಾಯವನಾಶ್ರಯ ಮಾಡಿಕೊಂಡಿರ್ಪ ಶರಣನು, ಪಂಚ ಕರಣಂಗಳ ಲಿಂಗದಲ್ಲಿ ಅಡಗಿಸಿದನೆಂಬುದೀಗ, ಐವರು ಹಾರುವರು ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನು ಆತ್ಮತ್ರಯದಲ್ಲಿ ಕ್ರಿಯಾಜ್ಞಾನ ಭಾವ ಸಂಬಂಧಿಯಾಗಿ ಲಿಂಗದಲ್ಲಿ ಸತ್ಪಥ ವಿಡಿದಾಚರಿಸುತ್ತಿಹನೆಂಬುದೀಗ, ಮೂವರು ಗೆಯ್ವರು ಕೂಡಿ ಆರಂಭವ ಗೆಯ್ಯುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಆ ಸತ್ಪಥ ವಿಡಿದಾಚರಿಸುತ್ತಿರ್ಪ ಶರಣಂಗೆ ಮುಕ್ತಿಫಳವೊಡಿತ್ತೆಂಬುದೀಗ, ಬೆಳೆ ಬೆಳೆಯಿತ್ತು ಎಂಬ ಶಬ್ದಕ್ಕರ್ಥ. ಆ ಭಕ್ತಿ ಕ್ಷೇತ್ರದಲ್ಲಿ ಬೆಳೆದ ಮುಕ್ತಿ ಫಳವನು ಕಾಮಾದಿ ಅರಿಷಡ್ವರ್ಗಂಗಳೆಂಬ ಮೃಗಂಗಳು ಎಚ್ಚರಗೊಡದೆ ಕಾಡುತ್ತಿಹವೆಂಬುದೀಗ, ಮೃಗ ಫಲವಾಗಲಿಸವು ಎಂಬ ಶಬ್ದಕ್ಕರ್ಥ. ಈ ಅರಿಷಡ್ವರ್ಗಂಗಳಿಂ ಕಾಲ ಕಾಮಾದಿಗಳ ಭೀತಿಯುಂಟೆಂದು ಪರಿಪೂರ್ಣ ಜ್ಞಾನದಿಂದರಿದು ಆ ಜ್ಞಾನ ಕಾಯದ ಲಿಂಗದಲ್ಲಿ ನಿಕ್ಷೇಪಿಸಿ ನಿರ್ಭಯಲಾಯಿತ್ತೆಂಬುದೀಗ, ಬೇಡರ ಅಗದ ಅಘನವೆಂದು ಬೀಡ ಬಿಟ್ಟಿತ್ತು ಏಣಾಂಕಧರ ಸೋಮೇಶ್ವರ ಲಿಂಗದಲ್ಲಿ ಎಂಬ ಶಬ್ದಕ್ಕರ್ಥ.

## ೧೦

ಆಕಾಶದುರಿ ನೆಲದ ಮಡಿಕೆಯಲ್ಲಿ ಬಯಲ ನೀರ ತುಂಬಿ
ಇಲ್ಲದ ಅಕ್ಕಿಯ ಹಾಕಿ ಮೂರು ನೆಲೆಯಲ್ಲಿ ಕುದಿವುತ್ತಿದ್ದಿತ್ತು
ಅಕ್ಕಿಯ ಹಾಕಿ ಮೂರು ನೆಲೆಯಲ್ಲಿ ಕುದಿವುತ್ತಿದ್ದಿತ್ತು
ಪಾಕವ ನರಿದು ನೀರಹೊಯ್ದು ಗಂಜಿ ಅಲ್ಲಿಯೆ ಇಂಗಿತ್ತು
ಏಣಾಂಕಧರ ಸೋಮೇಶ್ವರಲಿಂಗಕ್ಕೆ ವಾಗರ ವಾಗಬೇಕೆಂದು

**ಟೀಕು:**— ಚಿದಾಕಾಶ ಮಧ್ಯದಲ್ಲಿ ಉದಯವಾದ ಜ್ಞಾನಾಗ್ನಿ ಪ್ರಕಾಶವೆಂಬುದೀಗ, ಆಕಾಶದುರಿಯೆಂಬ ಶಬ್ದಕ್ಕರ್ಥ. ಆ ಶಿವಜ್ಞಾನೋದಯವಾದ ಶರಣನ ಪೃಥ್ವಿ ತತ್ವ ಸಂಬಂಧವಾದ ದೇಹ ಭಾವವಳಿದು, ಶರಣನ ಸರ್ವಾಂಗವು ಚಿದ್ಘಾಂಡ ಸ್ವರೂಪವಾಯಿತ್ತೆಂಬುದೀಗ, ನೆಲದ ಮಡಿಕೆಯಲ್ಲಿ ಎಂಬ ಶಬ್ದಕ್ಕರ್ಥ. ಆ ಜ್ಞಾನಕಾಯ ಸಂಬಂಧಿಯಪ್ಪ ಶರಣನು ಸದ್ವಿವೇಕ ಸ್ವರೂಪವಾದ ಪರಮಾನಂದ ಜಲವನು ಆ ಚಿದ್ಘಾಂಡದಲ್ಲಿ ಏಕೀಕರಿಸಿದನೆಂಬುದೀಗ, ಬಯಲ ನೀರ ತುಂಬಿ ಎಂಬ ಶಬ್ದಕರ್ಥ. ಆ ಶರಣನು ಸಾಕಾರದಲ್ಲದೆ ಸತ್ತೆಂಬ ತಂಡುಲವ ಆ ಸದ್ವಿವೇಕ ಜಲದಲ್ಲಿ ಸಮರಸವ ಮಾಡಿದನೆಂಬುದೀಗ, ಇಲ್ಲದ ಅಕ್ಕಿಯ ಹಾಕಿ ಎಂಬ ಶಬ್ದಕ್ಕರ್ಥ. ಆ ಸತ್ತೆಂಬ ತಂಡುಲವ ಶರಣನ ತ್ಯಾಗಾಂಗ, ಭೋಗಾಂಗ, ಯೋಗಾಂಗಗಳೆಂಬ ತ್ರಯಾಂಗದಲ್ಲಿ ಜ್ಞಾನಾಗ್ನಿಯು ಸಮರಸ ಪಾಕವಾಗುತ್ತಿಹುದೆಂಬುದೀಗ, ಮೂರು ನೆಲೆಯಲ್ಲಿ ಕುದಿವುತ್ತಿದ್ದಿತ್ತೆಂಬ ಶಬ್ದಕ್ಕರ್ಥ. ಆ ಸತ್ತೆಂಬ ತಂಡುಲ ಪರಮ ಶಾಂತಿ ಸ್ವರೂಪವಾದ ಸದ್ವಿವೇಕ ಜಲದಲ್ಲಿ ಸಮರಸವಾದ ಭೇದವ ಶರಣನ ಸುಜ್ಞಾನ ಮುಖದಿಂದಲರಿದನೆಂಬುದೀಗ, ಪಾಕವನರಿದು ಎಂಬ ಶಬ್ದಕ್ಕರ್ಥ. ಆ ಸದ್ವಿವೇಕದಲ್ಲಿ ಸಮರಸವಾದ ಸತ್ತೆಂಬ ತಂಡುಲದಲ್ಲಿ ಪರಮಾ

ನಂದ ಜಲವ ಸಮರಸವ ಮಾಡಿದನೆಂಬುದೀಗ, ನೀರಹೊಯ್ಯು ಎಂಬ ಶಬ್ದಕ್ಕರ್ಥ. ಆ ಪರಮಾನಂದ ಜಲವ ನೇಕೀಕರಿಸಿದ ಶರಣ ಜ್ಞಾನಾಮೃತ ರಸವು ಅವಿರಳ ಪರಬ್ರಹ್ಮದಲ್ಲಿ ನಿಷ್ಪತ್ತಿಯಾಯಿತ್ತೆಂಬುದೀಗ, ಗಂಜಿ ಅಲ್ಲಿಯೆ ಇಂಗಿತ್ತು ಎಂಬ ಶಬ್ದಕ್ಕರ್ಥ. ಆ ಜ್ಞಾನಾಮೃತ ನಿಷ್ಪತ್ತಿಯಾದ ಶರಣನ ಚಿದಾಗ್ನಿಯು ಮಧ್ಯದಲ್ಲಿ ಸಮರಸಪಾಕವಾದ ಆತ್ಮದ್ರವ್ಯವನು ತನ್ನಾತ್ಮ ಚೈತನ್ಯ ಸ್ವರೂಪವಾದ ಮಹಾಘನಲಿಂಗಕ್ಕೆ ಭಕ್ತಿಯಿಂ ಶರಣ ನಿವೇದಿಸುತ್ತಿರ್ದನೆಂಬುದೀಗ, ಏಣಾಂಕಧರ ಸೊಮೇಶ್ವರ ಲಿಂಗಕ್ಕೆರವಾಗಬೇಕೆಂದು ಎಂಬ ಶಬ್ದಕ್ಕರ್ಥ.

೧೧

ಬಾರದವನುಂಡು ಬಂದವ ಹಸಿದಿರ್ದ
ಬೇಯದುದು ಬೆಂದು, ಬೆಂದುದು ಬೇಯದೆ
ಉಭಯವ ಹಿಂಗಿದುದು ಸಂದು,
ಏಣಾಂಕಧರ ಸೋಮೇಶ್ವರ ಲಿಂಗಕ್ಕೆವಾಗರವಾಯಿತ್ತು.

**ಟೀಕು:**— ಕರ್ಮ ವಾಸನೆಯಿಂ ಜನ್ಮಾಂತರಕೆ ಬಾರದೆ ಇರ್ಪ ಪರಮಾತ್ಮ ಸ್ವರೂಪನಾದ ಶರಣನು ಆ ಪರತತ್ವ ಪ್ರಸಾದವನು ತಾನೇ ತಾನಾಗಿ ಸಮರಸ ಭಾವದಿಂ ಸ್ವೀಕರಿಸುತ್ತಿರ್ದನೆಂಬುದೀಗ, ಬಾರದವನುಂಡು ಎಂಬ ಶಬ್ದಕ್ಕರ್ಥ. ಕರ್ಮವಾಸನೆಯಿಂ ಜನ್ಮಾಂತರಕೆ ಬಂದು, ದೇಹ ಸಂಬಂಧಿಯಾಗಿರ್ಪ ಜೀವಂಗೆ ಆ ಪರತತ್ವ ಪ್ರಸಾದವ ಸಾಧ್ಯವಲ್ಲದೆ ಹೋಯಿತ್ತೆಂಬುದೀಗ, ಬಂದವ ಹಸಿದಿರ್ದನೆಂಬ ಶಬ್ದಕ್ಕರ್ಥ. ಜ್ಞಾನಾಗ್ನಿ ಪ್ರಕಾಶದಿಂ, ದಗ್ಧವಾದ ತನು ತಾಪತ್ರಯಾಗ್ನಿಯಿಂ ದಗ್ಧವಾಯಿತ್ತೆಂಬುದೀಗ, ಬೇಯದುದು ಬೆಂದುದು ಎಂಬ ಶಬ್ದಕ್ಕರ್ಥ. ಚಿದಾಗ್ನಿ ಸ್ವರೂಪನಾದ ದೀಕ್ಷಾತ್ರಯಂಗಳಿಂ ಬೆಂದ ತನು, ತಾಪತ್ರಯಾಗ್ನಿಯಿಂ ಬೇಯದೆಂಬುದೀಗ, ಬೆಂದುದು ಬೇಯದೆ ಎಂಬ ಶಬ್ದಕ್ಕರ್ಥ. ಜೀವ ಪರಮರೆಂಬ ಉಭಯದ ಸಂದು ಹಿಂಗಿ, ಜ್ಞಾನಾಗ್ನಿಯಲ್ಲಿ ಸಮರಸ ಪಾಕವಾದ ಆತ್ಮದ್ರವ್ಯವನು ಚೈತನ್ಯ ಸ್ವರೂಪವಾದ ಪ್ರಾಣಲಿಂಗಕ್ಕೆ ಭಕ್ತಿಯಿಂ ಸಮರ್ಪಿಸುತಿರ್ದನೆಂಬುದೀಗ, ಉಭಯವ ಹಿಂಗಿದುದು ಸಂದು ಏಣಾಂಕಧರ ಸೋಮೇಶ್ವರ ಲಿಂಗಕ್ಕೆ ವಾಗರವಾಯಿತ್ತು ಎಂಬ ಶಬ್ದಕ್ಕರ್ಥ.

೧೨

ಎಲೆಯಿಲ್ಲದ ವೃಕ್ಷದಲ್ಲಿ ಹೂವಿಲ್ಲದ ಕಾಯಾಯಿತ್ತು
ಕಾಯಿ ಉದರಿ ಹಣ್ಣು ಬಲಿಯಿತ್ತು
ಕಣ್ಣಿಗೆ ಹಣ್ಣಿಲ್ಲದೆ ಮೆಲಿವುದಕ್ಕಿಲ್ಲ
ಏಣಾಂಕಧರ ಸೋಮೇಶ್ವರಲಿಂಗಕ್ಕೆ ವಾಗರವಾಯಿತ್ತು.

**ಟೀಕು:**— ಇಂದ್ರಿಯಂಗಳುಲುಹಿಲ್ಲದಿರ್ಪ ಶರಣನ ನಿಜಾಂತರಂಗದಲ್ಲಿ ಸದ್ವಿವೇಕ ವೃಕ್ಷವಿರುತ್ತಿಹುದೆಂಬುದೀಗ, ಎಲೆಯಿಲ್ಲದ ವೃಕ್ಷದಲ್ಲಿ ಪಂಚವಿಷ

ಯುಂಗಳ ತೋರಿಕೆಯಿಲ್ಲದೆ ಮುಕ್ತಿಫಳ ತಲೆದೋರಿತ್ತೆಂಬುದೀಗ, ಹೂವಿಲ್ಲದ ಕಾಯಾಯಿತ್ತೆಂಬ ಶಬ್ದಕ್ಕರ್ಥ. ಆ ಮುಕ್ತಿಯ ಫಳವ ಸುಜ್ಞಾನ ಮುಖದಿಂದವ ಗ್ರಹಿಸಿಕೊಂಡಿರ್ಪ ಶರಣಂಗೆ ಇದಿರಿಟ್ಟು ತೋರುವ ಭಿನ್ನ ಫಲ ಪದಂಗಳು ನಷ್ಟ ವಾದವು ಎಂಬುದೀಗ, ಕಾಯಿ ಉದುರಿ ಎಂಬ ಶಬ್ದಕ್ಕರ್ಥ. ಆ ಖಂಡಿತ ಫಲಪದ ನಷ್ಟವಾದ ಶರಣನ ನಿಜಾಂತರಂಗದಲ್ಲಿರ್ಪ ಸದ್ವಿವೇಕ ವೃಕ್ಷದಲ್ಲಿ ಚಿದಾಮೃತ ರಸವನೊಳಕೊಂಡಿರ್ಪ ಮುಕ್ತಿ ಫಳ ಸ್ವರೂಪವಾದ ಚಿದ್ಘನಲಿಂಗ ಘಟ್ಟಿಗೊಂಡಿ ತ್ತೆಂಬುದೀಗ, ಹಣ್ಣು ಬಲಿಯಿತ್ತು ಎಂಬ ಶಬ್ದಕ್ಕರ್ಥ. ಆ ಚಿದಾಮೃತ ಸ್ವರೂ ಪವಾದ, ಆ ಪರಮ ಚಿತ್ಕಲಾಲಿಂಗವು ಶರಣನ ಸುಜ್ಞಾನ ದೃಷ್ಟಿಗೆ ತೋರುತ್ತಿಹು ದಲ್ಲದೆ, ಸಾಕಾರಕ್ಕೆ ತಂದು ಸ್ವೀಕರಿಸಲಿಲ್ಲವೆಂಬುದೀಗ, ಕಣ್ಣಿಗೆ ದಕ್ಕಿಲ್ಲದ ಮೆಲಿವು ದಕ್ಕಿಲ್ಲವೆಂಬ ಶಬ್ದಕ್ಕರ್ಥ. ಆ ಶರಣನು ತನ್ನ ಸುಜ್ಞಾನ ದೃಷ್ಟಿಯಿಂ ತೋರಿದ ಪ ಮಹಾಘನಲಿಂಗಕ್ಕೆ ಚಿತ್ ಸ್ವರೂಪವಾದ ಆತ್ಮ ದ್ರವ್ಯವನು ಸುಜ್ಞಾನಾಗ್ನಿಯಲ್ಲಿ ಸಮರಸ ಪಾಕವಮಾಡಿ ಭಕ್ತಿಯಿಂ ಸಮರ್ಪಿಸುತ್ತಿರ್ದನೆಂಬುದೀಗ, ಏಣಾಂಕ ಧರ ಸೋಮೇಶ್ವರ ಲಿಂಗಕ್ಕೆ ನಾಗರವಾಯಿತ್ತು ಎಂಬ ಶಬ್ದಕ್ಕರ್ಥ.

೧೩

ಏರಿಲ್ಲದ ಕೆರೆಯಲ್ಲಿ, ನೀರಿಲ್ಲದ ತಡಿಯಲ್ಲಿ ನಿಂದು
ಮಡಕೆಯಿಲ್ಲದೆ ಮೊಗವುತ್ತಿರ್ದರು
ಮೊಗವವರ ಸದ್ದುಕೇಳಿ ಒಂದು ಹಾರುವ ಮೊಸಳೆ ಅವರೆಲ್ಲರ
ನುಂಗಿತ್ತು
ಏಣಾಂಕಧರ ಸೋಮೇಶ್ವರ ಲಿಂಗದಲ್ಲಿ ಭಾವವೇನೆಂದರಿಯೆ.

**ಟೀಕು:**— ಶಿವಜ್ಞಾನೋದಯವಾದ ಶರಣಂಗೆ, ದೇಹ ಭಾವ ನಷ್ಟವಾಯಿ ತ್ತೆಂಬುದೀಗ, ಏರಿಲ್ಲದ ಎಂಬ ಶಬ್ದಕ್ಕರ್ಥ. ಆ ದೇಹಭಾವ ನಷ್ಟವಾದ ಶರಣನ ನಿಜಾಂತರಂಗದಲ್ಲಿ ಪರಿಪೂರ್ಣವಾದ ಪರಮಾನಂದ ಜಲವೆ ತುಂಬಿರುತ್ತಿಹುದೆಂಬು ದೀಗ, ಕೆರೆಯಲ್ಲಿ ಎಂಬ ಶಬ್ದಕ್ಕರ್ಥ. ತನ್ನ ನಿಜಾಂತರಂಗದಲ್ಲಿ ಪರಮಾನಂದ ಜಲವ ನೊಳಕೊಂಡಿರ್ಪ ಶರಣನು, ಸಂಚಲರೂಪವಾದ ಮನೋವರ್ತನೆಯು ನಳಿದು, ಶಿವಾಚಾರದಲ್ಲಿ ಸುಸ್ಥಿರವಾಗಿನಿಂದನೆಂಬುದೀಗ, ನೀರಿಲ್ಲದ ತಡಿಯಲ್ಲಿ ನಿಂದು ಎಂಬ ಶಬ್ದಕ್ಕರ್ಥ. ಆ ತನು-ಮನವೆರಡು ನಷ್ಟವಾದ ಶರಣನ ನಿಜಾಂತ ರಂಗದಲ್ಲಿರ್ಪ ಪಂಚಶಕ್ತಿಯರು ಆ ಪರಮಾನಂದ ಜಲವ ಚಿದ್ಘಟದಲ್ಲಿ ತುಂಬಿ ರ್ದರೆಂಬುದೀಗ, ಮೊಗವವರ ಸದ್ದುಕೇಳಿ ಎಂಬ ಶಬ್ದಕ್ಕರ್ಥ. ಆ ಪ್ರಾಣಲಿಂಗ ದಲ್ಲಿ ಅವಿರಳ ಸಂಬಂಧಿಗಳಾಗಿರ್ಪ ಶರಣ ಸತಿಯರ, ಅಂತರಂಗ-ಬಹಿರಂಗ ವೆನ್ನದೆ ಸರ್ವಾಂಗವ ಶಿವಭಾವವ ಗ್ರಹಿಸಿತ್ತೆಂಬುದೀಗ, ಒಂದು ಹಾರುವ ಮೊಸಳೆ ಅವರೆಲ್ಲರನುಂಗಿತ್ತೆಂಬ ಶಬ್ದಕ್ಕರ್ಥ. ಶರಣನ ಸರ್ವಾಂಗವ ಸಮಗ್ರಹಿಸಿಕೊಂಡಿರ್ಪ ಶಿವಭಾವವು ಮಹಾಘನಲಿಂಗದಲ್ಲಿ ನಿವೃತಿಯಾದ ಬಳಿಕ ಆ ಭಾವವಿದಿರಿಟ್ಟು ತೋರಲಿಲ್ಲ ಶರಣನೆಂಬುದೀಗ, ಏಣಾಂಕಧರ ಸೋಮೇಶ್ವರಲಿಂಗದಲ್ಲಿ ಭಾವ ವೇನೆಂದರಿಯೆನೆಂಬ ಶಬ್ದಕ್ಕರ್ಥ.

೧೪

ಹುತ್ತದೊಳಗಣ ಹಾವ ಕೆರೆಯೊಳಗಣ ಕಪ್ಪೆನುಂಗಿತ್ತು
ಸರ್ಪನ ಕಪ್ಪೆಯು ಮಕ್ಷಕ ನುಂಗಿತ್ತು
ಆ ಮಕ್ಷಕನ ಗೃಹಗ್ರಾಹಿ ನುಂಗಿತ್ತು
ಇದೇನು ಚೋದ್ಯವೆಂದರಿಯೆ ಏಣಾಂಕಧರ ಸೋಮೇಶ್ವರಲಿಂಗಾ.

**ಟೀಕು:—** ನವದ್ವಾರ ಯುಕ್ತವಾದ ದೇಹವೆಂಬುದೀಗ, ಹುತ್ತವೆಂಬ ಶಬ್ದಕ್ಕರ್ಥ. ಆ ದೇಹದಲ್ಲಿರ್ಪ ಶಂಕಾವಿಷ ಸಂಬಂಧಿಯಪ್ಪ ಜೀವನೆಂಬುದೀಗ, ಹುತ್ತದೊಳಗಣ ಹಾವ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಸಂಸಾರ ವಿಷಯು ರಸದಲ್ಲಿ ವ್ಯವಹರಿಸುತ್ತಿರ್ಪ ಮಾಯೆ ಯುವಗ್ರಹಿಸಿದಳೆಂಬುದೀಗ, ಕೆರೆಯೊಳಗಣ ಕಪ್ಪೆ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಜೀವನು ಆ ಮಾಯೆಯನು ಸಂಸಾರ ಜುಗುಪ್ಸೆಯುವಗ್ರಹಿಸಿತ್ತೆಂಬುದೀಗ, ಸರ್ಪನ ಕಪ್ಪೆಯು ಮುಕ್ಷುಕ ನುಂಗಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ಸಂಸಾರ ಜುಗುಪ್ಸೆಯನು ದೇಹವನಾಶ್ರಯಿಸಿಕೊಂಡಿರ್ಪ ಇಂದ್ರಿಯಂಗಳೆಂಬ ಶ್ವಾನಂಗಳು, ಅವಗ್ರಹಿಸಿಕೊಂಡಿರ್ಪುದು ಚೋದ್ಯವೆಂದು ಶರಣ ಕಂಡು ಆಶ್ಚರ್ಯಪಡುತ್ತಿರ್ದನೆಂಬುದೀಗ, ಆ ಮುಕ್ಷುಕನ ಗೃಹ ಗ್ರಾಹಿ ನುಂಗಿತ್ತು ಇದೇನು ಚೋದ್ಯವೆಂದರಿಯೆ ಏಣಾಂಕಧರ ಸೋಮೇಶ್ವರ ಲಿಂಗಾ ಎಂಬ ಶಬ್ದಕ್ಕರ್ಥ.

೧೫

ಯೋನಿಯಿಲ್ಲದ ಆಕಳಿನಲ್ಲಿ ಬಾಯಿಲ್ಲದ ಕರು ಹುಟ್ಟಿತ್ತು
ಮೊಲೆಯಿಲ್ಲದ ಹಾಲು ಕುಡಿದು ಒಡಲಿಲ್ಲದೆ ತಿರುಗಾಡುತ್ತದೆ
ಏಣಾಂಕಧರ ಸೋಮೇಶ್ವರಲಿಂಗಾ—
ಇದೇನು ಸೋಜಿಗವೆಂದರಿಯೆ !

**ಟೀಕು:—** ಉತ್ಪತ್ಯರಹಿತವಾದ ಚಿತ್ತೆಂಬ ಸುರಧೇನುವಿನಲ್ಲಿ ಎಂಬುದೀಗ, ಯೋನಿಯಿಲ್ಲದ ಆಕಳಿನಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಮಹಾಜ್ಞಾನ ಚಿತ್ತಿನಲ್ಲಿ ಭಿನ್ನಾಪೇಕ್ಷೆಯಿಲ್ಲದ ಚಿತ್ ಸ್ವರೂಪನಾದ ಶರಣನು ಉದಯಿಸಿದನೆಂಬುದೀಗ, ಬಾಯಿಲ್ಲದ ಕರು ಹುಟ್ಟಿತ್ತೆಂಬ ಶಬ್ದಕ್ಕರ್ಥ. ಆ ಚಿತ್‌ಸ್ವರೂಪನಾದ ಶರಣಂಗೆ ಸಂಸಾರ ವಿಷಯ ರಸವ ತುಂಬಿಕೊಂಡಿರ್ದ ದೇಹೋಹಂ ಮಮತೆಗಳಿಲ್ಲದೆ ಎಂಬುದೀಗ, ಮೊಲೆಯಿಲ್ಲದ ಎಂಬ ಶಬ್ದಕ್ಕರ್ಥ. ಆ ದೇಹಭಾವ ನಷ್ಟವಾದ ಶರಣನು ಶಿವೋಹಂಮೆಂಬ ಚಿದಾಮೃತ ರಸವ ಸದ್ವಿವೇಕ ದ್ವಾರದಿಂ ಸ್ವೀಕರಿಸಿ, ದೇಹಭಾವ ರಹಿತವಾಗಿ ಸತ್ಪಥ ವಿಡಿದಾಚರಿಸುತ್ತಿಹ ಶರಣನೆಂಬುದೀಗ, ಹಾಲ ಕುಡಿದು ಒಡಲಿಲ್ಲದೆ ತಿರುಗಾಡುತ್ತದೆ,' ಏಣಾಂಕಧರ ಸೋಮೇಶ್ವರಲಿಂಗ ಇದೇನು ಸೋಜಿಗವೆಂದರಿಯೆನೆಂಬ ಶಬ್ದಕ್ಕರ್ಥ.

೧೬

ಕಲ್ಲಿನ ಕಂಭದಲ್ಲಿ ಹುಲ್ಲಿನ ಬೇರು ಹುಟ್ಟಿ
ಬೇರು ಕಲ್ಲತಿಂದು, ಕಲ್ಲಿನ ದಳ್ಳುರಿ ಹತ್ತಿಬೇರು ಅಲ್ಲಿಯೆ ಅಡಗಿತ್ತು
ಏಣಾಂಕಧರ ಸೋಮೇಶ್ವರಲಿಂಗ ಇದೇನು ಚೋದ್ಯವೆಂದರಿಯೆ.

**ಟೀಕು:—** ಕಲ್ಲು ಹೃದಯ ಸಂಬಂಧವಾದ ದೇಹದಲ್ಲಿ ಭಾವ ಸ್ತಂಭವಿರುತ್ತಿಹುದೆಂಬುದೀಗ, ಕಲ್ಲಿನ ಕಂಭದಲ್ಲಿ ಎಂಬ ಶಬ್ದಕ್ಕರ್ಥ. ಇಂತಪ್ಪ ಜಡದೇಹದಲ್ಲಿ ವಿಷಯಂಗಳಲ್ಲಿ ಕೂಡಿರ್ಪ ಮೂಲಹಂಕಾರ ಉದಯಿಸಿತ್ತೆಂಬುದೀಗ, ಹುಲ್ಲಿನ ಬೇರು ಹುಟ್ಟಿ ಎಂಬ ಶಬ್ದಕ್ಕರ್ಥ. ಅಂತಪ್ಪ ಮೂಲಹಂಕಾರವು ಜಡರೂಪವಾದ ದೇಹವನವಗ್ರಹಿಸಿಕೊಂಡಿತ್ತೆಂಬುದೀಗ, ಬೇರುಕಲ್ಲ ತಿಂದಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಜಡದೇಹದಲ್ಲಿ ಶಿವಕೃಪೆಯಿಂ ಸುಜ್ಞಾನಾಗ್ನಿ ಪ್ರಭಾವಿಸಲು ಮೂಲ ಹಂಕಾರ ನಷ್ಟವಾಯಿತ್ತೆಂಬುದೀಗ, ಕಲ್ಲಿನ ದಳ್ಳುರಿ ಹತ್ತಿ ಬೇರು ಅಲ್ಲಿಯೆ ಅಡಗಿತ್ತು ಎಂಬ ಶಬ್ದಕ್ಕರ್ಥ. ಸುಜ್ಞಾನಪ್ರಕಾಶದಿಂ ಅಹಂಕಾರವಳಿದು ನಿರಹಂಕಾರ ವನೆಯ್ದಿದು ಆಶ್ಚರ್ಯವೆಂಬುದೀಗ, ಏಣಾಂಕಧರ ಸೋಮೇಶ್ವರಲಿಂಗ ಇದೇನು ಚೋದ್ಯವೆಂದರಿಯೆನೆಂಬ ಶಬ್ದಕ್ಕರ್ಥ.

೧೭

ಕಂಭವಿಲ್ಲದ ಮನೆಯಲ್ಲಿ ಅಂಗವಿಲ್ಲದ ಗರತಿ
ಉರಿಯಿಲ್ಲದ ಹೊಗೆತಾಗಿ ಕಣ್ಣಿಗೆ ಬಾಧೆಯಾಯಿತ್ತು
ವಾನರ ಬೆಂದು ಅಕ್ಕಿಯಾಯಿತ್ತು
ಇದೇನು ಚೋದ್ಯವೆಂದರಿಯೆ ಏಣಾಂಕಧರ ಸೋಮೇಶ್ವರಲಿಂಗದಲ್ಲಿ.

**ಟೀಕು:—** ಸುಜ್ಞಾನೋದಯವಾಗಿ ಶ್ರೀಗುರು ಕಾರುಣ್ಯದಿಂ ಸರ್ವಾಂಗ ಲಿಂಗ ಸಂಬಂಧಿಯಾದಲ್ಲಿ ತಾನೆಂಬ ಭಾವ ಸ್ತಂಭವಿಲ್ಲದೆ ಚಿದಾಲಯವೆ ಮನೆಯಾಗಿರ್ಪನೆಂಬುದೀಗ, ಕಂಭವಿಲ್ಲದ ಮನೆಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಚಿದ್ ಗೃಹದಲ್ಲಿ ದೇಹಭಾವ ರಹಿತವಾದ ಜ್ಞಾನ ಶಕ್ತಿಯಿರುತ್ತಿಹಳೆಂಬುದೀಗ, ಅಂಗವಿಲ್ಲದ ಗರತಿಯೆಂಬ ಶಬ್ದಕ್ಕರ್ಥ. ಅಂತಪ್ಪ ನಿರಂಗ ಸ್ವರೂಪಿಣಿಯಪ್ಪ ಜ್ಞಾನಶಕ್ತಿಯು ತಾಪತ್ರಯಾಗ್ನಿಯ ಹೊದ್ದದೆ ಇರ್ಪ ಚಿದಾಗ್ನಿಯ ತೇಜಸ್ಫುರಣೆ ಭಿನ್ನ ಜ್ಞಾನವ ನವಗ್ರಹಿಸಿತ್ತೆಂಬುದೀಗ, ಉರಿಯಿಲ್ಲದೆ ಹೊಗೆ ತಾಗಿ ಎಂಬ ಶಬ್ದಕ್ಕರ್ಥ. ಅಂತು ಜ್ಞಾನಶಕ್ತಿಯ ಮುಂದೆ ಇದಿರಿಟ್ಟು ತೋರುವ ಭಿನ್ನ ಜ್ಞಾನ ನಿವೃತ್ತಿಯಾಗಲು, ಜ್ಞಾನಾಗ್ನಿಯಲ್ಲಿ ಸಮರಸ ಪಾಕವಾದ ಆತ್ಮ ದ್ರವ್ಯವೆಂಬುದೀಗ, ವಾನರ ಬೆಂದು ಎಂಬ ಶಬ್ದಕ್ಕರ್ಥ. ಆ ಚಿದಾಗ್ನಿಯಲ್ಲಿ ಸಮರಸಪಾಕವಾದ ಜ್ಞಾನ ಕಲಾತ್ಮನು ಸತ್ತೆಂಬ ತಂಡುಲವನವಗ್ರಹಿಸಿ ಆ ಸತ್ತು ರೂಪವಾದ ಪರಬ್ರಹ್ಮವೇ ಯಾಯಿತ್ತೆಂಬುದೀಗ, ವಾನರ ಬೆಂದು ಅಕ್ಕಿಯಾಯಿತ್ತೆಂಬ ಶಬ್ದಕ್ಕರ್ಥ. ಆ ಪರ ಬ್ರಹ್ಮವೆ ಆದ ಭೇದವ ಶರಣ ಸುಜ್ಞಾನ ದೃಷ್ಟಿಯಿಂ ಕಂಡು ಆಶ್ಚರ್ಯ ಪಡು

ತ್ರಿವರ್ಗನೆಂಬುದೀಗ, ಇವೇನು ಚೋದ್ಯವೆಂದರಿಯೆ ಏಣಾಂಕಧರ ಸೋಮೇಶ್ವರ ಲಿಂಗವಲ್ಲಿ ಎಂಬ ಶಬ್ದಕ್ಕರ್ಥ.

೧೮

ಮುತ್ತಿನೊಳಗಣ ಉಡುವಿನ ಕಣ್ಣ
ಬೆಟ್ಟದ ತುದಿಯಲ್ಲಿಹ ಕಾಗೆ ಕುರುಕಿಹೆನೆಂದು
ಹುತ್ತದ ಹಾವು ಬಾಯ ನೋಡುತ್ತದೆ
ಉಡುತಪ್ಪಿ ಹಾವು ಹೊರಬಿತ್ತು
ಹಾವಿನ ಕಣ್ಣ ಕಾಗೆ ಹರಿದು, ಹಾವು ಕಾಗೆಯ ಕಚ್ಚಿ
ಎರಡೂ ಸತ್ತುವು: ಏಣಾಂಕಧರ ಸೋಮೇಶ್ವರಲಿಂಗ.

ಟೀಕು:— ನವದ್ವಾರ ಯುಕ್ತವಾದ ದೇಹವೆಂಬುದೀಗ, ಮುತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹ ಮಧ್ಯದಲ್ಲಿರ್ದ ಆತ್ಮನ ಸುಜ್ಞಾನ ಪ್ರಕಾಶವೆಂಬುದೀಗ, ಮುತ್ತಿನೊಳಗಣ ಉಡುವಿನ ಎಂಬ ಶಬ್ದಕ್ಕರ್ಥ. ಅಹಂಕಾರದಗ್ರದಲ್ಲಿರ್ದ ಅಜ್ಞಾನ ಸ್ವರೂಪವಾದ ಮಾಯೆಯೆಂಬುದೀಗ, ಬೆಟ್ಟದ ತುದಿಯಲ್ಲಿಹ ಕಾಗೆಯೆಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆ ದೇಹ ಮಧ್ಯದಲ್ಲಿರ್ದ ಸುಜ್ಞಾನ ಪ್ರಕಾಶವಂ ಕೆಡಿಸಬೇಕೆಂದು ಇಂದ್ರಿಯ ದ್ವಾರಂಗಳ ಅಜ್ಞಾನ ದೃಷ್ಟಿಯಿಂ ನಿರೀಕ್ಷಿಸುತ್ತಿರುವುದೆಂಬುದೀಗ, ಕುರುಕಿಹೆನೆಂದು ಹುತ್ತದ ಬಾಯ ನೋಡುತ್ತದೆ ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯಾವಶಗತರಾಗಿರ್ದ ಭಿನ್ನ ಜ್ಞಾನಿಗಳು, ದಿವ್ಯ ನಿಜವನರಿಯದೆ ಪರಶಿವ ತತ್ವದ ಲಕ್ಷ್ಯಾನುಸಂಧಾನಂಗಳಿಂ, ಸಾಧಿಸುತ್ತಿರಲಲ್ಲಿ ಸುಜ್ಞಾನಪ್ರಕಾಶವು ನಷ್ಟವಾಗಿ, ಜೀವ ಭಾವ ಭ್ರಾಂತು ದಿವ್ಯ ಮಾಯಾಯುಕ್ತೆಂಬುದೀಗ, ಉಡುತಪ್ಪಿ ಹಾವುಹೊರಬಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ರಂಕಾವಿಷ ಸಂಬಂಧಿಯಪ್ಪ ಜೀವ ನಿದಿರಿಟ್ಟು ಅರಿವುತ್ತಿರ್ದ ಜ್ಞಾನವ ಗ್ರಹಿಸಿದಳೆಂಬುದೀಗ, ಹಾವಿನ ಕಣ್ಣ ಕಾಗೆ ಹರಿದು ಎಂಬ ಶಬ್ದಕ್ಕರ್ಥ ಅಂತು ಇದಿರಿಟ್ಟು ಸಾಧಿಸುತಿರ್ದ ಅರಿವು ನಷ್ಟವಾದಲ್ಲಿ ಆ ಜೀವನು ಮಾಯಾವಶಗತನಾಗಿರ್ದನೆಂಬುದೀಗ, ಹಾವು ಕಾಗೆಯ ಕಚ್ಚಿ ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯಾ ವಶಗತರಪ್ಪ ಜೀವರು ಆ ಮಾಯೆ ಸಹ ಲಯೋ ಧರ್ಮಕ್ಷೀಣವಾದವೆಂಬುದೀಗ, ಎರಡೂ ಸತ್ತುವು ಏಣಾಂಕಧರ ಸೋಮೇಶ್ವರ ಲಿಂಗವೆಂಬ ಶಬ್ದಕ್ಕರ್ಥ.

೧೯

ಮಂಜಿನ ಮನೆಯಲ್ಲಿ ಸಂದೇಹದ ಸತಿ
ಬಂಧು-ಬಾಂಧವರ ಕೊಂದು ತಿನ್ನುತ್ತೈದಾಳೆ
ಆವಳಿಗೆ ಗಂಡನಾಗಲಮ್ಮರು ಏಣಾಂಕಧರ ಸೋಮೇಶ್ವರ
ಲಿಂಗವಲ್ಲದೆ.

ಟೀಕು:— ಅಬ್ರಹ್ಮಾಯು ಮಾತ್ರವಾದ ದೇಹವೆಂಬುದೀಗ, ಮನೆಯಲ್ಲಿ ಎಂಬ ಶಬ್ದಕ್ಕರ್ಥ. ಅಂತು ತೋರಿಯಡಗುತ್ತಿರ್ದ ದೇಹದಲ್ಲಿ ಸಂಕಲ್ಪರೂಪಿಣಿಯಾದ ಮಾಯೆ ಇರುತ್ತಿಹಳೆಂಬುದೀಗ, ಸಂದೇಹದ ಸತಿಯೆಂಬ ಶಬ್ದಕ್ಕರ್ಥ. ಅಂತಪ್ಪ ಕರ್ಮವಾಸನೆಯಿಂದ ಹುಟ್ಟಿ ಹುಟ್ಟಿ ಬರುತ್ತಿಹ ದೇವ-ದಾನವ ಮಾನವರನು ಯಮನ ಸಂಹಾರಕ್ಕೊಳಗು ಮಾಡಿ ಹೋಹವೆಂಬ ಮುಖದ್ವಾರದಿಂದು ಗಿದಗಿದು ಭಕ್ಷಿಸುತ್ತಿಹಳೆಂಬುದೀಗ, ಬಂಧು-ಬಾಂಧವರ ಕೊಂದು ತಿನುತ್ತೈದಾಳೆ ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆಯು ನಿವೃತ್ತಿಯುಮಾದಿ ಜ್ಞಾನ ಶಕ್ತಿ ಸ್ವರೂಪಿನಿಂದಂಗವ ಮಾಡಿಕೊಂಬುದು ಶಿವಜ್ಞಾನ ಸಂಪನ್ನನಾದ ಶರಣಂಗಲ್ಲದೆ ಉಳಿದ ಬ್ರಹ್ಮ-ವಿಷ್ಣ್ವಾದಿದೇವರ್ಕಳಿಗೆ ಅಸಾಧ್ಯವೆಂಬುದೀಗ, ಅವಳಿಗೆ ಗಂಡನಾಗಲಮ್ಮರು ಏಣಾಂಕಧರ ಸೋಮೇಶ್ವರಲಿಂಗವಲ್ಲದೆ ಎಂಬ ಶಬ್ದಕ್ಕರ್ಥ.

೨೦

ಬಿಲದೊಳಗಣ ಇಲಿ ಹುತ್ತದೊಳಗಣ ಹಾವು
ಇತ್ತಂಡವು ಕೂಡಿ ಮನೆಯೊಳಗಣ ಚಿಕ್ಕ ಮರಿ ತಿಂದವು
ಮಿಕ್ಕಡಗ ನರಿತಿಂದು ನಾಯಿಗೆ ಸಿಕ್ಕದೆ ಹೋಯಿತ್ತು
ಎತ್ತಲಿಂದರಿಯೆ ಏಣಾಂಕಧರ ಸೋಮೇಶ್ವರ ಲಿಂಗವು ತಾನೆ ಬಲ್ಲ.

ಟೀಕು:— ಇಂದ್ರಿಯ ದ್ವಾರಂಗಳಲ್ಲಿ ಚರಿಸುತ್ತಿಹ ಮನಸ್ಸೆಂಬುದೀಗ, ಬಿಲದೊಳಗಣ ಇಲಿಯೆಂಬ ಶಬ್ದಕ್ಕರ್ಥ. ನವದ್ವಾರಯುಕ್ತವಾದ ದೇಹದಲ್ಲಿ ಶಂಕಾವಿಷ ಸಂಬಂಧಿಯಪ್ಪ ಜೀವನಿರುತ್ತಿಹನೆಂಬುದೀಗ, ಹುತ್ತದೊಳಗಣ ಹಾವು ಎಂಬ ಶಬ್ದಕ್ಕರ್ಥ. ಅಂತಪ್ಪ ಮನೋಮಧ್ಯದಲ್ಲಿ ಶಿವಜ್ಞಾನ ಪ್ರಕಾಶವಾಗಲು, ಜೀವ-ಭಾವ ಭ್ರಾಂತಿಯಳಿದು ಸಜ್ಜೀವ ಸ್ವರೂಪನಾಗಿ ಎರಡೂ, ಸಮರಸಭಾವದಿಂದೇಕವಾಗಿ ಅಂತರ್ದೇಹದಲ್ಲಿರ್ದ ಮಾಯಾ ಮಹಾಕಾಲನ ನಿಗ್ರಹಿಸಿದವೆಂಬುದೀಗ, ಇತ್ತಂಡವು ಕೂಡಿ ಮನೆಯೊಳಗಣ ಚಿಕ್ಕ ಮರಿ ತಿಂದವು ಎಂಬ ಶಬ್ದಕ್ಕರ್ಥ. ಆ ಮಾಯೆಯಳಿದು ನಿರ್ಮಾಯಸ್ವರೂಪನಾದ ಶರಣನ ಚಿದಹಂಕಾರವನು, ಶಿವೋಹಮೆಂಬ ಸತ್ತ್ವದ ಮನ ನಿಗ್ರಹಿಸಿತ್ತೆಂಬುದೀಗ, ಮಿಕ್ಕಡಗ ನರಿ ತಿಂದು ಎಂಬ ಶಬ್ದಕ್ಕರ್ಥ. ಆ ಚಿದಹಂಕಾರ ಸ್ವರೂಪವಾದ ಭಕ್ತಿಯು ಇಂದ್ರಿಯಂಗಳ ಪ್ರವರ್ತನೆಯುಳ್ಳವರಿಗೆ ಸಾಧ್ಯವಲ್ಲದೆ ಹೋಯಿತ್ತೆಂಬುದೀಗ, ನಾಯಿಗೆ ಸಿಕ್ಕದೆ ಹೋಯಿತ್ತೆಂಬ ಶಬ್ದಕ್ಕರ್ಥ. ಭಕ್ತಿ ಭಾವದಿಂದ ಚಿದಹಂಕಾರವು ಲಿಂಗದಲ್ಲಿ ನಿಷ್ಪತ್ತಿಯಾದ ಶರಣಂಗೆ ಉಭಯ ಭಾವವಿಲ್ಲದೆ ಹೋಯಿತ್ತೆಂಬುದೀಗ, ಎತ್ತಲೆಂದರಿಯೆ ಏಣಾಂಕಧರ ಸೋಮೇಶ್ವರಲಿಂಗವು ತಾನೆ ಬಲ್ಲನೆಂಬ ಶಬ್ದಕ್ಕರ್ಥ.

೨೧

ಮರನಿಲ್ಲದ ಮನೆಯ ಮಾಡಿ ನೆಲನಿಲ್ಲದ ಒಲೆಯಲ್ಲಿ
ಉರಿಯಿಲ್ಲದ ಬೆಂಕಿಯಲ್ಲಿ ಮೊಲೆ-ಯೋನಿ ಇಲ್ಲದವಳು
ಆಡುತ್ತೈದಾಳೆ

ವಾಗರವಾಗದು ಮಡಕೆ ಕರಗಿತ್ತು ಏಣಾಂಕಧರ ಸೋಮೇಶ್ವರ
ಲಿಂಗದಲ್ಲಿ

**ಟೀಕು:—** ಸುಜ್ಞಾನೋದಯವಾಗಿ ದೇಹಭಾವ ನಷ್ಟವಾದ ಶರಣಂಗೆ ಶಿವಾಲಯವೆ ಆಶ್ರಯವಾಯಿತ್ತೆಂಬುದೀಗ, ಮರನಿಲ್ಲದ ಮನೆಯಮಾಡಿ ಎಂಬ ಶಬ್ದಕ್ಕರ್ಥ. ಆ ತನುತ್ರಯಂಗಳು ನಿವೃತ್ತಿಯಾಗಿ, ತ್ಯಾಗಾಂಗ, ಭೋಗಾಂಗ, ಯೋಗಾಂಗ, ವೆಂಬಂಗ ತ್ರಯಗಳಲ್ಲಿ ಎಂಬುದೀಗ, ನೆಲನಿಲ್ಲದ ಒಲೆಯಲ್ಲಿ ಎಂಬ ಶಬ್ದಕ್ಕರ್ಥ. ಭಿನ್ನ ಪ್ರಕಾಶವಿಲ್ಲದ ಜ್ಞಾನಾಗ್ನಿಯಲ್ಲಿ ಎಂಬುದೀಗ, ಉರಿಯಿಲ್ಲದ ಬೆಂಕಿಯಲ್ಲಿ ಎಂಬ ಶಬ್ದಕ್ಕರ್ಥ. ಸಂಸಾರ ವಿಷಯ ರಸವ ತುಂಬಿಕೊಂಡಿರ್ದ, ಅಹಂಕಾರ-ಮಮತೆಗಳೆಂಬ ಮೊಲೆಯು, ಉತ್ಪತ್ಯವೆಂಬ ಯೋನಿಯಿಲ್ಲದ ಜ್ಞಾನಶಕ್ತಿಯೆಂಬುದೀಗ, ಮೊಲೆ ಯೋನಿ ಇಲ್ಲದವಳು ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನಶಕ್ತಿಯು ಚಿದ್ಭಾಂಡವೆಂಬ ಗಡಿಗೆಯಲ್ಲಿ ಸದ್ವಿವೇಕ ಜಲವ ತುಂಬಿ ಆತ್ಮ ದ್ರವ್ಯವ ಅವಿರಳ ಸಂಬಂಧವ ಮಾಡಿ ಆ ಜ್ಞಾನಾಗ್ನಿಯಿಂ ಸಮರಸಪಾಕವ ಮಾಡುತ್ತಿರ್ದಳೆಂಬುದೀಗ, ಅಡುತ್ತೈದಾಳೆಂಬ ಶಬ್ದಕ್ಕರ್ಥ. ಆ ಜ್ಞಾನಾಗ್ನಿಯಲ್ಲಿ ಸಮರಸಪಾಕವಾದ ಚಿದಾತ್ಮನು ಜೀವ ಭಾವಕ್ಕೆ ಬಾರನೆಂಬುದೀಗ, ವಾಗರವಾಗದು ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದಶರಣನ ಚಿದ್ಭಾಂಡವು ಚಿದ್ ಘನಲಿಂಗದಲ್ಲಿ ಏಕಾರ್ಥವಾಯಿತ್ತೆಂಬುದೀಗ, ಮಡಕೆ ಕರಗಿತ್ತು ಏಣಾಂಕಧರ ಸೋಮೇಶ್ವರ ಲಿಂಗದಲ್ಲಿ ಎಂಬ ಶಬ್ದಕ್ಕರ್ಥ.

೨೨

ಬೆಣ್ಣೆ ಕೆಚ್ಚಲನುಂಗಿ, ಕಣ್ಣು ತಲೆಯ ನುಂಗಿ
ತುದಿ ಬೇರಿನಲ್ಲಿ ಅಡಗಿತ್ತು
ಏಣಾಂಕಧರ ಸೋಮೇಶ್ವರಲಿಂಗವೆಂಬುದು ಅಲ್ಲಿಯೆ ಅಡಗಿತ್ತು.

**ಟೀಕು:—** ಶರಣನ ಶಿವಾನು ಭಾವ ದರವು ಅಮೃತ ಕುಂಭ ಸ್ವರೂಪಿ ನಿಂದೊಪ್ಪುತ್ತಿರ್ದ ಇಷ್ಟಲಿಂಗವ ನವಗ್ರಹಿಸಿತ್ತೆಂಬುದೀಗ, ಬೆಣ್ಣೆಕೆಚ್ಚಲನುಂಗಿ ಎಂಬ ಶಬ್ದಕ್ಕರ್ಥ. ಅಂತು ಇಷ್ಟಲಿಂಗ ಸಂಬಂಧಿಯಾಗಿರ್ಪ ಶರಣನ ಸುಜ್ಞಾನ ದೃಷ್ಟಿಯು ಜ್ಞಾನ ಸ್ವರೂಪವಾದ ಪ್ರಾಣಲಿಂಗವ ನವಗ್ರಹಿಸಿತ್ತೆಂಬುದೀಗ, ಕಣ್ಣು ತಲೆಯನುಂಗಿ ಎಂಬ ಶಬ್ದಕ್ಕರ್ಥ. ಇಷ್ಟಪ್ರಾಣ ಏಕಾದ್ವೈತವಾದ ಭಾವಲಿಂಗವು ಶರಣನ ಮೂಲಜ್ಞಾನದಲ್ಲಿ ನಿಷ್ಪತಿಯಾಯಿತ್ತೆಂಬುದೀಗ, ತುದಿ ಬೇರಿನಲ್ಲಿ ಅಡಗಿತ್ತು ಎಂಬ ಶಬ್ದಕ್ಕರ್ಥ. ಶರಣಲಿಂಗವೆಂಬುಭಯ ಭಾವವು ಮೂಲಜ್ಞಾನದಲ್ಲಿ ಪರಮ ಕಾಷ್ಠೆಯ ನೆಯ್ದಿತ್ತೆಂಬುದೀಗ, ಏಣಾಂಕಧರ ಸೋಮೇಶ್ವರ ಲಿಂಗವೆಂಬುದು ಅಲ್ಲಿಯೆ ಅಡಗಿತ್ತು ಎಂಬ ಶಬ್ದಕ್ಕರ್ಥ.

೨೩

ಕಾಣೆ ಕಡವರದ ಕಂಡು ಶ್ರೇಣಿ ಸೇನೆಯ ನುಂಗಿ
ಕಳ್ಳ ಬೆಳ್ಳನ ಒಡಗೂಡಿದ
ಏಣಾಂಕಧರ ಸೋಮೇಶ್ವರ ಲಿಂಗವೆಂಬುದು ಎಲ್ಲಿಯೂ ಇಲ್ಲ.

ಟೀಕು:— ಶರಣನ ಸೂಕ್ಷ್ಮವಾದ ಶಿವಜ್ಞಾನ ಪ್ರಕಾಶವು ಬಳಕಿಗೆ ಬಾರದೆ ಇರ್ದ ಅಖಂಡ ಪರಿಪೂರ್ಣವಾದ ಪರ ಬ್ರಹ್ಮವ ನವಗ್ರಹಿಸಿತ್ತೆಂಬುದೀಗ, ಕಾಣೆ ಕಡವರವ ಕಂಡು ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವ ನವಗ್ರಹಿಸಿರ್ಪ ಶರಣನ ಸರ್ವಾಚಾರ ಸಂಪತ್ತಿನ ಸಮೂಹವು ಸಮಸ್ತ ತತ್ವಕರಣಂಗಳ ನವಗ್ರಹಿಸಿತ್ತೆಂಬುದೀಗ, ಶ್ರೇಣಿ ಸೇನೆಯ ನುಂಗಿ ಎಂಬ ಶಬ್ದಕ್ಕರ್ಥ. ಆ ತತ್ವಕರಣಂಗಳು ನಿವೃತ್ತಿಯಾದಲ್ಲಿ ಪರಮಾರ್ಥ ವಂಚಕನಾಗಿರ್ಪ ಜೀವಂಗೆ, ಶಿವಜ್ಞಾನೋದಯವಾಗಲು ಜೀವ ಭಾವ ನಿವೃತ್ತಿಯಾಗಿ ಪರಮಾತ್ಮನಲ್ಲಿ ಏಕಾರ್ಥವಾದನೆಂಬುದೀಗ, ಕಳ್ಳಬೆಳ್ಳನ ಒಡಗೂಡಿದನೆಂಬ ಶಬ್ದಕ್ಕರ್ಥ. ಜೀವ ಪರಮನೆಂಬುಭಯವಳಿದು ಪರಬ್ರಹ್ಮವಲ್ಲಿ ನಿಸ್ಪತಿಯಾವ ಭೇದವ ಭಿನ್ನವಿಟ್ಟು ನುಡಿಯಲಿಲ್ಲವೆಂಬುದೀಗ, ಏಣಾಂಕಧರ ಸೋಮೇಶ್ವರ ಲಿಂಗವೆಂಬುದು ಎಲ್ಲಿಯೂ ಇಲ್ಲವೆಂಬ ಶಬ್ದಕ್ಕರ್ಥ.

---

## ಅರಿವಿನ ಮಾರಿತಂದೆಯವರ ವಚನಗಳು

೧

ಪೃಥ್ವಿಜ್ಞಾನ, ಅಪ್ಪುಜ್ಞಾನ, ತೇಜಜ್ಞಾನ
ವಾಯುಜ್ಞಾನ, ಆಕಾಶಜ್ಞಾನ, ತಮಜ್ಞಾನ
ಪರಿಪೂರ್ಣಜ್ಞಾನ, ದಿವ್ಯಜ್ಞಾನ ಇಂತಿ ಜ್ಞಾನಂಗಳಲ್ಲಿ ಕಂಡು
ದೇಹ ಧರ್ಮಂಗಳ ನರಿತು, ಪಿಂಡ, ಪ್ರಾಣ, ಅಂಗ-ಲಿಂಗ
ಸಂಯೋಗ ಸಂಪದವಲ್ಲಿ
ನಿಂದು ನೋಡು ಸದಾಶಿವಮೂರ್ತಿಲಿಂಗದಲ್ಲಿ ಕಳೆ ಬೆಳಗುತ್ತದೆ.

ಟೀಕು:— ಪೃಥ್ವಿಜ್ಞಾನ ಭಕ್ತಿಸ್ಥಲ ಸಂಬಂಧವಾಗಿಹುದೆಂಬುದೀಗ, ಪೃಥ್ವಿಜ್ಞಾನವೆಂಬ ಶಬ್ದಕ್ಕರ್ಥ. ಅಪ್ಪುಜ್ಞಾನ ಮಾಹೇಶ್ವರ ಸ್ಥಲ ಸಂಬಂಧವಾಗಿಹುದೆಂಬುದೀಗ, ಅಪ್ಪುಜ್ಞಾನ ವೆಂಬ ಶಬ್ದಕ್ಕರ್ಥ. ತೇಜಜ್ಞಾನ ಪ್ರಸಾದಿಸ್ಥಲ ಸಂಬಂಧವಾಗಿಹುದೆಂಬುದೀಗ, ತೇಜಜ್ಞಾನವೆಂಬ ಶಬ್ದಕ್ಕರ್ಥ. ವಾಯುಜ್ಞಾನ ಪ್ರಾಣಲಿಂಗಿ ಸ್ಥಲ ಸಂಬಂಧವಾಗಿಹುದೆಂಬುದೀಗ, ವಾಯುಜ್ಞಾನವೆಂಬ ಶಬ್ದಕ್ಕರ್ಥ. ಆಕಾಶಜ್ಞಾನ ಶರಣಸ್ಥಲ ಸಂಬಂಧವಾಗಿಹುದೆಂಬುದೀಗ, ಆಕಾಶಜ್ಞಾನವೆಂಬ ಶಬ್ದಕ್ಕರ್ಥ. ತಮಜ್ಞಾನ ಐಕ್ಯಸ್ಥಲ ಸಂಬಂಧವಾಗಿಹುದೆಂಬುದೀಗ, ತಮಜ್ಞಾನವೆಂಬ ಶಬ್ದಕ್ಕರ್ಥ. ಇಂತಪ್ಪ ಸ್ಥಲ ಕುಳಾದಿಗಳನೊಳಕೊಂಡು ಸರ್ವಾಚಾರದಲ್ಲಿ ಸಂಬಂಧವಾಗಿಹುದೆಂಬುದೀಗ, ಪರಿಪೂರ್ಣಜ್ಞಾನವೆಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗಾಂಗ ಸ್ಥಲಂಗಳ, ಭೇದಾದಿ ಭೇದಂಗಳ ನರಹಿಸಿ ಕೊಳುತ್ತಿಹುದೆಂಬುದೀಗ, ದಿವ್ಯಜ್ಞಾನವೆಂಬ ಶಬ್ದಕ್ಕರ್ಥ. ಇಂತಪ್ಪ ಪರಿಪೂರ್ಣ ಜ್ಞಾನಂಗಳಿಂ ಸ್ಥಲಸಂಬಂಧಂಗಳ ನರಿದು ಎಂಬುದೀಗ, ದೇಹಧರ್ಮವ ನರಿದು ಎಂಬ ಶಬ್ದ

ಕ್ಕರ್ಥ. ಅಂತಪ್ಪ ಶರಣನ ದೇಹವಳಿದು ಜ್ಞಾನ ಕಾಯ ಸ್ವರೂಪವಾಯಿತ್ತೆಂಬು ದೀಗ, ಪಿಂಡವೆಂಬ ಶಬ್ದಕ್ಕರ್ಥ. ಆ ಶರಣನ ಪ್ರಾಣವಳಿದು ಲಿಂಗ ಪ್ರಾಣವಾಯಿ ತ್ತೆಂಬುದೀಗ, ಪ್ರಾಣವೆಂಬ ಶಬ್ದಕ್ಕರ್ಥ. ಆ ಶರಣನ ಭಕ್ತ್ಯಾ ದ್ಯೈಕ್ಯಾಂತವಾದ ಷಡ್ವಿಧ ಚಿದಂಗಗಳೆಂಬುದೀಗ, ಅಂಗವೆಂಬ ಶಬ್ದಕ್ಕರ್ಥ. ಆ ಚಿದಂಗಗಳಲ್ಲಿ ಸಂಬಂಧವಾದ ಆಚಾರಾದಿ ಮಹಾಲಿಂಗ ಗಳೆಂಬುದೀಗ, ಲಿಂಗವೆಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗವೆರಡರ ಕೂಟವೆ ಅಸಿಪದವಾದ ಕಾರಣ, ಸಂಯೋಗವೆಂಬ ಶಬ್ದಕ್ಕರ್ಥ. ಈ ಲಿಂಗಾಂಗ ಸಮರಸ ಕೂಟದ ಮಹದೈಶ್ವದಲ್ಲಿ ಸ್ವಸ್ಥಿರ ಭಾವಿ ಯಾಗಿ ನಿಂದು ತನ್ನ ನಿಜ ಸ್ವರೂಪ ಅವಿರಳ ಜ್ಞಾನದೃಕ್ಕಿಂ ನಿರೀಕ್ಷಿಸುತ್ತಿರ್ದ ಶರಣ ನೆಂಬುದೀಗ, ಸಂಪದದಲ್ಲಿ ನಿಂದು ನೋಡು ಸದಾಶಿವ ಮೂರ್ತಿಲಿಂಗದಲ್ಲಿ ಕಳೆ ಬೆಳಗುತ್ತದೆ ಎಂಬ ಶಬ್ದಕ್ಕರ್ಥ.

೨

ಪೃಥ್ವಿಜ್ಞಾನ ಪಿಪಿಲಿಕ ಸಂಬಂಧವಾಗಿಹುದು.
ಅಪ್ಪುಜ್ಞಾನ ಮರ್ಕಟ ಸಂಬಂಧವಾಗಿಹುದು.
ತೇಜಜ್ಞಾನ ಅಗ್ನಿ ಸಂಬಂಧವಾಗಿಹುದು.
ವಾಯುಜ್ಞಾನ ಗಂಧ ಸಂಬಂಧವಾಗಿಹುದು.
ಆಕಾಶಜ್ಞಾನ ವಿಹಂಗ ಸಂಬಂಧವಾಗಿಹುದು.
ತಮಜ್ಞಾನ ಮಾರ್ಜಾಲ ಸಂಬಂಧವಾಗಿಹುದು.
ಪರಿಪೂರ್ಣಜ್ಞಾನ ಕೂರ್ಮ ಸಂಬಂಧವಾಗಿಹುದು.
ದಿವ್ಯಜ್ಞಾನ ಸರ್ವಮಯನಾಗಿ ನಾನಾ ಭೇದಂಗಳ ಭೇದಿಸುತ್ತಿಹುದು
ಇಂತಿ ಮನಜ್ಞಾನ ಭರಿತನಾಗಿ ದಶಗುಣ ಮರ್ಕಟವ ಮೆಟ್ಟಿನಿಂದು ಬಟ್ಟಬಯಲ ತುಟ್ಟ ತುದಿಯ
ಸದಾಶಿವ ಮೂರ್ತಿಲಿಂಗದ ಕಳೆ ಕಳಕಳಿಸುತ್ತದೆ ಚಿತ್ತದ ನೆನಹಿನಲ್ಲಿ.

ಟೀಕು:— ಪೃಥ್ವಿಜ್ಞಾನ ನೂರೊಂದು ಸ್ಥಲದಾಚರಣೆಯಲ್ಲಿ ಕೂಡಿಹು ದೆಂಬುದೀಗ, ಪೃಥ್ವಿಜ್ಞಾನ ಪಿಪಿಲಿಕ ಸಂಬಂಧವಾಗಿಹುದೆಂಬ ಶಬ್ದಕ್ಕರ್ಥ. ಅಪ್ಪುಜ್ಞಾನ ಷಡ್ವಿಧ ಲಿಂಗಾಂಗ ಸ್ಥಲವಾಚರಣೆಯ ನೊಳಕೊಂಡಿಹುದೆಂಬು ದೀಗ, ಅಪ್ಪುಜ್ಞಾನ ಮರ್ಕಟ ಸಂಬಂಧವಾಗಿಹುದೆಂಬ ಶಬ್ದಕ್ಕರ್ಥ. ತೇಜಜ್ಞಾನ ಚಿದಾಗ್ನಿ ಸ್ವರೂಪವಾಗಿ ಪ್ರಕಾಶಿಸುತ್ತಿಹುದೆಂಬುದೀಗ, ತೇಜಜ್ಞಾನ ಅಗ್ನಿ ಸಂಬಂಧವಾಗಿಹುದೆಂಬ ಶಬ್ದಕ್ಕರ್ಥ. ವಾಯುಜ್ಞಾನ ಸದ್ವಾಸನಾ ಸ್ವರೂಪವಾಗಿ ಹುದೆಂಬುದೀಗ, ವಾಯುಜ್ಞಾನ ಗಂಧ ಸಂಬಂಧವಾಗಿಹುದೆಂಬ ಶಬ್ದಕ್ಕರ್ಥ. ಆಕಾಶಜ್ಞಾನ ಅಬೇಧ್ಯವಾದ ಪರಶಿವತತ್ವವ ನವಗ್ರಹಿಸಿ ಹೊರೆಯಿಲ್ಲದೆ ಒಂದೆ ಯಾಗಿಹುದೆಂಬುದೀಗ, ಆಕಾಶಜ್ಞಾನ ವಿಹಂಗ ಸಂಬಂಧವಾಗಿಹುದೆಂಬ ಶಬ್ದ

ಕ್ಕರ್ಥ. ತಮಜ್ಞಾನ ಪರಶಿವ ತತ್ವವನರಿಯಬೇಕೆಂಬ ಏಕಾಗ್ರಚಿತ್ತದಲ್ಲಿರುತ್ತಿಹುದೆಂಬುದೀಗ, ತಮ ಜ್ಞಾನ ಮಾರ್ಜಾಲ ಸಂಬಂಧವಾಗಿಹುದೆಂಬ ಶಬ್ದಕ್ಕರ್ಥ. ಪರಿಪೂರ್ಣಜ್ಞಾನ ರೂಪು-ರುಚಿ-ತೃಪ್ತಿ ಮೊದಲಾದ ಸಕಲಪದಾರ್ಥವ ಲಿಂಗವೆ ಕೈಕೊಂಡು ಭೋಗಿಸಿ ತೃಪ್ತಿಯನೆಯ್ದುತ್ತೆಂಬ ನೆನಹಿನಲ್ಲಿರುತ್ತಿಹುದೆಂಬುದೀಗ, ಪರಿಪೂರ್ಣಜ್ಞಾನಕೂರ್ಮ ಸಂಬಂಧವಾಗಿಹುದೆಂಬ ಶಬ್ದಕ್ಕರ್ಥ. ಲಿಂಗಾಂಗ ಸ್ಥಲಮೊದಲಾದ ಸದಾಚಾರ ಸಂಪತ್ತನು ಭೇದಿಸಿಅರಿವುತ್ತಿಹುದೆಂಬುದೀಗ, ದಿವ್ಯಜ್ಞಾನ ಸರ್ವಮಯವಾಗಿ ನಾನಾ ಭೇದಂಗಳ ಭೇದಿಸುತ್ತಿಹುದೆಂಬ ಶಬ್ದಕ್ಕರ್ಥ. ಶರಣನ ವುನ್ಮನಿ ಸ್ವರೂಪವಾದ ಮನೋಮಧ್ಯದಲ್ಲಿ ಪರಿಪೂರ್ಣಜ್ಞಾನ ಸಮರಸವಾಯಿತ್ತೆಂಬುದೀಗ, ಇಂತಿ ಮನಜ್ಞಾನ ಭರಿತನಾಗಿ ಎಂಬ ಶಬ್ದಕ್ಕರ್ಥ. ಆ ಶರಣ ದಶವಾಯು ವಿಕಾರದಲ್ಲಿ ಚರಿಸುತ್ತಿರ್ದ ಮನೋವರ್ತನೆಯ ಸತ್ಕ್ರಿಯಾ ಚರಣದಿಂದ ಧ್ವಂಸವ ಮಾಡಿದನೆಂಬುದೀಗ, ದಶಗುಣಮರ್ಕಟವ ಮೆಟ್ಟಿನಿಂದು ಎಂಬ ಶಬ್ದಕ್ಕರ್ಥ. ಚಿದಾಕಾಶ ಮಧ್ಯದಲ್ಲಿರ್ದ ಚಿದ್ ಘನಲಿಂಗವು ತುರ್ಯಾವಸ್ಥೆಯ ಭಾವದಲ್ಲಿರ್ದ ಶರಣನ ವುನ್ಮನಿ ಸ್ವರೂಪವಾದ ಮನೋಮಧ್ಯದಲ್ಲಿ ತೊಳಗಿ ಬೆಳಗುತ್ತಿಹುದೆಂಬುದೀಗ, ಬಟ್ಟಬಯಲ ತುಟ್ಟತುದಿಯ ಸದಾ ಶಿವ ಮೂರ್ತಿಲಿಂಗದಕಳೆ ಕಳಿಕಳಿಸುತ್ತದೆ, ಚಿತ್ತದ ನೆನಹಿನಲ್ಲಿ ಎಂಬ ಶಬ್ದಕ್ಕರ್ಥ.

೩

ಉರಿಯ ಮಡುವಿನಲ್ಲಿ ಒಂದು ಜಲದ ಕುಸುಮ ಹುಟ್ಟಿ
ಹರಿಸುರ ಬ್ರಹ್ಮಾದಿಗಳಿಗೆ ವಶವಲ್ಲ ನೋಡಾ !
ಆ ಕುಸುಮದ ಎಸಳಿನ ಕೂಟಸ್ಥಲದಲ್ಲಿ ಕಪ್ಪು
ನಡು ಮಧ್ಯದಲ್ಲಿ ತಮ ಕಪೋತ ವರ್ಣ
ಅದರ ತುದಿಯಲ್ಲಿ ನಾನಾ ವರ್ಣದ ಛಾಯೆ ಕೂಡಿ ಅರಳುತ್ತಿಹುದು
ಆ ಹೂವ ಒಂದೇ ಭೇದದಲ್ಲಿ ಕಿತ್ತು
ಸದಾಶಿವ ಮೂರ್ತಿ ಲಿಂಗದ ಪಾದದಲ್ಲಿರಿಸಲಾಗಿ
ಪಾದಕ್ಕೆ ಹೊರಗೆಂದು ಮುಕುಟದ ಮೇಲೇರಿತ್ತು.
ಇದ ಬಲ್ಲವರಾರು ಚೋದ್ಯವ ಹೇಳಿರಣ್ಣಾ !

**ಟೀಕು:** — ತಾಪತ್ರಯಾಗ್ನಿ ಸಂಬಂಧವಾದ ಸಂಸಾರ ವಿಷಯ ರಸದಷ್ಟಾತವ ಕಾಣಬಾರದೆಂಬುದೀಗ, ಉರಿಯ ಮಡುವಿನಲ್ಲಿ ಎಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ರಸದ ಮಧ್ಯದಲ್ಲಿ ಸಂಚಲರೂಪವಾದ ಮನೋಕುಸುಮ ಹುಟ್ಟಿತ್ತೆಂಬುದೀಗ, ಒಂದು ಜಲದ ಕುಸುಮ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಮನೋಪ್ರಕೃತಿಯ ನಿಲಿಸಿಹನೆಂದೊಡೆ ಬ್ರಹ್ಮ-ವಿಷ್ಣು ಮೊದಲಾದ ಸಮಸ್ತದೇವತೆಗಳಿಗೆ ಅಸಾಧ್ಯವೆಂಬುದೀಗ, ಹರಿ ಸುರ ಬ್ರಹ್ಮಾದಿಗಳಿಗೆ ವಶವಲ್ಲ ನೋಡಾ ಎಂಬ ಶಬ್ದಕ್ಕರ್ಥ. ಆ ಮನೋ ಕುಸುಮದ ಎಸಳೆಂದೊಡೆ ಇಂದ್ರಿಯಂಗಳು ಅಂತಪ್ಪ

ಇಂದ್ರಿಯಂಗಳನೊಳಕೊಂಡಿರ್ಪ ಸ್ಥೂಲ ದೇಹದಲ್ಲಿ ಅಜ್ಞಾನಮಯವಾಗಿಹು ದೆಂಬುದೀಗ, ಆ ಕುಸುಮದ ಎಸಳಿನ ಕೂಟಸ್ಥಲದಲ್ಲಿ ಕಪ್ಪು ಎಂಬ ಶಬ್ದಕ್ಕರ್ಥ. ಆ ಮನಸ್ಸು ಸೂಕ್ಷ್ಮದೇಹದಲ್ಲಿ ಮರವೆಯನೆಯ್ದಿ ಷಡ್ವರ್ಣಸ್ವರೂಪವಾಗಿಹು ದೆಂಬುದೀಗ, ನಡು ಮಧ್ಯದಲ್ಲಿ ತಮ ಕಪೋತ ವರ್ಣವೆಂಬ ಶಬ್ದಕ್ಕರ್ಥ. ಕಾರಣ ದೇಹದಗ್ರದಲ್ಲಿ ಆ ಮನಸ್ಸು ಸಕಲ ಕರಣಂಗಳ ವ್ಯವಹಾರದಲ್ಲಿ ಕೂಡಿ ಪ್ರಪಂಚಿ ನಲ್ಲಿ ಲಯವಾಗುತ್ತಿಹುದೆಂಬುದೀಗ, ಅದರ ತುದಿಯಲ್ಲಿ ನಾನಾ ವರ್ಣದ ಛಾಯೆ ಕೂಡಿ ಅಳಿವುತ್ತಿಹುದೆಂಬ ಶಬ್ದಕ್ಕರ್ಥ. ಅಂತಪ್ಪ ಮನೋ ಮಧ್ಯದಲ್ಲಿ ಶಿವಕೃಪೆ ಯಿಂದ ಸುಜ್ಞಾನ ಪ್ರಕಾಶವಾಗಲು ಅಂತಪ್ಪ ಸುಜ್ಞಾನ ಪ್ರಕಾಶದಿಂ ಮನೋ ವರ್ತನೆಯಳಿದು ಸದ್ವಾಸನಾ ಸ್ವರೂಪವನೆಯ್ದಲು ಆ ಪುಷ್ಪವ ಕೃತ ನಿಶ್ಚಯ ಹಸ್ತದಲ್ಲಿ ಪಿಡಿದು ಸತ್ಕ್ರಿಯಾ ಸ್ವರೂಪವಾದ ಇಷ್ಟಲಿಂಗದಲ್ಲಿ ಸಮರ್ಪಿಸುತ್ತಿರ್ದ ನೆಂಬುದೀಗ, ಆ ಹೂವ ಒಂದೇ ಭೇದದಲ್ಲಿ ಕಿತ್ತು ಸದಾಶಿವ ಮೂರ್ತಿಲಿಂಗದ ಪಾದದಲ್ಲಿರಿಸಲಾಗಿ ಎಂಬ ಶಬ್ದಕ್ಕರ್ಥ. ಆ ಇಷ್ಟಲಿಂಗದಲ್ಲಿ ಸಂಬಂಧವಾದ ಪುಷ್ಪನಿ ತತ್ವ ಸ್ವರೂಪವಾದ ಮನಸ್ಸು ಚತುರ್ವಿಧ ಖಂಡಿತ ಪದವ ಮುಟ್ಟದೆ ಜ್ಞಾನ ಸ್ವರೂಪವಾದ ಪರಶಿವ ತತ್ವದಲ್ಲಿ ನಿಷ್ಪತ್ತಿಯಾಯಿತ್ತೆಂಬುದೀಗ, ಪದಕ್ಕೆ ಹೊರ ಗೆಂದು ಮಕುಟದ ಮೇಲೇರಿತ್ತು ಇದ ಬಲ್ಲವರಾರು ಚೋದ್ಯವ ಹೇಳಿರಣ್ಣಾ ಎಂಬ ಶಬ್ದಕ್ಕರ್ಥ.

೪

ಊರ ಹೊರಗಣ ಹೊಲತಿಯ ಹಾರವನೆರದು ತನ್ನ
ಸೂತಕ ಹೋಯಿತ್ತು
ಹೊಲತಿಯ ಕುಲ ಹರಿದು ಹಾರುವ ಹೊಲೆಯನಾಗಿ
ಸದಾಶಿವ ಮೂರ್ತಿ ಲಿಂಗಕ್ಕೊಳಗಾದ.

**ಟೀಕು:**— ದೇಹಭಾವಕ್ಕೆ ಹೊರಗಾಗಿರ್ಪ ನಿಷ್ಕಲ ಚಿಚ್ಛಕ್ತಿಯನೆಂಬುದೀಗ, ಊರ ಹೊರಗಣ ಹೊಲತಿಯ ಎಂಬ ಶಬ್ದಕ್ಕರ್ಥ. ಪರಧನ ಪರಸ್ತ್ರೀಯರ ಬಯ ಸುತ್ತಿರ್ದ ಜೀವಂಗೆಶಿವಕೃಪೆಯನ್ನು ಸುಜ್ಞಾನೋದಯವಾಗಿ ಗುರೋಪಾವಸ್ಥೆಯ ಮಾಡಲು ಆ ನಿಷ್ಕಲ ಚಿಚ್ಛಕ್ತಿಯ ಗುರು ಸ್ವರೂಪವಾಗಿ ಬಂದು ದೀಕ್ಷತ್ರಯಂಗ ಳಿಂದ ಲಿಂಗ ಸಂಬಂಧವ ಮಾಡಿದಲ್ಲಿ ಆ ಶ್ರೀಗುರು ತತ್ವದಲ್ಲಿ ಶಿಷ್ಯನ ವಿರಳ ಸಂಗವ ಮಾಡಲು ತನ್ನ ಮುನ್ನಿನ ಜೀವಭಾವ ಭ್ರಾಂತಿನ ಸೂತಕ ನಿವೃತ್ತಿಯಾಯಿ ತ್ತೆಂಬುದೀಗ, ಹಾರುವನೆಂದು ತನ್ನ ಸೂತಕ ಹೋಯಿತ್ತೆಂಬ ಶಬ್ದಕ್ಕರ್ಥ. ಆ ಚಿಚ್ಛಕ್ತಿ ಸ್ವರೂಪವಾದ ಶ್ರೀಗುರು ತಾನೆ ಪರಬ್ರಹ್ಮವೆಂಬ ಚಿದಹಂಕಾರವ ನಿವೃತ್ತಿಯ ಮಾಡಿದನೆಂಬುದೀಗ, ಹೊಲತಿಯ ಕುಲಹರಿದು ಎಂಬ ಶಬ್ದಕ್ಕರ್ಥ. ಶಿವಾಪೇಕ್ಷೆಯ ಮುಂದುಗೊಂಡಿರ್ಪ ಶರಣನು ಸರ್ವ ಸೂತಕ ರಹಿತವಾದ ಪರ ಬ್ರಹ್ಮವೆಯಾದ ನೆಂಬುದೀಗ ಹಾರುವ ಹೊಲೆಯನಾಗಿ ಸದಾಶಿವ ಮೂರ್ತಿಲಿಂಗ ಕ್ಕೊಳಗಾದನೆಂಬ ಶಬ್ದಕ್ಕರ್ಥ.

೫

ಧರೆಯು ಹಾವು ಆಕಾಶದೊಳಗಣ ಕಪ್ಪೆ
ಒಡಗೂಡಿ ವ್ರೊರುಮೆಯಾಗಿ,
ಹಾವು ಗುರುಡವ ನುಂಗಿ, ಕಪ್ಪೆ ಹಿಡಿದ ಜೋಗಿಯ ನುಂಗಿ
ಮತ್ತೆ ಕಪ್ಪೆಗೆ ಸರ್ಪಗೆ ವಿರೋಧವಾಗಿ
ಕಪ್ಪೆ ಜೋಗಿಯ ನುಗುಳಿ ಸರ್ಪನ ನುಂಗಿತ್ತು.
ಕಪ್ಪೆಯು ವಿಷತಾಗಿ ಜೋಗಿ ಮತ್ತನಾದ
ಇಂತಿ ಭೇದದಿಂದರಿವು ತಾನೆ ಸದಾಶಿವ ಮೂರ್ತಿ ಲಿಂಗವು
ತಾನು ತಾನೆ

**ಟೀಕು:—** ಪಂಚಭೂತಾಶ್ರಯವಾದ ದೇಹದಲ್ಲಿರ್ಪ ಮನಸ್ಸೆಂಬುದೀಗ, ಧರೆಯು ಹಾವು ಎಂಬ ಶಬ್ದಕ್ಕರ್ಥ. ಆತ್ಮಾಕಾಶದಲ್ಲಿಪ್ಪ ಅಜ್ಞಾನ ಸ್ವರೂಪಿಣಿಯಾದ ಮಾಯೆಯೆಂಬುದೀಗ, ಆಕಾಶದೊಳಗಣ ಕಪ್ಪೆ ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆ ಎರಡು ದೇಹದಲ್ಲಿ ಒಂದೇ ಸ್ವರೂಪಿನಿಂದಿರುತ್ತಿಹವೆಂಬುದೀಗ, ಒಡಗೂಡಿ ವ್ರೊರುಮೆಯಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಮನಸ್ಸ ಆಹ್ವಾನಿಸಿ ಹಿಡಿಯಬೇಕೆಂಬ ಭಿನ್ನ ಜ್ಞಾನಿಗಳ ಸರ್ವಾಂಗವನು ಸಂಕಲ್ಪ ಭಾವದಿಂದ ವಗ್ರಹಿಸಿತ್ತೆಂಬುದೀಗ, ಹಾವು ಗರುಡವ ನುಂಗಿ ಎಂಬ ಶಬ್ದಕ್ಕರ್ಥ. ಆ ಮಾಯೆ ಮನವನಾಹ್ವಾನಿಸಿ ಹಿಡಿಯಬೇಕೆಂಬಖಂಡಿತ ಜ್ಞಾನಿಗಳ ತಾನೆ ಅವಗ್ರಹಿಸಿತ್ತೆಂಬುದೀಗ, ಕಪ್ಪೆ ಹಿಡಿವ ಜೋಗಿಯ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತಪ್ಪಪಿಂಡದಲ್ಲಿ ಸುಜ್ಞಾನೋದಯವಾಗಲು, ಆ ಮಾಯೆಯಳಿದು ನಿವೃತ್ತಿಮುಖದಿಂ ಚಿದ್ಬಿಂದು ಸ್ವರೂಪವನೆಯ್ದಲು, ಆ ಚಿದ್ಬಿಂದುವೇ ಪ್ರಭಾವಿಸಿ ಮನೋವರ್ತನೆಯ ನಿವೃತ್ತಿಮಾಡಿತ್ತೆಂಬುದೀಗ, ಮತ್ತೆ ಕಪ್ಪೆಗೆ ಸರ್ಪಂಗೆ ವಿರೋಧವಾಗಿ ಎಂಬ ಶಬ್ದಕ್ಕರ್ಥ. ಆ ಪರಮ ಶಾಂತಿಯ ಚಿದ್ಬಿಂದು ಶಂಕಾ ವಿಷ ಸಂಬಂಧಯಪ್ಪ ಜೀವನ ಪ್ರಪಂಚನಿಂ ಬೇರ್ಪಡಿಸಿತ್ತೆಂಬುದೀಗ, ಕಪ್ಪೆ ಜೋಗಿಯ ನುಗುಳಿ ಎಂಬ ಶಬ್ದಕ್ಕರ್ಥ. ಆ ಜೀವಭಾವ ಪ್ರಪಂಚ ನಿವೃತ್ತಿ ಮಾಡಿದ ಚಿದ್ಬಿಂದು ಪ್ರಕಾಶವು ಮನವನವಗ್ರಹಿಸಿತ್ತೆಂಬುದೀಗ, ಸರ್ಪನ ನುಂಗಿತ್ತೆಂಬ ಶಬ್ದಕ್ಕರ್ಥ. ಆ ಪರಮ ಶಾಂತಿಯ ಚಿದ್ಬಿಂದುವಿನಲ್ಲಿ ಚಿದಾಮೃತ ರಸವೆ ಶ್ರೀ ಗುರು ಕಾರುಣ್ಯದಿಂ ಸತ್ಕ್ರಿಯಾಲಿಂಗವಾಗಿ ಬಂದು ಶರಣನ ಸರ್ವಾಂಗದಲ್ಲಿ ದಷ್ಟವಾಗಲು ಆ ಸಜ್ಜೀವನು, ಚಿದ್ಘನಲಿಂಗದಲ್ಲಿ ಪರಮ ಕಾಷ್ಟಿಯಾದನೆಂಬುದೀಗ, ಕಪ್ಪೆಯು ವಿಷತಾಗಿ ಜೋಗಿ ಮತ್ತನಾದ ಇಂತಿ ಭೇದದಿಂದರಿವು ತಾನೆ ಸದಾಶಿವ ಮೂರ್ತಿಲಿಂಗವು ತಾನು ತಾನೆ ಎಂಬ ಶಬ್ದಕ್ಕರ್ಥ.

೬

ಕೊಂಬಿನ ಮೇಲಣ ಹಕ್ಕಿಯು ಆಕಾಶದ ಮೇಲಣ
ಗಿಡುಗ ಹಿಡಿಯಿತು.

ಕೊಂಬು ಹಕ್ಕಿಯು ಕೊಡದೆ ಗಿಡುಗನ ಕಡಿಯಿತ್ತು.
ಹಕ್ಕಿಯು ಗಿಡುಗನ ಕೂಡೆ ಕಡಿವ ಕೊಂಬ ಚಿಟ್ಟೆಯು ಮರಿ
ನುಂಗಿತ್ತು
ಸದಾಶಿವ ಮೂರ್ತಿ ಲಿಂಗವ ನರಿತು

**ಟೀಕು:—** ಶಿವ ಜ್ಞಾನೋದಯವಾದ ಶರಣನ ಶಿವ ಭಾವದಲ್ಲಿ ಸನ್ನಿಹಿತವಾಗಿರ್ಪ ಪರಮಾತ್ಮನೆಂಬುದೀಗ, ಕೊಂಬಿನ ಮ್ಯಾಲಣ ಹಕ್ಕಿಯೆಂಬ ಶಬ್ದಕ್ಕರ್ಥ. ಆತ್ಮಾಕಾಶದಲ್ಲಿರ್ಪಮಾಯೆಯು ಆ ಪರಮಾತ್ಮನ ನವಗ್ರಹಿಸಿತ್ತೆಂಬುದೀಗ, ಆಕಾಶದ ಮೇಲಣ ಗಿಡುಗ ಹಿಡಿಯಿತ್ತೆಂಬ ಶಬ್ದಕ್ಕರ್ಥ. ಆ ಶಿವಭಾವವು ಪರಮಾತ್ಮನೆಂಬ ಪಕ್ಷಿಯು ಮಾಯೆಗೆ ಕೊಡದೆ ಎಂಬುದೀಗ, ಕೊಂಬು ಹಕ್ಕಿಯು ಕೊಡದೆ ಎಂಬ ಶಬ್ದಕ್ಕರ್ಥ. ಆ ಶಿವಭಾವವು ಮಾಯೆಯು ಸಂಹರಿಸಿತ್ತೆಂಬುದೀಗ, ಗಿಡುಗನ ಕಡಿಯಿತ್ತೆಂಬ ಶಬ್ದಕ್ಕರ್ಥ. ಆ ಪರಮಾತ್ಮನೆಂಬ ಪಕ್ಷಿಯನು ಮಾಯೆಯೆಂಬ ಗಿಡುಗನನು ಆ ಸಕಲ ಪ್ರಪಂಚು ನಿವೃತ್ತಿಯ ಮಾಡುವ ಶಿವಭಾವವನು ಸೂಕ್ಷ್ಮವಾದ ಚಿತ್ತಿನಿಂದುದಯಿಸಿದ ಸುಜ್ಞಾನ ಪ್ರಕಾಶವನವಗ್ರಹಿಸಿತ್ತೆಂಬುದೀಗ, ಹಕ್ಕಿಯಾಗಿ ಗಿಡುಗನ ಕೊಡೆ ಕಡಿವ ಕೊಂಬ ಚಿಟ್ಟೆಯು ಮರಿ ನುಂಗಿತ್ತು ಸದಾಶಿವ ಮೂರ್ತಿ ಲಿಂಗವ ನರೆಯಿತ್ತೆಂಬ ಶಬ್ದಕ್ಕರ್ಥ.

೭

ಮೂರು ಲೋಕವನೆಲ್ಲವ, ಗಾಳಿಯಲ್ಲಿ ತೂರಿ ಬಂದ
ಗುಂಗುರು ನುಂಗಿತ್ತು
ಮೂರು ಲೋಕದ ರಾಯರು ಕೂಡಿ
ಆ ಗುಂಗುರು ಕೊಂದಿಹೆನೆಂದರೆ ಆರಿಗೂ ಅಸಾಧ್ಯ
ಆ ಗುಂಗುರು ಬಾಯಲ್ಲಿ ಕತ್ತರಿ ವಾಣಿ
ಕಾಲಿನಲ್ಲಿ ಬಂಡೆಯು, ಅಂಡದಲ್ಲಿ ಕಾಳಕೂಟ
ಪಿಂಡವೆಲ್ಲವೂ ಅಸಿಯು ಒಳಗ ಅಮುಕೊಂದು ನಿಂದವಂಗಲ್ಲದೆ
ಸದಾಶಿವ ಮೂರ್ತಿಲಿಂಗದ ಬೆಳಗಿಲ್ಲ.

**ಟೀಕು:—** ಸ್ವರ್ಗ, ಮರ್ತ್ಯ, ಪಾತಾಳದಲ್ಲಿರ್ಪ ದೇವ, ದಾನವ, ಮಾನವರೆಲ್ಲರನು ಪ್ರಾಣವಾಯು ವಿಕಾರದಿಂ ಸಂಚರಿಸುತ್ತಿರ್ಪ ಸೂಕ್ಷ್ಮವಾದ ಮಾಯೆ ಅವಗ್ರಹಿಸಿದಳೆಂಬುದೀಗ, ಮೂರು ಲೋಕವನೆಲ್ಲವ ಗಾಳಿಯಲ್ಲಿ ತೂರಿ ಬಂದ ಗುಂಗುರು ನುಂಗಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ತನುತ್ರಯ ಸಂಬಂಧಿಗಳಾದ ದ್ವೈತಾದ್ವೈತಯೋಗ ಮಾರ್ಗಗಳಿಗೆ, ಆ ಮಾಯೆಯ ಸಂಹರಿಸಿದನೆಂದಡೆ ಅಸಾಧ್ಯವೆಂಬುದೀಗ, ಮೂರು ಲೋಕದ ರಾಯರು ಕೂಡಿ, ಆ ಗುಂಗುರು ಕೊಂದಿಹೆನೆಂದಡೆ ಆರಿಗು ಅಸಾಧ್ಯವೆಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆಯ ಭಿನ್ನಾಪೇಕ್ಷೆಯಲ್ಲಿ ಸೋಂಕಿದವರ ಕಡಿದು ಕತ್ತರಿಸುವ ಅತಿವಿಷೋದಕವಪ್ಪ ಸಂಸಾರ ವಿಷಯ

ರಸ ತುಂಬಿಹುದೆಂಬುದೀಗ, ಆ ಗುಂಗುರು ಬಾಯಲ್ಲಿ ಕತ್ತರಿವಾಣಿ ಎಂಬ ಶಬ್ದಕ್ಕರ್ಥ. ಆ ಮಾಯೆಯು ದುಶ್ಚರಿತ್ರವೆಂಬ ಚರಣದಲ್ಲಿ ಖಂಡಿತಜ್ಞಾನವೆಂಬ ಶಸ್ತ್ರ ವಿರುತ್ತಿಹುದೆಂಬುದೀಗ, ಕಾಲನಲ್ಲಿ . ಬಂಡೆಯುವೆಂಬ ಶಬ್ದಕ್ಕರ್ಥ. ಉತ್ಪತ್ತ್ಯಕ್ಕೆ ಕಾರಣವಾದ ತನುವೆಲ್ಲ ಅಜ್ಞಾನಮಯವಾಗಿಹುದೆಂಬುದೀಗ, ಅಂಡದಲ್ಲಿ ಕಾಳಕೂಟವೆಂಬ ಶಬ್ದಕ್ಕರ್ಥ. ಆ ಮಾಯೆಯು ಸೂಕ್ಷ್ಮದೇಹದಲ್ಲಿ ಸಕಲ ಕಾರಣಂಗಳೆಲ್ಲ ಅಜ್ಞಾನ ಸಂಬಂಧಿಗಳಾಗಿಹುವೆಂಬುದೀಗ, ಪಿಂಡವೆಲ್ಲ ಆಸಿಯ ಬಳಗವೆಂಬ ಶಬ್ದಕ್ಕರ್ಥ. ಸುಜ್ಞಾನೋದಯವಾಗಿ ಸಕಲ ಮಾಯಾ ಪ್ರಪಂಚ ನಿವೃತ್ತಿಮಾಡಿದಲ್ಲದೆ ಚಿದ್ಘನಲಿಂಗದ ಚಿತ್ಪ್ರಕಾಶ ದೊರಕೊಳ್ಳದೆಂಬುದೀಗ, ಅದು ಕೊಂದುನಿಂದವಂಗಲ್ಲದೆ ಸದಾಶಿವ ಮೂರ್ತಿ ಲಿಂಗದ ಬೆಳಗು ದೊರಕೊಳ್ಳದು ಎಂಬ ಶಬ್ದಕ್ಕರ್ಥ.

೮

ಕೋಣೆಯೊಳಗಣ ಮಿಂಡ, ನಡುಮನೆಯೊಳಗಣ ಗಂಡ
ಇವರಿಬ್ಬರ ಒಡಗೂಡುವಳ ಛಂದವ ನೋಡಾ !
ಕೈಯಲ್ಲಿ ಕಣ್ಣು ಹುಟ್ಟಿ, ಬಾಯಲ್ಲಿ ಬಸುರು ಹುಟ್ಟಿ
ಮೊಲೆ ತಲೆಯಲ್ಲಿ, ಭಗ ಬೆನ್ನಿನಲ್ಲಿ
ಈ ಹಾದರಗಿತ್ತಿಯಂದವ ಸದಾಶಿವ ಮೂರ್ತಿ ಲಿಂಗವೆ ಬಲ್ಲ.

**ಟೀಕು:—** ಶರಣನ ಸೂಕ್ಷ್ಮಾಂತರಂಗದಲ್ಲಿ ಸಂಬಂಧವಾಗಿರ್ಪ ಚಿದ್ರೂಪವಾದ ಪ್ರಾಣಲಿಂಗವೆಂಬುದೀಗ, ಕೋಣೆಯೊಳಗಣ ಮಿಂಡನೆಂಬ ಶಬ್ದಕ್ಕರ್ಥ. ಚಿದ್ರೂಪವಾದ ಶರಣನ ಆಚಾರಾಂಗದಲ್ಲಿ ಸಂಬಂಧವಾಗಿರ್ಪ ಸದ್ರೂಪವಾದ ಇಷ್ಟಲಿಂಗವೆಂಬುದೀಗ, ನಡುಮನೆಯೊಳಗಣ ಗಂಡನೆಂಬ ಶಬ್ದಕ್ಕರ್ಥ. ಜ್ಞಾನ ಶಕ್ತಿ ಸ್ವರೂಪನಾದ ಶರಣ ಇಷ್ಟಲಿಂಗ, ಪ್ರಾಣಲಿಂಗದಲ್ಲಿ ಕ್ರಿಯಾಜ್ಞಾನದಿಂ ಬೆರಸುತ್ತಿರ್ದನೆಂಬುದೀಗ, ಇವರಿಬ್ಬರ ಒಡಗೂಡುವಳ ಚಂದವನೋಡಾ ಎಂಬ ಶಬ್ದಕ್ಕರ್ಥ. ಅಂತು ಕ್ರಿಯಾ ಜ್ಞಾನ ವಿಡಿದಾಚರಿಸುತ್ತಿರ್ದ ಶರಣಸತಿಯು ಸದ್ಭಾವ ಹಸ್ತದಲ್ಲಿ ಜ್ಞಾನದೃಷ್ಟಿ ಪ್ರಭಾವಿಸಿತ್ತೆಂಬುದೀಗ, ಕೈಯಲ್ಲಿ ಕಣ್ಣು ಹುಟ್ಟಿ ಎಂಬ ಶಬ್ದಕ್ಕರ್ಥ. ಆ ಶರಣನ ಶಿವಾಪೇಕ್ಷೆಯಲ್ಲಿ ಚಿದ್ ಗರ್ಭದ ಚಿಹ್ನ ದೋರಿತ್ತೆಂಬುದೀಗ, ಬಾಯಲ್ಲಿ ಬಸುರು ಹುಟ್ಟಿ ಎಂಬ ಶಬ್ದಕ್ಕರ್ಥ. ಅಮೃತಕುಂಭ ಸ್ವರೂಪಿನಿಂದೊಪ್ಪುತ್ತಿರ್ದ ಮಹಾಘನಲಿಂಗವು ಶರಣನ ಅಭಿನ್ನ ಜ್ಞಾನದಲ್ಲಿ ಸಂಬಂಧ ಸಂಬಂಧವಾಯಿತ್ತೆಂಬುದೀಗ, ಮೊಲೆ ತಲೆಯಲ್ಲಿ ಎಂಬ ಶಬ್ದಕ್ಕರ್ಥ. ಆ ಶರಣ ಸತಿಯು ನಿಜ ಸುಷುಪ್ತಿ ಸ್ಥಾನವು ಸುಜ್ಞಾನವೆಂಬ ಅಪರ ಭಾಗೆಯಲ್ಲಿ ಸಂಬಂಧವಾಗಿರುತ್ತಿಹುದೆಂಬುದೀಗ, ಭಗ ಬೆನ್ನಿನಲ್ಲಿ ಎಂಬ ಶಬ್ದಕ್ಕರ್ಥ. ಆ ಸದ್ರೂಪವಾದ ಇಷ್ಟಲಿಂಗಕ್ಕಂಗವಾಗಿರ್ಪ ಶರಣ ಸತಿಯು ತನ್ನ ನಿಜಾಂತರಂಗದ ಪ್ರಾಣಲಿಂಗದಲ್ಲಿ ಜ್ಞಾನಾಚರಣೆಯಿಂ ಬೆರಸುತ್ತಿಹಳೆಂಬುದೀಗ, ಈ ಹಾದರಗಿತ್ತಿಯಂದವ ಸದಾಶಿವ ಮೂರ್ತಿಲಿಂಗವೆ ಬಲ್ಲನೆಂಬ ಶಬ್ದಕ್ಕರ್ಥ.

೯

ಊರು ಬಾಗಿಲ ಕಂಭದಲ್ಲಿ ಮೂರು ಮುಖದ ಕೊಡಗ
ಬಂದವನಿವನೆಂದು ನೋಡುತ್ತ ಮತ್ತೊಂದು ಮುಖ
ನಿಂದವನ ನೆಡಿಸುತ್ತ
ಮತ್ತೊಂದು ಮುಖ ಹಿಂದೆ ಪೊಂದಿವನ ನೆನವುತ್ತ
ಇಂತಿ ಮೂರು ಛಂದ ಹಿಂದಣ ಅಧೋಮುಖಕ್ಕೆ
ನಡುವಣ ಅಭಿಮುಖಕ್ಕೆ, ಕಡೆಯಣ ಊರ್ಧ್ವ ಮುಖಕ್ಕೆ
ಕುಂಡಲಿಯ ಹಾವೆದ್ದು ಕೊಡಗವನೊಂದೆ ಬಾರಿ ನುಂಗಿತ್ತು.
ಸದಾಶಿವ ಮೂರ್ತಿ ಲಿಂಗವ ನರಿತಲ್ಲಿ.

**ಟೀಕು:**— ಪಂಚಭೌತಿಕ ಗ್ರಾಮವೆಂಬುದೀಗ, ಊರೆಂಬ ಶಬ್ದಕ್ಕರ್ಥ. ಅಂತಪ್ಪ ದೇಹವಿಡಿದು ನಡೆವ ಸಂಸಾರ ಮಾರ್ಗ ಒಂದೇ ಎಂಬುದೀಗ, ಬಾಗಿಲಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಬಾಗಿಲಲ್ಲಿ ದುರ್ಭಾವಸ್ತಂಭ ನಿರುತ್ತಿಹುದೆಂಬುದೀಗ, ಕಂಭದಲ್ಲಿ ಎಂಬ ಶಬ್ದಕ್ಕರ್ಥ. ಜಾಗ್ರಸ್ವಪ್ನ ಸುಷುಪ್ತಿಯೆ ಆ ಮನಕ್ಕೆ ಮುಖವಾಗಿಪವೆಂಬುದೀಗ, ಮೂರು ಮುಖದ ಕೊಡಗವೆಂಬ ಶಬ್ದಕ್ಕರ್ಥ. ಆ ಮನಸ್ಸು ರಜೋಗುಣ ಸಂಬಂಧವಾದ ಸ್ಥೂಲ ತನುವಿನ ವರ್ತನೆಯಲ್ಲಿಹ ವಿಶ್ವನು ಸಂಸಾರ ವಿಷಯನನುಭವಿಸಿ ಬರುತ್ತಿರ್ದನೆಂದು ಹಾಸ್ಯಾಪಮಾನವ ಮಾಡುತ್ತಿಹುದೆಂಬುದೀಗ, ಬಂದವ ನಿವನೆಂದು ನೋಡುತ್ತ ಎಂಬ ಶಬ್ದಕ್ಕರ್ಥ. ಮತ್ತೊಂದು ಮುಖವೆಂದೊಡೆ ಸ್ವಪ್ನಾವಸ್ಥೆಯಲ್ಲಿಹ ಮನಸ್ಸು ಸೂಕ್ಷ್ಮ ತನುವಿನ ಇಂದ್ರಿಯಾದಿ ವಿಷಯ ಸುಖವನನುಭವಿಸುತ್ತಿರ್ದನೆಂದು ಆ ತೇಜಸನ ವರ್ತನೆಯ ಹಾಸ್ಯಕವ ಮಾಡುತ್ತಿಹುದೆಂಬುದೀಗ, ಮತ್ತೊಂದು ಮುಖನಿಂದವನ ನೆಡಿಸುತ್ತ ಎಂಬ ಶಬ್ದಕ್ಕರ್ಥ. ಮತ್ತೊಂದು ಎಂದೊಡೆ ಸುಷುಪ್ತಾವಸ್ಥೆಯಲ್ಲಿಹ ಮನಸ್ಸು ತಮೋಗುಣ ಸಂಬಂಧವಾದ ಕಾರಣ ತನುವಿನ ಮರೆಯಲ್ಲಿಹ ಪ್ರಾಜ್ಞನ ಹಾಸ್ಯೋಪಮಾನವ ಮಾಡಿತ್ತೆಂಬುದೀಗ, ಮತ್ತೊಂದು ಹಿಂದೆ ವಂದಿದವನ ನೆನೆವುತ್ತ ಎಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧಾವಸ್ಥೆಯೊಳಗೆ, ಜೀವತ್ರಯಂಗಳು ಸಿಲ್ಕಿದವೆಂಬುದೀಗ, ಇಂತಿ ಮೂರು ಛಂದವೆಂಬ ಶಬ್ದಕ್ಕರ್ಥ. ಜಾಗ್ರದ ವ್ಯವಹಾರವೀಗ, ಹಿಂದಣ ಅಧೋಮುಖವೆಂಬ ಶಬ್ದಕ್ಕರ್ಥ. ಸೂಕ್ಷ್ಮ ತನುವಿನ ಇಂದ್ರಿಯಂಗಳ ಸುಖಕ್ಕೆಂಬುದೀಗ, ನಡುವಣ ಅಭಿಮುಖಕ್ಕೆಂಬ ಶಬ್ದಕ್ಕರ್ಥ. ತಮೋಗುಣ ಸಂಬಂಧವಾದ ಕಾರಣ ತನುವಿನ ಮರವೆಯ ಸುಖವೆಂಬುದೀಗ, ಕಡೆಯಣ ಊರ್ಧ್ವ ಮುಖಕ್ಕೆಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧಾವಸ್ಥೆಯಲ್ಲಿರ್ದ ಮನಸ್ಸು ಅಧೋಕುಂಡಲಿಯಳಿದು ಊರ್ಧ್ವಕುಂಡಲಿಯ ಸ್ವರೂಪವನೆಯ್ದಿ ಅದೇ ಸತ್ವಾಣ ಜ್ಞಾನವಾಗಿ ಪ್ರಭಾವಿಸಿ, ಆ ಮನವ ನವಗ್ರಹಿಸಿತ್ತೆಂಬುದೀಗ, ಕುಂಡಲಿಯ ಹಾವೆದ್ದು ಕೊಡಗವನೊಂದೆ ಬಾರಿ ನುಂಗಿತ್ತು ಸದಾಶಿವ ಮೂರ್ತಿಲಿಂಗವ ನರಿತಲ್ಲಿ ಎಂಬ ಶಬ್ದಕ್ಕರ್ಥ.

೧೦

ಉರಿಯು ಸಿರಿಯು ನಡುವೆ ಒಂದು ಸರೋವರದಲ್ಲಿ
ನರಿ ತಿರುಗಾಡುತ್ತದೆ.
ಬಾಲವು ಉಡುವಿನಂದ, ನಡು ಬಳ್ಳುವಿನ ಚೊಲ್ಲೆಹದಂದ
ತಲೆ ಕೊಡಗದಂತೆ ನರಿಯಾಗಿ ಆತ್ಮ ಕುಕ್ಕರನಾಗಿ
ಯಾತಕ್ಕೂ ಸಿಕ್ಕದೆ ಸರೋವರದಲ್ಲಿ ಹರಿದಾಡುತ್ತದೆ.
ಅದು ಸದಾಶಿವ ಮೂರ್ತಿ ಲಿಂಗವ ನರಿದವರಿಗಲ್ಲದೆ ಸಿಕ್ಕದು ಜೀವಾ.

ಟೀಕು:— ತಾಪತ್ರಯಾಗ್ನಿ ಸಂಬಂಧವಾದ ಸ್ಥೂಲದೇಹದ ಪ್ರಾರಾಬ್ಧ ಭೋಗ ಸಂಬಂಧವಾದ ಸೂಕ್ಷ್ಮದೇಹದ ಮಧ್ಯದಲ್ಲಿ ಎಂಬುದೀಗ, ಉರಿಯು ಸಿರಿಯು ನಡುವೆ ಎಂಬ ಶಬ್ದಕ್ಕರ್ಥ. ಅಂತಪ್ಪ ಸೂಕ್ಷ್ಮ ದೇಹದ ಮಧ್ಯ ಸ್ಥಲವಾದ ಹೃದಯ ಕಮಲದಲ್ಲಿ ಜೀವನು ಹಂಸಗಳಿಂ ಚರಿಸುತ್ತಿಹನೆಂಬುದೀಗ, ಒಂದು ಸರೋವರದಲ್ಲಿ ನರಿ ತಿರುಗಾಡುತ್ತದೆ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಭವ ಪಾಶವು ತಮೋಗುಣದಲ್ಲಿ ಕೂಡಿರುತ್ತಿಹುದೆಂಬುದೀಗ, ಬಾಲಉಡುವಿನಂದವೆಂಬ ಶಬ್ದಕ್ಕರ್ಥ. ಆ ಜೀವನ ಅಂತರ್ದೇಹವು ಸತ್ವ್ರಗುಣಮವನೊಳಕೊಂಡಿಹುದೆಂಬುದೀಗ, ನಡುಬಳ್ಳುವಿನ ಚೊಲ್ಲೆಹದಂದವೆಂಬ ಶಬ್ದಕ್ಕರ್ಥ. ಆ ಜೀವನ ವೃತ್ತಿ ಜ್ಞಾನವೆಂಬ ಶಿರಸ್ಸು ಮನೋವರ್ತನೆಯಲ್ಲಿ ಕೂಡಿರುತ್ತಿಹುದೆಂಬುದೀಗ, ತಲೆ ಕೊಡಗದಂತೆ ಎಂಬ ಶಬ್ದಕ್ಕರ್ಥ. ಆ ದೇಹವು ಜೀವನ ವ್ಯವಹಾರದಲ್ಲಿ ಕೂಡಿರುತ್ತಿಹುದೆಂಬುದೀಗ, ರೂಪು ನರಿಯಾಗಿ ಎಂಬ ಶಬ್ದಕ್ಕರ್ಥ. ಆ ಜೀವನು ಇಂದ್ರಿಯಂಗಳ ವ್ಯವಹಾರದಲ್ಲಿ ಚರಿಸುತ್ತಿಹನೆಂಬುದೀಗ, ಆತ್ಮ ಕುಕ್ಕರನಾಗಿ ಎಂಬ ಶಬ್ದಕ್ಕರ್ಥ. ಆ ಜೀವನ ನಿಲವ ಭಿನ್ನಯೋಗ ಭ್ಯಾಸಗಳಿಂ ಗ್ರಹಿಸಿಹೆನೆಂದೊಡೆ ಅಸಾಧ್ಯವೆಂಬುದೀಗ, ಯಾತಕ್ಕೂ ಸಿಕ್ಕದೆಎಂಬ ಶಬ್ದಕ್ಕರ್ಥ. ಆ ಜೀವನು ಅಷ್ಟದಳ ಕಮಲದಲ್ಲಿ ಮನಪವನಂಗಳೆಂಬ ರೆಕ್ಕೆಗಳಿಂ ಚರಿಸುತ್ತಿಹುದಾಗಿ ಸುಜ್ಞಾನೋದಯದಿಂ ತನ್ನ ನಿಜವ ತಿಳಿದ ಶರಣಂಗೆ ಜೀವ ಭಾವ ಅಳಿದು ಸಜೀವ ಸ್ವರೂಪವಾಗುತ್ತಿಹುದಲ್ಲದೆ ಉಳಿದವರಿಗಸಾಧ್ಯವೆಂಬುದೀಗ, ಸರೋವರದಲ್ಲಿ ಹರದಾಡುತ್ತದೆ. ಅದು ಸದಾಶಿವ ಮೂರ್ತಿಲಿಂಗವ ನರಿದವನಿಗಲ್ಲದೆ ಸಿಕ್ಕದು ಜೀವಾ ಎಂಬ ಶಬ್ದಕ್ಕರ್ಥ.

೧೧

ಹರಿವ ಹಾವು ಕೊಂಬಿನ ಮೇಲಣ ಕೊಡಗ ಸಂಧಿಸಿ
ಒಂದಕ್ಕೊಂದಂಜಿ ನಿಂದಿದಾವೆ; ಕೊಡಗ ನೋಡಲಮ್ಮದು
ಎರಡು ನಿಂದು ಜೋಗಿಗೆ ಲೇಸಾಯಿತ್ತು
ಸದಾಶಿವ ಮೂರ್ತಿ ಲಿಂಗವ ನರಿತು.

ಟೀಕು:— ಸಕಲ ಪ್ರಪಂಚಿನ ವ್ಯವಹಾರದಲ್ಲಿ ಚರಿಸುತ್ತಿಪ ಶಂಕಾ ವಿಷ ಸಂಬಂಧಿಯಪ್ಪ ಜೀವನೆಂಬುದೀಗ, ಹರಿವ ಹಾವು ಎಂಬ ಶಬ್ದಕ್ಕರ್ಥ. ಇಂದ್ರಿಯಂಗಳೆಂಬ ಶಾಖೋಪಶಾಖೆಗಳಲ್ಲಿ ಲಂಘಿಸುತ್ತಿಹುದು ಮನಸ್ಸೆಂಬುದೀಗ, ಕೊಂಬಿನ ಮೇಲಣ ಕೊಡಗವೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಶಿವಕೃಪೆಯಿಂ ಸಮ್ಯಜ್ಞಾನೋದಯವಾಗಲು ಆ ಮನಸ್ಸು ಸದ್ವಿವೇಕ ಸ್ವರೂಪವನೆಯ್ದಿ ಎರಡು ನಿವೃತ್ತಿ ಮಾರ್ಗದಿಂ ಸಮ್ಮುಖವಾದ ವೆಂಬುದೀಗ, ಸಂಧಿಸಿ ಎಂಬ ಶಬ್ದಕ್ಕರ್ಥ. ಆ ಜೀವನ ಸುಜ್ಞಾನ ಪ್ರಕಾಶಕ್ಕೆ ಮನವಳಿಕಿ ಆ ಮನಸ್ಸಿನ ಸದ್ವಿವೇಕಕ್ಕೆ ಜೀವಗಳುಕಿ' ಎರಡು ಶಿವಭಾವದಲ್ಲಿ ಸ್ವಸ್ಥಿರವಾದವೆಂಬುದೀಗ, ಒಂದಕ್ಕೊಂದಂಜಿ ನಿಂದಿದಾವೆ ಎಂಬ ಶಬ್ದಕ್ಕರ್ಥ. ಇಂದ್ರಿಯಂಗಳ ಪ್ರವರ್ತನೆಯು ಅಜ್ಞಾನ ದೃಕ್ಕಿಂ ನಿರೀಕ್ಷಿಸಲಮ್ಮದು ಮನಸ್ಸೆಂಬುದೀಗ, ಕೊಡಗ ನೋಡಲಮ್ಮವೆಂಬ ಶಬ್ದಕ್ಕರ್ಥ. ಸಕಲ ಮಾಯಾಪ್ರಪಂಚಿಗೆ ಆಡಿಯಿಡಲಮ್ಮದು ಜೀವನೆಂಬುದೀಗ, ಹಾವು ಹೋಗಲಮ್ಮದು ಎಂಬ ಶಬ್ದಕ್ಕರ್ಥ. ಸುಜ್ಞಾನೋದಯವಾದ ಸಜ್ಜೀವನು ಸದ್ವಿವೇಕ ಸ್ವರೂಪವಾದ ಮನಸ್ಸು ಎರಡು ಶಿವಭಾವದಲ್ಲಿ ಸ್ವಸ್ಥಿರವಾಗಲು ಶಿವತತ್ವದಲ್ಲಿ ಸಮರಸೈಕ್ಯವನೆಯ್ದುವ ಶರಣಂಗೆ ಮುಖವಾಯಿತ್ತೆಂಬುದೀಗ, ಎರಡೂ ನಿಂದು ಜೋಗಿಗೆ ಲೇಸಾಯಿತ್ತು ಸದಾ ಶಿವ ಮೂರ್ತಿ ಲಿಂಗವನರಿತು' ಎಂಬ ಶಬ್ದಕ್ಕರ್ಥ.

೧೨

ಕೊಡಗದ ಚೇಷ್ಟೆ ಉಡುಗಿ ಹಾವಿನ ಹಲ್ಲ ಮುರಿದು
ಆಡಿಸುವ ಜೋಗಿಯು ನಾಮ ನಷ್ಟವಾಗಿ
ಸದಾಶಿವ ಮೂರ್ತಿ ಲಿಂಗದ ಇರವು ನಿರಾಳವಾಯಿತ್ತು.

ಟೀಕು:— ಅಂತರಂಗದಲ್ಲಿ ಸುಜ್ಞಾನೋದಯವಾದ ಶರಣಂಗೆ ಮನೋವಿಕಾರವಳಿದು ವುನ್ಮನಿ ತತ್ವ ಸ್ವರೂಪವನೆಯ್ದಿತ್ತೆಂಬುದೀಗ, ಕೊಡಗದ ಚೇಷ್ಟೆ ಉಡುಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಮನೋವಿಕಾರ ನಷ್ಟವಾಗಲು ಜೀವನ ಸಂಕಲ್ಪ ವಿಕಲ್ಪಂಗಳೆಂಬ ದಂತ ಭಗ್ನವಾದ ವೆಂಬುದೀಗ, ಹಾವಿನ ಹಲ್ಲ ಮುರಿದು ಎಂಬ ಶಬ್ದಕ್ಕರ್ಥ. ಆ ಎರಡನು ನಿವೃತ್ತಿ ಮುಖಕ್ಕೆ ತಂದು ಲಿಂಗದಲ್ಲಿ ಏಕಾರ್ಥವ ಮಾಡಿ ಇಷ್ಟಲಿಂಗ-ಪ್ರಾಣಲಿಂಗದಲ್ಲಿ ಜ್ಞಾನಕ್ರಿಯಿಂದಾಚರಿಸುತ್ತಿಹ ಶರಣನ ಸರ್ವಾಂಗವು ಲಿಂಗಮಯವಾಯಿತ್ತೆಂಬುದೀಗ, ಆಡಿಸುವ ಜೋಗಿಯು ಎಂಬ ಶಬ್ದಕ್ಕರ್ಥ. ಆ ಸರ್ವಾಂಗ ಲಿಂಗ ಸಂಬಂಧಿಯಾದ ಶರಣನು ಮಹಾಘನಲಿಂಗದಲ್ಲಿ ನಿಷ್ಪತಿಯಾಗಲು ಉಭಯ ನಾಮವಳಿದು ನಿರ್ನಾಮ ಸ್ವರೂಪವಾಯಿತ್ತೆಂಬುದೀಗ, ನಾಮ ನಷ್ಟವಾಗಿ ಸದಾಶಿವ ಮೂರ್ತಿ ಲಿಂಗದ ಇರವು ನಿರಾಳವಾಯಿತ್ತೆಂಬ ಶಬ್ದಕ್ಕರ್ಥ.

೧೩

ಬ್ರಹ್ಮಾಂಡದ ಧರೆಯ ಮೇಲೆ ಅರಿಬಿರಿದಿನ
ಮಂತಣದ ಗಿರಿ ಹುಟ್ಟಿತ್ತು.

ಆ ದುರ್ಗಕ್ಕೆ ಮೂವರು ದೊರೆಗಳು ಹುಟ್ಟಿದರು.
ಒಬ್ಬ ನರಪತಿ, ಒಬ್ಬ ಸುರಪತಿ, ಒಬ್ಬ ಸಿರಿಯರಿಗೊಡೆಯ
ಮೂವರ ದುರ್ಗ ಒಂದೆಯಾಗಿ ಸಂದೇಹಕ್ಕೀಡಾಗುತ್ತಿದೆ.
ಸದಾಶಿವ ಮೂರ್ತಿ ಲಿಂಗ ಸಂಗವಾಗಿ ಇಲ್ಲದೆ ಯಾಗದು.

**ಟೀಕು:**— ಪ್ರಪಂಚು ಬ್ರಹ್ಮಾಂಡದಿಂದುದಯವಾದ ಪೃಥ್ವಿಯಂಶದ ತನುವೆಂಬುದೀಗ, ಬ್ರಹ್ಮಾಂಡದಿಂದುದಯವಾದ ಪೃಥ್ವಿಯಂಶದ ತನುವೆಂಬುದೀಗ, ಬ್ರಹ್ಮಾಂಡದ ಧರೆಯಮೇಲೆಯೆಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ಆರಿಗೂ ಸಾಧ್ಯವಿಲ್ಲದ ಭಿನ್ನ ಭಾವಯುಕ್ತವಾದ ಹಂಕಾರವೆಂಬ ಗಿರಿ ಹುಟ್ಟಿತ್ತೆಂಬುದೀಗ, ಅರಿ ಬಿರಿದಿನ ಮಂತಣದ ಗಿರಿಹುಟ್ಟಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾರವೆಂಬ ದುರ್ಗಕ್ಕೆ ಜೀವತ್ರಯಂಗಳೆ ಕರ್ತರಾಗಿಹರೆಂಬುದೀಗ, ಆ ದುರ್ಗಕ್ಕೆ ಮೂವರು ದೊರೆಗಳು ಹುಟ್ಟಿದರು ಎಂಬ ಶಬ್ದಕ್ಕರ್ಥ. ಕರ್ಮೇಂದ್ರಿಯಂಗಳ ವ್ಯವಹಾರಕ್ಕೆ ಕರ್ತನಾಗಿಹನು ವಿಶ್ವನೆಂಬುದೀಗ, ಒಬ್ಬ ನರಪತಿ ಎಂಬ ಶಬ್ದಕ್ಕರ್ಥ. ಜ್ಞಾನೇಂದ್ರಿಯಂಗಳ ವ್ಯವಹಾರಕ್ಕೆ ಕರ್ತನಾಗಿಹನು ತೈಜಸನೆಂಬುದೀಗ, ಒಬ್ಬ ಸುರಪತಿಯೆಂಬ ಶಬ್ದಕ್ಕರ್ಥ. ತಾಪತ್ರಯಾಗ್ನಿ ಸಂಬಂಧವಾದ ಮಾಯಾಭೋಗಕ್ಕೆ ಕರ್ತನಾಗಿಹನು ಪ್ರಾಜ್ಞನೆಂಬುದೀಗ, ಒಬ್ಬ ಸಿರಿಯರಿಗೊಡೆಯನೆಂಬ ಶಬ್ದಕ್ಕರ್ಥ. ಆ ಜೀವತ್ರಯಂಗಳಿಗೆ ಆಧಾರವಾದ ಅಹಂಕಾರವೆಂಬ ದುರ್ಗ ಒಂದೆಯಾಗಿ ಜೀವ ಭಾವದ ಸಂಕಲ್ಪಕ್ಕೊಳಗಾಗುತ್ತಿಹುದೆಂಬುದೀಗ, ಮೂವರ ದುರ್ಗ ಒಂದೆಯಾಗಿ ಸಂದೇಹಕ್ಕೀಡಾಗುತ್ತಿದೆಯೆಂಬ ಶಬ್ದಕ್ಕರ್ಥ. ಸುಜ್ಞಾನೋದಯದಿಂ ಜೀವಭಾರ ನಿವೃತ್ತಿಮಾಡಿ ಶ್ರೀ ಗುರು ಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧಿಯಾದ ಶರಣಂಗಲ್ಲದೆ ಆ ಅಹಂಕಾರವಳಿದು ನಿರಹಂಕಾರವಾಗದೆಂಬುದೀಗ, ಸದಾಶಿವಮೂರ್ತಿಲಿಂಗ ಸಂಗವಾಗಿಯಲ್ಲದೆಯಾಗದು ಎಂಬ ಶಬ್ದಕ್ಕರ್ಥ.

೧೪

ಆ ದುರ್ಗದಲ್ಲಿರ್ದ ಧೊರೆಗಳ ವಿರೋಧವನರಿದು
ಇದೇ ದುರ್ಗಕ್ಕೆ ಸಾಧ್ಯವೆಳೆ ಯೆಂಬುದ ನರಿದು
ಮಾಯಾಮಲ ನಾಸ್ತಿಯೆಂಬ ಮನ್ನೆಯ ಕಾಳಗವ ಒಡಿದು
ದುರ್ಗವ ಮುತ್ತಿ ಕೈಯೊಳಗಾದರು ಮೂವರು ಧೊರೆಗಳು.
ನರಪತಿಯ ಅಂಡವ ಕಿತ್ತು, ಸುರಪತಿಯ ಕೈಯ್ಯ ಕಡಿದು
ಸಿರಿಯರಿಗೊಡೆಯನ ಕಣ್ಣ ಕಳದು
ಅರಿಗಳಲ್ಲಾ ಎಂದು ಅಭಿಮುಖವ ನಷ್ಟಮಾಡಿ
ಊರ್ಧ್ವ ಮುಖವಾದ ಮಾಯಾ ಕೋಳಾಹಳ ಮಲಂನಾಸ್ತಿ
ಮನ್ನಣೆಯ ಭಾವ ರಹಿತ ಅನುಪಮ ಚರಿತ
ಸದಾಶಿವ ಮೂರ್ತಿ ಲಿಂಗಕ್ಕೆ ಅರಿಗಳಿಲ್ಲದ ನಿರಾಳವಾಯಿತ್ತು.

**ಟೀಕು:**— ಅಂತಪ್ಪ ಅಹಂಕಾರವನಾಶ್ರಯಿಸಿಕೊಂಡಿರ್ಪ ಜೀವತ್ರಯಂಗಳಲ್ಲಿ ಸಮ್ಯಜ್ಞಾನೋದಯವಾಗಲು, ನಿವೃತ್ತಿಮುಖದಿಂ ವಿರೋಧವಾಗಿರ್ದ ಭೇದವ ಶರಣ ಸುಜ್ಞಾನ ದೃಷ್ಟಿಯಿಂ ಕಂಡು ವಿವೇಕಿಸುತ್ತಿರ್ದನೆಂಬುದೀಗ, ಆ ದುರ್ಗದಲ್ಲಿ ಘೊರೆಗಳ ವಿರೋಧವನರಿದು ಎಂಬ ಶಬ್ದಕ್ಕರ್ಥ. ಅಂತು ಸದ್ವಿವೇಕ ಮುಖದಿಂ ಇದೇ ವಿವೇಕಿಸುತ್ತಿರ್ದ ಶರಣ ಅಹಂಕಾರವ ನಿವೃತ್ತಿಮಾಡುವದಕ್ಕೆ ಇದೇ ತಕ್ಕಾಲವೆಂದರಿದು ನಿರೂಪಿಸುತಿರ್ದನೆಂಬುದೀಗ, ಇದೇ ದುರ್ಗಕ್ಕೆ ಸಾಧ್ಯವೇಳೆಯೆಂಬುದನರಿತು ಎಂಬ ಶಬ್ದಕ್ಕರ್ಥ. ಮಾಯಾ ಸಂಬಂಧವಾದ ಮಲತ್ರಯರಹಿತವಾದ ನಿರ್ಮಳಾಂಗ ಸ್ವರೂಪವಾದ ಶರಣನೆಂಬುದೀಗ, ಮಾಯಾಮಲನಾಸ್ತಿ ಎಂಬ ಶಬ್ದಕ್ಕರ್ಥ. ದುರ್ಭಾವವಳಿದು ಸದ್ಭಾವವುಳ್ಳಾತನೆ ಶರಣನೆಂಬುದೀಗ ಮನ್ನೆಯನೆಂಬ ಶಬ್ದಕ್ಕರ್ಥ. ಅಂತಪ್ಪ ಶರಣನು ಅಹಂಕಾರವನಾಶ್ರಯಿಸಿರ್ಪ ಜೀವ ತ್ರಯಂಗಳ ಸಂಹರಿಸಬೇಕೆಂದು ಪರಿಪೂರ್ಣ ಜ್ಞಾನವೆಂಬ ಲಗ ಕೃತ ನಿಶ್ಚಯ ಹಸ್ತದಲ್ಲಿ ದೃಢವಿಡಿದನೆಂಬುದೀಗ, ಕಾಳಗವ ಹಿಡಿದು ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣ ಜ್ಞಾನ ಪ್ರಕಾಶದಿಂದ ಅಹಂಕಾರವನವಗ್ರಹಿಸಿದನೆಂಬುದೀಗ, ದುರ್ಗವ ಮುತ್ತಿ ಎಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾರವ ನಿವೃತ್ತಿ ಮಾಡಿ ಚಿದಹಂಕಾರ ಸ್ವರೂಪನಾದ ಶರಣನ ಜೀವ ಭಾವದಲ್ಲಿ ಜೀವತ್ರಯಂಗಳು ಅಡಗಿದವೆಂಬುದೀಗ, ಕೈಯೊಳಗಾದರು ಮೂವರು ಘೊರೆಗಳು ಎಂಬ ಶಬ್ದಕ್ಕರ್ಥ. ಆ ಶಿವಭಾವ ತ್ರಯಂಗಳನವಗ್ರಹಿಸಿದ ಶರಣ ಗುರೋಪಾವಸ್ಥೆಯ ಮಾಡಲು ಶ್ರೀಗುರು ಕರುಣಿಸಿ ಪ್ರಸನ್ನವಾಗಿ ಕ್ರಿಯಾದೀಕ್ಷೆಯಿಂ ವಿಶ್ವಂಗೆ ಸಂಬಂಧವಾದ ಸ್ಥೂಲ ತನುವ ನಿವೃತ್ತಿಮಾಡಿ ಇಷ್ಟಲಿಂಗ ಸಾಹಿತ್ಯವ ಮಾಡಿದನೆಂಬುದೀಗ, ನರಪತಿಯ ಅಂಡವ ಕಿತ್ತು ಎಂಬ ಶಬ್ದಕ್ಕರ್ಥ. ಮಂತ್ರದೀಕ್ಷೆಯಿಂದ ಸೂಕ್ಷ್ಮತನು ನಿವೃತ್ತಿಯಾಗಿ ಪ್ರಾಣಲಿಂಗ ಸಾಹಿತ್ಯವಾಗಲು ತೈಜಸನು ಭೋಕ್ತೃತ್ವವನುಂಬ ಮನೋಹಸ್ತವು ನಷ್ಟವಾಯಿತ್ತೆಂಬುದೀಗ, ಸುರಪತಿಯ ಕೈಯ ಕಡಿದು ಎಂಬ ಶಬ್ದಕ್ಕರ್ಥ. ವೇಧ ದೀಕ್ಷೆಯಿಂದ ಹಸ್ತ-ಮಸ್ತಕ ಸಂಯೋಗವಾದಲ್ಲಿ ಕಾರಣ ದೇಹವಳಿದು ಭಾವಲಿಂಗ ಸಂಬಂಧವಾದಲ್ಲಿ ಆ ಪ್ರಾಜ್ಞನ ಭಿನ್ನ ಜ್ಞಾನ ನಷ್ಟವಾಯಿತ್ತೆಂಬುದೀಗ, ಸಿರಿಯರಿಗೊಡೆಯನ ಕಣ್ಣ ಕಳೆದು ಎಂಬ ಶಬ್ದಕ್ಕರ್ಥ. ಅಂತು ಅಂಗತ್ರಯ ಮುಖ್ಯವಾದ ಜೀವತ್ರಯವಳಿದು ಲಿಂಗತ್ರಯ ಸಂಬಂಧವಾದ ಶರಣನ ಸಕಲ ಕರಣಂಗಳೆಲ್ಲ ಲಿಂಗಕರಣಂಗಳಾದ ಕಾರಣ ಶರಣಂಗೆ ವಿರೋಧವಿಲ್ಲದೆ ಹೋಯಿತ್ತೆಂಬುದೀಗ, ಅರಿಗಳಿಲ್ಲಾ ಎಂದು ಎಂಬ ಶಬ್ದಕ್ಕರ್ಥ. ಆ ಕರಣಂಗಳ ನಿವೃತ್ತಿಯ ಮಾಡಿದ ಶರಣ ಪ್ರಪಂಚಿನತ್ತಭಿಮುಖವಾಗಿರ್ಪ ದುರ್ವರ್ತನೆ ನಿವೃತ್ತಿಯ ಮಾಡಿದನೆಂಬುದೀಗ, ಅಭಿಮುಖವ ನಷ್ಟವ ಮಾಡಿ ಎಂಬ ಶಬ್ದಕ್ಕರ್ಥ. ಆ ಪ್ರಪಂಚು ನಷ್ಟವಾದಲ್ಲಿ ಶಿವಜ್ಞಾನ ಸ್ವರೂಪನಾಗಿರ್ದನೆಂಬುದೀಗ, ಊರ್ಧ್ವಮುಖವಾದನೆಂಬ ಶಬ್ದಕ್ಕರ್ಥ. ಆ ಸುಜ್ಞಾನ ಸ್ವರೂಪವಾದ ಶರಣನು ಅಜ್ಞಾನ ಸ್ವರೂಪಿಣಿಯಾದ ಮಾಯೆಯ ನಿವೃತ್ತಿಯ ಮಾಡಿ ಮಲತ್ರಯ ರಹಿತವಾಗಿರ್ದನೆಂಬುದೀಗ, ಮಾಯಾ ಕೋಳಾಹಳ ಮಲಂ ನಾಸ್ತಿ ಮನ್ನೆನೆಂಬ ಶಬ್ದಕ್ಕರ್ಥ. ಆ ನಿರ್ಮಲ ಸ್ವರೂಪನಾದ ಶರಣಂಗೆ ತಾನೆಂಬ ಭಾವ ನಷ್ಟವಾಗಿ ಉಪಮಾತೀತ

ನಾಗಿರ್ದನೆಂಬುದೀಗ, ಭಾವ ರಹಿತ ಅನುಪಮ ಚರಿತ ಸದಾಶಿವ ಮೂರ್ತಿ ಲಿಂಗಕ್ಕೆ ಅರಿಗಳಿಲ್ಲದೆ ನಿರಾಳವಾಯಿತ್ತೆಂಬ ಶಬ್ದಕ್ಕರ್ಥ.

೧೫

ನಿರಾಳದಲ್ಲಿ ನೀರ ಕೋಟೆಯ ನಿಕ್ಕಿ ಬಯಲ ಅಗಳ ತೆಗೆದು
ವಾಯುವ ತೆನೆಯ ಹೂಡಿ ಅಸುರ ರಾಜನೆಂಬರಸು
ಆ ಪಟ್ಟಣಕ್ಕೊಡೆಯನಾಗಿ ಸೋಮ-ಸೂರ್ಯ ವೀಧಿಗಳಲ್ಲಿ
ಪಶ್ಚಿಮ ಕೇರಿಯ ಹೊಕ್ಕು ದಕ್ಷಿಣದಲ್ಲಿ ನಿಂದು
ಪೂರ್ವದಲ್ಲಿ ಪರಸ್ಥಾನವ ಮಾಡಿ, ಉತ್ತರ ಮಧ್ಯದಲ್ಲಿ
ಸಿಂಹಾಸನಂಗೆಯ್ದು
ಸಕಲೇಂದ್ರಿಯ ನಾನಾ ವಿಷಯ ಪರಿವಾರದಲ್ಲಿ ವಶವಲ್ಲದೆ
ಸುಖಮಯನಾಗಿರ್ದ ಸದಾಶಿವಮೂರ್ತಿಲಿಂಗವು ನಿರಾಳವಾಯಿತ್ತು.

**ಟೀಕು:**— ಪರಿಪೂರ್ಣವಾದ ಪರಬ್ರಹ್ಮವನು ಸರ್ವಾಂಗದಲ್ಲಿ ಸಾಹಿತ್ಯವ ಮಾಡಿಕೊಂಡ ಶರಣನು ಸದ್ವಿವೇಕ ಸ್ವರೂಪವಾದ ಪರಮಾನಂದ ಜಲವ ಆ ನಿರಾಳ ಪರಬ್ರಹ್ಮದಲ್ಲಿ ಏಕೀಕರಿಸಿದನೆಂಬುದೀಗ, ನಿರಾಳದಲ್ಲಿ ನೀರ ಕೋಟೆಯ ನಿಕ್ಕಿ ಎಂಬ ಶಬ್ದಕ್ಕರ್ಥ. ಆ ಪರಮಶಾಂತಿಯ ಜಲವ ಲಿಂಗದಲ್ಲಿ ಏಕೀಕರಿಸಿದ ಶರಣನು ನಿರಾಕಾರವಪ್ಪ ಮಹಾಜ್ಞಾನ ಚಿತ್ತನು ಅಗಳಾಗಿ ಸಂಬಂಧಿಸಿದನೆಂಬುದೀಗ, ವಾಯುವ ತೆನೆಯ ಹೂಡಿ ಎಂಬ ಶಬ್ದಕ್ಕರ್ಥ. ಆ ಪ್ರಣವ ಸಂಬಂಧವಾದಲ್ಲಿ ಜೀವಂಗೆ ಚೈತನ್ಯ ಸ್ವರೂಪವಾದ ಮಹಾಘನಲಿಂಗವೆಂಬರಸು ಶರಣನ ಶಿವಕ್ಷೇತ್ರವೆಂಬ ಶಿವಪುರಕ್ಕೆ ಕರ್ತನಾಗಿದನೆಂಬುದೀಗ, ಅಸುರಾಜನೆಂಬರಸು ಆ ಪಟ್ಟಣಕ್ಕೊಡೆಯನಾಗಿ ಎಂಬ ಶಬ್ದಕ್ಕರ್ಥ. ಆ ಮಹಾ ಘನಲಿಂಗದಲ್ಲಿ ಸಮರಸ ಭಾವವ ಘಟ್ಟಿಸಿದ ಶರಣನು ಇಡಪಿಂಗಳ ಮಾರ್ಗದಲ್ಲಿ ಪ್ರಣವ ಪಂಚಾಕ್ಷರಿಯ ಸಂಬಂಧವ ಮಾಡಿಕೊಂಡು ಆ ಮಂತ್ರಸಂಸ್ಕಾರವಿಡಿದು ಪಶ್ಚಿಮದ್ವಾರವೆನಿಸುವ ಸುಷುಮ್ನೆಯಲ್ಲಿ ಶಿವಯೋಗ ಮಾರ್ಗದ ಬಳಿವಿಡಿದು ಕೇವಲವಾದ ನಿಷ್ಕಲ ಪರಬ್ರಹ್ಮದತ್ತಲೆಯ್ದುತ್ತಿರ್ದನೆಂಬುದೀಗ, ಸೋಮ-ಸೂರ್ಯರ ವೀಧಿಗಳಲ್ಲಿ ಪಶ್ಚಿಮ ಕೇರಿಯಹೊಕ್ಕು ಎಂಬ ಶಬ್ದಕ್ಕರ್ಥ. ಆ ನಿರಾಕಾರವಾದ ಪರಬ್ರಹ್ಮದಲ್ಲಿ ಸಮರಸಭಾವಿಯಾಗಿರ್ದ ಶರಣನು ಶ್ರೀ ಗುರು ಕಾರುಣ್ಯದಿಂ ಸಂಬಂಧವಾದ ಇಷ್ಟಲಿಂಗದಲ್ಲಿ ಸತ್ಕ್ರಿಯಾಜ್ಞಾನವಿಡಿದಾಚರಿಸುತ್ತಿರ್ದನೆಂಬುದೀಗ, ದಕ್ಷಿಣದಲ್ಲಿ ನಿಂದು ಎಂಬ ಶಬ್ದಕ್ಕರ್ಥ. ಆ ಶರಣನು ಇಷ್ಟಲಿಂಗದಲ್ಲಿ ಸಂಬಂಧವಾಗಿರ್ದ ಪರಮ ಚಿತ್ಕಲೆಯನು ತನ್ನ ಸುಜ್ಞಾನ ಮುಖಕ್ಕೆ ತಂದು ನಿಜಾಂತರಂಗದಲ್ಲಿ ಪ್ರಾಣಲಿಂಗ ಸ್ವರೂಪಿನಿಂ ಸಾಹಿತ್ಯವ ಮಾಡಿದನೆಂಬುದೀಗ, ಪೂರ್ವದಲ್ಲಿ ಪರಸ್ಥಾನವ ಮಾಡಿ ಎಂಬ ಶಬ್ದಕ್ಕರ್ಥ. ಆ ಪ್ರಾಣಲಿಂಗದಲ್ಲಿ ಅವಿರಳ ಸಂಬಂಧಿಯಾದ ಶರಣನು ಕಾರಣಾಂಗದರವಿನ ಮಧ್ಯದಲ್ಲಿ ಭಾವಲಿಂಗವ ಮೂರ್ತಿಗೊಳಿಸಿದನೆಂಬುದೀಗ, ಉತ್ತರದ ಮಧ್ಯದಲ್ಲಿ ಸಿಂಹಾಸನಂಗೈದು ಎಂಬ ಶಬ್ದಕ್ಕರ್ಥ. ಅಂತು ತ್ರಿವಿಧಾಂಗ

ದಲ್ಲಿ ತ್ರಿವಿಧಲಿಂಗಘಟಿಸಿರ್ಪ ಶರಣನ ಸರ್ವೇಂದ್ರಿಯಂಗಳಿಲ್ಲ, ಲಿಂಗೇಂದ್ರಿಯ ಸ್ವರೂಪವಾಗಿ ನಿಷ್ಪತ್ತಿಯನೆಯ್ದುದಲ್ಲಿ ಕರ್ಮೇಂದ್ರಿಯಂಗಳ ವ್ಯವಹಾರವಿಲ್ಲದೆ ಹೋಯಿತ್ತು ಶರಣಂಗೆಂಬುದೀಗ, ಸಕಲೇಂದ್ರಿಯ ನಾನಾ ವಿಷಯ ಪರಿವಾರ ದಲ್ಲಿ ಅರಿಗಳಿಗೆ ವಶವಲ್ಲದೆ ಸುಖಮಯವಾಗಿರ್ದ ಸದಾಶಿವಮೂರ್ತಿಲಿಂಗವು ನಿರಾಳವಾಯಿತ್ತು ಎಂಬ ಶಬ್ದಕ್ಕರ್ಥ.

೧೬

ನಂಜಿನ ಭೂಮಿಯ ಮೇಲೆ ಸಂದೇಹದ ಕವರನೆಟ್ಟು
ಮಂಜುಳದ ಮೂರಂಗದ ಮುಂಡಿಗೆಯ ನೆಟ್ಟು
ಸರಂಗದ ಸುಮನದ ಡೊಂಕರತ ಚಿಮ್ಮರನ ಹಾಕಿ
ಗತಿಮತಿಯೆಂಬ ಇಕ್ಕೆಲದ ಸೂರಿಗೆ
ನಿಶ್ಚಯವೆಂಬ ಬಕುಲು ಬಿಡುವಹಾಕಿ-ಏರಿ
ಪದಗಳು ಚಿತ್ತ ಶುದ್ಧವೆಂಬ ಮೂಗುತಿಗೊಲಿನಲ್ಲಿನಿಂದಿತ್ತು
ಗುಳು ತೊಲಗದ ಕಟ್ಟು ವಿಶ್ವಾಸ ನಿಶ್ಚಯದಲ್ಲಿನಿಂದಿತ್ತು
ಸಂದೇಹ ನಿಂದು ಹಂಜರವೇರಿತ್ತು
ಕಡೆನಡು ಮೊದಲೆನ್ನದೆ ತ್ರಿಗುಣದ ಕಂತೆ ಕಟ್ಟಿ
ಅರಿದು ಮರೆಯದ ಹುಲ್ಲು ಕವಿಸಿತ್ತು ಮನೆಯಾಯಿತ್ತು
ಮನವಕೊನೆಯಲ್ಲಿ ಬಾಗಿಲು ಬಯಲಾಗಿತ್ತು.
ಸದಾಶಿವಮೂರ್ತಿ ಲಿಂಗವು ನಿರಾಳವಾಯಿತ್ತು

**ಟೀಕು:**— ಶಿವಜ್ಞಾನೋದಯವಾಗಿ ಸಕಲ ಮಾಯಾ ಪ್ರಪಂಚು ನಷ್ಟ ವಾದ ಶರಣನ ಚಿದ್‌ಭೂಮಿಯಲ್ಲಿ ಎಂಬುದೀಗ, ನಂಜಿನ ಭೂಮಿಯ ಮೇಲೆ ಎಂಬ ಶಬ್ದಕ್ಕರ್ಥ., ಆ ಚಿದ್ ಭೂಮಿಯಲ್ಲಿ ಸಂಕಲ್ಪ-ವಿಕಲ್ಪವಳಿದ ದೃಢ ಸ್ಥಂಭವ ನೆವಗೊಳಿಸಿದನೆಂಬುದೀಗ, ಸಂದೇಹದ ಕವರನೆಟ್ಟು ಎಂಬ ಶಬ್ದಕ್ಕರ್ಥ. ಆ ಸದ್ಭಾವದಲ್ಲಿ ನಿರ್ಭರವಾದ ಶರಣನು ಶ್ರೀಗುರು ಕಾರುಣ್ಯದಿಂ ತನುತ್ರಯಂಗ ಳಿಗೆ ಚೈತನ್ಯವಾದ ಆತ್ಮತ್ರಯದಲ್ಲಿ ಗುರು-ಲಿಂಗ-ಜಂಗಮವ ಸಂಬಂಧವ ಮಾಡಿದನೆಂಬುದೀಗ, ಮಂಜುಳದ ಮೂರಂಗವೆಂಬ ಶಬ್ದಕ್ಕರ್ಥ. ಆ ಲಿಂಗ ತ್ರಯ ಸಂಬಂಧವಾದ ಶರಣನು ಕುಬುದ್ಧಿಯಳಿದ, ಸುಬುದ್ಧಿಯನೆ ಕಂಭವ ಮಾಡಿದನೆಂಬುದೀಗ, ಮುಂಡಿಗೆಯನೆಟ್ಟು ಎಂಬ ಶಬ್ದಕ್ಕರ್ಥ. ಆ ಶರಣನ ಕುಮನವಳಿದ ನೆರಿತವಾದ ಸುಮನಸ್ಸೆಂಬುದೀಗ, ಸರಂಗದ ಸುಮನವೆಂಬ ಶಬ್ದಕ್ಕರ್ಥ. ಅಂತು ಮನ ಬುದ್ಧಿಗಳೆರಡು ನಷ್ಟವಾದಲ್ಲಿ ಶರಣ ಲಿಂಗವೆಂಬು ಭಯ ವಳಿದ ಚಿಮ್ಮರನ ಹಾಕಿದನೆಂಬುದೀಗ, ಡೊಂಕರತ ಚಿಮ್ಮರನ ಹಾಕಿ ಎಂಬ ಶಬ್ದಕ್ಕರ್ಥ. ಅಂತು ಉಭಯವಳಿದು, ಒಂದೆಯಾದ ಶರಣಂಗೆ ಜ್ಞಾನ ಕ್ರಿಯಾ ಚಾರವೆಂಬುಭಯವು ಇಕ್ಕೆಲದ ಸೂರಾಯಿತ್ತೆಂಬುದೀಗ, ಗತಿಮತಿಯೆಂಬ ಇಕ್ಕೆ

ಲದ ಸೂರಿಗೆಂಬ ಶಬ್ದಕ್ಕರ್ಥ. ಆ ಜ್ಞಾನ ಕ್ರಿಯಲ್ಲಿ ತತ್ಪರನಾದ ಶರಣ, ನಾ ಪರಶಿವ ಸ್ವರೂಪನು, ನಾ ಪರಬ್ರಹ್ಮಸ್ವರೂಪನು ಎಂಬ ನಿಶ್ಚಯುವೀಗ, ನಿಜ ನಿಶ್ಚಯುವೆಂಬ ಹುಲುಬಡುವ ಹಾಕಿ ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವೇ ತಾನಾದ ಶರಣನ ಸಕಲ ಕರಣಂಗಳೆಲ್ಲ ಲಿಂಗಕರಣಂಗಳಾಗಿ ಲಿಂಗದಲ್ಲಿ ಏಕಾರ್ಥವಾದನೆಂಬುದೀಗ, ಏರಿಸಿದಗಳು ಎಂಬ ಶಬ್ದಕ್ಕರ್ಥ. ಅಂತು!ಕರಂಗಳ ಲಿಂಗದಲ್ಲಿ ಏಕಾರ್ಥವ ಮಾಡಿದ ಶರಣಂಗೆ ಸಂಕಲ್ಪ-ವಿಕಲ್ಪ ಜ್ಞಾನವಿಲ್ಲದ ಸ್ವಸ್ಥವಾದ ಶಿವಜ್ಞಾನವೆಂಬ ಮೂಗುತಿ ಗೊಲಿನಲ್ಲಿ ನಿಂದಿತ್ತೆಂಬುದೀಗ, ಚಿತ್ತಶುದ್ಧವೆಂಬ ಮೂಗುತಿ ಗೊಲಿನಲ್ಲಿ ನಿಂದಿತ್ತೆಂಬ ಶಬ್ದಕ್ಕರ್ಥ. ಅಂತು ಶಿವಜ್ಞಾನದಲ್ಲಿ ನಿರ್ಭರನಾದ ಶರಣನಸಕಲಕರಣಂಗಳು ಭಿನ್ನವರ್ತನೆಗೆ ತೊಲಗದೆ ಹಾಗೆ ಸದ್ಭಾವದಿಂ ಬಂಧಿಸಿದನೆಂಬುದೀಗ, ಗಳು ತೊಲಗದ ಕಟ್ಟು ಎಂಬ ಶಬ್ದಕ್ಕರ್ಥ. ಅಂತು ಸಕಲ ಕರಣಂಗಳು ಸದ್ಭಾವದಲ್ಲಿ ಸನ್ನಿಹಿತವಾದ ಶರಣ ಗುರು-ಲಿಂಗ ಜಂಗಮದಲ್ಲಿ ವಿಶ್ವಾಸ ನೆಲೆಗೊಂಡಲ್ಲಿ ಸಾಧ್ಯವಾಯಿತ್ತೆಂಬುದೀಗ ವಿಶ್ವಾಸ ನಿಶ್ಚಯದಲ್ಲಿ ನಿಂದಿತ್ತೆಂಬ ಶಬ್ದಕ್ಕರ್ಥ ಆ ತ್ರಿವಿಧ ಭಕ್ತಿಯಲ್ಲಿ ತತ್ಪರನಾದ ಶರಣಂಗೆ ಸಂಕಲ್ಪ ವಿಕಲ್ಪ ನಷ್ಟವಾಗಿ ಜ್ಞಾನ ಕ್ರಿಯಾಚಾರವೆಂಬ ಹಂಜರ ಸ್ಥಿರವಾಯಿತ್ತೆಂಬುದೀಗ, ಸಂದೇಹನಿಂದು ಹಂಜರವೇರಿತ್ತೆಂಬ ಶಬ್ದಕ್ಕರ್ಥ. ಆ ಜ್ಞಾನ ಕ್ರಿಯಾಚಾರದಲ್ಲಿ ನಿರ್ಭರನಾದ ಶರಣಂಗೆ ಗುಣತ್ರಯಂಗಳು ನಷ್ಟವಾಗಿ ಇಷ್ಟ, ಪ್ರಾಣ, ಭಾವ, ಲಿಂಗತ್ರಯ ಸಂಬಂಧವಾಯಿತ್ತೆಂಬುದೀಗ, ಕಡೆ ನಡು ಮೊದಲೆನ್ನದೆ ತ್ರಿಗುಣದ ಕಂತೆ ಕಟ್ಟೆ ಎಂಬ ಶಬ್ದಕ್ಕರ್ಥ. ಅಂತು ಲಿಂಗತ್ರಯ ಸಂಬಂಧವಾದ ಶರಣ ಪರಶಿವ ತತ್ವವೆ ತನ್ನ ನಿಜವೆಂದರಿದು ಮರಿಯದೆ ಇರ್ದ ಹುಲ್ಲು ಕವಿಸಿತ್ತೆಂಬುದೀಗ, ಅರಿದು ಮರೆಯದ ಹುಲ್ಲು ಕವಿಸಿತ್ತೆಂಬ ಶಬ್ದಕ್ಕರ್ಥ. ಆ ಸುಜ್ಞಾನ ಸ್ವರೂಪನಾದ ಶರಣನು ಚಿದ್ ಘನಲಿಂಗಕ್ಕೆ ಚಿದ್ ಗೃಹವ ಮಾಡಿದ ತನ್ನ ನೆನಹಿನ ಅಗ್ರಪದಲ್ಲಿಯೆಂಬ ದೀಗ, ಮನೆಯಾಯಿತ್ತು ಮನದ ಕೊನೆಯಲ್ಲಿ ಎಂಬ ಶಬ್ದಕರ್ಥ. ಆ ಚಿದ್ ಗೃಹವ ಮಾಡಿದ ಚಿದ್ರೂಪನಾದ ಶರಣನ ವೃನ್ಮನಿ ಸ್ವರೂಪವಾದ ಚಿದ್ ದ್ವಾರವು ಚಿದ್ ಘನಲಿಂಗದಲ್ಲಿ ನಿರ್ವಯಲಾಯಿತ್ತೆಂಬುದೀಗ, ಬಾಗಿಲ ಬಯಲಾಯಿತ್ತು!ಸದಾ ಶಿವಮೂರ್ತಿ ಲಿಂಗವು ನಿರಾಳವಾಯಿತ್ತು ಎಂಬ ಶಬ್ದಕ್ಕರ್ಥ.

೧೭

ಕಣ್ಣಿನ ಮನೆಯಲ್ಲಿ ಕನ್ನದ ಗರತಿ ಹಡದುಂಬುತ್ತೈದಾಳೆ
ಅವಳ ಕೂಟವ ಕೂಡುವದಕ್ಕೆ
ತಲೆ ಕೆಳಗಾಗಿ, ಕಾಲು ಮೇಲಾಗಿ, ಕೈಯ್ಯ ಪ್ರದಕ್ಷಿಣವಾಗಿ
ತರ್ಕಿಸಿಕೊಂಡು
ಹಿಂದು ಮುಂದಾಗಿ ಮುತ್ತನಿಕ್ಕಿ ಶಕ್ತಿಯ ಸುಖ ಲೇಸಾಯಿತ್ತು
ಸದಾಶಿವ ಮೂರ್ತಿ ಲಿಂಗ ಬಚ್ಚ ಬಯಲು.

**ಟೀಕು:—** ಕಣ್ಣೆಂದೊಡೆ ಸುಜ್ಞಾನ ದೃಷ್ಟಿ. ಆ ಸುಜ್ಞಾನ ದೃಷ್ಟಿಯನೊಳಕೊಂಡಿರ್ಪ ಚಿದಾಳಯದಲ್ಲಿ ಎಂಬುದೀಗ, ಕಣ್ಣಿನ ಮನೆಯಲ್ಲಿಯೆಂಬ ಶಬ್ದ

ಕ್ಕರ್ಥ. ಆ ಸುಜ್ಞಾನಕಾಯದಲ್ಲಿ ಸಕಲಪ್ರಪಂಚ ಹೊದ್ದದೆ ಚದುರಿನಿಂದಿರ್ಪ ಜ್ಞಾನಶಕ್ತಿ ಶಿವಸುಖ ಪ್ರಸಂಗ ಪ್ರಸಾದವ ಹಡದು ಪರಮಾನಂದದಿಂ ಸ್ವೀಕರಿಸುತ್ತಿರ್ದಳೆಂಬುದೀಗ, ಕನ್ನದ ಗರತಿ ಹಡದುಂಬುತ್ತೈದಾಳೆಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನಶಕ್ತಿಯಲ್ಲಿ ಬೆರಸುವದಕ್ಕೆ ಎಂಬುದೀಗ, ತಲೆ ಕೆಳಗಾಗಿ, ಕಾಲು ಮೇಲಾಗಿ ಎಂಬ ಶಬ್ದಕ್ಕರ್ಥ. ಆ ಶರಣ ಸತಿಯ ಸದ್ಭಾವ ಹಸ್ತವು ಪೂರ್ವ ಕ್ರಿಯಾಚಾರವ ಮೀರಿಹುದೆಂಬುದೀಗ, ಕೈಯ್ಯ ಪ್ರದಕ್ಷಿಣವಾಗಿಯೆಂಬ ಶಬ್ದಕ್ಕರ್ಥ. ಆ ಶರಣನು ಸದ್ಭಾವಹಸ್ತದಿಂದ ಜ್ಞಾನಶಕ್ತಿಯನಾಲಂಗಿಸಿಕೊಂಡನೆಂಬುದೀಗ, ತರ್ಕಿಸಿಕೊಂಡು ಎಂಬ ಶಬ್ದಕ್ಕರ್ಥ. ಆ ಜ್ಞಾನಶಕ್ತಿಯಲ್ಲೊಡಗೂಡಿರ್ಪ ಶರಣನು ತನ್ನ ಸುಜ್ಞಾನ ದೃಷ್ಟಿಯ ಮುಂದೆ ತೋರುವ ಪರಶಿವ ತತ್ವದಲ್ಲಿ ಸಮರಸವಾದನೆಂಬುದೀಗ, ಹಿಂದುಮುಂದಾಗಿ ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವೆ ತಾನಾದ ಶರಣನು ಶಿವೋಹಂವೆಂಬ ಪಂಚಾಕ್ಷರಾಮೃತ ರಸವನು ಜ್ಞಾನಶಕ್ತಿಯ ಮುಖದಿಂ ಸ್ವೀಕರಿಸುತ್ತಿಹನೆಂಬುದೀಗ, ಮುತ್ತನಿಕ್ಕಿ ಎಂಬ ಶಬ್ದಕ್ಕರ್ಥ. ಇಂತಪ್ಪ ಜ್ಞಾನ ಶಕ್ತಿಯ ಸಮರಸಕೂಟದ ಸುಖವು ಶರಣಂಗೆ ಲೇಸಾಯಿತ್ತೆಂಬುದೀಗ, ಶಕ್ತಿಯ ಸುಖಲೇಸಾಯಿತ್ತು ಸದಾಶಿವ ಮೂರ್ತಿಲಿಂಗ ಬಚ್ಚಬಯಲೆಂಬ ಶಬ್ದಕ್ಕರ್ಥ.

## ೧೮

ಸುಖ ದುಃಖದ ನಡುವೆ ಒಂದು ತಿರಕದ ಕೂಸು ಹುಟ್ಟಿ
ಹಾಲನೊಲ್ಲದೆ ಮೂರು ಕೂಳು ಬೇಡುತ್ತದೆ.
ಕೂಳು ಕುಡಿವದಕ್ಕೆ ಮೊದಲೆ ಗಂಜಿಯ ಕುಡಿದು
ಕೂಸು ಹೇಳದೆ ಹೋಯಿತ್ತು.
ಸದಾಶಿವ ಮೂರ್ತಿ ಲಿಂಗವ ನರಿದು.

**ಟೀಕು:—** ದೇಹಾತ್ಮರ ಮಧ್ಯದಲ್ಲಿ ನಾನಾ ದುಶ್ಚರಿತ್ರವನುಳ್ಳ ಮನಸ್ಸು ಹುಟ್ಟಿತ್ತೆಂಬುದೀಗ, ಸುಖ-ದುಃಖದ ನಡುವೆ ಒಂದು ತಿರಕದ ಕೂಸು ಹುಟ್ಟಿ ಎಂಬ ಶಬ್ದಕ್ಕರ್ಥ. ಆ ದೇಹಾತ್ಮರ ಮಧ್ಯದಲ್ಲಿ ಹುಟ್ಟಿದ ಮನಸ್ಸು ಜ್ಞಾನಾಮೃತ ರಸವನಿಚ್ಛೈಸವೆಂಬುದೀಗ, ಹಾಲನೊಲ್ಲದೆಯೆಂಬ ಶಬ್ದಕ್ಕರ್ಥ. ಆ ಸುಜ್ಞಾನ ನಷ್ಟವಾದ ಮನಸ್ಸು ಸಂಚಿತ ಪ್ರಾರಬ್ಧ ಆಗಾಮಿಯೆಂಬ ಕರ್ಮತ್ರಯಂಗಳ ಭಿನ್ನಾಪೇಕ್ಷೆಯಿಂದಿಚ್ಛೈಸುತ್ತಿಹುದೆಂಬುದೀಗ, ಮೂರು ಕೂಳುಬೇಡುತ್ತದೆ ಎಂಬ ಶಬ್ದಕ್ಕರ್ಥ. ಆ ಮನೋಮಧ್ಯದಲ್ಲಿ ಜ್ಞಾನಾಗ್ನಿ ಪ್ರಭಾವಿಸಲು ಆ ಜ್ಞಾನಾಗ್ನಿಯ ಪ್ರಕಾಶದಿಂ ಕರ್ಮತ್ರಯಂಗಳು ಸಮರಸಪಾಕವಾದಾಕ್ಷಣ ವೆಂಬುದೀಗ, ಕೂಳು ಕುಡಿವುದಕ್ಕೆ ಮೊದಲೆ ಎಂಬ ಶಬ್ದಕ್ಕರ್ಥ. ಆ ಕರ್ಮತ್ರಯಂಗಳು ಜ್ಞಾನಾಗ್ನಿಯಲ್ಲಿ ದಗ್ಧವಾಗಲು ಆ ಮನಸ್ಸು ಚಿದಮೃತ ರಸವ ನವಗ್ರಹಿಸಿ ಮಹಾಘನ ಲಿಂಗದಲ್ಲಿ ನಿಷ್ಪತ್ತಿಯಾದಲ್ಲಿ ಶಬ್ದಜಾಲವಳಿದು ಹೋಯಿತ್ತೆಂಬುದೀಗ, ಗಂಜಿಯ ಕುಡಿದು ಕೂಸು ಹೇಳದೆ ಹೋಯಿತ್ತು ಸದಾಶಿವ ಮೂರ್ತಿ ಲಿಂಗವನರಿದು ಎಂಬ ಶಬ್ದಕ್ಕರ್ಥ.

## ೧೯

ಸಿರಿಶೈಲದ ಮಧ್ಯದಲ್ಲಿ ಒಂದು ಪರುಷ ರಸದ ಭಾವಿ ಹುಟ್ಟಿತ್ತು.
ಆ ಭಾವಿಯೊಳಗೆ ಕಬ್ಬುನದ ಅದಿರು ಹುಟ್ಟಿ,
ಸಿದ್ಧ ರಸವ ನುಂಗಿತ್ತು.
ಇದ್ದವನ ಸುದ್ದಿಯ ಸತ್ತವ ಹೇಳಿ ಕಾಣದವ ಕೇಳಿ ಹೋದ.
ಸದಾಶಿವ ಮೂರ್ತಿಲಿಂಗ ಬಚ್ಚ ಬಯಲು

**ಟೀಕು:**— ಬ್ರಹ್ಮರಂಧ್ರದ, ಸಹಸ್ರದಳ ಕಮಲಕರ್ಣಿಕಾ ಮಧ್ಯದಲ್ಲಿ ಎಂಬುದೀಗ, ಸಿರಿಶೈಲದ ಮಧ್ಯದಲ್ಲಿ ಎಂಬ ಶಬ್ದಕ್ಕರ್ಥ. ಆ ಬ್ರಹ್ಮರಂಧ್ರದ ಸ್ಥಾನದಲ್ಲಿ ಪವಿತ್ರಸ್ವರೂಪವಾದ ಪರಮಾಮೃತ ಕೂಪವುದಯಿಸಿತ್ತೆಂಬುದೀಗ, ಒಂದು ಪರುಷ ರಸದ ಭಾವಿ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಆ ಪರಮಾಮೃತ ಕೂಪವನೊಳಕೊಂಡಿರ್ದ ಚಿದ್ ಘನ ಲಿಂಗದಿಂದ ಆ ಜ್ಞಾನ ಸಂಬಂಧವಾದ ದೇಹ ಭಾವ ತೋರಿತ್ತು ಜೀವಂಗೆಂಬುದೀಗ, ಆ ಭಾವಿಯೊಳಗೆ ಕಬ್ಬುನದ ಅದಿರುಹುಟ್ಟಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹವು ಆ ಪರಮಾಮೃತ ರಸಬಿಂದುವನೊಳಕೊಂಡಿಹುದೆಂಬುದೀಗ, ಸಿದ್ಧರಸವ ನುಂಗಿತ್ತು ಎಂಬ ಶಬ್ದಕ್ಕರ್ಥ. ಇಂತಪ್ಪ ದೇಹ ಸಂಬಂಧಿಯಾಗಿರ್ದಾತ್ಮಂಗೆ ಶಿವಕೃಪೆಯಿಂ ಸುಜ್ಞಾನೋದಯವಾಗಲು, ಅಂತರಂಗದ ಸುಜ್ಞಾನ ಗುರುವೆ ಕ್ರಿಯಾ ಘನ ಗುರುವಾಗಿ ಬಂದು ಅಂಗಕ್ಕೆ ಲಿಂಗ ಸಂಬಂಧವ ಮಾಡಿ ತನ್ನಾದಿಯ ನೆಚ್ಚರಿಸಿ ಸುಜ್ಞಾನಬೋಧೆಯ ನಿರೂಪಿಸುತ್ತಿರ್ದನೆಂಬುದೀಗ, ಇದ್ದವನ ಸುದ್ದಿಯ ಸತ್ತವ ಹೇಳಿ ಎಂಬ ಶಬ್ದಕ್ಕರ್ಥ. ಸಕಲ ಪ್ರಪಂಚ ನಿವಿರಿಟ್ಟು ಕಾಣದೆಯಿರ್ದ ಚಿತ್ ಸ್ವರೂಪನಾದ ಶರಣನು ಆ ಶ್ರೀಗುರುವಿನ ಸುಜ್ಞಾನ ಬೋಧೆಯ ಕೇಳಿ ಆ ಗುರು ಮಾರ್ಗಾಚಾರ ವಿಡಿದು ಶಿವತತ್ವದತ್ತಲೆಯ್ದುತ್ತಿರ್ದನೆಂಬುದೀಗ, ಕಾಣದವ ಕೇಳಿ ಹೋದ ಸದಾಶಿವಮೂರ್ತಿ ಲಿಂಗ ಬಚ್ಚ ಬಯಲು ಎಂಬ ಶಬ್ದಕ್ಕರ್ಥ.

## ೨೦

ಸೂಜಿಯ ಮೊನೆಯಲ್ಲಿ ದಾರವೇರಿ ಹಿನ್ನಿಯ ಹಂಗ ಬಿಡಿಸಿತ್ತು.
ಉಂಬ ಹಂಗ ಕಣ್ಣು ಕಂಡು ಬಾಯ ಹಂಗ ಬಿಡಿಸಿತ್ತು.
ಮನಕಂಡು ಕೈಯ್ಯ ಸಂದೇಹವ ಬಿಡಿಸಿತ್ತು.
ಮನ ಘನದಲ್ಲಿ ನಿಂದು ಸದಾಶಿವ ಮೂರ್ತಿ ಲಿಂಗದ
ಕುರುಹಳಿಯಿತ್ತು.

**ಟೀಕು:**— ಚಿದ್ರೂಪನಾದ ಶರಣನ ಶಿವಾನುಭಾವ ಸನ್ನಿಹಿತವಾದ ಮನಸ್ಸಿನಗ್ರದಲ್ಲಿ ಸ್ವಾನುಭಾವ ಸೂತ್ರವ ಪ್ರಯೋಗಿಸಿದನೆಂಬುದೀಗ, ಸೂಜಿಯ ಮೊನೆಯಲ್ಲಿ ದಾರವೇರಿ, ಎಂಬ ಶಬ್ದಕ್ಕರ್ಥ. ಆ ಶಿವಾನುಭಾವದಲ್ಲಿ ಸನ್ನಿಹಿತವಾದ ಸ್ವಾನುಭಾವಸೂತ್ರವು ಕ್ರಿಯಿಂದೊದಗುವ ಭಿನ್ನ ಫಲಪದಂಗಳ ನಿವೃತ್ತಿ

ಮಾಡಿತ್ತೆಂಬುದೀಗ, ಹಿಸ್ತಿಯಹಂಗ ಬಿಡಿಸಿತ್ತೆಂಬ ಶಬ್ದಕ್ಕರ್ಥ. ಆ ಭಿನ್ನ ಫಲಪದಂಗಳು ನಿವೃತ್ತಿಯಾಗಲು ಸಕಲ ವಿಷಯ ಭೋಗಂಗಳ ಜೀವನು ಭುಂಜಿಸುತ್ತಿಹುದನು ಶರಣ ಸುಜ್ಞಾನ ದೃಷ್ಟಿಯಿಂ ಕಂಡು ಆ ಭಿನ್ನಾಪೇಕ್ಷೆಯನು ನಷ್ಟವ ಮಾಡಿದನೆಂಬುದೀಗ, ಉಂಬ ಹಂಗ ಕಣ್ಣು ಕಂಡು ಬಾಯ ಹಂಗು ಬಿಡಿಸಿತ್ತು ಎಂಬ ಶಬ್ದಕ್ಕರ್ಥ. ಅಂತು ಭಿನ್ನಾಪೇಕ್ಷೆ ನಷ್ಟವಾಗಲು ತನ್ನ ನಿಜಾಂತರಂಗದಲ್ಲಿರ್ಪ ಪ್ರಾಣಲಿಂಗವನು ಮನ ಸುಜ್ಞಾನದೃಷ್ಟಿಯಿಂಕಂಡು ಅವಿರಳ ಸಂಬಂಧಿಯಾಗಲು ಕರಸ್ಥಲದಲ್ಲಿ ಇಷ್ಟಲಿಂಗವಿಡಿದು ಮಾಡುವ ಸತ್ಕ್ರಿಯಾಚಾರವೆಲ್ಲ ನಿಷ್ಪತಿಯಾದವೆಂಬುದೀಗ, ಮನಕಂಡು ಕೈಯ ಸಂದೇಹವ ಬಿಡಿಸಿತ್ತು ಎಂಬ ಶಬ್ದಕ್ಕರ್ಥ. ಈ ಜ್ಞಾನಕ್ರಿಯವನೊಳಕೊಂಡಿರ್ಪ ಮನಸ್ಸು ನಿಷ್ಕಲ ಪರಬ್ರಹ್ಮದಲ್ಲಿ ಸ್ವಸ್ಥಿರವಾಗಿ ಸಮರಸನನೆಯ್ದಿತ್ತೆಂಬುದೀಗ, ಮನ ಘನ ದಲ್ಲಿ ನಿಂದು ಸದಾಶಿವಮೂರ್ತಿಲಿಂಗದ ಕುರುಹಳಿಯಿತ್ತು ಎಂಬ ಶಬ್ದಕ್ಕರ್ಥ.

೨೧

ಮಹಾ ಮನೆಯೊಳಗೊಂಡು ಮಂದಿರವಾಡ
ಅದರೊಳಗೆ ಹದಿನಾರು ಕೋಣೆ,
ಒಂಭತ್ತು ಬಾಗಿಲು ಮುಚ್ಚಿ ಒಂದು ಬಾಗಿಲು ತೆಗೆದಿಹುದು.
ತೆಗದ ಬಾಗಿಲಲ್ಲಿ ಮೂರು ಮುಖದ ಸರ್ಪ ಊರ್ಧ್ವ ಮುಖವಾಗಿ ತಿರುಗಾಡುತ್ತಿಹುದು.
ಮಿಕ್ಕ ಆರು ಬಾಗಿಲಿನಲ್ಲಿ ಮೂರು ಬಾಗಿಲು ಕೀಳಾಗಿ
ಕೀಳಿನೊಳಗೆ ಅಧೋ ಮುಖದ ಸರ್ಪ ವುಡುಗಿಹುದು.
ಮೇಲಣ ಮೂರು ಬಾಗಿಲ ಊರ್ಧ್ವದ ತ್ರಿಗುಣದ ಸರ್ಪ
ಬಾಲ ಮೊದಲು ತಲೆ ಕಡೆಯಾಗಿ ಎದ್ದು ನಿಂದಾಡುತ್ತಿರಲಾಗಿ
ವಿಶ್ವಮಯವೆಂಬ ಆಕಾಶದ ಹದ್ದು ಹೊಯ್ದಿತ್ತಿತ್ತು
ಅದರೊಳಗೆ ಎರಡು ತಲೆ ಮುರದು ಒಂದು ತಲೆ ಎಚ್ಚತ್ತು
ಹದ್ದಿನ ಕೊಕ್ಕ ತಪ್ಪಿ ಕಾಲುಗುರ ಹೆಜ್ಜೆಯ ಘಾಯವ ತಪ್ಪಿ
ಗರಿಯ ಅಡುಹ ತೊಲಗಿಸಿ ಹಿಡಿಯಿತ್ತು
ಅಡಿ ಹೊಟ್ಟೆಯ ನೋಡಿಯೇರಿತ್ತು
ವಿಷ ಹದ್ದಿನ ಅಸುವ ಬಿಡಿಸಿತ್ತು
ಹದ್ದು ಹಾವು ಕೂಡಿ ಘಟಕರ್ಮಕೊಳಗಾಯಿತ್ತು
ಕರ್ಮದೊಳಗಾದ ಜ್ಞಾನ ಸದಾಶಿವ ಮೂರ್ತಿ ಲಿಂಗವ ಮುಟ್ಟದುದಿಲ್ಲ.

**ಟೀಕು:**— ಸಕಲ ತತ್ವಂಗಳಿಗಾಶ್ರಯವಪ್ಪ ಸ್ಥೂಲತನು ಮಧ್ಯಸ್ಥವಾದ ಸೂಕ್ಷ್ಮಾಂತರಂಗವೆ ಜೀವಂಗಾಶ್ರಯವಾಗಿರ್ಪುದೆಂಬುದೀಗ, ಮಹಾಮನೆಯೊಳಗೊಂದು ಮಂದಿರವಾಡವೆಂಬ ಶಬ್ದಕ್ಕರ್ಥ. ಅಲ್ಲಿ ಬಾಹ್ಯಭ್ಯಾಂತರದ ಷೋಡಶ ಮದಂಗಳೆ ಕೋಣೆಗಳಾಗಿಹವೆಂಬುದೀಗ, ಅದರೊಳಗೆ ಹದಿನಾರು ಕೋಣೆಯೆಂಬ ಶಬ್ದಕ್ಕರ್ಥ. ಆ ದೇಹಸಂಬಂಧವಾದ ನವದ್ವಾರಂಗಳ ಮಾಯಾತಮಂಧ ಮುಸುಕಿಕೊಂಡಿಹುದೆಂಬುದೀಗ, ಒಂಬತ್ತು ಬಾಗಿಲುಮುಚ್ಚಿ ಎಂಬ ಶಬ್ದಕ್ಕರ್ಥ. ನವದ್ವಾರಂಗಳಿಗೆ ಮುಖ್ಯವಾದ ಸುಷುಮ್ನದ್ವಾರ ಪ್ರಾಣವಾಯುವಿನ ದುಸ್ಸಂಚಲ ಪ್ರವರ್ತನಕ್ಕೆ ತೆರಪಾಗಿಹುದೆಂಬುದೀಗ, ಒಂದು ಬಾಗಿಲು ತೆಗದಿಹುದೆಂಬ ಶಬ್ದಕ್ಕರ್ಥ. ಆ ದ್ವಾರದಲ್ಲಿ ಪ್ರಕೃತಿತ್ರಯವೆ ಮುಖ್ಯವಾಗಿರ್ಪ ಪ್ರಾಜ್ಞನು ವೃತ್ತಿಜ್ಞಾನದಿಂ ಹಂಸಗತಿಗಳಿಂ ಚರಿಸುತ್ತಿರ್ದನೆಂಬುದೀಗ, ತೆಗದ ಬಾಗಿಲಲ್ಲಿ ಮೂರು ಮುಖದ ಸರ್ಪ ಊರ್ಧ್ವಮುಖನಾಗಿ ತಿರುಗಾಡುತ್ತಿಹುದೆಂಬ ಶಬ್ದಕ್ಕರ್ಥ. ನವದ್ವಾರ ಯುಕ್ತವಾದ ಷಡ್ದ್ವಾರಂಗಳಲ್ಲಿ ಎಂಬುದೀಗ, ಮಿಕ್ಕ ಆರುಬಾಗಿಲಿನಲ್ಲಿ ಎಂಬ ಶಬ್ದಕ್ಕರ್ಥ. ಅದರೊಳಗೆ ಪಾಯು ಗುಂಹ್ಯ ಜಿಹ್ವೇಂದ್ರಿಯವೆ ಪ್ರಕೃತಿ ಸ್ವರೂಪವಾದ ದೇಹ ಸಂಬಂಧವಾಗಿಹವು; ಅಲ್ಲಿ ಅಜ್ಞಾನವೆ ಮುಖವಾಗಿರ್ಪ ವಿಶ್ವನು ಹುದುಗಿಹನೆಂಬುದೀಗ, ಮೂರು ಬಾಗಿಲು ಕೀಳಾಗಿ ಕೀಳಿನೊಳಗಧೋಮುಖದ ಸರ್ಪ ಉಡುಗಿಹುದೆಂಬ ಶಬ್ದಕ್ಕರ್ಥ. ಮನೋವೃತ್ತಿಯನುಳ್ಳ ಘ್ರಾಣನೇತ್ರ ಶ್ರೋತ್ರಂಗಳಲ್ಲಿ ವೃತ್ತಿಜ್ಞಾನದಿಂ ವೃತ್ತಿಜ್ಞಾನದಿಂ ಗುಣತ್ರಯ ಸ್ವರೂಪವಾದ ತೈಜಸಂಗೆ ಜ್ಞಾನಾ ಜ್ಞಾನಂಗಳೇ ತಲೆ ಬಾಲವಾದಕಾರಣ ಒಂದರೊಳಗೊಂದು ಕೂಡಿ ಪ್ರಪಂಚು ಕ್ರೀಡಿಯಲ್ಲಿಹನೆಂಬುದೀಗ, ಮೇಲಣ ಮೂರು ಬಾಗಿಲು ಊರ್ಧ್ವತ್ರಿಗುಣದ ಸರ್ಪಬಾಲ ಮೊದಲು ತಲೆಕಡೆಯಾಗಿ ಎದ್ದು ನಿಂದಾಡುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಆತ್ಮಾಕಾಶಮಯಂ ತಾವತ್ ಎಂಬ ಶ್ರುತಿ ಪ್ರಮಾಣದಿಂ ಆತ್ಮಾಕಾಶದಲ್ಲಿ ಸ್ವಲೀಲಾ ಪರನಾಗಿರ್ಪ ಪರಮಹಂಸನು ಯೋಗಕ್ರಮಾನು ಸಂಧಾನಂಗಳಿಂ ಶಂಕಾ ವಿಷವನುಳ್ಳ ಜೀವತ್ರಯಂಗಳ ನವಗ್ರಹಿಸಿ ಚಿದಾಕಾಶಪತ್ತಭಿ ಮುಖನಾಗಲೆಂಬುದೀಗ, ವಿಶ್ವಮಯವೆಂಬ ಆಕಾಶದ ಹದ್ದು ಹೊಯ್ದೊತ್ತಿತ್ತೆಂಬ ಶಬ್ದಕ್ಕರ್ಥ. ಸ್ವಪ್ನಾವಸ್ಥೆಯನುಳ್ಳ ತೈಜಸನು ಸುಷುಪ್ನಾವಸ್ಥೆಯನುಳ್ಳ ಪ್ರಾಜ್ಞನು ಭಿನ್ನಜ್ಞಾನದಲ್ಲಿ ಮೂರ್ಛಿತನಾದನೆಂಬುದೀಗ, ಅದರೊಳಗೆರಡು ತಲೆ ಮುರದು ಎಂಬ ಶಬ್ದಕ್ಕರ್ಥ. ವಿಶ್ವನು ಜಾಗ್ರದವಸ್ಥೆಯಿಂದೆಚ್ಚತ್ತು ಆ ಪರಮಾತ್ಮನ ಭಾವದಿಂ ತಪ್ಪಿಸಿ ಕ್ರಿಯಾಚಾರ ಜ್ಞಾನಗ್ರಹಕಕ್ಕೆ ಒಳಗಲ್ಲದೆ ಯೋಗಾನುಸಂಧಾನಕ್ಕೆ ವಿಲಕ್ಷಣವಾಗಿ ಆ ಪರಮಾತ್ಮ ಜ್ಞಾನವನವಗ್ರಹಿಸಿತ್ತೆಂಬುದೀಗ, ಒಂದು ತಲೆ ಎಚ್ಚತ್ತು ಹದ್ದಿನ ಕೊಕ್ಕತಪ್ಪಿ ಕಾಲುಗುರ ಹೆಜ್ಜೆಯ ಘಾಯವ ತಪ್ಪಿ ಗರಿಯ ಅಡುವ ತೊಲಗಿಸಿ ಹಿಡಿಯಿತ್ತು ಅಡಿಹೊಟ್ಟೆಯ ನೋಡಿ ಎಂಬ ಶಬ್ದಕ್ಕರ್ಥ. ಆ ಜೀವನ ಶಂಕಾವಿಷ ಭಿನ್ನ ಜ್ಞಾನವ ಪ್ರವೇಶಿಸಲು ಆ ಪರಮಾತ್ಮಂಗೆ ಚೈತನ್ಯ ಸ್ವರೂಪವಾದಲಿಂಗ ತೊಲಗಿತ್ತೆಂಬುದೀಗ, ಹರಿತ್ತು ವಿಷ ಹದ್ದಿನ ವಿಷವ ಬಿಡಿಸಿತ್ತೆಂಬ ಶಬ್ದಕ್ಕರ್ಥ. ಆ ಜೀವಪರಮರು ದೇಹಪ್ರಪಂಚು ಜ್ಞಾನಲಿಂಗ ಮುಟ್ಟಿಹು

ದಿಲ್ಲೆಂಬುದೀಗ, ಹದ್ದು ಹಾವ ಕೂಡಿ ಘಟ ಕರ್ಮಕ್ಕೆ ಒಳಗಾಯಿತ್ತು ಕರ್ಮದೊಳಗಾದ ಜ್ಞಾನ ಸದಾಶಿವ ಮೂರ್ತಿ ಲಿಂಗವ ಮುಟ್ಟಿದುದಿಲ್ಲವೆಂಬ ಶಬ್ದಕ್ಕರ್ಥ.

೨೨

ಹೂವಿನ ಮೇಲಣ ತುಂಬಿ ಹುವ್ವ ತಿಂದು ಗಂಧವನುಳುಹಿತ್ತು
ಉಳಿದ ಗಂಧ ತುಂಬಿಯು ತಿಂದು, ತುಂಬಿ ಗಂಧ
ಒಂದೇ ಯಾಯಿತ್ತು
ಅದು ನಿರಂಗದಿರವು ಸದಾಶಿವ ಮೂರ್ತಿ ಲಿಂಗವು ತಾನೆ.

ಟೀಕು:— ಶರಣನ ಹೃದಯ ಕಮಲದಲ್ಲಿರ್ಪ ಪರಿಪೂರ್ಣಜ್ಞಾನವೆಂಬುದೀಗ, ಹುವ್ವಿನ ಮೇಲಣ ತುಂಬಿಯೆಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪವಾದ ಶರಣನು ತನ್ನ ಪರಿಪೂರ್ಣಜ್ಞಾನದಿಂ ಹೃದಯ ಕಮಲವ ನವಗ್ರಹಿಸಿ ಸದ್ವಾಸನಾ ಸ್ವರೂಪವಾದ ಪ್ರಾಣಲಿಂಗವನು ತನ್ನ ನಿಜಾಂತರಂಗದಲ್ಲಿ ಮೂರ್ತಿಗೊಳಿಸಿದನೆಂಬುದೀಗ, ಹೂವ ತಿಂದು ಗಂಧವ ನುಳುಹಿತ್ತೆಂಬ ಶಬ್ದಕ್ಕರ್ಥ. ಅಂತರಂಗದಲ್ಲಿ ಉಳುಮೆಯ ಸ್ವರೂಪವಾಗಿರ್ಪ ಪ್ರಾಣಲಿಂಗವು ಶರಣನ ಪರಿಪೂರ್ಣ ಜ್ಞಾನವ ನವಗ್ರಹಿಸಿತ್ತೆಂಬುದೀಗ, ಉಳಿದ ಗಂಧ ತುಂಬಿಯು ತಿಂದು ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣ ಜ್ಞಾನ ಸ್ವರೂಪನಾದ ಶರಣನ ಪ್ರಾಣಲಿಂಗವವಗ್ರಹಿಸಿ ಸದ್ವಾಸನಾ ಸ್ವರೂಪವಾದ ಪ್ರಾಣಲಿಂಗವ ಶರಣನವಗ್ರಹಿಸಿ ಎರಡೂ ಏಕವಾಗಿ ಒಂದೇ ಸ್ವರೂಪವಾದಲ್ಲಿ ಅಂಗರಹಿತವಾಯಿತ್ತೆಂಬುದೀಗ, ತುಂಬಿ-ಗಂಧ ಒಂದೆಯಾಯಿತ್ತು ಅದು ನಿರಂಗದಿರವು ಸದಾಶಿವ ಮೂರ್ತಿಲಿಂಗ ತಾನೆ ಎಂಬ ಶಬ್ದಕ್ಕರ್ಥ.

೨೩

ನಾ ತೋಡಿದ ಭಾವಿಯಲ್ಲಿ ಡುಂಡುಕ ಭೇಕ ಒಂದಾಗಿರ್ದಹವು.
ಡುಂಡುಕ ಹಸಿದು ಭೇಕನ ನುಂಗಿತ್ತು
ಭೇಕ ಸಾಯದೆ ಡುಂಡುಕನ ಕರುಳು ತಿಂದು
ಡುಂಡುಕ ಸತ್ತು ಒಣಗಲಾಗಿ ಅಂಗ ಬಿಗಿದು ಭೇಕನಲ್ಲಿಯೆ ಸತ್ತಿತ್ತು
ಎನ್ನ ಭಾವಿ ಕೆಟ್ಟಿತ್ತು ಸದಾಶಿವ ಮೂರ್ತಿ ಲಿಂಗದ
ಕುರುಹಡಗಿತ್ತು.

ಟೀಕು:— ಆತ್ಮಂಗೆ ದೇಹಸಂಬಂಧವಾದಲ್ಲಿ ಸಂಸಾರ ವಿಷಯ ರಸಕೂಪವನುಂಟುಮಾಡಿಕೊಂಡನೆಂಬುದೀಗ, ನಾ ತೋಡಿದ ಭಾವಿಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ತನುವೆಂಬ ಕೂಪದ ಮಧ್ಯದಲ್ಲಿ ಶಂಕಾ ವಿಷ ಸಂಬಂಧಿಯಪ್ಪ ಜೀವನು ಪರಮ ಶಾಂತಿಯ ಬಿಂದು ಅಡಗಿರುತ್ತಿಹುದೆಂಬುದೀಗ, ಡುಂಡುಕ-ಭೇಕ ಒಂದಾಗಿರ್ದವು ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನು ಆಸಾತೃಷ್ಣೆಯಿಂದ ಆ ಪರಮ

ಶಾಂತಿಯು ಬಿಂದುವ ನವಗ್ರಹಿಸಿತ್ತೆಂಬುದೀಗ, ಡುಂಡುಕ ಪಸಿದು ಭೇಕನ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತು ಜೀವನವಗ್ರಹಿಸಲು, ಆ ಪರವು ಶಾಂತಿಯು ಬಿಂದು ಮರವೆಯಿಂ ನಷ್ಟವಾಗ ವೆಂಬುದೀಗ, ಭೇಕಸಾಯದೆ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಸುಜ್ಞಾನೋದಯವಾಗಲು ಆ ಜೀವನ ಸಕಲ ಕರಣಂಗಳನು ಆ ಪರವು ಶಾಂತಿಯು ಬಿಂದುವೆ ಅವಗ್ರಹಿಸಿತ್ತೆಂಬುದೀಗ, ಡುಂಡುಕನ ಕರುಳ ತಿಂದು ಎಂಬ ಶಬ್ದಕ್ಕರ್ಥ. ಆ ಪರವು ಶಾಂತಿಯು ಬಿಂದು ಅವಗ್ರಹಿಸಲು ಜೀವ ಭಾವವಳಿದು ಸಂಸಾರ ವಿಷಯ ರಸವರತು ಹೋಯಿತ್ತೆಂಬುದೀಗ, ಡುಂಡುಕ ಸತ್ತು ಒಣಗಲಾಗಿ ಎಂಬ ಶಬ್ದಕರ್ಥ. ಆ ಸಂಸಾರ ವಿಷಯ ರಸವರತು ಹೋದಲ್ಲಿ ತನ್ನ ನಿಜವಪ್ಪ ಪರಬ್ರಹ್ಮದಲ್ಲಿ ಕೂಡಬೇಕೆಂದು ಗುರೋಪಾವಸ್ಥೆಯ ಮಾಡಲು ಶ್ರೀಗುರು ಕರುಣಿಸಿ ಅಂಗದಲ್ಲಿ ಲಿಂಗ ಸಂಬಂಧವ ಮಾಡಲು, ಪಂಚಾಚಾರ ವಿಡಿದಾಚರಿಸಿ ದೇಹಭಾವ ನಷ್ಟವಾಗಿ ಆತ್ಮನು ಮಹಾಘನದಲ್ಲಿಯೆ ಸರಸವಾದ ನೆಂಬುದೀಗ, ಅಂಗ ಬಿಗಿದು ಭೇಕನಲ್ಲಿಯೆ ಸತ್ತಿತ್ತೆಂಬ ಶಬ್ದಕ್ಕರ್ಥ. ಅಂತು ಆತ್ಮನು ಲಿಂಗದಲ್ಲಿ ಸಮರಸೈಕ್ಯವಾಗಲು ವಿಷಯ ಕೂಪ ನಷ್ಟವಾಗಿ ಶರಣ ನೆಂಬ ಭಯ ಭಾವವಡಗಿ ಹೋಯಿತ್ತೆಂಬುದೀಗ, ಎನ್ನ ಭಾವಿ ಕೆಟ್ಟಿತ್ತು, ಸದಾ ಶಿವ ಮೂರ್ತಿಲಿಂಗದ ಕುರುಹಡಗಿತ್ತು ಎಂಬ ಶಬ್ದಕ್ಕರ್ಥ.

೨೪

ಇರುಹೆ ಅಂಜದೆ ಮದ ಸೊಕ್ಕಿದ್ದೈದಾನೆಯ
ತನ್ನ ಕಡೆಗಾಲಿನಲ್ಲಿ ಕಟ್ಟಿಸಿದ ಮಡದಲ್ಲೆಳವುತ್ತದೆ.
ಆನೆಯ ಕೊಂಬ ಮುರಿದು ಮಂಡಿಲುಡುಗಿ ಮದಗಜ ಸೋರಿ
ಗಜ ಘಟವಳಿದು ಹೋಯಿತ್ತು; ಇರುಹಿನ ಕಾಲ ಐಗಜವ ಕೊಂದು
ಮೂರು ಪುಲಿಯ ಮುರಿದು
ನನಗಿನ್ನಾರು ಅಡಹಿಲ್ಲಾ ಎಂದು
ಸದಾಶಿವ ಮೂರ್ತಿ ಲಿಂಗದಲ್ಲಿ ಗೆಯ್ದಿತ್ತು.

**ಟೀಕು:**— ಚಿತ್ ಸ್ವರೂಪನಾದ ಶರಣನ ನಿಜಾಂತರಂಗದಲ್ಲಿರ್ಪ ಸೂಕ್ಷ್ಮವಾದ ಪರಿಪೂರ್ಣಜ್ಞಾನವೆಂಬುದೀಗ ಇರುಹೆಯೆಂಬ ಶಬ್ದಕ್ಕರ್ಥ. ಅಂತಪ್ಪ ಪರಿಪೂರ್ಣಜ್ಞಾನಕ್ಕೆ ಸಕಲ ಮಾಯಾ ಪ್ರಪಂಚಿನ ಭಯವಿಲ್ಲವೆಂಬುದೀಗ, ಇರುಹೆ ಅಂಜದೆ ಎಂಬ ಶಬ್ದಕ್ಕರ್ಥ. ಅಹಂಕಾರಯುಕ್ತವಾದ ಪಂಚಭೂತಂಗಳನು, ತನ್ನ ಚರಿಯಾ ಪಾದದಲ್ಲಿ ಬಂಧಿಸಿದ ಎಂಬುದೀಗ, ಮದಸೊಕ್ಕಿದ್ದೈದಾನೆಯ ತನ್ನ ಕಡೆಗಾಲಿನಲ್ಲಿ ಕಟ್ಟಿ ಎಂಬ ಶಬ್ದಕ್ಕರ್ಥ. ಆ ಚರಿಯಾಪಾದದಲ್ಲಿ ಬಂಧಿಸಿದ, ಪಂಚಭೂತಂಗಳನು ಚಿದಹಂಕಾರ ಸ್ವರೂಪವಾದ ಭಕ್ತಿಯ ಲ್ಲಿ ಕೂಡಿ ನಡೆವುತ್ತಿಹನೆಂಬುದೀಗ, ಸದ ಮದದಲ್ಲಿ ಯೆಳವುತ್ತದೆ ಎಂಬ ಶಬ್ದಕ್ಕರ್ಥ. ಆ ಪಂಚಭೂತಗಳು ನಿವೃತ್ತಿಯಾಗಲು ಅಹಂಕಾರ ಮಮಕಾರವೆಂಬ ಕೊಂಬು ಭಗ್ನವಾಯಿತ್ತೆಂಬುದೀಗ, ಆನೆಯ ಕೊಂಬು ಮುರಿದು ಎಂಬ ಶಬ್ದಕ್ಕರ್ಥ. ಆ ಅಹಂಕಾರ ಮಮ

ಕಾರ ವಳಿದಲ್ಲಿ ದುರ್ಭಾವ ಹಸ್ತವು ಖಂಡಿಸಿತ್ತೆಂಬುದೀಗ, ಕುಂಡಿಲುಡುಗಿ ಯೆಂಬ ಶಬ್ದಕ್ಕರ್ಥ. ಆ ದುರ್ಭಾವವಳಿಯಲು ಅಷ್ಟಮದ ಮೊದಲಾದ ಸಂಸಾರ ವಿಷಯ ರಸವರತು ನಿರಸವಾಯಿತ್ತೆಂಬುದೀಗ, ಮದಸೋರಿಯೆಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ರಸವರತು ಹೋಗಲು ಪಂಚಭೂತಂಗಳಿಗಾಶ್ರಯವಾದ ದೇಹಭಾವ ನಿವೃತ್ತಿಯಾಯಿತ್ತೆಂಬುದೀಗ, ಗಜಘಟವಳಿದು ಹೋಯಿತ್ತೆಂಬ ಶಬ್ದಕ್ಕರ್ಥ. ಆ ಪರಿಪೂರ್ಣ ಜ್ಞಾನದ ಚರಿಯಾ ಪಾದವು ಪಂಚಭೂತಂಗಳ ಸಂಹರಿಸಿತ್ತೆಂಬುದೀಗ, ಇರುಹಿನಕಾಲು ಐಗಜವ ಕೊಂದು ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣ ಜ್ಞಾನ ಸ್ವರೂಪನಾದ ಶರಣ ಉತ್ಪತ್ತ್ಯ ಸ್ಥಿತಿ ಲಯಂಗಳ ಸಂಹರಿಸಿ ತನಗಾಗುವ ಪ್ರಪಂಚೂ ಇದಿರಿಲ್ಲವಾಗಿ ತನ್ನ ನಿಜವಪ್ಪ ಪರಬ್ರಹ್ಮದಲ್ಲಿಗೆ ಸಮರಸ ಭಾವದಿಂದೆಯ್ದು ಏಕಾರ್ಥವಾಯಿತ್ತೆಂಬುದೀಗ, ಮೂರು ಹುಲಿಯ ಮುರಿದು ನನಗಿನ್ನಾರು ಅಡಹಿಲ್ಲಾ ಎಂದು ಸದಾಶಿವ ಮೂರ್ತಿಲಿಂಗದಲ್ಲಿ ಗೆಯ್ದಿತ್ತು ಎಂಬ ಶಬ್ದಕ್ಕರ್ಥ.

೨೫

ಎರಳೆಯ ಕೊಂಬಿನ ನುಲಿಕೆಯ ಬಳಸಿನಲ್ಲಿ
ಅರುಹಿಯರೆಲ್ಲರೂ ಬಳಸಿಯಾಡುತ್ತೈದಾರೆ
ಎರಳೆ ಸತ್ತು ಕೋಡಳಿದು ಕೊಂಬಿನ ನುಲುಹು ನೆರಿತವಾಗಿ
ಬಳಸುವ ಅರುಹಿಯರೆಲ್ಲರೂ ಒಬ್ಬುಳಿತವಾಗಿ
ಸುಳುಹು ನಿಂದಾಗವೆ ಸದಾಶಿವ ಮೂರ್ತಿಯ ಲಿಂಗದ
ಅಂಗದಲ್ಲಿ ಲಿಯ್ಯವಾಗಿತ್ತು.

**ಟೀಕು**:— ಜೀವಾತ್ಮನೆಂಬುದೀಗ, ಎರಳೆಯೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಅಹಂಕಾರ-ಮಮಕಾರಗಳೆ ಕೋಡುಗಳಾಗಿಹುವೆಂಬುದೀಗ, ಎರಳೆಯ ಕೊಂಬಿನಾ ಎಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾರ-ಮಮಕಾರಂಗಳ ಸಂಕಲ್ಪ ಮಾರ್ಗವಿಡಿದು ಮಾಯಾಪ್ರಪಂಚಿನ ತಿರುಹು ಮುರುಹಿನಲ್ಲಿ ನಾಬಲ್ಲೆ-ಬಲ್ಲಿಪರೆಂಬ ಅದ್ವೈತ ಜ್ಞಾನಿಗಳೆಲ್ಲರು ಮಾಯಾ ಪ್ರಪಂಚಿನಲ್ಲಿ ವರ್ತಿಸುತ್ತಿಹರೆಂಬುದೀಗ, ನುಲಿಕೆಯ ಬಳಸಿನಲ್ಲಿ ಅರುಹಿಯರೆಲ್ಲರೂ ಬಳಸಿಯಾಡುತ್ತೈದಾರೆಂಬ ಶಬ್ದಕ್ಕರ್ಥ. ಅಂತು ಪ್ರಪಂಚಿನಲ್ಲಿ ಕೂಡಿ ಪರಿಭವಕ್ಕೆ ಬರುತ್ತಿರ್ದಾತ್ಮಂಗೆ ಶಿವಕೃಪೆಯಿಂ ಸುಜ್ಞಾನೋದಯವಾಗಲು ಜೀವಭಾವ ನಿವೃತ್ತಿಯಾಯಿತ್ತೆಂಬುದೀಗ, ಎರಳೆ ಸತ್ತುಎಂಬ ಶಬ್ದಕ್ಕರ್ಥ. ಅಂತು ಜೀವ ಭಾವವಳಿಯಲು ಅಹಂಕಾರ-ಮಮಕಾರಂಗಳು ನಷ್ಟವಾಯಿತ್ತೆಂಬುದೀಗ, ಕೋಡಳಿಪೂ ಎಂಬ ಶಬ್ದಕ್ಕರ್ಥ. ಆ ಅಹಂಕಾರವಳಿದಲ್ಲಿ ಸಂಕಲ್ಪ ಮಾರ್ಗವಿಡಿದಿರ್ಪ ಸಕಲಮಾಯಾ ಪ್ರಪಂಚಿನ ತಿರುಹು-ಮುರುಹುಗಳೆಲ್ಲ ನಿವೃತ್ತಿಮುಖದಿಂ ಸಶಿನವಾದವೆಂಬುದೀಗ, ಕೊಂಬಿನ ನುಲುಹುನೇರಿತವಾಗಿಯೆಂಬ ಶಬ್ದಕ್ಕರ್ಥ. ಅಂತು ಪ್ರಪಂಚಿನಲ್ಲಿಚರಿಸುತ್ತಿರ್ದ ಅದ್ವೈತ-ಜ್ಞಾನಿಗಳೆಲ್ಲರು ಶಿವಜ್ಞಾನೋದಯವಾದಲ್ಲಿ ತಮ್ಮ

ನಿಜವ ತಿಳಿದು ಶ್ರೀ ಗುರುಕಾರುಣ್ಯವುಂ ಪಡೆದು ನಿವೃತ್ತಿಮಾರ್ಗವನೆಯ್ದುತ್ತಿಹರೆಂಬುದೀಗ, ಬಳಸುವ ಅರುಹಿಯರೆಲ್ಲರು ಒಬ್ಬುಳಿತವಾಗಿಯೆಂಬ ಶಬ್ದಕ್ಕರ್ಥ. ಅಂತು ನಿವೃತ್ತಿಮಾರ್ಗವನೆಯ್ದಲು ಸಕಲಪ್ರಪಂಚಿನ ವರ್ತನೆಗಳೆಲ್ಲ ಅಳಿದು ಮಹಾಘನಲಿಂಗದ ಚಿತ್ ಪ್ರಭಾಂಗದಲ್ಲಿ ಏಕಾರ್ಥವಾದರೆಂಬುದೀಗ, ಸುಳುಹು ನಿಂದಾಗಲೆ ಸದಾಶಿವಮೂರ್ತಿಲಿಂಗದ ಅಂಗದಲ್ಲಿ ಲಿಯ್ಯವಾಗಿತ್ತು ಎಂಬ ಶಬ್ದಕ್ಕರ್ಥ.

೨೬

ಕಾಮನ ಅಂಬಿನ ಗಣೆಯಲ್ಲಿ ಮೂವರು ಬಾಲೆಯರು
ಹುಟ್ಟಿದ ವಿವರ :
ಹಿಲಿಕಿನಲ್ಲಿ ತಾಯಿ ಹುಟ್ಟಿದಳು;
ಮಧ್ಯದಲ್ಲಿ ಮಗಳು ಹುಟ್ಟಿದಳು;
ಮೊನೆಯಲ್ಲಿ ಮೊಮ್ಮಗಳು ಹುಟ್ಟಿ ಹೆತ್ತೆಯ ತಿಂದು
ತಾಯಿಗೆ ಎಸರೆತ್ತುತ್ತೈದಾಳೆ
ಅವಳ ಕೊಲುವ ಧೀರರ ನಿನ್ನಾರನು ಕಾಣೆ
ಎನಗೆ ಗಂಡ ಎಮ್ಮವ್ವೆಯ ಮಗನೆಂದು ಸಂದಣಿಗೊಳುತ್ತವಳೆ
ನಾವೆಲ್ಲರು ಕೇಳುವ ಬನ್ನಿ ಸದಾಶಿವ ಮೂರ್ತಿ ಲಿಂಗವ.

**ಟೀಕು:—** ತನ್ನ ನಿಜವಪ್ಪ ಪರಬ್ರಹ್ಮವ ಕಾಮಿಸುತ್ತಿರ್ದ ಸಕಲ ತತ್ವ ಸನ್ನಿಹಿತವಾದ ಶ್ರೀಗುರುಮೂರ್ತಿಯೆಂಬುದೀಗ, ಕಾಮನೆಂಬ ಶಬ್ದಕ್ಕರ್ಥ. ಆ ಗುರು ತತ್ವದಲ್ಲಿ ಸನ್ನಿಹಿತವಾಗಿರ್ಪ ಸುಜ್ಞಾನವೆಂಬುದೀಗ, ಕಾಮನ ಅಂಬಿನ ಎಂಬ ಶಬ್ದಕ್ಕರ್ಥ. ಆ ಸುಜ್ಞಾನವನೊಳಕೊಂಡಿರ್ಪ ಶಿವಭಾವವೆಂಬುದೀಗ, ಗಣೆಯಲ್ಲಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಸನ್ನಿಹಿತವಾದ ಶಿವಭಾವದಲ್ಲಿಯು ಛೌಜ್ಞಾನ ಕ್ರೀಯೆಂಬ ತ್ರಿಶಕ್ತಿಗಳುದಯಿಸಿದ ಭೇದವೆಂಬುದೀಗ, ಮೂವರು ಬಾಲೆಯರು ಹುಟ್ಟಿದ ವಿವರವೆಂಬ ಶಬ್ದಕ್ಕರ್ಥ. ಆ ಶಿವಭಾವದ ಮೊನೆಯಲ್ಲಿ ಇಚ್ಛಾಶಕ್ತಿ ಉದಯಿಸಿದಳೆಂಬುದೀಗ, ಹಿಲಿಕಿನಲ್ಲಿ ತಾಯಿ ಹುಟ್ಟಿದಳೆಂಬ ಶಬ್ದಕ್ಕರ್ಥ. ಆ ಶಿವ ಭಾವದ ನಡುವೆ ಜ್ಞಾನ ಶಕ್ತಿ ಉದಯಿಸಿದಳೆಂಬುದೀಗ, ಮಧ್ಯದಲ್ಲಿ ಮಗಳು ಹುಟ್ಟಿದಳೆಂಬ ಶಬ್ದಕ್ಕರ್ಥ. ಆ ಶಿವಭಾವದಗ್ರದಲ್ಲಿ ಕ್ರಿಯಾಶಕ್ತಿ ಉದಯಿಸಿದಳೆಂಬುದೀಗ, ಮೊನೆಯಲ್ಲಿ ಮೊಮ್ಮಗಳು ಹುಟ್ಟಿಯೆಂಬ ಶಬ್ದಕ್ಕರ್ಥ. ತನಗೆ ಮಾತೃಸ್ಥಾನವಾದ ಜ್ಞಾನಶಕ್ತಿಗೆ ತಾಯಾದ ಇಚ್ಛಾಶಕ್ತಿಯ ನವಗ್ರಹಿಸಿದಳೆಂಬುದೀಗ, ಹೆತ್ತೆಯತಿಂದು ಎಂಬ ಶಬ್ದಕ್ಕರ್ಥ. ತನಗೆ ಮಾತೃಸ್ಥಾನವಾದ ಜ್ಞಾನ ಶಕ್ತಿಯ ನವಗ್ರಹಿಸಬೇಕೆಂಬ ಬಯಕೆಯಲ್ಲಿರುತಿರ್ದಳೆಂಬುದೀಗ, ತಾಯಿಗೆ ಎಸರೆತ್ತುತ್ತೈದಾಳೆಂಬ ಶಬ್ದಕ್ಕರ್ಥ. ಅಂತಪ್ಪ ಕ್ರಿಯಾಶಕ್ತಿಯನು ತಮ್ಮಲ್ಲಿ ಅವಗ್ರಹಿಸಿಕೊಂಬ ಜ್ಞಾನಿಗಳ ಪೂರ್ವವೆಂಬುದೀಗ, ಅವಳ ಕೊಲುವ ಧೀರರ ನಿನ್ನಾ

ರನು ಕಾಣೆನೆಂಬ ಶಬ್ದಕ್ಕರ್ಥ. ಆ ಜ್ಞಾನ ಶಕ್ತಿಯಿಂದುದಯಿಸಿದ ಇಷ್ಟಲಿಂಗವು ಆ ಕ್ರಿಯಾ ಶಕ್ತಿಗೆ ಪುರುಷನಾದನೆಂಬುದೀಗ, ಎನಗೆ ಗಂಡ ಎಮ್ಮವ್ವೆಯ ಮಗನೆಂದು ಎಂಬ ಶಬ್ದಕ್ಕರ್ಥ. ಆ ಕ್ರಿಯಾ ಶಕ್ತಿಯು ಲಿಂಗಾಂಗ ಸಮರಸಾನಂದ ಸುಖವ ಕಂಡು ಪರಮ ಹರುಷದೊಳಿರ್ದಳೆಂಬುದೀಗ, ಸಂಪದಗೊಳುತ್ತವಳೆ, ನಾವೆಲ್ಲರು ಕೇಳುವ ಬನ್ನಿ ಸದಾಶಿವಮೂರ್ತಿ ಲಿಂಗವ ಎಂಬ ಶಬ್ದಕ್ಕರ್ಥ.

೨೭

ಆಡಿನ ಮೊಲೆವಾಲ ಕೊಡಗ ಉಂಡು
ಹಾಲಸಿಹಿ ತಲೆಗೇರಿ, ಬಂದವನನೇಡಿಸುತ್ತ ನಿಂದವನ ಕಚ್ಚುತ್ತ
ಹಿಂಗದುನೋಡಾ, ಕೊಡಗದಂದ ಕೊಡಗನೆತಿಂದು
ಆಡುವನೆ ಆರೂಢವಸ್ತು ಸದಾಶಿವಮೂರ್ತಿಲಿಂಗಕ್ಕೆ ಎರವಿಲ್ಲದಂಗ.

**ಟೀಕು:—** ರಜೋಗುಣ ಸಂಬಂಧವಾದ ಸ್ಥೂಲ ದೇಹದಲ್ಲಿರ್ದ ಸಂಸಾರ ವಿಷಯ ರಸವ ಸ್ವೀಕರಿಸುತ್ತಿಹುದು ಮನಸ್ಸೆಂಬುದೀಗ, ಆಡಿನ ಮೊಲೆವಾಲ ಕೊಡಗ ಉಂಡು ಎಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ಸುಖವು ಮನಸ್ಸಿನ ವೃತ್ತಿಜ್ಞಾನದಲ್ಲಿ ಪ್ರವೇಶಿಸುತ್ತೆಂಬುದೀಗ, ಹಾಲ ಸಿಹಿ ತಲೆಗೇರಿಯೆಂಬ ಶಬ್ದಕ್ಕರ್ಥ. ಆ ಮನಸ್ಸು ದೇಹಸಂಬಂಧಿಗಳಾಗಿ ಪರಿಭವಕ್ಕೆ ಬಂದ ಜೀವರುಗಳ ಹಾಸ್ಯೋಪಮಾನವ ಮಾಡುತ್ತಿಹುದೆಂಬುದೀಗ, ಬಂದವರನೇಡಿಸುತ್ತಾ ಎಂಬ ಶಬ್ದಕ್ಕರ್ಥ. ಆ ಮನಸ್ಸು ಆದಂಭಾವದಲ್ಲಿರ್ದ ಅದ್ವೈತ ಜ್ಞಾನಿಗಳ ಸಂಕಲ್ಪ ಭಾವದಿಂದವಗ್ರಹಿಸಿತ್ತೆಂಬುದೀಗ, ನಿಂದವರ ಕಚ್ಚುತ್ತ ಎಂಬ ಶಬ್ದಕ್ಕರ್ಥ. ಆ ಮನಸ್ಸಿನ ದುರ್ವರ್ತನೆ ನಾಸ್ತಿಯಾಗದೆಂಬುದೀಗ, ಹಿಂಗದು ನೋಡಾ ಕೊಡಗದಂದವೆಂಬ ಶಬ್ದಕ್ಕರ್ಥ. ಸುಜ್ಞಾನೋದಯವಾದ ಶರಣನು ಶಿವಭಾವದಿಂ ಮನೋವರ್ತನೆಯಳಿಯಲು ಶ್ರೀ ಗುರುಕಾರುಣ್ಯದಿಂ ಸರ್ವಾಂಗಲಿಂಗಸಂಬಂಧಿಯಾಗಿ ಅಂತರಂಗದ ಜ್ಞಾನ-ಬಹಿರಂಗದ ಕ್ರಿಯಿಡಿದಾಚರಿಸಿ ಪರಶಿವ ತತ್ವದಲ್ಲಿ ಸಮರಸವಾಗಿಯರವಿಲ್ಲದೆ ಚಿತ್ಪ್ರಭಾಂಗ ಸ್ವರೂಪನಾದನೆಂಬುದೀಗ, ಆಡುವನೆ ಆರೂಢವಸ್ತು ಸದಾಶಿವ ಮೂರ್ತಿಲಿಂಗಕ್ಕೆ ಎರವಿಲ್ಲದಂಗವೆಂಬ ಶಬ್ದಕ್ಕರ್ಥ.

೨೮

ಮಹಾಧರೆಯಲ್ಲಿ ಮನೆಯ ಕಟ್ಟುವದಕ್ಕೆ
ಕಾವಿಲ್ಲದ ಕೊಡಲಿಯಲ್ಲಿ ಹುಟ್ಟದ ಮರನತರಿದು
ಎತ್ತಿಲ್ಲದ ಏರಿನಲ್ಲಿ ಹೂಡಿತಂದವ ನೀನಾರಣ್ಣಾ !
ನಾನೆಂಬುಂದಕ್ಕೆ ಮೊದಲೆ ನಾಮ ನಷ್ಟವಾಯಿತ್ತು
ಸದಾಶಿವಮೂರ್ತಿಲಿಂಗ ಇಲ್ಲಿ ಸತ್ತು ಅಲ್ಲಿ ಹೆಣವಾಯಿತ್ತು.

**ಟೀಕು:—** ಅಖಂಡ ಚಿತ್‌ಪೃಥ್ವಿಯಲ್ಲಿ ಶರಣ ತನ್ನ ಜ್ಞಾನಕಾಯವ ರಚಿಸುತ್ತಿರ್ದನೆಂಬುದೀಗ, ಮಹಾಧರೆಯಲ್ಲಿ ಮನೆಯ ಕಟ್ಟುವದಕ್ಕೆ ಎಂಬ ಶಬ್ದಕ್ಕರ್ಥ.

ಆ ಶರಣನು ಭಿನ್ನ ಭಾವವಿಲ್ಲದೆ ಇರ್ಪ ಶಿವಜ್ಞಾನದಲ್ಲಿ ಎಂಬುದೀಗ, ಕಾವಿಲ್ಲದ ಕೊಡಲಿಯಲ್ಲಿ ಎಂಬ ಶಬ್ದಕ್ಕರ್ಥ. ಜನನಾಂಕುರವಿಲ್ಲದ ಸದ್ವಿವೇಕ ವೃಕ್ಷವ ಆ ಶಿವಜ್ಞಾನದಲ್ಲಿ ಅವಗ್ರಹಿಸಿದನೆಂಬುದೀಗ, ಘಟ್ಟದ ಮರನ ತರಿದು ಎಂಬ ಶಬ್ದಕ್ಕರ್ಥ. ಆತ್ಮ ತ್ರಯಂಗಳಿಲ್ಲದ ಅಭಿನ್ನ ಕ್ರಿಯಾಚಾರದಲ್ಲಿ ಆ ಸದ್ವಿವೇಕ ವೃಕ್ಷವ ಸಂಬಂಧಿಸಿದಾತ ಶ್ರೀ ಗುರುವೆಂದು ಶಿಷ್ಯ ಬೆಸಗೊಳ್ಳುತ್ತಿರ್ದನೆಂಬುದೀಗ, ಎತ್ತಿಲ್ಲದ ಏರಿನಲ್ಲಿ ಹೂಡಿತಂದವ ನೀನಾರಣ್ಣ ಎಂಬ ಶಬ್ದಕ್ಕರ್ಥ. ತಾನೆಂಬ ಅಹಂಕಾರವ ತಲೆದೋರುವದಕ್ಕೆ ಮೊದಲೆ ಶರಣ.ಲಿಂಗವೆಂಬ ಭಯ ನಾಮವಳಿಯಿತ್ತೆಂಬುದೀಗ, ನಾನೆಂಬುದಕ್ಕೆ ಮೊದಲೆ ನಾಮ ನಷ್ಟವಾಯಿತ್ತೆಂಬ ಶಬ್ದಕ್ಕರ್ಥ. ಅಂತು ಉಭಯ ನಾಮವಳಿದು ಶರಣನ ಬಹಿರಂಗದ ಅಭಿನ್ನ ಕ್ರಿಯಾಚಾರದಲ್ಲಿ ಸೂಪವಾದ ಇಷ್ಟಲಿಂಗವು ಸಂಬಂಧವಾಗಿಹುದೆಂಬುದೀಗ, ಸದಾಶಿವ ಮೂರ್ತಿಲಿಂಗವು ಇಲ್ಲಿ ಸತ್ತು ಎಂಬ ಶಬ್ದಕ್ಕರ್ಥ. ಆ ಮಾರ್ಗ ಕ್ರಿಯಲ್ಲಿ ಸಂಬಂಧವಾದ ಇಷ್ಟಲಿಂಗವು ಮೀರಿದ ಕ್ರಿಯ್ಯನೊಳಕೊಂಡು ಅಂತರಂಗದಲ್ಲಿ ನಿಷ್ಪತಿಯಾಯಿತ್ತೆಂಬುದೀಗ, ಅಲ್ಲಿ ಹೆಣನಾಯಿತ್ತು ಎಂಬ ಶಬ್ದಕ್ಕರ್ಥ.

೨೯

ಹಸಿದ ಹಾವಿನ ಹೆಡೆಯಲ್ಲಿ ಇಲಿ ಬಿಲನ ತೋಡುತ್ತದೆ.
ಹೆಡೆಯಲ್ಲಿ ಹೆಬ್ಬುಲಿ ಕಣ್ಣಿನ ಮೊಹರಿಯಲ್ಲಿ
ಹುಲ್ಲಿನ ಹಾಸಿಗೆಯ ಶಯನದ ಮನೆ
ಮುಗಿಲ ವಾಸದಲ್ಲಿ ತಪ್ಪುದಾರಿ ಬಾಲದ ತುದಿಯಲ್ಲಿ
ಹುಡುಘ ಹಾವ ಹಿಡಿದಲ್ಲಿ ಸಿಕ್ಕಿತ್ತು.
ಸದಾಶಿವ ಮೂರ್ತಿ ಲಿಂಗವನರಿದಲ್ಲಿ ಚಿತ್ತ ನಿಂದಿತ್ತು.

ಟೀಕು:— ಶಂಕಾವಿಷ ಸಂಬಂಧಿಯಪ್ಪ ಜೀವನು ಆಶಾತೃಷ್ಣೆಯಲ್ಲಿರ್ಪನೆಂಬುದೀಗ, ಹಸಿದ ಹಾವಿನ ಎಂಬ ಶಬ್ದಕ್ಕರ್ಥ. ಪಂಚೇಂದ್ರಿಯಂಗಳೆ ಆ ಜೀವಂಗೆ ಶಿರಸ್ಸಾಗಿಹವೆಂಬುದೀಗ, ಹೆಡೆಯಲ್ಲಿ ಎಂಬ ಶಬ್ದಕ್ಕರ್ಥ. ಆ ಪಂಚೇಂದ್ರಿಯ ದ್ವಾರಂಗಳಲ್ಲಿ ವಿಷಯ ಪ್ರಪಂಚನೆ ಉಂಟುಮಾಡಿಕೊಳ್ಳುತ್ತಿಹುದು ಮನಸ್ಸೆಂಬುದೀಗ, ಇಲಿ ಬಿಲನ ತೋಡುತ್ತದೆ ಎಂಬ ಶಬ್ದಕ್ಕರ್ಥ. ಆ ಇಂದ್ರಿಯಂಗಳಲ್ಲಿ ಆಶೆ ಅತ್ಯಂತ ಘನತರವಾಗಿಹುದೆಂಬುದೀಗ, ಹೆಡೆಯಲ್ಲಿ ಹೆಬ್ಬುಲಿವೆಂಬ ಶಬ್ದಕ್ಕರ್ಥ. ಆ ಜ್ಞಾನ ದೃಷ್ಟಿಯ ಬೆಂಬಳಿಯಿಂ ಪಂಚ ವಿಷಯ ಸಂಬಂಧವಾದ ಅಂತರ್ದೇಹವೆ ಆ ಮನಸ್ಸು ಮರನೆಯನೆಯ್ದುವದಕ್ಕೆ ಆಶ್ರಯವಾಯಿತ್ತೆಂಬುದೀಗ, ಕಣ್ಣಿನ ಮೊಹರಿಯಲ್ಲಿ ಹುಲ್ಲಿನ ಹಾಸಿಗೆಯ ಶಯನದ ಮನೆಯೆಂಬ ಶಬ್ದಕ್ಕರ್ಥ. ದುರ್ವಾಸನಾ ಸ್ವೀಕಾರವೆಂಬ ನಾಶಿಕವಿಡಿದು ನಾನಾ ದುಶ್ಚರಿತ್ರಂಗಳಲ್ಲಿ ಚರಿಸುತ್ತಿಹುದು ಮನಸ್ಸೆಂಬುದೀಗ, ಮುಗಿನ ವಾಸದಲ್ಲಿ ತಪ್ಪುದಾರಿಯೆಂಬ ಶಬ್ದಕ್ಕರ್ಥ. ಆ ಮನಸ್ಸು ಭವಪಾಶದಲ್ಲಿ ತಮೋಗುಣ ಸಂಬಂಧದಿಂ ಮರವೆಯ ನೆಯ್ದಿಹುದೆಂಬುದೀಗ, ಬಾಲದ ತುದಿಯಲ್ಲಿ ಹುಡುಘನೆಂಬ ಶಬ್ದಕ್ಕರ್ಥ.

ಸುಜ್ಞಾನೋದಯವಾದ ಶರಣ ಆ ಜೀವಭಾವವ ನಿವೃತ್ತಿಮಾಡಿ ಶಿವಭಾವ ಘಟಿಸಿದಲ್ಲಿ ಗುರು ಕಾರುಣ್ಯದಿಂ ಲಿಂಗಾಂಗ ಸಂಬಂಧವಾದಲ್ಲಿ ಮನವಳಿದು ಉನ್ಮನಿ ತತ್ವ ಸ್ವರೂಪವನೆಯ್ದಿ ಲಿಂಗದಲ್ಲಿ ಸಮರಸವಾಯಿತ್ತೆಂಬುದೀಗ, ಹಾವ ಹಿಡಿದಲ್ಲಿ ಸಿಕ್ಕಿತ್ತು, ಸದಾಶಿವ ಮೂರ್ತಿಲಿಂಗವನರಿದಲ್ಲಿ ಚಿತ್ತ ನಿಂದಿತ್ತು ಎಂಬ ಶಬ್ದಕ್ಕರ್ಥ.

೩೦

ತಾವರೆಯ ನಾಳದ ತೆರಪಿನಲ್ಲಿ,
ಮೂರು ಲೋಕವ ನೊಳಗೊಂಡ ಗಾತ್ರದಾನೆ ಎಡತಾಕುತ್ತದೆ.
ನಾಳ ಹರಿಯದು, ಆನೆಯಂಗಕ್ಕೆ ನೋವಿಲ್ಲ
ಇದೇನು ಚೋದ್ಯವೆಂದು ಕೇಳುವ ಬನ್ನಿ
ಸದಾಶಿವ ಮೂರ್ತಿ ಲಿಂಗವ

**ಟೀಕು**:— ಹೃದಯ ಕಮಲದಲ್ಲಿರ್ಪ ಸುಜ್ಞಾನ ದ್ವಾರವೆಂಬುದೀಗ, ತಾವರೆಯ ನಾಳದ ಎಂಬ ಶಬ್ದಕ್ಕರ್ಥ. ಆ ಸುಜ್ಞಾನದ್ವಾರದ ವಿಶಾಲ ತರದಲ್ಲಿ ಎಂಬುದೀಗ, ತೆರಪಿನಲ್ಲಿಯೆಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣನ ತನುತ್ರಯಂಗಳನೊಳಕೊಂಡಿರ್ಪ ಚಿದಹಂಕಾರ ಸ್ವರೂಪವಾದ ಭಕ್ತಿ ಗಜವೆಂಬುದೀಗ, ಮೂರು ಲೋಕವನೊಳಗೊಂಡ ಗಾತ್ರದಾನೆಯೆಂಬ ಶಬ್ದಕ್ಕರ್ಥ. ಅಂತಪ್ಪ ಚಿದಹಂಕಾರವ ನೊಳಕೊಂಡಿರ್ಪ ಶರಣನು ಇಷ್ಟ-ಪ್ರಾಣಲಿಂಗದಲ್ಲಿ ಸುಜ್ಞಾನ ಕ್ರಿವಿಡಿದಾಚರಿಸುತ್ತಿರ್ದನೆಂಬುದೀಗ, ಎಡತಾಕುತ್ತದೆ ಎಂಬ ಶಬ್ದಕ್ಕರ್ಥ. ಆ ಶರಣನ ಸುಜ್ಞಾನದ್ವಾರಕ್ಕೆ ಕೇಡಿಲ್ಲವೆಂಬುದೀಗ, ನಾಳ ಹರಿಯದು ಎಂಬ ಶಬ್ದಕ್ಕರ್ಥ. ಆ ಚಿದಹಂಕಾರವನೊಳಕೊಂಡಿರ್ಪ ಶರಣನಂಗಕ್ಕೆ ಸಂಸಾರ ವ್ಯಾಪ್ತಿಯ ದುಃಖವಿಲ್ಲವೆಂಬುದೀಗ, ಆನೆಯಂಗಕ್ಕೆ ನೋವಿಲ್ಲವೆಂಬ ಶಬ್ದಕ್ಕರ್ಥ. ಆ ಚಿದಹಂಕಾರ ಸ್ವರೂಪನಾದ ಶರಣನ ಚಿತ್‌ಪ್ರಭಾಂಗಕ್ಕೆ ಸಂಸಾರ ಬಂಧನದಲ್ಲಿರ್ಪದು ಆಶ್ಚರ್ಯವೆಂಬುದೀಗ, ಇದೇನು ಚೋದ್ಯವೆಂದು ಕೇಳುವ ಬನ್ನಿ ಸದಾಶಿವ ಮೂರ್ತಿಲಿಂಗವ ಎಂಬ ಶಬ್ದಕ್ಕರ್ಥ.

೩೧

ಜೇನು ತುಪ್ಪವ ಹೊತ್ತು ಮಾರುವವಳ ಮಡಕೆಯ ಮೇಲೆ
ಮೂರು ತುಂಬಿ ಕುಳಿತಿದ್ದಾವೆ; ಒಂದು ತುಂಬಿ ಇದ್ದಿತ್ತು;
ಒಂದು ತುಂಬಿ ಹಾರಿತ್ತು; ಒಂದು ತುಂಬಿ ಸತ್ತಿತ್ತು
ಮೂರು ತುಂಬಿಯಂದವ ಕಂಡುದಿಲ್ಲ ಮಡಕೆ ಒಡೆಯಿತ್ತು.
ತುಪ್ಪವಕ್ಕಿತ್ತು, ಹೊತ್ತವ ಸತ್ತ
ಇದೇನು ಕೃತ್ರಿಮವೆಂದು ಕೇಳುವ ಬನ್ನಿ
ಸದಾಶಿವ ಮೂರ್ತಿ ಲಿಂಗವ

**ಟೀಕು:—** ಪರಮಾಮೃತ ಸ್ವರೂಪನಾದ ಸುಜ್ಞಾನವನು ತನ್ನ ಸರ್ವಾಂಗದಲ್ಲಿ ಧರಿಸಿಕೊಂಡು ಎಂಬುದೀಗ, ಜೇನು ತುಪ್ಪ ಹೊತ್ತು ಎಂಬ ಶಬ್ದಕ್ಕರ್ಥ. ಸುಜ್ಞಾನೋದಯವಾಗಿ ತನ್ನ ಉಪಾವಸ್ಥೆಯ ಮಾಡುತ್ತಿರ್ದ ಮೋಕ್ಷಾಪೇಕ್ಷೆಯರುಗಳಾದ ಭಕ್ತ ಜನಂಗಳಿಗೆ ಆ ಪರಮಾಮೃತ ಸ್ವರೂಪನಾದ ಸುಜ್ಞಾನ ಬೋಧೆಯ ಬೋಧಿಸುತ್ತಿಹನು, ಚಿತ್ ಶಕ್ತಿ ಸ್ವರೂಪನಾದ ಶ್ರೀಗುರುವೆಂಬುದೀಗ, ಮಾರುವವಳೆಂಬ ಶಬ್ದಕ್ಕರ್ಥ. ಆ ಶ್ರೀಗುರು ಸಂಬಂಧವಾದ ಚಿದ್ ಭಾಂಡದಲ್ಲಿ ತ್ರಿವಿಧಲಿಂಗ ಸಂಬಂಧವಾಗಿಹುದೆಂಬುದೀಗ, ಮಡಕೆಯ ಮೇಲೆ ಮೂರು ತುಂಬಿ ಕುಳಿತಿದ್ದಾವೆ ಎಂಬ ಶಬ್ದಕ್ಕರ್ಥ. ಸದ್ರೂಪನಾದ ಇಷ್ಟಲಿಂಗವು ಸತ್ಕ್ರಿಯಾಚಾರದಲ್ಲಿರುತ್ತಿಹುದೆಂಬುದೀಗ, ಒಂದು ತುಂಬಿ ಇದ್ದಿತ್ತು ಎಂಬ ಶಬ್ದಕ್ಕರ್ಥ. ಚಿತ್ ಸ್ವರೂಪವಾದ ಪ್ರಾಣಲಿಂಗವು ಶರಣನ ನಿಜಾಂತರಂಗಕ್ಕೆ ವೇದಿಸಿತ್ತೆಂಬುದೀಗ, ಒಂದು ತುಂಬಿ ಹಾರಿತ್ತು ಎಂಬ ಶಬ್ದಕ್ಕರ್ಥ, ಆನಂದ ಸ್ವರೂಪವಾದ ತೃಪ್ತಿಲಿಂಗವು ಶರಣನ ಭಾವದಲ್ಲಿ ನಿಷ್ಪತಿಯಾಯಿತ್ತೆಂಬುದೀಗ, ಒಂದು ತುಂಬಿ ಸತ್ತಿತ್ತು ಎಂಬ ಶಬ್ದಕ್ಕರ್ಥ. ಆ ತ್ರಿವಿಧಲಿಂಗವು ಶರಣನ ತ್ರಿವಿಧಾಂಗವ ನವಗ್ರಹಿಸಿ ನಿಷ್ಪತಿಯಾದ ಬಳಿಕ ಇದಿರಿಟ್ಟು ಕಾಣಲಿಲ್ಲವೆಂಬುದೀಗ, ಮೂರು ತುಂಬಿಯಂದವ ಕಂಡುದಿಲ್ಲವೆಂಬ ಶಬ್ದಕ್ಕರ್ಥ. ಅಂತು ನಿಷ್ಪತಿಯಾಗಲು ಆ ಚಿದ್ ಭಾಂಡವು ಲಿಂಗದಲ್ಲಿ ಏಕಾರ್ಥವಾಯಿತ್ತೆಂಬುದೀಗ, ಮಡಕೆ ಒಡೆಯಿತ್ತೆಂಬ ಶಬ್ದಕ್ಕರ್ಥ. ಆ ಚಿದ್ ಭಾಂಡವು ಲಿಂಗದಲ್ಲಿ ನಿಷ್ಪತಿಯಾಗಲು, ಆ ಪರಮಾಮೃತ ರಸ ಶರಣನ ಬಾಹ್ಯಭ್ಯಾಂತರಗಳಲ್ಲಿ ಪರಿಪೂರ್ಣವಾಗಿ ಸೂಸುತ್ತಿಹವೆಂಬುದೀಗ, ತುಪ್ಪವಕ್ಕಿತ್ತು ಎಂಬ ಶಬ್ದಕ್ಕರ್ಥ. ಆ ಚಿದ್ ಭಾಂಡವ ಧರಿಸಿಕೊಂಡಿರ್ಪ ಜ್ಞಾನ ಗುರು ಶರಣನ ನಿಜಾಂತರಂಗದಲ್ಲಿ ನಿಷ್ಪತಿಯಾದನೆಂಬುದೀಗ, ಹೊತ್ತವ ಸತ್ತ ಇದೇನು ಕೃತ್ರಿಮವೆಂದು ಕೇಳುವ ಬನ್ನಿ ಸದಾಶಿವ ಮೂರ್ತಿಲಿಂಗವ ಎಂಬ ಶಬ್ದಕ್ಕರ್ಥ.

೩೨

ಕೊಟ್ಟೆ ಕೂಗಿತ್ತು ಹಾಲುವಕ್ಕಿ ಬಳಿಯಿತ್ತು
ಹಂಗ ಕಟ್ಟಿತ್ತು ಅವನ ಅವಳ ಮದುವೆ ನಿಂದಿತ್ತು ಇವನಿಗಾಯಿತ್ತು
ತಂದ ಮರುದಿನಕ್ಕೆ ಸತ್ತಳವಳು ಮವವಳಿಗ ಮುಂಡೆಯ ಮ್ಯಾಲೆ
ಸೀರೆಯ ಹಾಕಿಕೊಂಡು ಕೆಟ್ಟೆ-ಕೆಟ್ಟೆನೆಂದು
ಹೋಗುತ್ತಿರ್ದನು ಸದಾಶಿವ ಮೂರ್ತಿ ಲಿಂಗದಲ್ಲಿಗೆ.

**ಟೀಕು:—** ಅಂತರಂಗದಲ್ಲಿ ಚಿತ್ ಪ್ರಣವು ಜ್ಞಾನಉದಯವಾಗಿ ಶಿವೋಹಂ ಶಿವೋಹಂ ಎನುತ್ತಿದ್ದೆಂಬುದೀಗ, ಕೊಟ್ಟೆ ಕೂಗಿತ್ತು ಎಂಬ ಶಬ್ದಕ್ಕರ್ಥ. ಆ ಶಿವೋಹಂ ಭಾವವಳವಡಲು ಅಂತರಂಗದಲ್ಲಿರ್ದ ತೈಜಸನು ಸಮಸ್ತ ಪ್ರಪಂಚವನು ಸುಜ್ಞಾನ ಮುಖದಿಂ ನಿವೃತ್ತಿ ಮಾಡಿತ್ತೆಂಬುದೀಗ, ಹಾಲುವಕ್ಕಿ ಬಳಿಯಿತ್ತೆಂಬ ಶಬ್ದಕ್ಕರ್ಥ. ಆ ಪ್ರಪಂಚುನಾಸ್ತಿಯಾಗಲು ಸಂಕಲ್ಪರೂಪವಾದ ಪೂರ್ವ ಕ್ರಿಯಾಚರಿತ್ರವಬಿಟ್ಟು ಉತ್ತರವಾದ ಜ್ಞಾನವಲೆಯ್ದಿತ್ತು, ಮನಸ್ಸೆಂಬುದೀಗ, ಮನ

ಸ್ನೆಂಬುದೀಗ, ಪಂಗಕಟ್ಟಿತ್ತು ಎಂಬ ಶಬ್ದಕ್ಕರ್ಥ. ಶಿವಜ್ಞಾನೋದಯವಾದಲ್ಲಿ ಜೀವನು ಮಾಯೆಯಲ್ಲಿಕೂಡಿ ಸಕಲವಿಷಯಂಗಳ ಭೋಗಿಸಬೇಕೆಂಬ ಅದೇ ನಿವೃತ್ತಿಯಾಯಿತ್ತೆಂಬುದೀಗ, ಅವನ ಅವಳ ಮದುವೆನಿಂದಿತ್ತು ಎಂಬ ಶಬ್ದಕ್ಕರ್ಥ. ಆ ಮಾಯಾಸಂಭ್ರಮವಳಿಯಲು ಭೇಧಭಾವ ಭ್ರಾಂತಳಿದು ಸಜ್ಜೀವ ಸ್ವರೂಪವಾದ ಶರಣನು ನಿರ್ಮಾಯ ಸ್ವರೂಪವಾದ ಜ್ಞಾನಶಕ್ತಿಯಲ್ಲಿ ಸಮರಸ ಸಂಯೋಗವ ಮಾಡುತ್ತಿರ್ದನೆಂಬುದೀಗ, ಇವನಿಗಾಯಿತ್ತೆಂಬ ಶಬ್ದಕ್ಕರ್ಥ. ಶರಣನ ಮಾರ್ಗಕ್ರಿಯಲ್ಲಿ ಸಂಬಂಧವಾದ ಜ್ಞಾನಶಕ್ತಿಯು ಮೀರಿದ ಕ್ರಿಯನೊಳ ಕೊಂಡಿರ್ಪ ಪ್ರಾಣಲಿಂಗದಲ್ಲಿ ನಿಷ್ಪತಿಯಾದಳೆಂಬುದೀಗ, ತಂದ ಮರುದಿನಕ್ಕೆ ಸತ್ತಳವಳು ಎಂಬ ಶಬ್ದಕ್ಕರ್ಥ. ಆ ಜ್ಞಾನಶಕ್ತಿ ನಿಷ್ಪತಿಯಾಗಲು ಅಷ್ಟದಳ ಕಮಲಂಗಳಿಲ್ಲದ ಚಿತ್‌ಸ್ವರೂಪನಾದ ಶರಣನು ಜ್ಞಾನಸ್ವರೂಪವಾದ ಪರಶಿವ ತತ್ವದಲ್ಲಿ ತನ್ನ ಸುಜ್ಞಾನಾಂಬರವನೇಕೀಕರಿಸಿ ತಾನೆಂಬಭಾವ ಮಹಾಘನಲಿಂಗದಲ್ಲಿ ನಿಷ್ಪತಿಯಾಯಿತ್ತೆಂಬುದೀಗ, ಮದವಳಿಗ ಮಂಡೆಯಮ್ಯಾಲೆ ಸೀರೆಯ ಹಾಕಿಕೊಂಡು ಕೆಟ್ಟೆಕೆಟ್ಟೆನೆಂದು ಹೋಗುತ್ತಿರ್ದ ಸದಾಶಿವ ಮೂರ್ತಿಲಿಂಗದಲ್ಲಿಗೆ ಎಂಬ ಶಬ್ದಕ್ಕರ್ಥ.

೩೩

ಮೂಳಿಯ ಮೊದಲಿನಲ್ಲಿ ಮೂವರು ಮಕ್ಕಳು ಹುಟ್ಟಿ
ಒಬ್ಬ ಕಾಲಿನಲ್ಲಿ ಬಲ್ಲಿದ, ಒಬ್ಬ ಕೈಯಲ್ಲಿ ಬಲ್ಲಿದ,
ಒಬ್ಬ ಬಾಯಲ್ಲಿ ಬಲ್ಲಿದ,
ಇಂತಿ ಮೂವರು ಮಕ್ಕಳು ಹೆತ್ತ ತಂದೆಯ ಅಳವಾಡುತ್ತಿರಲಾಗಿ
ಇವರು ಎನಗೆ ಹಗೆ, ಮಕ್ಕಳಲ್ಲ ಎಂದು ಹಗೆಯೆಂಬುವ ನರಿದು
ಹಿರಿಯ ಮಗನ ಕಾಲು ಮುರಿದು, ನಡುವಳ ಮಗನ ಕೈಯ
ಮುರಿದು
ಕಿರಿಯ ಮಗನ ಬಾಯಿ ಮುಚ್ಚಿ ಗೋಣು ಮುರಿದು
ಅವರು ಹಿಂಗಿ ನಾ ಬದುಕೆವೆನೆಂದು ತ್ರಿವಿಧ ಸಂದ ಬಿಟ್ಟು
ಸದಾಶಿವ ಮೂರ್ತಿಲಿಂಗದಲ್ಲಿಗೆ ಸಂದಿತ್ತು ಚಿತ್ತ.

ಟೀಕು:— ಅನಾಹತ ಕರ್ನ ದ್ವಾರಂಗಳು ರಹಿತವಾಗಿರ್ಪ ಮಾಯೆಯು ತಾನೆಂಬ ಮೂಲಹಂಕಾರದಲ್ಲಿ ಯೆಂಬುದೀಗ, ಮೂಳಿಯ ಮೊದಲಿನಲ್ಲಿ ಎಂಬ ಶಬ್ದಕ್ಕರ್ಥ. ಆ ಮಾಯಾ ಸಂಬಂಧವಾದ ಮೂಲಹಂಕಾರದಲ್ಲಿ ವಿಶ್ವ ತೈಜಸ ಪ್ರಜ್ಞರೆಂಬ ಜೀವತ್ರಯಂಗಳು ಉದಯಿಸಿದವೆಂಬುದೀಗ, ಮೂವರು ಮಕ್ಕಳು ಹುಟ್ಟಿ ಎಂಬ ಶಬ್ದಕ್ಕರ್ಥ. ಸ್ಥೂಲತನು ಸಂಬಂಧವಾದ ವಿಶ್ವನು ದುಶ್ಚರಿತ್ರದಲ್ಲಿ ಚರಿಸುತ್ತಿಹನೆಂಬುದೀಗ, ಒಬ್ಬ ಕಾಲಲ್ಲಿ ಬಲ್ಲಿದನೆಂಬ ಶಬ್ದಕ್ಕರ್ಥ. ಸೂಕ್ಷ್ಮತನು ಸಂಬಂಧಿಯಪ್ಪ ತೈಜಸನು ಸಂಕಲ್ಪ ರೂಪವಾದ ಮನೋವರ್ತನೆಯಲ್ಲಿ ಕೂಡಿಹನೆಂಬುದೀಗ, ಒಬ್ಬ ಕೈಯಲ್ಲಿ ಬಲ್ಲಿದನೆಂಬ ಶಬ್ದಕ್ಕರ್ಥ. ಕಾರಣ ತನು ಸಂಬಂಧಿ

ಯುಪ್ಪ ಪ್ರಾಜ್ಞನು ಭಿನ್ನಾಪೇಕ್ಷೆಯಲ್ಲಿ ಕೂಡಿಹನೆಂಬುದೀಗ, ಒಬ್ಬ ಬಾಯಲ್ಲಿ ಬಲ್ಲಿದನೆಂಬ ಶಬ್ದಕ್ಕರ್ಥ. ಅಂತಪ್ಪ ಜೀವತ್ರಯಂಗಳ ಮಧ್ಯದಲ್ಲಿ ಶಿವಕೃಪೆಯಿಂ ಸುಜ್ಞಾನ ಪ್ರಭಾವಿಸಿ ಅಹಂಕಾರಯುಕ್ತವಾದ ಜೀವನು ಅನಿತ್ಯವಾದ ಮಾಯಾ ಪ್ರಪಂಚಿಗೆ ಸಿಲ್ಕಿದನಲ್ಲ ಎಂದು, ಹಾಸ್ಯೋಪಮಾನವ ಮಾಡುತ್ತಿಹನೆಂಬುದೀಗ, ಇಂತಿ ಮೂವರು ಮಕ್ಕಳು ಹೆತ್ತ ತಂದೆಯನಾಳವಾಡುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಪ್ರಕಾಶದಿಂ ತನ್ನ ನಿಜವ ತಾನೆಚ್ಚತ್ತು ನೋಡಿ ಈ ಜೀವತ್ರಯಂಗಳು ಮೋಕ್ಷಕ್ಕೆ ಕಂಟಕವೆಂದರಿದು ನಿವೃತ್ತಿಯ ಮಾಡುತ್ತಿರ್ದನೆಂಬುದೀಗ, ಇವರು ಎನಗೆ ಹಗೆ, ಮಕ್ಕಳಲ್ಲ ಎಂದು ಆ ಹಗೆಯೆಂಬುವನರಿದು ಎಂಬ ಶಬ್ದಕ್ಕರ್ಥ. ಅಂತು ಜೀವತ್ರಯಂಗಳು ಸಕಲ ಪ್ರಪಂಚ ನಿವೃತ್ತಿಯ ಮಾಡಿದ ಶರಣನು ಶ್ರೀಗುರುವಾವಸ್ತೆಯ ಮಾಡಲು, ಆ ಗುರು ಕರುಣಿಸಿ ವಿಶ್ವನ ದುಶ್ಚರಿತ್ರವೆಂಬ ಚರಣವ ಕ್ರಿಯಾ ದೀಕ್ಷೆಯಿಂ ಛೇದಿಸಿ ಸತ್ಕ್ರಿಯಾಚಾರವ ನೆಲೆಗೊಳಿಸಿ ಇಷ್ಟಲಿಂಗ ಸಂಬಂಧವ ಮಾಡಿದನೆಂಬುದೀಗ, ಹಿರಿಯ ಮಗನ ಕಾಲು ಮುರಿದು ಎಂಬ ಶಬ್ದಕ್ಕರ್ಥ. ಇಂತು ಸತ್ಕ್ರಿಯಾ ಚಾರವ ನೆಲೆಗೊಳಿಸಿ ತೈಜಸನ ಸಂಕಲ್ಪ ರೂಪವಾದ ಮನೋ ಹಸ್ತವ ಮಂತ್ರದೀಕ್ಷೆಯಿಂ ಛೇದಿಸಿ ಸುಜ್ಞಾನವ ನೆಲೆಗೊಳಿಸಿ ಪ್ರಾಣಲಿಂಗ ಸಾಹಿತ್ಯವ ಮಾಡಿದನೆಂಬುದೀಗ, ನಡುವಣ ಮಗನ ಕೈಯ ಮುರಿದು ಎಂಬ ಶಬ್ದಕ್ಕರ್ಥ. ಅಂತು ಮನೋಹಸ್ತ ನಷ್ಟವಾಗಿ ಸುಜ್ಞಾನ ನೆಲೆಗೊಂಡಲ್ಲಿ ಪ್ರಾಜ್ಞನ ಭಿನ್ನಾಪೇಕ್ಷೆಯನು ಅಪ್ರಥ ಕಂಡವನು ವೇಧ ದೀಕ್ಷೆಯಿಂ ನಷ್ಟವ ಮಾಡಿ ಶಿವಭಾವವ ನೆಲೆಗೊಳಿಸಿ ಭಾವಲಿಂಗ ಸಂಬಂಧವ ಮಾಡಿದನೆಂಬುದೀಗ, ಕಿರಿಯಮಗನ ಬಾಯಿ ಮುಚ್ಚಿ ಗೋಣು ಮುರಿದು ಎಂಬ ಶಬ್ದಕ್ಕರ್ಥ. ಅಂತು ಜೀವ ತ್ರಯಂಗಳು ಲಿಂಗತ್ರಯದಲ್ಲಿ ಸಮರಸವಾದ ಶರಣಂಗೆ, ತನು ತ್ರಯಂಗಳು ನಷ್ಟವಾಗಿ ಮಹಾಘನ ಲಿಂಗದಲ್ಲಿ ಶರಣನ ಮಹಾಜ್ಞಾನ ಪ್ರಕಾಶ ನಿಷ್ಪತ್ತಿಯಾಯಿತ್ತೆಂಬುದೀಗ, ಅವರು ಹಿಂಗಿ ನಾ ಬದುಕಿದೆನೆಂದು ತ್ರಿವಿಧದ ಸಂದ ಬಿಟ್ಟು ಸದಾಶಿವ ಮೂರ್ತಿ ಲಿಂಗದಲ್ಲಿಗೆ ಸಂದಿತ್ತು ಚಿತ್ತ ಎಂಬ ಶಬ್ದಕ್ಕರ್ಥ.

೩೪

ಕಲ್ಲಿನ ಗಿರಿಯ ಹುಲ್ಲಿನಮೊನೆಯಲ್ಲಿ ಕುಕ್ಕಿ
ಹುಲ್ಲೆಯಮರಿ-ಹುಲಿಯೊಂದಾಗಿ ಚಲ್ಲವಾಡುತ್ತಿದ್ದಿತ್ತು
ಒಲ್ಲವನ ಬಲುಹ ಏನು ಇಲ್ಲದ ಮುರಿದು
ಈ ಸೊಲ್ಲಿನ ವಿವರವ ಕೇಳುವಬನ್ನಿ ಸದಾಶಿವಮೂರ್ತಿಲಿಂಗದಲ್ಲಿಗೆ.

ಟೀಕು:— ಕಲು ಹೃದಯವಾದ ದೇಹದ ಮಧ್ಯದಲ್ಲಿ ಅಹಂಕಾರವು ಹುಟ್ಟಿತ್ತೆಂಬುದೀಗ, ಕಲ್ಲಿನ ಗಿರಿಯ ಎಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾರದಗಿರಿಯನು ಸುಜ್ಞಾನಾಂಕುರದಲ್ಲಿ ಸಂಬಂಧವಾಗಿರ್ದ ಭಕ್ತಿಯಿಂ ನಿವೃತ್ತಿಮಾಡಿದನೆಂಬುದೀಗ, ಹುಲ್ಲಿನಮೊನೆಯಲ್ಲಿ ಕುಕ್ಕಿ ಎಂಬ ಶಬ್ದಕ್ಕರ್ಥ. ಅಂತು ಅಹಂಕಾರವಳಿದು ಚಿಚ್ಛಕ್ತಿಯಿಂದುದ್ಭವಿಸಿ ಚಿತ್ಸ್ವರೂಪನಾದ ಶರಣನು ಸಕಲತತ್ವಂಗಳ

ನವಗ್ರಹಿಸಿಕೊಂಡಿರ್ಪ ಮಹಾಘನಲಿಂಗದಲ್ಲಿ ಒಡಗೂಡಿ ಕ್ರೀಡಾಪರನಾಗಿರ್ಪ ನೆಂಬುದೀಗ, ಹುಲ್ಲೆಯುಮರಿ-ಹುಲಿಯೊಂದಾಗಿ ಚಲ್ಲವಾಡುತ್ತಿದ್ದಿತ್ತೆಂಬ ಶಬ್ದ ಕ್ಕರ್ಥ. ಅಂತು ಲಿಂಗದಲ್ಲಿ ಕ್ರೀಡಾಪರನಾದ ಶರಣನು ಅಹಂ ಬ್ರಹ್ಮವೆಂಬ ಅದ್ವೈತ ಜ್ಞಾನವ ನಿವೃತ್ತಿಮಾಡಿ ಶಿವೋಹಂ ಭಾವ ಘಟಿಸಿದ ಶರಣನ ಚರಿತ್ರವ ತ್ರಿವಿಧ ಲಿಂಗಾನುಭಾವಿಗಳಿಂ ಬೆಸಗೊಳ್ಳುತ್ತಿರ್ದನೆಂಬುದೀಗ, ಈ ಸೊಲ್ಲಿನ ವಿವ ರವ ಕೇಳುವಬನ್ನಿ ಸದಾಶಿವ ಮೂರ್ತಿಲಿಂಗದಲ್ಲಿಗೆ ಎಂಬಶಬ್ದಕ್ಕರ್ಥ.

೩೫

ಹುತ್ತದೊಳಗಣ ಹಾವು ಹದ್ದಿನ ಹೊಟ್ಟೆಯೊಳಗಣ ತತ್ತಿಯ ನುಂಗಿತ್ತು
ಗಿಡುಗನ ಉಡುನುಂಗಿ ಹೊಡೆವವನ ವಡಿನುಂಗಿತ್ತು
ಹಾವಿನ ಹದ್ದಿನ ತತ್ತಿಯು, ಗಿಡುಗನ ಉಡುವ,
ಹೊಡೆವವನ ದೊಣ್ಣೆಯ ಬಾಯಿಲ್ಲದ ಇರುಹೆ ನುಂಗಿದ್ದುದ ಕಂಡೆ.

**ಟೀಕು:—** ನವದ್ವಾರಯುಕ್ತವಾದ ದೇಹದಲ್ಲಿರ್ಪ ಶಂಕಾ ವಿಷಸಂಬಂಧಿ ಯಾದ ಜೀವನೆಂಬುದೀಗ, ಹುತ್ತದೊಳಗಣ ಹಾವೆಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಪರಮಾತ್ಮನ ಅಂತರಂಗದಲ್ಲಿರ್ಪ ಸ್ವಯಜ್ಞಾನವ ನವಗ್ರಹಿಸಿ ತ್ತೆಂಬುದೀಗ, ಹದ್ದಿನ ಹೊಟ್ಟೆಯೊಳಗಣ ತತ್ತಿ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತು ಶಿವಜ್ಞಾನಪ್ರಕಾಶವ ನವಗ್ರಹಿಸಲು ಸಕಲ ಪ್ರಪಂಚಿಗೆ ಲಂಘಿಸುತ್ತಿರ್ಪ ಮಾಯೆ ಯನು ಸೂಕ್ಷ್ಮವಾದ ಚಿತ್ ಪ್ರಕಾಶವಗ್ರಹಿಸಿತ್ತೆಂಬುದೀಗ, ಗಿಡುಗನ ಉಡು ನುಂಗಿ ಎಂಬ ಶಬ್ದಕ್ಕರ್ಥ. ಅಂತು ಚಿತ್‌ಪ್ರಕಾಶವನವಗ್ರಹಿಸಲು, ಸಕಲ ಕರ ಣಂಗಳ ನಿವೃತ್ತಿ ಮಾಡುತ್ತಿರ್ಪ ಶರಣನ ಶಿವಭಾವವಗ್ರಹಿಸಿತ್ತೆಂಬುದೀಗ, ಹೊಡೆವವನ ವಡಿ ನುಂಗಿತ್ತೆಂಬ ಶಬ್ದಕ್ಕರ್ಥ. ಜೀವನ ಪರಮಾತ್ಮ ಸ್ವಯಜ್ಞಾನವ ಮಾಯೆಯ ಸೂಕ್ಷ್ಮವಾದ ಚಿತ್‌ಪ್ರಕಾಶವ ಸಕಲ ಕರಣಂಗಳ ನಿವೃತ್ತಿ ಮಾಡು ತ್ತಿರ್ದ ಶರಣನ ಶಿವಭಾವವ ಭಿನ್ನಾಪೇಕ್ಷೆಯಿಲ್ಲದ ಸೂಕ್ಷ್ಮವಾದ ಪರಿಪೂರ್ಣ ಜ್ಞಾನವೆ ಆ ಸಮೂಹವನವಗ್ರಹಿಸಿ ಪರಶಿವತತ್ವದಲ್ಲಿ ನಿರ್ವಯಲಾಯಿತ್ತೆಂಬು ದೀಗ, ಹಾವಿನ ಹದ್ದಿನ ತತ್ತಿಯು, ಗಿಡುಗನ ಉಡುವ, ಹೊಡೆವವನ ದೊಣ್ಣೆಯ ಬಾಯಿಯಿಲ್ಲದ ಇರುಹೆ ನುಂಗಿದ್ದುದ ಕಂಡೆ ಸದಾಶಿವ ಮೂರ್ತಿಲಿಂಗವು ಬಚ್ಚ ಬಯಲಾಗಿತ್ತು ಎಂಬ ಶಬ್ದಕ್ಕರ್ಥ.

೩೬

ಒಂದು ಹರಿವ ಹಾವು, ಒಂದು ಫರಿಸರಕ್ಕೆ ನಿಂದಹಾವು
ಒಂದು ಉರಿವ ಹಾವು; ಈ ಮೂವರ ನಡುವೆ ನಿಂದು
ಆಡುವ ಕೊಡಗದಿರವು ಎಂತೆಂದೊಡೆ—

ಹರಿವ ಹಾವು ಮೆಟ್ಟನಿಂದ ಹಾವ ಕೈಯಲ್ಲಿ ಹಿಡಿದು
ಉರಿವ ಹಾವ ಬಾಯಲ್ಲಿ ಕಚ್ಚಿ ಆಡುತ್ತಿರಲಾಗಿ
ಕೊಡಗದೊಡೆಯ ಬಂದುನೋಡಿ ಕೋಲಹಿಡಿದು ಕುಟ್ಟೆ
ಮೂರು ಹಾವ ಬಿಟ್ಟು ಕುಟ್ಟಿದ ಕೋಲನುಂಗಿತ್ತು
ಆ ಕೋಲು ಕೊಡಗದ ಒಡಲೊಳಗೊಡದು ಕೊಡಗ ಸತ್ತಿತ್ತು.
ದಡಿ ಒಡೆಯನ ನುಂಗಿ ಒಡೆಯ ನಡಗಿ
ಸದಾಶಿವಮೂರ್ತಿಲಿಂಗವ ಒಡಗೂಡಿ ಬಚ್ಚಬಯಲಾಯಿತ್ತು.

ಟೀಕು: — ಸ್ಥೂಲ ತನುವಿನ ಜಾಗ್ರಾವಸ್ಥೆಯ ವ್ಯಾಪಾರದಲ್ಲಿ ಚರಿಸುತ್ತಿಹನು ವಿಶ್ವನೆಂಬುದೀಗ, ಒಂದು ಹರಿವ ಹಾವು ಎಂಬ ಶಬ್ದಕ್ಕರ್ಥ. ಸೂಕ್ಷ್ಮ ತನುವಿನ ಇಂದ್ರಿಯಂಗಳ ಶಬ್ದ ಜಾಲದೊಳಗಿರ್ದ ತೈಜಸನೆಂಬುದೀಗ, ಒಂದು ಧನಿಸರಕ್ಕೆ ನಿಂದ ಹಾವು ಎಂಬ ಶಬ್ದಕ್ಕರ್ಥ. ತಾಪತ್ರದೊಳಗೆ ಸಿಲ್ಕಿ ಮರವೆಯಲ್ಲಿರುತ್ತಿಹನು ಪ್ರಜ್ಞನೆಂಬುದೀಗ, ಒಂದು ಉರಿವ ಹಾವು ಎಂಬ ಶಬ್ದಕ್ಕರ್ಥ. ಇಂತಪ್ಪ ಜೀವ ತ್ರಯಂಗಳೊಳಗಾಗಿ ಸಿಲ್ಕಿ ಎಂಬುದೀಗ, ಈ ಮೂವರ ನಡುವೆ ನಿಂದು ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವತ್ರಯಂಗಳೊಳಗೆ ಮನವು ಸಿಲ್ಕಿ ಪ್ರಪಂಚಿನ ವರ್ತನೆಯಲ್ಲಿ ಚರಿಸುತ್ತಿಹುದೆಂಬುದೀಗ, ಆಡುವ ಕೊಡಗದಿರವು ಎಂಬ ಶಬ್ದಕ್ಕರ್ಥ. ಇಂತಪ್ಪ ಮನೋಮಧ್ಯದಲ್ಲಿ ಸುಜ್ಞಾನೋದಯವಾಗಲು ಶ್ರೀಗುರು ಕಾರುಣ್ಯದಿಂ ಜಾಗ್ರಾವಸ್ಥೆಯ ವ್ಯಾಪಾರವ ಕ್ರಿಯಾ ದೀಕ್ಷೆಯಿಂ ನಿವೃತ್ತಿಮಾಡಿ ಆ ವಿಶ್ವನಲ್ಲಿ ಇಷ್ಟಲಿಂಗ ಪ್ರತಿಷ್ಠೆಯ ಮಾಡಿದನೆಂಬುದೀಗ, ಹರಿವ ಹಾವ ಮೆಟ್ಟಿಯೆಂಬ ಶಬ್ದಕ್ಕರ್ಥ. ಅಂತು ಇಷ್ಟಲಿಂಗ ಸಂಬಂಧವಾಗಲು ಸೂಕ್ಷ್ಮ ತನುವಿನ ಇಂದ್ರಿಯಂಗಳ ವರ್ತನೆಯಲ್ಲಿ ಚರಿಸುತ್ತಿಹ ತೈಜಸಿನ ದುರ್ಭಾವ ಹಸ್ತವು ಮಂತ್ರ ದೀಕ್ಷೆಯಿಂ ನಷ್ಟವಾಗಿ ಸದ್ಭಾವ ನೆಲೆಗೊಂಡಲ್ಲಿ ಪ್ರಾಣಲಿಂಗ ಸಂಬಂಧವಾಯಿತ್ತೆಂಬುದೀಗ, ನಿಂದ ಹಾವ ಕೈಯಲ್ಲಿ ಹಿಡಿದು ಎಂಬ ಶಬ್ದಕ್ಕರ್ಥ. ಅಂತು ಪ್ರಾಣಲಿಂಗ ಸಂಬಂಧವಾದಲ್ಲಿ ತಾಪತ್ರಯಾಗ್ನಿಯಲ್ಲಿ ಜೀವುತ್ತಿರ್ದ ಪ್ರಾಜ್ಞನನು ವೇಧ ದೀಕ್ಷೆಯ ನಷ್ಟವ ಮಾಡಿ ಭಾವಲಿಂಗ ಸಂಬಂಧವಾಗಲು ಚಿದ್ಭಾರದಲ್ಲವಗ್ರಹಿಸಿದನೆಂಬುದೀಗ, ಉರಿವ ಹಾವ ಬಾಯಲ್ಲಿ ಕಚ್ಚಿಯೆಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧಲಿಂಗದಲ್ಲಿ ಆಚರಿಸುತ್ತಿರಲಾಗಿ ಎಂಬುದೀಗ, ಆಡುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಮನಕ್ಕೆ ಕರ್ತನಾದ ಶರಣ ಬಂದು ಅವಿರಳ ಜ್ಞಾನ ದೃಕ್ಕಿಂ ನೋಡಲೊಡನೆ ಕೋಲೆಂದೊಡೆ ಶಿವಭಾವ. ಆ ಶಿವಭಾವದಲ್ಲಿ ಬಡಿಯಲಾಗಿ ಜೀವತ್ರಯಂಗಳ ವರ್ತನೆ ಬಿಟ್ಟು ಶಿವ ಭಾವವನವಗ್ರಹಿಸಿತ್ತೆಂಬುದೀಗ, ಕೊಡಗದೊಡೆಯ ಬಂದು ನೋಡೆ ಕೋಲ ಕುಟ್ಟೆ ಹಾವ ಬಿಟ್ಟು ಕುಟ್ಟಿದ ಕೋಲ ನುಂಗಿತ್ತೆಂಬ ಶಬ್ದಕ್ಕರ್ಥ. ಆ ಶಿವಭಾವವು ಮನೋಮಧ್ಯದಲ್ಲಿ ಸಮರಸವಾಯಿತ್ತೆಂಬುದೀಗ, ಆ ಕೋಲು ಕೊಡಗದ ಒಡಲೊಳಗೊಡದು ಎಂಬ ಶಬ್ದಕ್ಕರ್ಥ. ಆ ಮನಸ್ಸು ಸದ್ರೂಪವಾದ ಬ್ರಹ್ಮವೇಯಾಯಿತ್ತೆಂಬುದೀಗ, ಕೊಡಗ ಸತ್ತಿತ್ತೆಂಬ ಶಬ್ದಕ್ಕರ್ಥ. ಅಂತು ಮನಲಿಂಗ

ದಲ್ಲೀಕಾರ್ಥವಾಗಲು ಶರಣನ ಆ ಶಿವಭಾವವಗ್ರಹಿಸಿತ್ತೆಂಬುದೀಗ, ಪಡಿ ಒಡೆಯನ ನುಂಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನ ಕಲಾತ್ಮನು ಆ ಶಿವಭಾವದಲ್ಲೀಕಾರ್ಥವಾದನೆಂಬುದೀಗ, ಒಡೆಯ ನಡಗಿ ಸದಾಶಿವ ಮೂರ್ತಿಲಿಂಗವನೊಡಗೂಡಿ ಬಚ್ಚ ಬಯಲಾಯಿತ್ತು ಎಂಬ ಶಬ್ದಕ್ಕರ್ಥ.

೩೭

ಮಹಾ ವಿಕಾರ ರಣಮಯವಾದಲ್ಲಿ,
ಹರಿವ ಶ್ರೋಣಿತದಲ್ಲಿ ಒಂದು ನೊಣ ಹುಟ್ಟಿತ್ತು.
ಕಾಲೊಂದು, ಅಂಗ ಮೂರು, ಹಾರುವ ರಟ್ಟೆ ಒಂದೆ,
ಅದರ ನಾಲಗೆಯಲ್ಲಿ ನಾರಾಯಣ ಹುಟ್ಟಿ ನೊಣ ಸತ್ತಿತ್ತು
ಬ್ರಹ್ಮನ ಇರವಾಯಿತ್ತು; ವಿಷ್ಣುವಿನ ಲೋಕವಾಯಿತ್ತು
ರುದ್ರನ ಕಪಾಲ ತುಂಬಿ ಕಪಾಲದ ಕೂಳನುಂಡು
ಬುದ್ಧಿವಂತರಾಗಿರಿ,
ಎನಗೆ ಹೊದ್ದಿಗೆ ಬೇಡ ಸದಾಶಿವ ಮೂರ್ತಿ ಲಿಂಗ ಇದ್ದಂತೆ ಸಾಕು.

**ಟೀಕು:—** ಆತ್ಮ ಸಂಬಂಧವಾದ ಸಕಲ ಕರಣಂಗಳೆಲ್ಲವೂ ವಿಕಾರದಿಂ ಜೀವನ್ಮೃತವಾಗಿ ಮರವೆಯನೆಯ್ದಿದಲ್ಲಿ ಆ ಸಂಸಾರ ವಿಷಯ ರಸವ ಮಧ್ಯದಲ್ಲಿ ಜಗುಪ್ಸೆಯುಳ್ಳ ಮಾಯೆ ಹುಟ್ಟಿದಳೆಂಬುದೀಗ, ಹರಿವ ಶ್ರೋಣಿತದಲ್ಲಿ ಒಂದು ನೊಣ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಆ ಮಾಯೆಗೆ ದುಶ್ಚರಿತ್ರವೆಂಬ ಚರಣ ಒಂದೇ ಎಂಬುದೀಗ, ಕಾಲೊಂದು ಎಂಬ ಶಬ್ದಕ್ಕರ್ಥ. ಆ ಮಾಯೆಗೆ ತನುತ್ರಯಂಗಳೆ ಶರೀರವಾಗಿಹವೆಂಬುದೀಗ, ಅಂಗ ಮೂರು ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆಗೆ ಪ್ರಪಂಚೆಂಬರಕ್ಕೆ ಒಂದೇ ಎಂಬುದೀಗ, ಹಾರುವರಟ್ಟೆ ಒಂದೆ ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆಯ ಭಿನ್ನಾಪೇಕ್ಷೆಯಲ್ಲಿ ಶುದ್ಧ ಸಾತ್ವಿಕ ಸಂಬಂಧವಾದ ಸಮ್ಯಜ್ಞಾನಉದಯ ವಾಯಿತ್ತೆಂಬುದೀಗ, ಅದರ ನಾಲಗೆಯಲ್ಲಿ ನಾರಾಯಣ ಹುಟ್ಟಿ ಎಂಬ ಶಬ್ದಕ್ಕರ್ಥ ಆ ಸುಜ್ಞಾನ ಪ್ರಕಾಶದಿಂ ಮಾಯೆಯ ನಿವೃತ್ತಿಯಾಗಿ ಹೋಯಿತ್ತೆಂಬುದೀಗ, ನೊಣಸತ್ತಿತ್ತೆಂಬ ಶಬ್ದಕ್ಕರ್ಥ ಆ ಮಾಯೆಯ ನಿವೃತ್ತಿ ಮಾಡಿದೆನೆಂಬಹಂಕಾರದಿಂ ಬ್ರಹ್ಮನ ಸೃಷ್ಟಿಗೊಳಗಾದನೆಂಬುದೀಗ, ಬ್ರಹ್ಮನ ಇರವಾಯಿತ್ತೆಂಬ ಶಬ್ದಕ್ಕರ್ಥ. ಅಂತು ಬ್ರಹ್ಮನ ಸೃಷ್ಟಿಗೊಳಗಾದಾತ್ಮರು ವಿಷ್ಣುತತ್ವ ಸಂಬಂಧವಾದ ಪ್ರಾರಾಬ್ಧ ಭೋಗಕ್ಕೀಡಾದರೆಂಬುದೀಗ, ವಿಷ್ಣುವಿನ ಲೋಕವಾಯಿತ್ತು ಎಂಬ ಶಬ್ದಕ್ಕರ್ಥ. ಅಂತು ಪ್ರಾರಾಬ್ಧ ಭೋಗಕ್ಕೀಡಾದಾತ್ಮರು ರುದ್ರ ತತ್ವ ಸಂಬಂಧವಾದ ಭಿನ್ನ ಜ್ಞಾನದಲ್ಲಿ ಸಂಸಾರ ವಿಷಯ ರಸ ಸಂಪೂರ್ಣವಾಗಿಹವೆಂಬುದೀಗ, ರುದ್ರನ ಕಪಾಲ ತುಂಬಿ ಎಂಬ ಶಬ್ದಕ್ಕರ್ಥ. ಆ ಭಿನ್ನ ಜ್ಞಾನದಿಂದೊದಗಲು ಪಟ್ಟ ಖಂಡಿತ ಫಲಪದಂಗಳ ಪಡೆದು ಭೋಗಿಸುತ್ತಿಹರೆಂಬುದೀಗ, ಬುದ್ಧಿವಂತರೆಲ್ಲರು ಕಪಾಲದ ಕೂಳನುಂಡು ಎಂಬ ಶಬ್ದಕ್ಕರ್ಥ. ಅಂತು ದ್ವೈತಾಕ್ರಿಯಂ ಫಲಪದಂಗಳ ಪಡದು ಭೋಗಿಸುತ್ತಿಹರೆಲ್ಲರು ಖಂಡಿತ ಯುಕ್ತಿ

ಯುಳ್ಳವರೆಂಬುದೀಗ, ಬುದ್ಧಿವಂತರಾಗಿ ಎಂಬ ಶಬ್ದಕ್ಕರ್ಥ. ಸುಜ್ಞಾನೋದಯವಾಗಿ ಶ್ರೀ ಗುರು ಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧಿಯಾಗಿರ್ಪ ಶರಣಂಗೆ ಅಭಿನ್ನ ಫಲ ಪದಂಗಳ ಬಯಕೆಯಿಲ್ಲವೆಂಬುದೀಗ, ಎನಗಾ ಪೊಗ್ಗಿಕೆ ಬೇಡ, ಸದಾಶಿವ ಮೂರ್ತಿಲಿಂಗ ಇದ್ದಂತೆಸಾಕು ಎಂಬ ಶಬ್ದಕ್ಕರ್ಥ.

೩೮

ಗಂಡನಿಲ್ಲದ ಸತಿ ಯೋನಿ ಇಲ್ಲದೆ ಮಕ್ಕಳ ಹಡದು
ನಾಲಗೆಯಿಲ್ಲದ ಬಾಯಲ್ಲಿ ಜೋಗುಳವಾಡುತ್ತೈದಾಳೆ;
ತೊಟ್ಟಿಲಿಲ್ಲದೆ ನೇಣು ಹೊರತೆಯಾಗಿ
ಗಂಟಕಟ್ಟಿ ಮಗುವಿಲ್ಲದೆ ಶಿಶುವಳುತ್ತದೆ.
ಅದಕ್ಕೆ ಮೊಲೆಯಿಲ್ಲದ ಹಾಲ ಬೇಕು
ಸದಾಶಿವ ಮೂರ್ತಿ ಲಿಂಗವ ನರಿತಲ್ಲದಾಗದು.

**ಟೀಕೆ:**— ಜೀವನ ವ್ಯವಹಾರವಿಲ್ಲದ ಜ್ಞಾನಶಕ್ತಿ ಸ್ವರೂಪನಾದ ಶರಣನೆಂಬುದೀಗ, ಗಂಡನಿಲ್ಲದ ಸತಿಯೆಂಬ ಶಬ್ದಕ್ಕರ್ಥ. ಆ ಸುಜ್ಞಾನ ಸಹಿತವಾದ ಶರಣ ಸತಿಗೆ ಉತ್ಪತ್ತಿ ನಾಸ್ತಿಯಾಯಿತ್ತೆಂಬುದೀಗ, ಯೋನಿಯಿಲ್ಲದೆ ಎಂಬ ಶಬ್ದಕ್ಕರ್ಥ. ಆ ಉತ್ಪತ್ತಿನಾಸ್ತಿಯಾಗಿರ್ಪ ಚಿತ್ ಸ್ವರೂಪನಾದ ಶರಣ ಸತಿಯಲ್ಲಿ ಚಿದ್ರೂಪವಾದ ಶ್ರೀಗುರು ಅವಿರಳ ಸಂಗವ ಮಾಡಲು ಅಲ್ಲಿ ಚಿದ್ ಗರ್ಭ ತಲೆದೋರಿ ಸಚ್ಚಿದಾನಂದ ಸ್ವರೂಪವಾದ ಲಿಂಗತ್ರಯವುದಯಿಸಿದವೆಂಬುದೀಗ, ಮಕ್ಕಳ ಹಡದು ಎಂಬ ಶಬ್ದಕ್ಕರ್ಥ. ಆ ಲಿಂಗತ್ರಯದಲ್ಲಿ ಸಮರಸಭಾವವನಘಟಿಸಿದ ಶರಣ ಸತಿಗೆ ಶಬ್ದ ಜಾಲಂಗಳಿಲ್ಲದೆ ಶಿವಾವೇಶದಿಂ ಶಿವೋಹಂವೆಂದು ಎಚ್ಚರಿಸುತ್ತಿದಳೆಂಬುದೀಗ, ನಾಲಿಗೆಯಿಲ್ಲದ ಬಾಯಲ್ಲಿ ಜೋಗುಳವಾಡುತ್ತೈದಾಳೆಂಬ ಶಬ್ದಕ್ಕರ್ಥ. ಆ ಶಿವೋಹಂಭಾವ ಘಟಿಸಿದ ಶರಣ ಸತಿಗೆ ದೇಹಭಾವನಾಸ್ತಿಯಾಗಿ ಮಾಯಾಪಾಶ ನಿವೃತ್ತಿಯಾಯಿತ್ತೆಂಬುದೀಗ, ತೊಟ್ಟಿಲಿಲ್ಲದೆ ನೇಣು ಹೊರತೆಯಾಗಿಯೆಂಬ ಶಬ್ದಕ್ಕರ್ಥ. ಆ ಮಾಯಾಪಾಶ ನಾಸ್ತಿಯಾಗಲು, ಶರಣ ತನ್ನ ಆಚಾರಾಂಗವ ಸ್ವಾನುಭಾವ ಸೂತ್ರದಲ್ಲಿ ಸಂಬಂಧಿಸಿದನೆಂಬುದೀಗ, ಗಂಟಕಟ್ಟಿ ಎಂಬ ಶಬ್ದಕ್ಕರ್ಥ. ಆ ಸರ್ವಾಚಾರ ಸಂಪತ್ತಿನಲ್ಲಿ ಸ್ವಾನುಭಾವ ಸೂತ್ರ ಸಂಬಂಧಿಸಿಕೊಂಡಿರ್ಪ ಶರಣಂಗೆ ಮನೋವರ್ತನೆಯಿಲ್ಲದೆ ಆ ಪರಬ್ರಹ್ಮದಲ್ಲಿ ಶಿವೋಹಂ-ಶಿವೋಹಂ ವೆನುತ್ತಿರ್ದನೆಂಬುದೀಗ, ಮಗುವಿಲ್ಲದೆ ಶಿಶುವಳುತ್ತದೆಯೆಂಬ ಶಬ್ದಕ್ಕರ್ಥ. ಆ ಶಿವೋಹಂವೆನುತ್ತಿರ್ದ ಶರಣನೆಂಬ ಶಿಶುವಿಂಗೆ, ಸಂಸಾರ ವಿಷಯ ರಸವ ತುಂಬಿಕೊಂಡಿರ್ಪ ಘಟ ಸ್ವರೂಪಿನ ಸ್ವಾನವಿಲ್ಲದೆ ಜ್ಞಾನಾಮೃತ ರಸವನೆ ಸ್ವೀಕರಿಸುತ್ತಿಹುದೆಂಬುದೀಗ, ಅದಕ್ಕೆ ಮೊಲೆಯಿಲ್ಲದ ಹಾಲು ಬೇಕು ಸದಾಶಿವ ಮೂರ್ತಿಲಿಂಗವನರಿತಲ್ಲಾಗದು ಎಂಬ ಶಬ್ದಕ್ಕರ್ಥ.

೩೯

ಕಣ್ಣಿಲ್ಲದ ಕುರುಡ ಕನ್ನಡಿಯ ನೋಡಿ ಮೂರು ಕಣ್ಣ ಕಂಡ
ಒಂದು ಧರೆಯ ಕಣ್ಣು, ಒಂದು ಸಿರಿಯ ಕಣ್ಣು,
ಒಂದು ಉರಿಯ ಕಣ್ಣು
ಉರಿ ಸಿರಿಯ ನುಂಗಿ, ಸಿರಿ ಧರೆಯ ನುಂಗಿ,
ಧರೆ ಅರುಹಿಯರ ನುಂಗಿ
ಆ ಗುಣವನರಿಯಬೇಕು ಸದಾಶಿವ ಮೂರ್ತಿ ಲಿಂಗವ ಬೆರಸಬೇಕು

ಟೀಕು:— ದೇಹ ಸಂಬಂಧಿಯಾದಾತ್ಮಂಗೆ, ಸುಜ್ಞಾನ ದೃಷ್ಟಿ ನಷ್ಟವಾಯಿತ್ತೆಂಬುದೀಗ, ಕಣ್ಣಿಲ್ಲದ ಕುರುಡನೆಂಬ ಶಬ್ದಕ್ಕರ್ಥ. ಅಂತಪ್ಪಾತ್ಮಂಗೆ ಶಿವಕೃಪೆಯಿಂ ಸದ್ವಿವೇಕ ಜ್ಞಾನ ತಲೆದೋರಿ ಶ್ರೀಗುರುಕಾರುಣ್ಯದಿಂ ತ್ರಿವಿಧಲಿಂಗ ಪ್ರಭಾವಿಸಿಹರೆಂಬುದೀಗ, ಕನ್ನಡಿಯ ನೋಡಿ ಮೂರುಕಣ್ಣಕಂಡನೆಂಬ ಶಬ್ದಕ್ಕರ್ಥ. ಸದ್ರೂಪವಾದ ಇಷ್ಟಲಿಂಗವು ಶರಣನ ಸ್ಥೂಲಾಂಗದಲ್ಲಿ ಸಂಬಂಧವಾಗಿಹುದೆಂಬುದೀಗ, ಒಂದು ಧರೆಯ ಕಣ್ಣು ಎಂಬ ಶಬ್ದಕ್ಕರ್ಥ. ಸುಜ್ಞಾನ ಸ್ವರೂಪವಾದ ಪ್ರಾಣಲಿಂಗವು, ಶರಣನ ಸೂಕ್ಷ್ಮಾಂಗದಲ್ಲಿ ಸಂಬಂಧವಾಗಿಹುದೆಂಬುದೀಗ, ಒಂದು ಸಿರಿಯ ಕಣ್ಣು ಎಂಬ ಶಬ್ದಕ್ಕರ್ಥ. ಚಿದಾಗ್ನಿ ಸ್ವರೂಪವಾದ ಭಾವಲಿಂಗವು ಶರಣನ ಕಾರಣಾಂಗದಲ್ಲಿ ಸಂಬಂಧವಾಗಿಹುದೆಂಬುದೀಗ, ಒಂದು ಉರಿಯಕಣ್ಣು ಎಂಬ ಶಬ್ದಕ್ಕರ್ಥ. ಆ ಚಿದಾಗ್ನಿ ಸ್ವರೂಪವಾದ ಭಾವಲಿಂಗವು ಸುಜ್ಞಾನ ಸ್ವರೂಪವಾದ ಪ್ರಾಣಲಿಂಗವ ನವಗ್ರಹಿಸಿ ಲಿಯ್ಯವಾಯಿತ್ತೆಂಬುದೀಗ, ಉರಿ ಸಿರಿಯ ನುಂಗಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಸ್ವರೂಪವಾದ ಪ್ರಾಣಲಿಂಗವು ಸದ್ರೂಪವಾದ ಇಷ್ಟಲಿಂಗವ ನವಗ್ರಹಿಸಿ ಲಿಯ್ಯವಾಯಿತ್ತೆಂಬುದೀಗ, ಸಿರಿ ಧರೆಯ ನುಂಗಿ ಎಂಬ ಶಬ್ದಕ್ಕರ್ಥ. ಶರಣನಾಚಾರಲಿಂಗದಲ್ಲಿ ಸಂಬಂಧವಾದ ಸತ್ಕ್ರಿಯಾಲಿಂಗವು ತ್ರಿವಿಧಲಿಂಗಾನುಭಾವಿಗಳ ಸರ್ವಾಂಗವ ನವಗ್ರಹಿಸಿ ನಿಷ್ಪತ್ತಿಯಾಯಿತ್ತೆಂಬುದೀಗ, ಧರೆ ಅರುಹಿಯರ ನುಂಗಿ ಆ ಗುಣವನರಿಯಬೇಕು ಸದಾಶಿವ ಮೂರ್ತಿ ಲಿಂಗ ಬೆರಸಬೇಕು ಎಂಬ ಶಬ್ದಕ್ಕರ್ಥ.

೪೦

ರಸದ ಭಾವಿಯಲ್ಲಿ ಅಸಿಯ ಮಡುವ ಕಲಕಿ
ಕತ್ತರಿಯ ವಾಣಿಯ ಗೊತ್ತುಕೊಯ್ದು
ಕರೋತಿಯ ಕಣ್ಣುಕಿತ್ತು ಅಶ್ವನ ಚಿತ್ತವ ಕಿತ್ತು
ನಿಶ್ಚಯದಲ್ಲಿ ಆಡುವಾತನೆ ನಿಜವಸ್ತು ಸದಾಶಿವಲಿಂಗವು.

ಟೀಕು:— ಪರಮಾಮೃತ ರಸವ ತುಂಬಿಕೊಂಡಿರ್ದ ಚಿತ್ ಕೂಪವೆಂಬುದೀಗ, ರಸದ ಭಾವಿಯಲ್ಲಿ ಎಂಬ ಶಬ್ದಕ್ಕರ್ಥ. ಆ ಪರಮಾಮೃತ ರಸವನೊಳಕೊಂಡಿರ್ದ ಶರಣನು ಘಾತವಕಾಣಬಾರದೆಯಿರ್ದ ಅಜ್ಞಾನ ಸಂಬಂಧವಾದ

ಸಂಸಾರ ವಿಷಯ ರಸದ ಮಡುವ ನಿವೃತ್ತಿಮಾಡಿದನೆಂಬುದೀಗ, ಅಸಿಯ ಮಡುವ ಕಲಕಿ ಎಂಬ ಶಬ್ದಕ್ಕರ್ಥ. ಅಂತು ಅಜ್ಞಾನ ನಷ್ಟವಾದಲ್ಲಿ ತನ್ನ ಸೋಂಕಿದವರ ಕಡಿದುಕತ್ತರಿಸುವ ಅತಿ ವಿಷೋದಕ ದಂತಪ್ಪ ಸಂಸಾರವಿಷಯ ರಸವ ತುಂಬಿಕೊಂಡಿರ್ದ ಅಹಂಕಾರಯುಕ್ತವಾದ ದೇಹಭಾವ ಛೇದಿಸಿದನೆಂಬುದೀಗ, ಕತ್ತರಿವಾಣಿಯ ಗೊತ್ತಕೊಯ್ದು ಎಂಬ ಶಬ್ದಕ್ಕರ್ಥ. ಅಂತು ದೇಹಭಾವ ನಷ್ಟವಾದಲ್ಲಿ ಜೀವನ ಅಜ್ಞಾನ ದೃಷ್ಟಿ ನಷ್ಟವಾಯಿತ್ತೆಂಬುದೀಗ, ಕರೋತಿಯ ಕಣ್ಣು ಕಿತ್ತು ಎಂಬ ಶಬ್ದಕ್ಕರ್ಥ. ಅಂತು ಮಾಯಾಸಂಬಂಧವಾದ ಜೀವನು, ಅಜ್ಞಾನ ಭಾವ ನಿವೃತ್ತಿಯಾಗಲು ಪ್ರಾಣವಾಯು ವಿಕಾರದಲ್ಲಿ ಸಂಚರಿಸುತ್ತಿಹ ಮನಸ್ಸ ಛೇದಿಸಿದನೆಂಬುದೀಗ, ಅಶ್ವನ ಚಿತ್ತನ ಕಿತ್ತು ಎಂಬ ಶಬ್ದಕ್ಕರ್ಥ. ಅಂತು ಮನವಳಿದು ಉನ್ಮನಿ ತತ್ವಸ್ವರೂಪವಾದ ನಿರ್ಮಾಯ ಸ್ವರೂಪನಾದ ಶರಣನು ಗುರು ಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧಿಯಾಗಿ, ಜ್ಞಾನ ಕ್ರೀವಿಡಿದಾಚರಿಸಿ ಪರವಸ್ತುವೆಯಾದನೆಂಬುದೀಗ, ನಿಶ್ಚಯದಲ್ಲಿ ಆಡುವಾತನೆ ನಿಜವಸ್ತು ಸದಾಶಿವಮೂರ್ತಿಲಿಂಗವು ಎಂಬ ಶಬ್ದಕ್ಕರ್ಥ.

೪೧

ಕಾಳಿಯ ಕಣ್ಣು ಕಿತ್ತು ಎಡಿಯ ಸರ್ವಾಂಗವ ಸೀಳಿ
ಅಚ್ಚ ಬೆಳ್ಳಿಗೆಯ ಹಾಲ ನಿಶ್ಚಯದಲ್ಲಿ ತೆಗೆದು
ತೃಪ್ತಿಯಾಗಿ ಕೊಳಬಲ್ಲಡೆ ಆಗತಾನೆ ಸದಾಶಿವಮೂರ್ತಿಲಿಂಗವು.

**ಟೀಕು:**— ಶಿವಜ್ಞಾನೋದಯವಾದ ಶರಣನು ಅಜ್ಞಾನ ಸ್ವರೂಪಿಣಿಯಾದ ಮಾಯೆಯ ಭಿನ್ನ ಜ್ಞಾನವ ನಿವೃತ್ತಿಯ ಮಾಡಿದನೆಂಬುದೀಗ, ಕಾಳಿಯ ಕಣ್ಣು ಕಿತ್ತು ಎಂಬ ಶಬ್ದಕ್ಕರ್ಥ. ಅಂತು ಮಾಯಾ ಸಂಬಂಧವಾದ ಖಂಡಿತ ಜ್ಞಾನವಳಿಯಲು ನಾನಾ ದುಶ್ಚರಿತ್ರವನುಳ್ಳ ಮನಸ್ಸಿನ ಪ್ರಕೃತಿ ಭಾವವ ನಿವೃತ್ತಿಯ ಮಾಡಿದನೆಂಬುದೀಗ, ಎಡಿಯ ಸರ್ವಾಂಗವ ಸೀಳಿ ಎಂಬ ಶಬ್ದಕ್ಕರ್ಥ. ಅಂತು ಮನವಳಿಯಲು ಮಲತ್ರಯಂಗಳು ಪೊದ್ದದೆ ನಿರ್ಮಲ ಸ್ವರೂಪವಾದ ಜ್ಞಾನ ಶಕ್ತಿಯ ಮಧ್ಯದಲ್ಲಿರ್ಪ ಪರಮಾಮೃತ ರಸವನು ಸ್ವಾನುಭಾವ ಉಪಾಯ ತಂತ್ರದಿಂ ಕರದುಕೊಂಡು ಸರ್ವಾಂಗದಲ್ಲಿ ಧರಿಸಿ ಆ ಲಿಂಗಸುಖ ಪ್ರಸಂಗ ಪ್ರಸಾದವ ಸ್ವೀಕರಿಸಬಲ್ಲಾತನೆ ಪರಶಿವ ಸ್ವರೂಪನೆಂಬುದೀಗ ಅಚ್ಚ ಬೆಳ್ಳಿಗೆಯ ಹಾಲ ನಿಶ್ಚಯದಲ್ಲಿ ತೆಗೆದು ತೃಪ್ತಿಯಾಗಿ ಕೊಳಬಲ್ಲಡೆ ಆತ ತಾನೆ ಸದಾಶಿವಮೂರ್ತಿ ಲಿಂಗವು ಎಂಬ ಶಬ್ದಕ್ಕರ್ಥ.

೪೨

ಮಹದಾಕಾಶದ ಮನೆಯಲ್ಲಿ ಪಂಚಕಾಲಿನ ನೆಲವು ಕಟ್ಟಿರಲಾಗಿ
ಅದಕ್ಕೆ ಜಲತ್ಕಾರವೆಂಬ ಗಡಿಗೆ ಇದ್ದಿತ್ತು
ಅದರೊಳಗೆ ಮಧುರ ಜಲ, ಮಂದಿರದಲ್ಲಿ ವಿಮಲ ಜಲ ತುಂಬಿ
ಒಂದಕ್ಕೊಂದು ಹೊದ್ದದೆ ಕುಂಭವೊಂದರಲ್ಲಿನಿಂದ ಭೇದವನೋಡಾ

ಆ ಗಡಿಗೆಯು ತೆಗೆವುದಕ್ಕೆ ಮಹಾಕಾಶವನೇರುವದಕ್ಕೆ ನೆಲೆಯಿಲ್ಲ
ನೆಲಹಿಂಗೆ ಮೊದಲಿಲ್ಲ, ಕುಂಭಕ್ಕಂಗವಿಲ್ಲ.
ಒಳಗಣ ಭೇದವ ವಿವರಿಸಬಾರದು, ಇಂತಿ ಘಟಮಠ ಆಧಾರದಲ್ಲಿ
ಪರಿಪೂರ್ಣನಾದೆಯಲ್ಲ ಸದಾಶಿವ ಮೂರ್ತಿ ಲಿಂಗವೆ ಅವಿರಳನಾಗಿ

**ಟೀಕು**:— ಸಕಲ ತತ್ವಂಗಳಿಗಾಶ್ರಯವಾಗಿರ್ಪ ಅಖಂಡಜ್ಞಾನ ಚಿತ್ತೆ ಶರಣಂಗೆ ಚಿದಾಲಯವಾಯಿತ್ತೆಂಬುದೀಗ, ಮಹದಾಕಾಶದ ಮನೆಯಲ್ಲಿ ಎಂಬ ಶಬ್ದಕ್ಕರ್ಥ. ಆ ಚಿದಾಲಯದ ಮಧ್ಯದಲ್ಲಿ ಪಂಚಾಚಾರವನೊಳಕೊಂಡಿರ್ಪ ಶಿವಭಾವ ಸಂಬಂಧವಾಗಿಹುದೆಂಬುದೀಗ, ಪಂಚಕಾಲಿನ ನೆಲುಹು ಕಟ್ಟಿರಲಾಗಿ ಎಂಬ ಶಬ್ದಕ್ಕರ್ಥ. ಆ ಶಿವಭಾವದಲ್ಲಿ ಪರಮ ಶಾಂತಿಯು ಜಲವನೊಳಕೊಂಡಿರ್ಪ ಚಿದ್ ಭಾಂಡ ಉತ್ಪತ್ತಿಹುದೆಂಬುದೀಗ, ಅದಕ್ಕೆ ಜಲತ್ಕಾರವೆಂಬ ಗಡಿಗೆ ಇದ್ದಿತ್ತೆಂಬ ಶಬ್ದಕ್ಕರ್ಥ. ಆ ಶಿವಭಾವದಲ್ಲಿ ಸಂಬಂಧವಾದ ಚಿದ್ ಭಾಂಡದಲ್ಲಿ ತ್ರಿವಿಧ ಪಾದೋದಕ ಸಂಬಂಧವಾದ ತ್ರಿವಿಧ ಸಾಹಿತ್ಯವಾಗಿಹವೆಂಬುದೀಗ, ಅದರೊಳಗೆ ಮಧುರ ಜಲ, ಮಂದಿರದಲ್ಲಿ ವಿಮಲ ಜಲ ತುಂಬಿ ಎಂಬ ಶಬ್ದಕ್ಕರ್ಥ. ಆ ಪಾದೋದಕ ಸ್ವರೂಪವಾದ ತ್ರಿವಿಧ ಲಿಂಗಂಗಳಾಚರಣೆ ಬೇರಾಗಿ ಆ ಲಿಂಗಗಳು ಚಿದ್ ಭಾಂಡವೊಂದರಲ್ಲಿ ಸಂಬಂಧವಾಗಿಹವೆಂಬುದೀಗ, ಒಂದಕ್ಕೊಂದು ಹೊದ್ದದೆ ಕುಂಭವೊಂದರಲ್ಲಿ ನಿಂದ ಭೇದವ ನೋಡಾ ಎಂಬ ಶಬ್ದಕ್ಕರ್ಥ. ಆ ಚಿದ್ ಭಾಂಡವು ಶರಣನ ಸರ್ವಾಂಗದಲ್ಲಿ ಸಮರಸವಾದ ಬಳಿಕ ಕ್ರಿಯಾಕಾರಕ್ಕೆ ತರಲಿಲ್ಲವೆಂಬುದೀಗ, ಆ ಗಡಿಗೆಯು ತೆಗೆವುದಕ್ಕೆ ಎಂಬ ಶಬ್ದಕ್ಕರ್ಥ. ಆ ಚಿದಾಕಾಶವೆ ಶರಣನ ಒಳ-ಹೊರಗೆ ಪರಿಪೂರ್ಣವಾಗಿ ಭೇದಿಸಿದ ಬಳಿಕ ಇನ್ನು ಚಿದಾಕಾಶಕ್ಕೆಯ್ದುಹನೆಂಬಡೆ ಪ್ರಮಾಣಿಲ್ಲವೆಂಬುದೀಗ, ಮಹದಾಕಾಶವ ನೇರುವದಕ್ಕೆ ನೆಲೆಯಿಲ್ಲವೆಂಬ ಶಬ್ದಕ್ಕರ್ಥ. ಆ ಚಿದಾಲಯದಲ್ಲಿ ಸಂಬಂಧವಾಗಿರ್ಪ ಶಿವಭಾವಕ್ಕೆ ತಾನೆಂಬ ಮೂಲಹಂಕಾರ ವಿಲ್ಲವೆಂಬುದೀಗ, ನೆಲಹಿಂಗೆ ಮೊದಲಿಲ್ಲವೆಂಬ ಶಬ್ದಕ್ಕರ್ಥ. ಆ ಚಿದ್‌ಭಾಂಡ ಸ್ವರೂಪನಾದ ಶರಣಂಗೆ ದೇಹ ಭಾವವಿಲ್ಲವೆಂಬುದೀಗ, ಕುಂಭಕ್ಕಂಗ ವಿಲ್ಲವೆಂಬ ಶಬ್ದಕ್ಕರ್ಥ. ಆ ಶರಣನ ನಿಜಾಂತರಂಗದಲ್ಲಿ ಸಾಹಿತ್ಯವಾಗಿರ್ಪ ಪ್ರಾಣಲಿಂಗದ ನಿಜ ಸ್ವರೂಪವನು ವಾಕ್ಯಕ್ಕೆ ತಂದು ಹೇಳಲಿಲ್ಲ ವೆಂಬುದೀಗ, ಒಳಗಣ ಭೇದವ ವಿವರಿಸಬಾರದೆಂಬ ಶಬ್ದಕ್ಕರ್ಥ. ಆ ಚಿದ್ ಭಾಂಡವೆಂಬುದೀಗ, ಮಠ ಶಿವ ಭಾವವ ಧರಿಸಿ ಕೊಂಡಿರ್ಪ ಚಿದಾತ್ಮನೆಂಬುದೀಗ, ಆಧಾರ ಈ ತ್ರಿವಿಧದಲ್ಲಿ ಒಂದೇ ಪರಬ್ರಹ್ಮವು ಪರಿಪೂರ್ಣವಾಗಿ ಭೇದಿಸಿತ್ತೆಂಬುದೀಗ, ಇಂತಿ ಘಟ, ಮಠ ಆಧಾರದಲ್ಲಿ ಪರಿಪೂರ್ಣನಾದೆಯಲ್ಲ ಸದಾಶಿವ ಮೂರ್ತಿಲಿಂಗವೆ ಅವಿರಳನಾಗಿ ಎಂಬ ಶಬ್ದಕ್ಕರ್ಥ.

೪೩

ಅಂಧಕಾರವೆಂಬ ಮನೆಯ ಬಾಗಿಲಲ್ಲಿ ಅಂಗದ ಕರಡೆ ಕಟ್ಟಿ
ಮೂರಂಗದ ಕೊಡಗ ಏಡಿಸಿ ಕಾಡುತ್ತದೆ

ಮೀರಿದೆನೆಂಬವರೆಲ್ಲರು ಕರಡಿಯ ನಿಲನಿನಲ್ಲಿ ಸತ್ತು
ಕೊಡಗದ ಚೇಷ್ಟೆಯಲ್ಲಿ ಸಿಕ್ಕಿ ಬೇಡ ನಿಮುಗಾರೂಢದ ಮಾತು
ಇಂತಿವ ಮೀರಿ ನಿಂದವಗಲ್ಲದೆ ಸದಾಶಿವ ಮೂರ್ತಿ ಲಿಂಗವಿಲ್ಲ.

**ಟೀಕು:**— ಅಜ್ಞಾನ ಸಂಬಂಧವಾದ ದೇಹವೆಂಬುದೀಗ, ಅಂಧಕಾರವೆಂಬ ಮನೆಯಲ್ಲಿ ಎಂಬ ಶಬ್ದಕ್ಕರ್ಥ. ಆ ದೇಹವನಾಶ್ರಯಿಸಿಕೊಂಡಿರ್ಪ ಇಂದ್ರಿಯ ದ್ವಾರಂಗಳಲ್ಲಿ ಎಂಬುದೀಗ, ಬಾಗಿಲಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹವನಾಶ್ರಯಿಸಿಕೊಂಡಿರ್ಪ ಮಾಯೆ, ಭವಪಾಶದಲ್ಲಿ ಬಿಗಿವದವಿರುತ್ತಿರ್ಪಳೆಂಬುದೀಗ, ಅಂಗದ ಕರಡಿ ಕಟ್ಟಿ ಎಂಬ ಶಬ್ದಕ್ಕರ್ಥ. ಆ ತನುತ್ರಯಂಗಳ ವ್ಯವಹಾರದಲ್ಲಿ ಸಿಕ್ಕಿರ್ಪ ಮನಸ್ಸು ಆ ಮಾಯೆಯ ವಶಗತರಾಗಿರ್ಪ ಜೀವರ, ಹಾಸ್ಯಕ್ರೀಡು ಮಾಡಿ ಕಾಡುತ್ತಿದುದೆಂಬುದೀಗ, ಮೂರಂಗದ ಕೊಡಗ ಏರಿಸಿಕಾಡುತ್ತದೆ ಎಂಬ ಶಬ್ದಕ್ಕರ್ಥ. ಆ ಸಂಕಲ್ಪರೂಪವಾದ ಮನೋವರ್ತನೆಯನು ನಿಲಿಸಿದೆನೆಂಬ ಬಿಜ ವಾಗಾದ್ವೈತಿಗಳೆಲ್ಲರು ಮಾಯಾ ಪ್ರಪಂಚಿನ ಸುಖಕ್ಕೆ ಸಿಲ್ಕಿ ಲಯವಾಗಿ ಹೋದರೆಂಬುದೀಗ, ಮೀರಿದೆನೆಂಬುವವರೆಲ್ಲರುಕರಡಿಯನಿಲನಿನಲ್ಲಿ ಸತ್ತು ಎಂಬ ಶಬ್ದಕ್ಕರ್ಥ ಆ ಮನೋವರ್ತನೆಯಲ್ಲಿ ಸಿಲ್ಕಿರ್ಪ ಅದ್ವೈತಜ್ಞಾನಿಗಳು ಇಲ್ಲದ ಪರಬ್ರಹ್ಮವನುಂಟುಮಾಡಿಕೊಂಡು ನುಡಿಯುತ್ತಿಹರು ಅದು ಸಲ್ಲದೆಂಬುದೀಗ, ಕೊಡಗದಚೇಷ್ಟೆಯಲ್ಲಿ ಸಿಕ್ಕಿ ಬೇಡ ನಿಮುಗಾರೂಢದ ಮಾತು ಎಂಬ ಶಬ್ದಕ್ಕರ್ಥ. ಸಕಲ ಪ್ರಪಂಚು ದಾಟಿದವಂಗಲ್ಲದೆ ಲಿಂಗದ ನಿಜದ ಕಾಣಬಾರದು ಎಂಬುದೀಗ, ಇಂತಿವ ಮೀರಿನಿಂದವಂಗಲ್ಲದೆ ಸದಾಶಿವಮೂರ್ತಿಲಿಂಗವಿಲ್ಲ ಎಂಬ ಶಬ್ದಕ್ಕರ್ಥ.

೪೪

ಹುಲಿ ಹುತ್ತವ ಹೊಕ್ಕು ಹಾವಾದ ಭೇದವನಾರು ಬಲ್ಲರು ?
ಹಾವು ಹುತ್ತವ ಬಿಟ್ಟು ಹದ್ದಾದ ಭೇದವನಾರು ಬಲ್ಲರು ?
ಹುಲಿ-ಹಾವು-ಹದ್ದು ಕೂಡಿ ಕುಲವ ಹೊರಗಿಟ್ಟು
ಒಳಗಾದ ಭೇದವನಾರು ಬಲ್ಲರು ?
ಇಂತಿ ಸ್ಥೂಲ ಸೂಕ್ಷ್ಮ ಕಾರಣತ್ರಯ ಕೂಡಿ ತತ್ವದಲ್ಲಿ ನಿಂದು
ಬಚ್ಚ ಬಯಲಾಯಿತ್ತು ಸದಾಶಿವ ಮೂರ್ತಿ ಲಿಂಗದಲ್ಲಿ.

**ಟೀಕು:**— ಜಾಗ್ರಾವಸ್ಥೆಯಿಂ ವಿಶ್ವ ಪ್ರಪಂಚಗ್ರಹಿಸುತ್ತಿಹನು ಜೀವನೆಂಬುದೀಗ, ಹುಲಿಯೆಂಬ ಶಬ್ದಕ್ಕರ್ಥ. ಅಂತಪ್ಪ ಜೀವನು ನವದ್ವಾರಯುಕ್ತವಾದ ದೇಹವನಾಶ್ರಯಿಸಿ ಶಂಕಾವಿಷಯರೂಪವಾದ ಮನೋವರ್ತನೆಯ ನೆಯ್ದಿದ ಭೇದವನಾರಿಗೂ ಅರಿಯಬಾರದೆಂಬುದೀಗ, ಹುಲಿ ಹುತ್ತವ ಹೊಕ್ಕು ಹಾವಾದ ಭೇದವನಾರು ಬಲ್ಲರು ಎಂಬ ಶಬ್ದಕ್ಕರ್ಥ. ಅಂತಪ್ಪ ಮನಕ್ಕೆ ಸದ್ವಿವೇಕ ಜ್ಞಾನ ತಲೆದೋರಿ ದೇಹಭಾವವ ವಿಡಂಬಿಸಿ ಪರಮಾತ್ಮ ಸ್ವರೂಪವಾದ ಭೇದವ ಆರಿಗೂ ಅರಿಯಬಾರದೆಂಬುದೀಗ, ಹಾವು ಹುತ್ತವ ಬಿಟ್ಟು ಹದ್ದಾದ ಭೇದವನಾರುಬಲ್ಲರು

ಎಂಬ ಶಬ್ದಕ್ಕರ್ಥ. ಆ ಜೀವನು, ಮನಸ್ಸು, ಪರಮಾತ್ಮನು ಶಿವಭಾವದಲ್ಲಿ ಒಂದು ಗೂಡಿಯೆಂಬುದೀಗ, ಹುಲಿ-ಹಾವು-ಹದ್ದು ಕೂಡಿ ಯೆಂಬ ಶಬ್ದಕ್ಕರ್ಥ. ಆ ಶಿವ ಭಾವದಲ್ಲಿ ಸನ್ನಿಹಿತವಾಗಲು ಪೂರ್ವಾಶ್ರಯದ ಗುಣಂಗಳು ಕೆಟ್ಟು ಶಿವತತ್ವದಲ್ಲಿ ಅಡಗುವ ಭೇದವ ಆರಿಗೂ ಅರಿಯಬಾರದೆಂಬುದೀಗ ಕುಲವ ಹೊರಗಿಟ್ಟು ಒಳ ಗಾದ ಭೇದವನಾರುಬಲ್ಲರು ಎಂಬ ಶಬ್ದಕ್ಕರ್ಥ. ಇಂತೀ ತನುತ್ರಯ ಸಂಬಂಧ ವಾದ ಜೀವನು ಮನಸ್ಸು ಪರಮಾತ್ಮನೆಂಬ ತ್ರಿವಿಧವು ಶ್ರೀಗುರು ಕಾರುಣ್ಯದಿಂ ಇಷ್ಟ-ಪ್ರಾಣ-ಭಾವವೆಂಬ ತ್ರಿತತ್ವದಲ್ಲಿ ಒಡಗೂಡಿ ಸಮರಸವನೆಯ್ದಿ ಸರ್ವಯ ಲಾಯಿತ್ತೆಂಬುದೀಗ, ಇಂತಿ ಸೂಕ್ಷ್ಮ ಕಾರಣತ್ರಯ ಕೂಡಿ ತತ್ವದಲ್ಲಿ ನಿಂದು ಬಚ್ಚ ಬಯಲಾಯಿತ್ತು ಸದಾಶಿವ ಮೂರ್ತಿಲಿಂಗದಲ್ಲಿ ಎಂಬ ಶಬ್ದಕ್ಕರ್ಥ.

೪೫

ಹಾವಿನ ಹುತ್ತದಲ್ಲಿ ಹದ್ದು ತತ್ತಿಯ ನಿಕ್ಕಿ
ಹಾವು ಹಸಿದು ತತ್ತಿಯ ಮುಟ್ಟದು ನೋಡಾ
ಹಾವಿನ ವಿವರ, ಹದ್ದಿನ ಭೇದ ತತ್ತಿಯ ಗುಣ ಅವುದೆಂದರಿನಲ್ಲಿ-
ಜೀವ ಪರಮ ಸ್ವಯಜ್ಞಾನ ಭೇದವನರಿಯಬೇಕು
ಸದಾಶಿವ ಮೂರ್ತಿಲಿಂಗವನರಿವುದಕ್ಕೆ

**ಟೀಕು:—** ರಂಕಾ ವಿಷ ಸಂಬಂಧಿಯಾದ ಜೀವಂಗೆ, ನವದ್ವಾರಯುಕ್ತ ವಾದ ದೇಹವೆ ಆಶ್ರಯವಾಯಿತ್ತೆಂಬುದೀಗ, ಹಾವಿನ ಹುತ್ತದಲ್ಲಿ ಎಂಬ ಶಬ್ದ ಕ್ಕರ್ಥ. ಆ ನವದ್ವಾರ ಯುಕ್ತವಾದ ದೇಹದಲ್ಲಿ ಪರಮಾತ್ಮನು ಸ್ವಯಜ್ಞಾನವ ಪ್ರಭಾವಿಸಿದನೆಂಬುದೀಗ, ಹದ್ದು ತತ್ತಿಯ ನಿಕ್ಕಿ ಎಂಬ ಶಬ್ದಕ್ಕರ್ಥ. ಆ ಜೀವನು ಆಶಾತೃಷ್ಣೆಯ ಮುಂದುಗೊಂಡ ಕಾರಣ ಸ್ವಯಜ್ಞಾನ ಸಾಧ್ಯವಲ್ಲವೆಂಬುದೀಗ, ಹಾವು ಹಸಿದು ತತ್ತಿಯ ಮುಟ್ಟದು ನೋಡಾ ಎಂಬ ಶಬ್ದಕ್ಕರ್ಥ. ಆ ಜೀವಾತ್ಮ ನೆಂಬುದೀಗ, ಹಾವಿನ ವಿವರ. ಆ ಜೀವಂಗೆ ಚೈತನ್ಯವಾದ ಪರಮಾತ್ಮ ತತ್ವವೆಂಬು ದೀಗ, ಹದ್ದಿನಭೇದ. ಆ ಪರಮಾತ್ಮನಿಂದುದಯವಾದ, ಸ್ವಯಜ್ಞಾನವೆಂಬುದೀಗ, ತತ್ತಿಯಗುಣ. ಆ ಜೀವಭಾವವಳಿದು ಸಜ್ಜೀವ ಸ್ವರೂಪನಾದ ಶರಣಸತಿಯ ಅಂಗ ಆ ಪರಮಾತ್ಮನ ತತ್ವವೆ ಕರಸ್ಥಲಕ್ಕೆ ಇಷ್ಟಲಿಂಗ ಸ್ವರೂಪವಾಗಿ ಬಲದಲ್ಲಿ ಈ ಲಿಂಗಾಂಗವೆರಡರ ಕೂಟವೆ ಅಸಿಪದ ಸ್ವರೂಪವಾದ ಭಕ್ತಿಯೆಂದರಿಯಬೇಕೆಂಬು ದೀಗ, ಹಾವಿನ ವಿವರ, ಹದ್ದಿನ ಭೇದ ತತ್ತಿಯಗುಣ ಅವುದೆಂದರಿದಲ್ಲಿ ಜೀವ ಪರಮ ಸ್ವಯಜ್ಞಾನ ಭೇದವ ನರಿಯಬೇಕು, ಸದಾಶಿವ ಮೂರ್ತಿಲಿಂಗವ ನರಿ ವುದಕ್ಕೆಂಬ ಶಬ್ದಕ್ಕರ್ಥ.

೪೬

ಹುಲ್ಲು ಕೆಂಡವ ಮುಟ್ಟಿ ಹೊತ್ತದ ಪರಿಯ ನೋಡಾ
ಹಸಿದ ಸರ್ಪನ ಹೆಡೆಯ ನೆಳಲಲ್ಲಿ ಮಂಡುಕ ನಿಂದ ತೆರನ ನೋಡಾ

ಜೀವ ಪರಮನಲ್ಲಿ ಬಂದು ನಿಂದು ಒಂದಾಗದ ಸಂದೇಹವ ನೋಡಾ
ಇಂತೀ ಸಂದನರಿದಲ್ಲದೆ ಅಂಗ ಲಿಂಗ ಪ್ರಾಣ ಪರಮ
ನೊಂದಾಗಲಿಲ್ಲ ಸದಾಶಿವ ಮೂರ್ತಿ ಲಿಂಗವ ನರಿವುದಕ್ಕೆ.

**ಟೀಕು:—** ವಿಷಯ ಪ್ರಪಂಚನಲ್ಲಿ ಕೂಡಿದಾತ್ಮಾ ನ: ಚಿದಾಗ್ನಿಸ್ವರೂಪವಾದ ಇಷ್ಟಲಿಂಗವ ಭಿನ್ನವಿಟ್ಟು ಅಂಗದಲ್ಲಿ ಧರಿಸಿ ಎಂಬುದೀಗ, ಹುಲ್ಲುಕೆಂಡವಮುಟ್ಟಿ ಎಂಬ ಶಬ್ದಕ್ಕರ್ಥ. ಆ ಲಿಂಗಕ್ಕೆ ಭಿನ್ನ ಕ್ರಿಯೆಮಾಡಿ ಭಿನ್ನಭಾವಿಯಾಗಿ ಹೋದ ನಲ್ಲದೆ ಆ ಲಿಂಗದಲ್ಲಿ ಸಮರಸಭಾವ ಘಟಿಸಿದುದಿಲ್ಲವೆಂಬುದೀಗ, ಹೊತ್ತದ ಪರಿಯನೋಡಾ ಎಂಬ ಶಬ್ದಕ್ಕರ್ಥ. ಆ ಶಂಕಾವಿಷಯ ಸಂಬಂಧಿಯಪ್ಪ ಜೀವಾತ್ಮನು ಆಶಾತೃಷ್ಣೆಯಲ್ಲಿರ್ದನೆಂಬುದೀಗ, ಹಸಿದ ಸರ್ಪನ ಎಂಬ ಶಬ್ದಕ್ಕರ್ಥ. ಆ ಜೀವನ ಇಂದ್ರಿಯಂಗಳೆಂಬ ಶಿರಸ್ಸಿನಲ್ಲಿ ಅಜ್ಞಾನಮಾಯಾಛಾಯೆ ಇರುತ್ತಿಹುದೆಂಬುದೀಗ, ಹೆಡೆಯ ನೆಳಲಲ್ಲಿ ಎಂಬ ಶಬ್ದಕ್ಕರ್ಥ. ಆ ಅಜ್ಞಾನ ಮಾಯಾ ಛಾಯೆಯ ಮಧ್ಯದಲ್ಲಿ ಪರಮಶಾಂತಿಯೆ ಬಂದು ಅಡಗಿರುತ್ತಿಹುದೆಂಬುದೀಗ, ಮಂಡೂಕನಿಂದ ತೆರನನೋಡಾ ಎಂಬ ಶಬ್ದಕ್ಕರ್ಥ. ಆ ಪರಮ ಶಾಂತಿಯ ಚಿದ್ಬಿಂದು ಅಡಗಿದ ಆ ಜೀವನು ಪರಮಾತ್ಮನಲ್ಲಿರ್ದು ಸಮರಸಘಟಿಸಿದುದಿಲ್ಲವೆಂಬುದೀಗ, ಜೀವಪರಮನಲ್ಲಿ ಬಂದುನಿಂದು, ಒಂದಾಗದ ಸಂದೇಹವ ನೋಡಾ ಎಂಬ ಶಬ್ದಕ್ಕರ್ಥ. ಆ ಎರಡಿಟ್ಟು ಮಾಡುವ ಭಿನ್ನ ಕ್ರಿಯಾಚಾರವಳಿದು ಅಭಿನ್ನ ಕ್ರಿಯಾಜ್ಞಾನವಳವಟ್ಟ, ಶರಣಂಗೆ ಲಿಂಗಾಂಗ ಸಂಬಂಧಘಟಿಸಿ ಜೀವ ಪರಮಾತ್ಮನಲ್ಲಿ ಏಕಾರ್ಥವಹುದಲ್ಲದೆ ಈ ಭೇದವನರಿಯದೆ ಇರ್ದ ಭಿನ್ನಜ್ಞಾನಿಗಳಿಗೆ ಅಸಾಧ್ಯವೆಂಬುದೀಗ, ಇಂತಿಸಂದನರಿದಲ್ಲದೆ ಅಂಗಲಿಂಗಪ್ರಾಣ ಪರಮನೊಂದಾಗಲಿಲ್ಲ ಸದಾಶಿವಮೂರ್ತಿಲಿಂಗ ನರಿವುದಕ್ಕೆ ಎಂಬ ಶಬ್ದಕ್ಕರ್ಥ.

೪೭

ಮೂಷಕ ಮಾರ್ಜಾಲ ಕೂಡಿ ಭೇಕನ ಕಂಡು ನೀತಿಯ ಕೇಳಿ
ಮೂಷಕ ನೆರದಲ್ಲಿ ಅಳಿಯಿತ್ತು; ಮಾರ್ಜಾಲನ
ಮನೆಗೆ ಹೋಯಿತ್ತು
ನಾನೆಂಬುದು ನಿಂದಿತ್ತು, ಸದಾಶಿವ ಮೂರ್ತಿಲಿಂಗವ ನರಿವಲ್ಲಿ

**ಟೀಕು:—** ದೇಹಸಂಬಂಧಿಯಾಗಿರ್ಪ ಜೀವನು ಮಾಯಾವಾಸನೆಯ ಕೂಡಿರ್ದಲ್ಲಿ ಶಿವಕೃಪೆಯಿಂ ಸುಜ್ಞಾನೋದಯವಾಗಲು, ಜೀವ ಭಾವವಳಿದು ಸಜ್ಜೀವ ಸ್ವರೂಪವನೆಯ್ದಿ, ಮನೋಮಾರ್ಜಾಲನ ವರ್ತನೆಯ ನಿವೃತ್ತಿಮಾಡಿ ಶಿವಭಾವಘಟಿಸಿ ಎರಡೂ ಏಕವಾಗಿಯೆಂಬುದೀಗ, ಮೂಷಕ-ಮಾರ್ಜಾಲ ಕೂಡಿಯೆಂಬ ಶಬ್ದಕ್ಕರ್ಥ. ಆ ಶಿವಭಾವದಲ್ಲಿ ಸನ್ನಿಹಿತವಾದ ಚಿತ್ ಸ್ವರೂಪನಾದ ಶಿಷ್ಯನ ಆತ್ಮ ಚೈತನ್ಯವಾದ ಪರಮ ಶಾಂತಿಯ ಚಿದ್ಬಿಂದುವೆ ಗುರುಸ್ವರೂಪವಾಗಿ ಬಂದು ಪ್ರತ್ಯಕ್ಷವಾದಲ್ಲಿ ಆ ಶಿಷ್ಯನು ಗುರೋಪಾವಸ್ಥೆಯ ಮಾಡುತ್ತಿರ್ದನೆಂಬುದೀಗ, ಭೇಕನ ಕಂಡು ಎಂಬ ಶಬ್ದಕ್ಕರ್ಥ. ಆ ಗುರುವಿಂಗೆ ಉಪಾವಸ್ಥೆಯ

ಮಾಡುತ್ತಿರ್ದ ಶಿಷ್ಯನು ತನ್ನ ನಿಜ ಸ್ವರೂಪಾವುದೆಂದು ಬೆಸಗೊಂಡಲ್ಲಿ ಆ ಶಿಷ್ಯನ ಆತ್ಮಾಂತರ್ಗತವಾಗಿರ್ದ ಪರಮ ಚಿತ್ಕಲೆಯನು ಭಾವ, ಮನ, ದೃಕ್ಕಿನಿಂ ಬಹಿಷ್ಕರಿಸಿ ಕರಸ್ಥಲಕ್ಕೆ ಇಷ್ಟಲಿಂಗ ಸಾಹಿತ್ಯವ ಮಾಡಲು ಆ ಲಿಂಗದಲ್ಲಿ ಜ್ಞಾನ ಕ್ರಿಯೆಯದಾಚರಿಸಿ ಸಮರಸಭಾವದಿಂ ನಿಷ್ಪತ್ತಿಯಾದನೆಂಬುದೀಗ, ನೀತಿಯ ಕೇಳಿ ಮೂಷಕ ನೆರದಲ್ಲಿ ಅಳಿಯಿತ್ತು ಎಂಬ ಶಬ್ದಕ್ಕರ್ಥ. ಆ ಸತ್ಕ್ರಿಯಾಲಿಂಗದಲ್ಲಿ ನಿಷ್ಪತ್ತಿಯನೆಯ್ದಿದ ಶಿಷ್ಯನ ಉನ್ಮನಿತತ್ವ ಸ್ವರೂಪವಾದ ಮನಸ್ಸು ಅಂತರಂಗದಲ್ಲಿ ಸಾಹಿತ್ಯವಾಗಿರ್ದ ಪ್ರಾಣಲಿಂಗದಲ್ಲಿ ಸಮರಸವನೆಯ್ದಿತ್ತೆಂಬುದೀಗ, ಮಾರ್ಜಾಲ ಮನೆಗೆ ಹೋಯಿತ್ತು ಎಂಬ ಶಬ್ದಕ್ಕರ್ಥ. ಆ ಮನವು ಲಿಂಗದಲ್ಲಿ ಸಮರಸವನೆಯ್ದಲು ಗುರು ಶಿಷ್ಯರೆಂಬ ಉಭಯಭಾವವಳಿದು ಸೇನ್ಯ ಬ್ರಹ್ಮಸ್ವರೂಪವಾಯಿತ್ತೆಂಬುದೀಗ, ನಾಸೀನೆಂಬುದು ನಿಂದಿತ್ತು ಸದಾಶಿವಮೂರ್ತಿಲಿಂಗವನರಿದಲ್ಲಿ ಎಂಬ ಶಬ್ದಕ್ಕರ್ಥ.

೪೮

ದುತ್ತೂರದ ಭಿತ್ತಿನಲ್ಲಿ ಕಲ್ಪತರು ಹುಟ್ಟಿ
ಕಲ್ಪತರುವಿನಗ್ರದಲ್ಲಿ ಇಪ್ಪೆಯ ಹಣ್ಣಾಯಿತ್ತು
ಇಪ್ಪೆಯ ಹಣ್ಣು ತೊಟ್ಟು ಬಿಟ್ಟು ಬಿದ್ದಲ್ಲಿ
ಅಮೃತಮಯವಾಯಿತ್ತು, ಸದಾಶಿವ ಮೂರ್ತಿ ಲಿಂಗವ ನರಿತಲ್ಲಿ.

**ಟೀಕು:**— ಮಹೋನ್ನತವಾದ ದೇಹದ ಮಧ್ಯದಲ್ಲಿ ಮೂಲಹಂಕಾರವು ಉದಯಿಸಿತ್ತೆಂಬುದೀಗ, ದುತ್ತೂರದ ಭಿತ್ತಿನಲ್ಲಿ ಎಂಬ ಶಬ್ದಕ್ಕರ್ಥ, ಅಂತಪ್ಪ ಅಹಂಕಾರದ ಮಧ್ಯದಲ್ಲಿ ಸದ್ವಿವೇಕ ವೃಕ್ಷ ಪ್ರಭಾವಿಸಿತ್ತೆಂಬುದೀಗ, ಕಲ್ಪತರು ಹುಟ್ಟಿ ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ ಜ್ಞಾನದಿಂ ಆತ್ಮನು ಪರತತ್ವದಲ್ಲಿ ಬೆರಸಲರಿಯದೆ ಭಿನ್ನಾಪೇಕ್ಷೆಯ ಮುಂದುಗೊಳಲು ಅಲ್ಲಿ ಚತುರ್ವಿಧಫಲಂಗಳು ತೋರಿದವೆಂಬುದೀಗ, ಕಲ್ಪತರುವಿನಗ್ರದಲ್ಲಿ ಇಪ್ಪೆಯ ಹಣ್ಣಾಯಿತ್ತೆಂಬ ಶಬ್ದಕ್ಕರ್ಥ. ಮಹಾಜ್ಞಾನ ಸ್ವರೂಪನಾದ ಶರಣನು ನಿಜದಿಂ ತಿಳಿದು ನೋಡಲು ಅಹಂಕಾರ ಮುಖ್ಯವಾದ ಚತುರ್ವಿಧ ಫಲಂಗಳು ನಿವೃತ್ತಿಯಾದವೆಂಬುದೀಗ, ಇಪ್ಪೆಯ ಹಣ್ಣು ತೊಟ್ಟು ಬಿಟ್ಟು ಬಿದ್ದಲ್ಲಿ ಎಂಬ ಶಬ್ದಕ್ಕರ್ಥ. ಆ ಭಿನ್ನ ಫಲಂಗಳು ನಿವೃತ್ತಿಯಾಗಿ ಹೋದಲ್ಲಿ ತನ್ನ ನಿಜವಪ್ಪ ಪರಬ್ರಹ್ಮದಲ್ಲಿ ಶರಣನು ಸಮರಸವನೆಯ್ದಿ ನಿತ್ಯ ಸ್ವರೂಪನಾದನೆಂಬುದೀಗ, ಅಮೃತಮಯ ವಾಯಿತ್ತು ಸದಾಶಿವ ಮೂರ್ತಿ ಲಿಂಗವ ನರಿತಲ್ಲಿ ಎಂಬ ಶಬ್ದಕ್ಕರ್ಥ.

೪೯

ಹೊಲದೊಳಗಣ ಹುಲ್ಲೆ, ಗವಿಯೊಳಗಣ ಹುಲಿ,
ಕೊಂಬಿನ ಮೇಲಣ ಕೋಡಗ, ಅಂಬರದಲಾಡುವ ಹಾವು,
ನಾಲ್ಕರ ಅತಿ ಮಥನವ ಬಿಟ್ಟು ಒಂದೇ ಗೂಡಿನಲ್ಲಿ ಅಡಗಿದವು
ಆ ಚತುಷ್ಟಯದ ಅಂಗ ಭೇದವರಿತಲ್ಲಿ ಸದಾಶಿವ
ಮೂರ್ತಿ ಲಿಂಗವು ತಾನೆ

೪೯

ಹೊಲದೊಳಗಣ ಹುಲ್ಲೆ, ಗವಿಯೊಳಗಣ ಹುಲಿ,
ಕೊಂಬಿನ ಮೇಲಣ ಕೋಡಗ, ಅಂಬರದಲಾಡುವ ಹಾವು,
ನಾಲ್ಕರ ಅತಿ ಮಥನವ ಬಿಟ್ಟು ಒಂದೇ ಗೂಡಿನಲ್ಲಿ ಅಡಗಿದವು
ಆ ಚತುಷ್ಟಯದ ಅಂಗಭೇದವನರಿತಲ್ಲಿ ಸದಾಶಿವ ಮೂರ್ತಿ
ಲಿಂಗವು ತಾನೆ.

**ಟೀಕು:—** ದೇಹವೆಂಬ ಕ್ಷೇತ್ರವನಾಶ್ರಯಿಸಿಕೊಂಡಿರ್ದ ಜೀವನೆಂಬುದೀಗ, ಹೊಲದೊಳಗಣ ಹುಲ್ಲೆಯೆಂಬ ಶಬ್ದಕ್ಕರ್ಥ. ಸೂಕ್ಷ್ಮಾಂತರಂಗದಲ್ಲಡಗಿರ್ದ ಕಾಲವ್ಯಾಘ್ರನೆಂಬುದೀಗ, ಗವಿಯೊಳಗಣ ಹುಲಿಯೆಂಬ ಶಬ್ದಕ್ಕರ್ಥ. ಇಂದ್ರಿಯಂಗಳೆಂಬ ಶಾಖೆಗಳಲ್ಲಿಹ ಮನೋಮರ್ಕಟನೆಂಬುದೀಗ, ಕೊಂಬಿನ ಮೇಲಣ ಕೋಡಗವೆಂಬ ಶಬ್ದಕ್ಕರ್ಥ. ಆತ್ಮಾಕಾಶ ಮಧ್ಯದಲ್ಲಿರ್ದ ಊರ್ಧ್ವ ಕುಂಡಲಿ ಸ್ವರೂಪವಾದ ಸತ್ಪ್ರಣವಸುಜ್ಞಾನವೆಂಬುದೀಗ, ಅಂಬರದಲಾಡುವ ಹಾವು ಎಂಬ ಶಬ್ದಕ್ಕರ್ಥ. ಇಂತಪ್ಪ ಪಿಂಡಮಧ್ಯದಲ್ಲಿ ಶಿವಕೃಪೆಯಿಂ ಪರಿಪೂರ್ಣಜ್ಞಾನ ಪ್ರಭಾವಿಸಲು, ಈ ಚತುರ್ವಿಧ ದುರ್ವರ್ತನೆಗಳಳಿದ ಶರಣನ ಜ್ಞಾನ ಕಾಯದಲ್ಲಿ ತರಹರವನೆಯ್ದಿದವೆಂಬುದೀಗ, ನಾಲ್ಕರ ಅತಿ ಮಥನವ ಬಿಟ್ಟು ಒಂದೇ ಗೂಡಿನಲ್ಲಿ ಅಡಗಿದವು ಎಂಬ ಶಬ್ದಕ್ಕರ್ಥ. ಜೀವಭಾವವಳಿದು ಸಜ್ಜೀವನು ಇಷ್ಟಲಿಂಗಕ್ಕೆ ಚಿದಂಗ ಸ್ವರೂಪನಾಗಿ ಕಾಲವ್ಯಾಘ್ರನಳಿದು ಲಿಂಗದಲ್ಲಿ ಅನಿಮಿಷ ನಿರೀಕ್ಷಣೆಯಾಗಲು ಮನವಳಿದು ಉನ್ಮನಿತತ್ತ್ವ ಸ್ವರೂಪವಾಗಲು ಸತ್ಪ್ರಣವ ಜ್ಞಾನವು ಶರಣನ ಸರ್ವಾಂಗದಲ್ಲಿ ಪರಿಪೂರ್ಣವಾಗಿ ವೇದಿಸಲು, ಈ ಚತುರ್ವಿಧ ಸಂಬಂಧವನರಿದ ಶರಣನೆ ಸಾಕ್ಷಾತ್ಪರ ವಸ್ತುವೆಂಬುದೀಗ, ಆ ಚತುಷ್ಟಯದ ಅಂಗಭೇದವನರಿತಲ್ಲಿ ಸದಾಶಿವಮೂರ್ತಿಲಿಂಗವು ತಾನೆ ಎಂಬ ಶಬ್ದಕ್ಕರ್ಥ.

೫೦

ಹುತ್ತದೊಳಗಣ ಉಡು ಹೊಳೆಯೊಳಗಣ ಮೊಸಳೆಯನುಂಗಿತ್ತು.
ನುಂಗಿಹೋಹಾಗ ಅಂಗನೆಯೆಂಬ ಹೇಗಾಸು ಉಡುವ ಕಂಡು
ತಾ ಹೊತ್ತಿರ್ದ ಕೊಡನ ಕೂಡಿ ಮಂಡೆಯಮೇಲಿರಿಸಲಾಗಿ
ತಾ ಸತ್ತು ಕೊಡನೊಡದು ಉಡುವಡಗಿತ್ತು
ಹಿಡಿಯಲಿಲ್ಲ, ಬಿಡಲಿಲ್ಲ, ಬೇರೋಂದಡಿ ಇಡಲಿಲ್ಲ,
ಸದಾಶಿವ ಮೂರ್ತಿ ಲಿಂಗವ ನರಿತಲ್ಲಿ

**ಟೀಕು:—** ನವದ್ವಾರ ಯುಕ್ತವಾದ ದೇಹದಲ್ಲಿ ಸೂಕ್ಷ್ಮವಾಗಿರ್ದ ಸುಜ್ಞಾನ ಪ್ರಕಾಶವೆಂಬುದೀಗ, ಹುತ್ತದೊಳಗಣ ಉಡು ಎಂಬ ಶಬ್ದಕ್ಕರ್ಥ. ಅಂತಪ್ಪ ಸುಜ್ಞಾನ ಪ್ರಕಾಶವು ಸಂಸಾರ ವಿಷಯ ಜಲ ಪ್ರವಾಹದಲ್ಲಿ ಕ್ರೀಡಿಸುತ್ತಿರ್ದ ಮಾಯೆಯ ಮನನ ನವಗ್ರಹಿಸಿತ್ತೆಂಬ ದೀಗ, ಹೊಳೆಯೊಳಗಣ ಮೊಸಳೆಯ

ನುಂಗಿತ್ತು ಎಂಬ ಶಬ್ದಕ್ಕರ್ಥ. ಅಂತು ಮಾಯೆಯ ನವಗ್ರಹಿಸಿ ನಿವೃತ್ತಿ ಮಾರ್ಗ ದಿಂ ಪರಶಿವ ತತ್ವದತ್ತಲೆಯ್ದುತ್ತಿರಲು ಎಂಬುದೀಗ, ನುಂಗಿ ಹೋಹಾಗ ಎಂಬ ಶಬ್ದಕ್ಕರ್ಥ. ಅಂತು ಮೋಕ್ಷಮಾರ್ಗವಿಡಿದೆಯ್ದಿದ ಚಿಚ್ಛಕ್ತಿ ಸ್ವರೂಪವಾದ ಶರಣ ಸತಿಯು ಆ ಸುಜ್ಞಾನ ಪ್ರಕಾಶವ ಪ್ರತ್ಯಕ್ಷವಾಗಿ ಕಂಡು ತನ್ನಲ್ಲಿರ್ಪ ಚಿದ್ ಭಾಂಡ ದೊಳಗೆ ಸಾಹಿತ್ಯವ ಮಾಡಿಕೊಂಡಳೆಂಬುದೀಗ, ಅಂಗನೆಯೆಂಬ ಹೆಂಗಸು ಉಡುವ ಕಂಡು ತಾ ಹೊತ್ತಿರ್ದ ಕೊಡನ ಕೂಡಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಪ್ರಕಾ ಶವ ನೊಳಕೊಂಡಿರ್ಪ ಚಿದ್‌ಭಾಂಡವ ಜ್ಞಾನ ಸ್ವರೂಪವಾದ ಪರಬ್ರಹ್ಮದಲ್ಲಿ ಸಂಬಂಧಿಸಿದಳೆಂಬುದೀಗ, ಹುಂಡಿಯ ಮೇಲಿರಿಸಲಾಗಿ ಎಂಬ ಶಬ್ದಕ್ಕರ್ಥ. ಆ ಚಿಚ್ಛಕ್ತಿ ಸ್ವರೂಪವಾದ ಶರಣಸತಿಯು ಚಿದ್ಘನ ಲಿಂಗದಿಂ, ಸಮರಸಭಾವದಿಂ ನಿಷ್ಪತಿಯಾಗಲು, ಆ ಚಿದ್‌ಭಾಂಡವು ವಿಕ್ರಮಿಸಿ ಆ ಸುಜ್ಞಾನ ಪ್ರಕಾಶವು ನಿರಾಳ ಲಿಂಗದಲ್ಲಿ ನಿರ್ವಯಲಾಯಿತ್ತೆಂಬುದೀಗ, ತಾ ಸತ್ತು ಕೊಡನೊಡದು ಉಡುವಡ ಗಿತ್ತು ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಪ್ರಕಾಶ ನಿಷ್ಪತಿಯಾದ ಶರಣನು ಪರ ವಸ್ತುವ ನಾಹ್ವಾನ ವಿಸರ್ಜನಕ್ಕೆ ತರಲಿಲ್ಲವೆಂಬುದೀಗ, ಹಿಡಿಯಲಿಲ್ಲ ಬಿಡಲಿಲ್ಲ ವೆಂಬ ಶಬ್ದಕ್ಕರ್ಥ. ಆ ಶರಣನು ಎರಡಿಟ್ಟು ಭಿನ್ನಕ್ರಿಯ್ಯೆನಾಚರಿಸಲಿಲ್ಲವೆಂಬು ದೀಗ, ಬೇರೊಂದಡಿ ಇಡಲಿಲ್ಲ ಸದಾ ಶಿವಮೂರ್ತಿ ಲಿಂಗವನರಿತಲ್ಲಿ ಎಂಬ ಶಬ್ದಕ್ಕರ್ಥ.

೫೧

ಜೀವ ಜ್ಞಾನ, ಭಾವಜ್ಞಾನ, ಯುಕ್ತಿಜ್ಞಾನ, ಶಕ್ತಿಜ್ಞಾನ
ಪರಮಜ್ಞಾನ, ಪ್ರಕಾಶಜ್ಞಾನ, ಪ್ರಜ್ವಲಿತಜ್ಞಾನ, ಪ್ರಭಾವಜ್ಞಾನ,
ತೇಜೋಮಯ ಜ್ಞಾನ, ಪರಂಜ್ಯೋತಿಜ್ಞಾನ, ದಿವ್ಯ ಜ್ಞಾನ
ಸರ್ವಮಯ ಸಂಪೂರ್ಣಂಗಳಲ್ಲಿ ತೋರುತ್ತಿಹ ತೋರಿಕೆ
ಆಕಾಶ ಮಂಡಲದಲ್ಲಿ ತೋರುವ ಅರುಣನ ಕಿರಣ
ಸರ್ವ ಜೀವಜ್ಞಾನ ಪರಿಪೂರ್ಣ ದೃಷ್ಟಿಯಾಗಿ ಕಾಂಬ ತೆರದಂತೆ
ಎನ್ನ ಪಿಂಡ ಮಂಡಲದಲ್ಲಿ ದಿವ್ಯ ತೇಜೋ ವರುಣ,
ಕಿರಣ ಮಯವಾಗಿ ಒಂದರಲ್ಲಿ ನಿಂದು ಕಾಂಬುದು ಹಲವಾದಂತೆ
ಎನ್ನ ಮನದ ಮಂದಿರದಲ್ಲಿ ನಿಂದವ ನೀನೊಬ್ಬ ವಿಶ್ವರೂಪಾದೆಯಲ್ಲ
ಭೇದಕ್ಕೆ ಭೇದ್ಯನಾದೆಯಲ್ಲ, ನಿನ್ನನೇನೆಂಬುದಕ್ಕೆ ಎಡದೆರಪಿಲ್ಲ
ಭಾಗಿರಥಿಯಂತೆ ಆರು ನಿಂದರೂ ಪ್ರಮಾಣಾದೆಯಲ್ಲ
ಎನ್ನ ಮನಕ್ಕೆ ಕಟ್ಟಾಗಿ ನಿಂದೆಯಲ್ಲ ಸದಾಶಿವ ಮೂರ್ತಿ ಲಿಂಗವೆ.

ಟೀಕು:— ಶ್ರದ್ಧಾ ಭಕ್ತಿ ಸಂಬಂಧವಾಗಿಹುದು ಭಕ್ತಿಸ್ಥಲವೆಂಬುದೀಗ, ಜೀವಜ್ಞಾನವೆಂಬ ಶಬ್ದಕ್ಕರ್ಥ. ನೈಷ್ಟಿಕ ಭಕ್ತಿ ಸಂಬಂಧವಾಗಿಹುದು ಮಹೇಶ್ವರ ಸ್ಥಲವೆಂಬುದೀಗ, ಭಾವಜ್ಞಾನವೆಂಬ ಶಬ್ದಕ್ಕರ್ಥ. ಸಾವಧಾನ ಭಕ್ತಿ ಸಂಬಂಧ

ವಾಗಿಹುದು ಪ್ರಸಾದಿ ಸ್ಥಲವೆಂಬುದೀಗ, ಯುಕ್ತಿಜ್ಞಾನವೆಂಬ ಶಬ್ದಕ್ಕರ್ಥ. ಅನುಭವ ಭಕ್ತಿ ಸಂಬಂಧವಾಗಿಹುದು ಪ್ರಾಣಲಿಂಗಿ ಸ್ಥಲವೆಂಬುದೀಗ, ಚಿತ್ತ ಜ್ಞಾನವೆಂಬ ಶಬ್ದಕ್ಕರ್ಥ. ಆನಂದ ಶಕ್ತಿ ಸ್ವರೂಪವಾಗಿಹುದು ಶರಣ ಸ್ಥಲವೆಂಬುದೀಗ, ಶಕ್ತಿ ಜ್ಞಾನವೆಂಬ ಶಬ್ದಕ್ಕರ್ಥ. ಸಮರಸ ಭಕ್ತಿ ಸ್ವರೂಪವಾಗಿಹುದು ಐಕ್ಯಸ್ಥಲವೆಂಬುದೀಗ, ಪರಮಜ್ಞಾನವೆಂಬ ಶಬ್ದಕ್ಕರ್ಥ. ಭಕ್ತನ ಶ್ರದ್ಧಾ ಭಕ್ತಿಯನೊಳಕೊಂಡು ತೋರುತ್ತಿಹುದು ಆಚಾರಲಿಂಗವೆಂಬುದೀಗ, ಪ್ರಕಾಶಜ್ಞಾನವೆಂಬ ಶಬ್ದಕ್ಕರ್ಥ. ಮಾಹೇಶ್ವರನ ನೈಷ್ಠಿಕಾಭಕ್ತಿಯನೊಳಕೊಂಡು ತೋರುತ್ತಿಹುದು ಗುರುಲಿಂಗವೆಂಬುದೀಗ, ಪ್ರಜ್ವಲಿತ ಜ್ಞಾನವೆಂಬ ಶಬ್ದಕ್ಕರ್ಥ. ಪ್ರಸಾದಿಯ ಸಾವಧಾನ ಭಕ್ತಿಯನೊಳಕೊಂಡು ತೋರುತ್ತಿಹುದು ಶಿವಲಿಂಗವೆಂಬುದೀಗ, ಪ್ರಭಾವಜ್ಞಾನವೆಂಬ ಶಬ್ದಕ್ಕರ್ಥ. ಪ್ರಾಣಲಿಂಗಿಯ ಅನುಭಾವ ಭಕ್ತಿಯನೊಳಕೊಂಡು ತೋರುತ್ತಿಹುದು ಜಂಗಮ ಲಿಂಗವೆಂಬುದೀಗ, ತೇಜೋಮಯ ಜ್ಞಾನವೆಂಬ ಶಬ್ದಕ್ಕರ್ಥ. ಶರಣನ ಆನಂದ ಭಕ್ತಿಯನೊಳಕೊಂಡು ತೋರುತ್ತಿಹುದು ಪ್ರಸಾದಲಿಂಗವೆಂಬುದೀಗ, ಪರಂಜ್ಯೋತಿ ಜ್ಞಾನವೆಂಬ ಶಬ್ದಕ್ಕರ್ಥ. ಐಕ್ಯನ ಸಮರಸ ಭಕ್ತಿಯನೊಳಕೊಂಡು ತೋರುತ್ತಿಹುದು ಮಹಾಲಿಂಗವೆಂಬುದೀಗ, ದಿವ್ಯಜ್ಞಾನವೆಂಬ ಶಬ್ದಕ್ಕರ್ಥ. ಇಂತಪ್ಪ ಷಡ್ವಿಧಸ್ಥಲ ಮುಖ್ಯವಾದ ಸರ್ವಾಚಾರ ಸಂಪತ್ತಿನೊಳಗಾದ ಸಂಕಲವನು ಪರಿಪೂರ್ಣಜ್ಞಾನ ಒಳಕೊಂಡಿಹುದೆಂಬುದೀಗ, ಸರ್ವಮಯ ಸಂಪೂರ್ಣಂಗಳಲ್ಲಿ ತೋರುತ್ತಿಪ ತೋರಿಕೆಯೆಂಬ ಶಬ್ದಕ್ಕರ್ಥ. ಆಕಾಶದಲ್ಲಿ ತೋರುವ ಸೂರ್ಯ ಕಿರಣ ಪ್ರಕಾಶದಿಂದ ಬ್ರಹ್ಮಾಂಡದೊಳಗೆ ಸರ್ವಜೀವರುಗಳರಿವ ಪ್ರಭಾವಿಸಿಕೊಡುವ ಹಾಗೆಂಬುದೀಗ, ಆಕಾಶ ಮಂಡಲದಲ್ಲಿ ತೋರುವ ಅರುಣನ ಕಿರಣ ಸರ್ವಜೀವಜ್ಞಾನ ಪರಿಪೂರ್ಣ ದೃಷ್ಟಿಯಾಗಿ ಕ ಂಬ ತೆರದಂತೆ ಎಂಬ ಶಬ್ದಕ್ಕರ್ಥ. ಒಂದರಿಂದ ಹಲವು ಲೆಕ್ಕವ ಕಾಂಬಂತೆ, ಒಂದೇ ಪರಬ್ರಹ್ಮವು ತನ್ನ ಸ್ವಲೀಲೆಯಿಂ ಪಿಂಡಾದಿ ಜ್ಞಾನ ಶೂನ್ಯಾಂತವಾದ ನೂರೊಂದು ಸ್ಥಲ ಕುಳ ಸ್ವರೂಪವನೆಯ್ದಿತ್ತೆಂಬುದೀಗ, ಒಂದರಲ್ಲಿ ನಿಂದು ಕಾಂಬುದು ಹಲವಾದಂತೆ ಎಂಬ ಶಬ್ದಕ್ಕರ್ಥ. ಅನೇಕ ಸ್ಥಲ ಕುಳಂಗಳ ನೊಳಕೊಂಡಿರ್ದ ಪರಬ್ರಹ್ಮ ಉನ್ಮನಿ ಸ್ವರೂಪವಾದ ಮನವನೊಳಕೊಂಡು ಶರಣನ ಹೃದಯ ಕಮಲ ಕರ್ಣಿಕಾವಾಸದಲ್ಲಿ ಪ್ರಾಣಲಿಂಗ ಸ್ವರೂಪವಾಗಿ ಮೂರ್ತಿಗೊಂಡಿತ್ತೆಂಬುದೀಗ, ಎನ್ನ ಮನದ ಮಂದಿರದಲ್ಲಿ ನಿಂದವ ನೀನೊಬ್ಬನೆಂಬ ಶಬ್ದಕ್ಕರ್ಥ. ಆ ಪರಬ್ರಹ್ಮವು ಅನೇಕ ತತ್ವ ಬ್ರಹ್ಮಾಂಡಗಳಲ್ಲಿ ಚೈತನ್ಯ ಸ್ವರೂಪವಾಗಿ ವೇದಿಸಿಹುದೆಂಬುದೀಗ, ವಿಶ್ವರೂಪವಾದೆಯಲ್ಲ ಎಂಬ ಶಬ್ದಕ್ಕರ್ಥ. ಆ ಪರ ವಸ್ತುವ ಅಷ್ಟಾಂಗ ಯೋಗದಿಂ ಭೇದಿಸಿಹೆನೆಂಬಡೆ ಅಭೇದ್ಯವಾಗಿಹುದೆಂಬುದೀಗ, ಭೇದಕ್ಕೆ ಭೇದ್ಯ ನಾವೆಯಲ್ಲ, ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವನು ಸಕಲ ನಿಷ್ಕಲಾತೀತವೆಂದು ಭಿನ್ನವಿಟ್ಟು ನುಡಿಯ ಬಾರದೆಂಬುದೀಗ, ನಿನ್ನ ನೇನೆಂಬುದಕ್ಕೆ ತೆರಹಿಲ್ಲವೆಂಬ ಶಬ್ದಕ್ಕರ್ಥ. ಭಾಗಿರಥಿ ಸರ್ವರಿಗೂ ಒಂದೇ ಸಮಾನವಾಗಿಹ ಹಾಂಗೆ ಲಿಂಗಾಂಗ ಸಂಬಂಧಿಗಳಾದ ಶರಣ ಜನಂಗಳೆಲ್ಲಕ್ಕೂ ಪರಬ್ರಹ್ಮವು ಪರಿಪೂರ್ಣವಾಗಿ ಭಿನ್ನವಿಲ್ಲದೆ ಇಹುದೆಂಬುದೀಗ,

ಭಾಗಿರಥಿಯಂತೆ ಆರು ನಿಂದರೂ ಪ್ರಮಾಣಾದೆಯುಲ್ಲ ಎಂಬ ಶಬ್ದಕ್ಕರ್ಥ. ಚಿದ್ರೂಪನಾದ ಶರಣನ ಉನ್ಮನಿ ಸ್ವರೂಪವಾದ ಮನೋಮಧ್ಯದಲ್ಲಿ ಜ್ಯೋತಿರ್ಮಯವಾಗಿ ಬೆಳಗುತ್ತಿಹುದು ಪ್ರಾಣಲಿಂಗವೆಂಬುದೀಗ, ಎನ್ನ ಮನಕ್ಕೆ ಕಟ್ಟಾಗಿ ನಿಂದೆಯುಲ್ಲ, ಸದಾಶಿವ ಮೂರ್ತಿಲಿಂಗವೆ ಎಂಬ ಶಬ್ದಕ್ಕರ್ಥ.

## ಶಿವಲೆಂಕ ಮಂಚಣ್ಣನವರ ವಚನಗಳು

೧

ಗುರು ಮೂರು ಕೂಡಿ ಗುರುವಾದಲ್ಲಿ,
ಬಿಂದು ಐದು ಕೂಡಿ ಲಿಂಗವಾದಲ್ಲಿ,
ವಿಂಶತಿಯಾರು ಕೂಡಿ ವಿಸರ್ಜನವಾದಲ್ಲಿ ಆ ಜಂಗಮವಾಯಿತ್ತು
ಆ ಜಂಗಮ ಜಾಯತೆಯ ಭಾವವಳಿದು
ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವಾಯಿತ್ತು

ಟೀಕು:— ಸುಜ್ಞಾನೋದಯವಾಗಿ ಶ್ರೀ ಗುರುಕಾರುಣ್ಯವ ಪಡೆದು ಲಿಂಗಾಂಗ ಸಂಬಂಧಿಯಾದ ಶರಣಂಗೆ ದೀಕ್ಷಾಗುರು, ಶಿಕ್ಷಾಗುರು, ಜ್ಞಾನಗುರುವೆಂಬ ಗುರುತ್ರಯವು ಶಿಷ್ಯನಾಚಾರಾಂಗದಲ್ಲಿ ಒಂದೇ ಸ್ವರೂಪಿನಿಂ ಗುರುತತ್ವ ಸಂಬಂಧವಾಯಿತ್ತೆಂಬುದೀಗ, ಗುರು ಮೂರು ಕೂಡಿ ಗುರುವಾದಲ್ಲಿ ಎಂಬ ಶಬ್ದಕ್ಕರ್ಥ. ಬಿಂದು ಸ್ವರೂಪವಾದ ಪಂಚಾಕ್ಷರವೆ ಆಧಾರ ಪೀಠಮಧ್ಯ ವೃತ್ತಗೋಮುಖನಾಳಂಗಳಲ್ಲಿ ಪಂಚಾಕ್ಷರ ಮಂತ್ರ ಸ್ವರೂಪಿನಿಂದಿಷ್ಟಲಿಂಗವಾಗಿ ಬಂದಿತ್ತೆಂಬುದೀಗ, ಬಿಂದು ಐದಕೂಡಿ ಲಿಂಗವಾದಲ್ಲಿ ಎಂಬ ಶಬ್ದಕ್ಕರ್ಥ. ತತ್ವಇಪ್ಪತ್ತು, ಅಧಿದೇವತೆಗಳು ಷಡ್ವಿಧ, ಇಪ್ಪತ್ತಾರು ತತ್ವವರ್ತನೆ ನಷ್ಟವಾದಲ್ಲಿ ಸದ್ಭಾವಹಸ್ತದಲ್ಲಿ ಸುಜ್ಞಾನ ಜಂಗಮಲಿಂಗ ಸಂಬಂಧವೆಂಬುದೀಗ, ವಿಂಶಂತಿ ಆರು ಕೂಡಿ ವಿಸರ್ಜನವಾದಲ್ಲಿ ಆ ಜಂಗಮವಾಯಿತ್ತೆಂಬ ಶಬ್ದಕ್ಕರ್ಥ. ಆ ತತ್ವಂಗಳ ನಿವೃತ್ತಿಮಾಡಿದ ಸುಜ್ಞಾನಜಂಗಮಕ್ಕೆ ಪುನರ್ಭವವಿಲ್ಲದೆ ಮಹಾಘನಲಿಂಗದಲ್ಲಿ ಸಮರಸೈಕ್ಯನಾದನೆಂಬುದೀಗ, ಆ ಜಂಗಮ ಜಾಯತೆಭಾವವಳಿದು ಈಶಾನ್ಯ ಮೂರ್ತಿ ಮಲ್ಲಿಕಾರ್ಜುನಲಿಂಗವಾಯಿತ್ತೆಂಬ ಶಬ್ದಕ್ಕರ್ಥ.

ಇಚ್ಛಾ ಶಕ್ತಿ ಮರ್ಕಟ ರೂಪಾದಲ್ಲಿ,
ಕ್ರಿಯಾ ಶಕ್ತಿ ವಿಹಂಗ ರೂಪಾದಲ್ಲಿ.
ಜ್ಞಾನ ಶಕ್ತಿ ಪಿಪಿಲಿಕ ರೂಪಾದಲ್ಲಿ ತ್ರಿವಿಧ ಮಾರ್ಗ
ರೂಪವಾಯಿತು

ಕಾಂಬುದು ಕಾಣಿಸಿ ಕೊಂಬುದು, ಕಂಡೆನೆಂದು ನಿಶ್ಚಯವಾದಲ್ಲಿ
ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವು ಮಹದಾಕಾಶದಲ್ಲಿ
ವಾಸವಾಗಿರ್ದ

**ಟೀಕು:—** ಸುಜ್ಞಾನೋದಯವಾಗಿ ತನ್ನ ನಿಜಮನರಿದು ಶಿವಾಪೇಕ್ಷೆಯ ಮುಂದುಗೊಂಡಿರ್ದ ಶಿಷ್ಯಂಗೆ ಶ್ರೀ ಗುರು ಕರುಣಿಸಿ ಷಡ್ವಿಧಾಂಗದಲ್ಲಿ ಷಡ್ವಿಧ ಲಿಂಗ ಸಂಬಂಧವ ಮಾಡಿ ಷಡ್ವಿಧ ಭಕ್ತಿವಿಡಿದಾಚರಿಸುವ ಷಟ್‌ಸ್ಥಲ ಮಾರ್ಗವ ತೋರಿದನೆಂಬುದೀಗ, ಇಚ್ಛಾಶಕ್ತಿ ಮರ್ಕಟರೂಪಾದಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನು ಅಭಿನ್ನಕ್ರಿಯಾಚಾರವಿಡಿದು ಚಿತ್‌ಪಿಂಡಜ್ಞಾನ ಸಂಬಂಧವಾಗಿ ತನು-ಮನ-ಪ್ರಾಣೇಂದ್ರಿಯದೊಳಹೊರಗೆ ಸರ್ವಾಂಗವು ಲಿಂಗದಲ್ಲಿ ನಿರ್ವಯಲ ಸಮಾಧಿಯನೆಯ್ದಿ ಪಡೆದು ಚಿತ್ಪಿಂಡದಾಚರಣೆಯೆಂಬುದೀಗ, ಕ್ರಿಯಾಶಕ್ತಿ ವಿಹಂಗ ರೂಪಾದಲ್ಲಿ ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣ ಪಿಂಡಾದಿ ಜ್ಞಾನ ಶೂನ್ಯಾಂತವಾದ ಸ್ಥಲಕುಳಾದಿಗಳಲ್ಲಿ ಏಕವಾಗಿದುದೆ ಪಿಪಿಲಿಕ ರೂಪಾದಲ್ಲಿ ಎಂಬ ಶಬ್ದಕ್ಕರ್ಥ. ಇಂತಪ್ಪಲಿಂಗ ಪ್ರಾಣತ್ವ, ಪ್ರಾಣಲಿಂಗತ್ವ, ಪ್ರಸಾದ ಮುಕ್ತತ್ವವೆಂಬ ತ್ರಿವಿಧಾಚರಣೆಯಲ್ಲಿ ನಿರ್ಧರವಾಗಿ ಎಂಬುದೀಗ, ತ್ರಿವಿಧಮಾರ್ಗ ರೂಪವಾಯಿತ್ತೆಂಬಶಬ್ದಕ್ಕರ್ಥ. ಅಂತಪ್ಪ ಶರಣ ತನ್ನ ನಿಜ ಸ್ವರೂಪವ ಸುಜ್ಞಾನ ದೃಷ್ಟಿಯಿಂ ನೋಡುತ್ತಿರ್ದನೆಂಬುದೀಗ, ಕಾಂಬುದು ಎಂಬ ಶಬ್ದಕ್ಕರ್ಥ. ಆ ಶರಣನ ಸುಜ್ಞಾನ ದೃಷ್ಟಿಯುಮುಂದೆ ಪರಬ್ರಹ್ಮವು ತೋರುತ್ತಿಹುದೆಂಬುದೀಗ, ಕಾಣಿಸಿಕೊಂಬುದು ಎಂಬ ಶಬ್ದಕ್ಕರ್ಥ. ತನ್ನ ನಿಜಸ್ವರೂಪವ ಶಿವಾನುಭಾವಿಯಾದ ಶರಣಕಂಡು ನಿಶ್ಚಯದಿಂ ನಿರ್ಧರವಾದಲ್ಲಿ ಎಂಬುದೀಗ, ತ್ರಿವಿಧ ಮಾರ್ಗರೂಪಾಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಶರಣ ತನ್ನ ನಿಜಸ್ವರೂಪವ ಸುಜ್ಞಾನ ದೃಷ್ಟಿಯಿಂ ನೋಡುತ್ತಿರ್ದನೆಂಬುದೀಗ, ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗವು ಮಹದಾಕಾಶದಲ್ಲಿ ವಾಸವಾಗಿರ್ದನೆಂಬ ಶಬ್ದಕ್ಕರ್ಥ.

ನಡದು ನಡೆಯದವನ ಕಂಡು, ನುಡಿದು ನುಡಿಯದವನ ಕಂಡು
ಅರಿದು ಅರಿಯದವನ ಕಂಡು, ತ್ರಿವಿಧ ಭೇದಂಗಳಲ್ಲಿ
ಭೇದಿಸಿ, ವೇದಿಸಿ ನಿಂದುದು ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ
ಲಿಂಗವು ನಿಂದ ನಿವಾಸ.

**ಟೀಕು:—** ಶಿವಜ್ಞಾನೋದಯವಾಗಿ ಶ್ರೀ ಗುರುಕಾರುಣ್ಯದಿಂ ಸರ್ವಾಂಗ ಲಿಂಗ ಸಂಬಂಧವಾದ ಶರಣನು ಅಭಿನ್ನ ಕ್ರಿಯಾಚಾರ ವಿಡಿದು ಆಚರಿಸುತ್ತಿಹನಲ್ಲದೆ, ಭಿನ್ನಕ್ರಿಯಾಚಾರವಿಡಿದು ಆಚರಿಸನೆಂಬುದೀಗ, ನಡದು ನಡೆಯದವನ ಕಂಡು ಎಂಬ ಶಬ್ದಕ್ಕರ್ಥ. ಅಂತು ಸುಜ್ಞಾನದಲ್ಲಿ ನಿರ್ಧರವಾದ ಶರಣನು

ಶಿವೋಹಂ—ಶಿವೋಹಂ ಎನುತ್ತಿಹನಲ್ಲದೆ ಅಹಂ ಬ್ರಹ್ಮವೆಂದು ವಾಗಾದ್ವೈತವ ನುಡಿಯನೆಂಬುದೀಗ, ನುಡಿದು ನುಡಿಯದವನ ಕಂಡು ಎಂಬ ಶಬ್ದಕ್ಕರ್ಥ. ಆ ಶಿವೋಹಂ ಭಾವದಲ್ಲಿರ್ದ ಶರಣ ತನ್ನ ನಿಜಸ್ವರೂಪವಾದ ಪರಬ್ರಹ್ಮವನು ಅಭಿನ್ನಜ್ಞಾನದಿಂದರಿವುತ್ತಿಹನಲ್ಲದೆ, ಭಿನ್ನಜ್ಞಾನದಿಂದರಿಯನೆಂಬುದೀಗ, ಅರಿದು ಅರಿಯದವನ ಕಂಡು ಎಂಬ ಶಬ್ದಕ್ಕರ್ಥ. ಅಂತು ಸುಜ್ಞಾನದೃಷ್ಟಿಯಿಂ ನೋಡುತ್ತಿರ್ದ ಶರಣ ತನ್ನಂಗ ತ್ರಯಂಗಳಲ್ಲಿ ಸಂಬಂಧವಾದ ತ್ರಿವಿಧಲಿಂಗಂಗಳು ತ್ರಿವಿಧ ಭಕ್ತಿಗಳಿಂದವಗ್ರಹಿಸಿ ತ್ರಿವಿಧ ಭಕ್ತಿಯನು ತ್ರಿವಿಧಲಿಂಗಾಂಗಗಳಲ್ಲಿ ಏಕಾರ್ಥವ ಮಾಡಿ ಸಮರಸೈಕ್ಯವಾದನೆಂಬುದೀಗ ತ್ರಿವಿಧಭೇದಂಗಳಲ್ಲಿ ಭೇದಿಸಿ ವೇದಿಸಿನಿಂದುದು ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗವು ನಂದ ನಿವಾಸವೆಂಬ ಶಬ್ದಕ್ಕರ್ಥ.

೪

ವಟ ವೃಕ್ಷದ ಘಟದ ಮಧ್ಯದಲ್ಲಿ ಒಂದು ಮಠವಿಪ್ಪುದು
ಆ ಮಠಕ್ಕೆ ಹಿಂದೆಸೆಯಿಂದ ಬಂದು ಮುಂದಣ ಬಾಗಿಲ ತೆಗೆದು
ವಿಷ್ಪಂದದ ಕೋಣೆಯ ಕಂಡು ಕಿಡಿ ನಂದದ ದೀಪವಕೊಂಡು ಹೊಕ್ಕು
ನಿಜದಂಗವಾಗರ ಕುಂಭವ ಕಂಡು ಬಂಧುವಿಲ್ಲದ ವಾಗರವನುಂಡು
ಸದಮಲ ಲಿಂಗವೆ ತಾನಾದ ಈಶಾನ್ಯ ಮೂರ್ತಿ ಮಲ್ಲಿಕಾರ್ಜುನನ ಲಿಂಗವು ಸ್ವಯಂಭುವಾದಾ

**ಟೀಕು:**— ಅನಂತಕೋಟಿ ಬ್ರಹ್ಮಾಂಡಗಳನೊಳಕೊಂಡಿರ್ದ ಪರಬ್ರಹ್ಮ ವೃಕ್ಷವೆಂಬುದೀಗ, ವಟವೃಕ್ಷವೆಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮ ವೃಕ್ಷದ ಮಧ್ಯದಲ್ಲಿ ಚಿದ್‌ಭಾಂಡ ಒಪ್ಪುತ್ತಿಹುದೆಂಬುದೀಗ, ಘಟದ ಎಂಬ ಶಬ್ದಕ್ಕರ್ಥ. ಅಂತಪ್ಪ ಚಿದ್‌ಭಾಂಡದ ಮಧ್ಯದಲ್ಲಿ ಶರಣನಜ್ಞಾನ ಕಾಯಸಂಬಂಧವಾಗಿಹುದೆಂಬುದೀಗ, ಮಧ್ಯದಲ್ಲಿ ಒಂದು ಮಠವಿಪ್ಪುದು ಎಂಬ ಶಬ್ದಕ್ಕರ್ಥ. ಆ ಜ್ಞಾನ ಕಾಯವೆಂಬ ಗೃಹಕ್ಕೆ ,ಶರಣ ತನ್ನ ಮೂಲಜ್ಞಾನವಿಡಿದೆಯ್ದುತ್ತಿರ್ದನೆಂಬುದೀಗ, ಆ ಮಠಕ್ಕೆ ಹಿಂದೆಸೆಯಿಂದ ಬಂದು ಎಂಬ ಶಬ್ದಕ್ಕರ್ಥ. ಆ ಮೂಲಜ್ಞಾನ ವಿಡಿದೆಯ್ದುತ್ತಿರ್ದ ಶರಣನು ಪಶ್ಚಿಮದ್ವಾರವೆನಿಸುವ ಶುಷುಮ್ನನಾಳದ ಸುಜ್ಞಾನ ಪ್ರಕಾಶದಿಂ ನಿವಾಟವ ಮಾಡಿದನೆಂಬುದೇಗ, ಮುಂದಣಬಾಗಿಲ ತೆಗೆದು ಎಂಬ ಶಬ್ದಕ್ಕರ್ಥ. ಆ ಶುಷುಮ್ನನಾಳದಲ್ಲಿ ಸುಜ್ಞಾನ ಮಾರ್ಗವಿಡಿದೆಯ್ದುತ್ತಿರ್ದ ಶರಣನು ಆತ್ಮತ್ರಯಂಗಳೆಂಬ ಗರ್ಭ ಗೃಹಂಗಳಲ್ಲಿ ಸಚ್ಚಿದಾನಂದ ಸ್ವರೂಪವಾದ ತ್ರಿವಿಧಲಿಂಗಂಗಳು ಅಡಗಿರ್ದ ಭೇದವ ಚಿದ್ದೃಕ್ಕಿಂದ ಕಂಡನೆಂಬುದೀಗ, ವಿಷ್ಪಂದದ ಕೋಣೆಯ ಕಂಡು ಎಂಬ ಶಬ್ದಕ್ಕರ್ಥ. ಆ ಚಿದ್ದೃಕ್ಕಿಂದ ಕಂಡ ಶರಣನು ಸಂಕಲ್ಪ ವಿಕಲ್ಪಂಗಳಿಂ ಕೆಡದೆಯಿರ್ದ ಸ್ವಯಂ ಜ್ಯೋತಿಪ್ರಕಾಶವ ಸದ್ಭಾವ ಹಸ್ತದಲ್ಲಿ ದೃಢ ವಿಡಿದನೆಂಬುದೀಗ, ಕಿಡಿನಂದದ ದೀಪವ ಕೊಂಡು ಎಂಬ ಶಬ್ದಕ್ಕರ್ಥ. ಆ ಸ್ವಯಂ ಜ್ಯೋತಿಪ್ರಕಾಶ ವಿಡಿದೆಯ್ದಿದ ಶರಣನು ನಿತ್ಯ ಸ್ವರೂಪವಾದ ಆತ್ಮಾಂಗದಲ್ಲಿ ಚೈತನ್ಯ

ವಾಗಿರ್ಪ ಉಳುವೆಯು ಸ್ವರೂಪವಾದ ಪರಬ್ರಹ್ಮಕ್ಕೆ ಅಂಗವಾದ ಚಿದ್ ಭಾಂಡವ ಸುಜ್ಞಾನದೃಷ್ಟಿಯಿಂ ಕಂಡನೆಂಬುದೀಗ, ಹೊಕ್ಕು ನಿಜವಂಗವಾಗರವ ಕುಂಭವ ಕಂಡು ಎಂಬ ಶಬ್ದಕ್ಕರ್ಥ. ಆ ಚಿದ್ ಭಾಂಡದಲ್ಲಿ ಸಂಬಂಧವಾಗಿರ್ಪ ಪರಬ್ರಹ್ಮವು ದ್ವೈತಕ್ರಿಯಾಹೊದ್ದದೆಂಬುದೀಗ, ಬಂಧವಿಲ್ಲದೋಗರ ವೆಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮವನು ಶ್ರೀಗುರುಕಾರುಣ್ಯದಿಂ ಪ್ರತ್ಯಕ್ಷವ ಮಾಡಿಕೊಂಡು ಅಭಿನ್ನಜ್ಞಾನ ಕ್ರಿಯಿಂ ಸ್ವೀಕರಿಸಿ ಮಲತ್ರಯ ರಹಿತವಾದ ಪರಬ್ರಹ್ಮದಲ್ಲಿ ಸಮರಸೈಕ್ಯವಾದನೆಂಬುದೀಗ, ಉಂಡು ಸದಮಲ ಲಿಂಗವೆ ತಾನಾದ ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವು ಸ್ವಯಂಭುವಾದನೆಂಬ ಶಬ್ದಕ್ಕರ್ಥ.

೫೫

ಗುರು ಪ್ರಸಾದವ ಲಿಂಗಕ್ಕೆ ಕೊಡಲಿಲ್ಲ, ಜಂಗಮ ಪ್ರಸಾದವ ಲಿಂಗಕ್ಕೆ ಕೊಡಲಿಲ್ಲ
ಅದೇಕೆಂದೊಡೆ, ಆ ಗುರುವಿಗೂ ಲಿಂಗಪ್ರಾಣ
ಆ ಜಂಗಮಕ್ಕೂ ಲಿಂಗಪ್ರಾಣ; ಆ ಲಿಂಗ ವಿರಹಿತವಾಗಿ ಗುರುವಾಗ ಬಲ್ಲಡೆ,
ಆ ಲಿಂಗ ಬಾಹ್ಯವಾಗಿ ಜಂಗಮವಾಗ ಬಲ್ಲಡೆ,
ಉಭಯ ಪ್ರಸಾದವ ಲಿಂಗಕ್ಕೆ ಕೊಡಬಹುದು
ಇದರಿಯದೆ ಉದ್ದೇಶಿಸಿ ನುಡಿವ ಭೇದ ಹೀನರಿಗೆ ತ್ರಿವಿಧವಿಲ್ಲ,
ಎಂದೇ ಅವರು ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗಕ್ಕೆ ದೂರ

**ಟೀಕೆ :—** ಸುಜ್ಞಾನೋದಯವಾಗಿ ಸರ್ವಾಂಗಲಿಂಗ ಸಂಬಂಧವ ತಿಳಿದು ರೂಪು, ರುಚಿ, ತೃಪ್ತಿ ಮೊದಲಾದ ಸಕಲ ಪದಾರ್ಥವ ಲಿಂಗಾರ್ಪಿತವ ಮಾಡಿ ಆ ಪ್ರಸನ್ನ ಪ್ರಸಾದವನು ಸ್ವೀಕರಿಸಲರಿಯದೆ ಜೀವಭಾವದಿಂ ಸ್ವೀಕರಿಸಿ ಅಜ್ಞಾನಿಯಾದ ಭಿನ್ನ ಗುರು ಆ ಗುರುವಿನ ಪ್ರಸಾದವನು ಆಣವಾದಿ ಮಲತ್ರಯ ರಹಿತವಾದ ನಿರ್ಮಲಲಿಂಗಕ್ಕೆ ಕೊಡಲಿಲ್ಲವೆಂಬುದೀಗ, ಗುರು ಪ್ರಸಾದವ ಲಿಂಗಕ್ಕೆ ಕೊಡಲಿಲ್ಲವೆಂಬ ಶಬ್ದಕ್ಕರ್ಥ. ಆ ಜಂಗಮ ತನ್ನ ನಿಜ ಸ್ವರೂಪವ ತಿಳಿದು ತನು, ಮನ, ಪ್ರಾಣೇಂದ್ರಿಯಂಗಳಲ್ಲಿ ಲಿಂಗಸಂಬಂಧವಾಗಿ ಸಕಲ ಪದಾರ್ಥವ ಲಿಂಗಾರ್ಪಿತವ ಮಾಡಿ ಆ ಪ್ರಸಾದವ ಸ್ವೀಕರಿಸುವದೇ ಸುಜ್ಞಾನ ಜಂಗಮಸ್ಥಲ. ಇದನರಿಯದೆ ನಾನೇ ಸಾಕ್ಷಾತ್ ಬ್ರಹ್ಮವೆಂದು ಲಿಂಗಕ್ಕೆ ಕೊಡದೆ ಜೀವಭಾವದಿಂ ಸ್ವೀಕರಿಸುವಾತ ಜಂಗಮವಲ್ಲ. ಅಂತಪ್ಪ ಜಂಗಮದ ಪ್ರಸಾದವ ನಿರ್ಮಲ ಲಿಂಗಕ್ಕೆ ರ್ಪಿಸಲಿಲ್ಲವೆಂಬುದೀಗ, ಜಂಗಮ ಪ್ರಸಾದವ ಲಿಂಗಕ್ಕೆ ಕೊಡಲಿಲ್ಲವೆಂಬ ಶಬ್ದಕ್ಕರ್ಥ. ಅದೇಕೆ ಕೊಡಲಿಲ್ಲವೆಂದೊಡೆ ಆ ಗುರುವಿಗೂ ಲಿಂಗಚೈತನ್ಯ, ಆ ಜಂಗಮಕ್ಕೂ ಲಿಂಗ ಚೈತನ್ಯವೆಂಬುದೀಗ, ಆ ಗುರುವಿಗೂ ಲಿಂಗಪ್ರಾಣ ಆ ಜಂಗಮಕ್ಕೂ ಲಿಂಗಪ್ರಾಣ ವೆಂಬ ಶಬ್ದಕ್ಕರ್ಥ. ಆ ಚೈತನ್ಯ ಸ್ವರೂಪವಾದ ಲಿಂಗ ವಿರಹಿತವಾಗಿ ಗುರುವೆನಿಸಬಾರದು, ಆ ಚೈತನ್ಯ ಸ್ವರೂಪವಾದ ಲಿಂಗ ವಿರಹಿತವಾಗಿ

ಜಂಗಮವೆನಿಸಬಾರದೆಂಬುದೀಗ, ಆ ಲಿಂಗ ವಿರಹಿತವಾಗಿ ಗುರುವಾಗಬಲ್ಲಡೆ ಆ ಲಿಂಗ ಬಾಹ್ಯವಾಗಿ ಜಂಗಮವಾಗಬಲ್ಲಡೆ ಎಂಬ ಶಬ್ದಕ್ಕರ್ಥ. ಇಂತಪ್ಪ ಉಭಯ ಪ್ರಸಾದವ ಲಿಂಗಕ್ಕೆ ಕೊಡಬಹುದೆಂಬುದೀಗ, ಉಭಯ ಪ್ರಸಾದವ ಲಿಂಗಕ್ಕೆ ಕೊಡಬಹುದೆಂಬ ಶಬ್ದಕ್ಕರ್ಥ. ತಮ್ಮಂಗದ ಮೇಲೆ ಲಿಂಗದ ಸಂಬಂಧವಿಲ್ಲದೆ ಲಿಂಗಾರ್ಪಿತವ ಮಾಡದೆ ನಾವು ಗುರುಗಳು, ನಾವು ಜಂಗಮವು ಎಂದು ಲಿಂಗಕ್ಕೆ ಕೊಡದೆ ಕೊಂಬುವರ ಎಂಬುದೀಗ, ಇದ ನರಿಯದೆ ಉದ್ದೇಶಿಸಿ ನುಡಿವ ಎಂಬ ಶಬ್ದಕ್ಕರ್ಥ. ಅವರಿಗೆ ಪರಶಿವ ತತ್ವದಲ್ಲಿ ಸಮರಸವಿಲ್ಲವೆಂಬುದೀಗ, ಭೇದ ಹೀನರಿಗೆ ಎಂಬ ಶಬ್ದಕ್ಕರ್ಥ. ಅವರಿಗೆ ಲಿಂಗತ್ರಯದಿಂದುದಯವಾದ ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದವಿಲ್ಲವೆಂಬುದೀಗ, ತ್ರಿವಿಧ ವಿಲ್ಲವೆಂಬ ಶಬ್ದಕ್ಕರ್ಥ. ಇಂತಪ್ಪ ಜೀವರು ಶಿವತತ್ವಕ್ಕೆ ಭಿನ್ನವಾಗಿ ಭೇದವಾದಿಗಳಾಗಿಹರೆಂಬುದೀಗ, ಅವರು ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗಕ್ಕೆ ದೂರವೆಂಬ ಶಬ್ದಕ್ಕರ್ಥ.

೨

ಗುರುವಿರೆ ಲಿಂಗಪ್ರಸಾದವ ಕೊಳಲಾಗದು,
ಲಿಂಗವಿರೆ ಜಂಗಮ ಪ್ರಸಾದವ ಕೊಳಲಾಗದು,
ಜಂಗಮವಿರೆ ಉಭಯ ಪ್ರಸಾದವ ಕೊಳಲಾಗದು
ಇಂತಿ ಪ್ರಸಾದವ ವಿವರವ ನರಿತಲ್ಲಿ-
ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವು ಪ್ರಸನ್ನ ಪ್ರಸಾದನಾದ.

**ಟೀಕು:—** ದೀಕ್ಷೆ ತ್ರಯಂಗಳ ಕರುಣಿಸಿ ಅಂಗತ್ರಯಕ್ಕೆ ಲಿಂಗತ್ರಯವ ಮಾಡಿ ಸದಾಚಾರ ಸತ್ಪಥ ಮಾರ್ಗವ ತೋರಿಕೊಟ್ಟ ಶ್ರೀಗುರುವ ಕ್ಷೀಣವೆಂದು, ಲಿಂಗವೇ ಶ್ರೇಷ್ಠವೆಂದು ಗುರುವ ಬಿಟ್ಟು ಲಿಂಗ ಪ್ರಸಾದವ ಕೊಂಬುದು ಅಜ್ಞಾನವೆಂಬುದೀಗ, ಗುರುವಿರೆ ಲಿಂಗ ಪ್ರಸಾದವ ಕೊಳಲಾಗದೆಂಬ ಶಬ್ದಕ್ಕರ್ಥ. ತನ್ನಂಗ, ಮನ, ಪ್ರಾಣೇಂದ್ರಿಯಂಗಳಲ್ಲಿ ಲಿಂಗ ಚೈತನ್ಯ ಸ್ವರೂಪವಾಗಿರ್ದ ಸಕಲ ಪದಾರ್ಥವ ಲಿಂಗಾರ್ಪಿತವ ಮಾಡಿ ಪ್ರಸಾದವ ಸ್ವೀಕರಿಸುವದೇ ಸಹಜ. ಆ ಲಿಂಗವ ಬಿಟ್ಟು ಜಂಗಮವೇ ಶ್ರೇಷ್ಟವೆಂದು ಆ ಜಂಗಮದ ಪ್ರಸಾದವ ಕೇಳಲಾಗದೆಂಬುದೀಗ, ಲಿಂಗವಿರೆ ಜಂಗಮ ಪ್ರಸಾದವ ಕೇಳಲಾಗದೆಂಬ ಶಬ್ದಕ್ಕರ್ಥ. ಸುಜ್ಞಾನ ಸ್ವರೂಪವಾದ ಜಂಗಮವು ತನ್ನಲ್ಲಿ ಚೈತನ್ಯ ಸ್ವರೂಪವಾಗಿರ್ದ ಬಳಿಕ ಆ ಜಂಗಮವನುದಾಸೀನದಿಂ ಬಿಟ್ಟು ಗುರು, ಗುರು ಪ್ರಸಾದವ, ಲಿಂಗಪ್ರಸಾದವ ಕೊಳಲಾಗದೆಂಬುದೀಗ, ಜಂಗಮವಿರೆ ಉಭಯ ಪ್ರಸಾದವ ಕೊಳಲಾಗದೆಂಬ ಶಬ್ದಕ್ಕರ್ಥ. ಇಂತಿ ಭಿನ್ನವಾರ್ತೆಯ ಭೇದಿಸಿ ಗುರು-ಲಿಂಗ ಜಂಗಮವೆ ಸಚ್ಚಿದಾನಂದ ಬ್ರಹ್ಮವೆಂದರಿದು ತನು, ಮನ, ಧನದಲ್ಲಿ ಸಂಬಂಧವ ಮಾಡಿಕೊಂಡು ತ್ರಿವಿಧ ಪ್ರಸಾದವನರ್ಪಿಸಿ ಆ ಪ್ರಸನ್ನ ಪ್ರಸಾದವ ಸ್ವೀಕರಿಸಿ, ಪ್ರಸಾದವೆಂದೊಡೆ ಮಾಂಗಲ್ಯ ಸ್ವರೂಪವಾದ ಪರಶಿವ ತತ್ವ. ಆ ಪರಶಿವ ತತ್ವದಲ್ಲಿ ಸಮರಸೈಕ್ಯವಾದಾತನೆ ಷಟ್‌ಸ್ಥಲಜ್ಞಾನಿಯೆಂಬುದೀಗ, ಇಂತಿ ಪ್ರಸಾದದ ವಿವರವ ನರಿತಲ್ಲಿ ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗವು ಪ್ರಸನ್ನ ಪ್ರಸಾದವಾದನೆಂಬ ಶಬ್ದಕ್ಕರ್ಥ.

೭

ಸಕಲ ಬಹುಕೃತವೆಂಬ ಗಹನದಲ್ಲಿ ಜೀವನೆಂಬ
ದಂತಿ ತಿರುಗಾಡುತ್ತಿರಲಾಗಿ
ಅರಿವೆಂಬ ಕೇಸರಿ ಅದಕಂಡೊಗಿದಯಿಯ್ದು
ಮಸ್ತಕದ ಕುಂಭಸ್ಥಳವ ನೊಡದು ಸೇವಿಸುತ್ತಿರಲಾಗಿ
ಶಾರ್ದೂಲ ಹೋಯಿತ್ತು, ಕೇಸರಿ ಬಿಟ್ಟಿತ್ತು ಗಜ ಬದುಕಿತ್ತು.
ಶಾರ್ದೂಲ ಶಂಕೆ ಹರಿಯಿತ್ತು, ಈಶಾನ್ಯ ಮೂರ್ತಿ
ಮಲ್ಲಿಕಾರ್ಜುನ ಲಿಂಗವು
ಲೀಲೆಗೆ ಹೊರತಾಗಿ ಸ್ವಯಂಭುವಾಯಿತ್ತು.

ಟೀಕು:— ಸಕಲ ತತ್ವಂಗಳೊಡಗೂಡಿದ ಪುಣ್ಯ ಪಾಪ ಯುಕ್ತವಾದ ದೇಹಾರಣ್ಯದಲ್ಲಿ ಎಂಬುದೀಗ, ಸಕಲ ಬಹುಕೃತವೆಂಬ ಗಹನದಲ್ಲಿ ಎಂಬ ಶಬ್ದಕ್ಕರ್ಥ. ಆ ದೇಹಾರಣ್ಯದ ಮಧ್ಯದಲ್ಲಿ ಅಹಂಕಾರ ಯುಕ್ತವಾದ ಜೀವನು ನಾನಾ ಪ್ರವರ್ತನೆಯಲ್ಲಿ ಕೂಡಿ ಚರಿಸುತ್ತಿಹುದೆಂಬುದೀಗ, ಜೀವನೆಂಬ ದಂತಿ ತಿರುಗಾಡುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಅಂತು ದೇಹ ವಿಕಾರದಲ್ಲಿ ಕೂಡಿ ಚರಿಸುತ್ತಿರ್ದ ಅಹಂಕಾರ ಯುಕ್ತವಾದ ಜೀವಂಗೆ ಶಿವಕೃಪೆಯಿಂ ಸುಜ್ಞಾನೋದಯವಾಗಲು, ಆ ಸುಜ್ಞಾನ ಪ್ರಕಾಶವು ಆ ಅಹಂಕಾರಯುಕ್ತವಾದ ಜೀವನ, ಜೀವಭಾವದ ಸಂಹರಿಸಬೇಕೆಂದು ಅತ್ಯಂತ ತೀವ್ರದಿಂದೆಯ್ದಿ ಆವಗ್ರಹಿಸಿ ಆ ಜೀವನ ವೃತ್ತಿಜ್ಞಾನವೆಂಬ ಶಿರಸ್ಸನು ಅಹಂಕಾರ-ಮಮಕಾರಗಳೆಂಬ ಕುಂಭಸ್ಥಳವನು ಭಗ್ನವ ಮಾಡಿತ್ತೆಂಬುದೀಗ, ಅರಿವೆಂಬ ಕೇಸರಿ ಅದ ಕಂದೊದಗಿಯ್ದಿ ಮಸ್ತಕದ ಕುಂಭ ಸ್ಥಳವನೊಡದು ಎಂಬ ಶಬ್ದಕ್ಕರ್ಥ. ಅಂತು ವೃತ್ತಿ ಜ್ಞಾನ ಮೊದಲಾದ ಅಹಂಕಾರ-ಮಮಕಾರಂಗಳು ನಿವೃತ್ತಿಯಾಗಲು ಅಷ್ಟಮದಯುಕ್ತವಾದಸಂಸಾರ ವಿಷಯ ರಸವ ನವಗ್ರಹಿಸಿ ನಷ್ಟವ ಮಾಡಿತ್ತೆಂಬುದೀಗ, ಸೇವಿಸುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಅಂತು ಸುಜ್ಞಾನ ಪ್ರಕಾಶದಿಂ, ಜೀವನ ಸಕಲ ಪ್ರಪಂಚು ನಿವೃತ್ತಿಯಾಗಲು ಪಿಂಡ ಬ್ರಹ್ಮಾಂಡಗಳ ನವಗ್ರಹಿಸಿ ಚೈತನ್ಯ ಸ್ವರೂಪವಾಗಿರ್ದ ಮಹಾಘನ ಲಿಂಗವು ಗುರು ಮುಖದಿಂ ಪ್ರತ್ಯಕ್ಷವಾಗಿ ಕರಸ್ಥಲಕ್ಕೆ ಬಂದು ಆ ಸಜ್ಜೀವನ ಸರ್ವಾಂಗವನವಗ್ರಹಿಸಿತ್ತೆಂಬುದೀಗ, ಶಾರ್ದೂಲ ಹೋಯಿತ್ತೆಂಬ ಶಬ್ದಕ್ಕರ್ಥ. ಇಂತು ಸರ್ವಾಂಗ ಲಿಂಗ ಸಂಬಂಧವಾಗಲು ಆ ಸುಜ್ಞಾನ ಪ್ರಕಾಶವೆಂಬ ಕೇಸರಿ ಆ ಜೀವನ ಸಂಹರಿಸಬೇಕೆಂಬ ವೈರವಿಲ್ಲದೆ ಮಹಾಘನಲಿಂಗದಲ್ಲಿ ಲಯ್ಯವಾಯಿತ್ತೆಂಬುದೀಗ, ಕೇಸರಿ ಬಿಟ್ಟಿತ್ತೆಂಬ ಶಬ್ದಕ್ಕರ್ಥ. ಅಂತು ಜೀವನ ಅನಿತ್ಯ ಭಾವ ವಳಿದು ನಿತ್ಯವಾದ ಶಿವಪಾದವ ನೆಯ್ದಿದನೆಂಬುದೀಗ, ಗಜ ಬದುಕಿತ್ತೆಂಬ ಶಬ್ದಕ್ಕರ್ಥ. ಅಂತು ಮಹಾಘನ ಲಿಂಗದಲ್ಲಿ ಅವಿರಳ ಸಂಬಂಧಿಯಾದ ಶರಣಂಗೆ ಆ ಪರಬ್ರಹ್ಮವ ಕಂಡು ಕೂಡಿಹೆನೆಂಬ ಸಂಕಲ್ಪ ನಿವೃತ್ತಿಯಾಗಲು, ಶರಣಲಿಂಗವೆಂಬ ಭಯ ವಳಿದು ನಿರಾಕಾರ ಬ್ರಹ್ಮವೆಯಾದನೆಂಬುದೀಗ, ಶಾರ್ದೂಲ ಶಂಕೆ

ಪರಿಯಿತ್ತು ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವು ಲೀಲೆಗೆ ದೂರಗಾಗಿ ಸ್ವಯಂಭು ವಾಯಿತ್ತೆಂಬ ಶಬ್ದಕ್ಕರ್ಥ.

೮

ಜಲದೊಳಗಣ ಮತ್ಸ್ಯ, ವನದೊಳಗಣ ಮರ್ಕಟ, ಆಕಾಶದ ಪಕ್ಷಿ
ಇವು ಕೂಡಿ ಮಾತಾಡುವಲ್ಲಿ ಶಬರ ಮತ್ಸ್ಯವ ನೋಡಿ,
ಜೋಗಿ ವನಚರವ ಕಂಡು, ಅಂಟಿನ ಡೊಂಬ ಹಕ್ಕಿಯ ಕಂಡು
ಇಂತೀ ಮೂವರ ಹದಹ ಕೆಡಿಸಿತ್ತು, ಕಾರಮಳೆ ಸೊನೆಯೆದ್ದು
ಸುರಿಯಿತ್ತು
ಇಂತಿ ಇನ್ನಾರ ಕೇಳುವೆ ಈಶಾನ್ಯ ಮೂರ್ತಿ
ಮಲ್ಲಿಕಾರ್ಜುನ ಲಿಂಗವೆ ನೀನೆ ಬಲ್ಲೆ.

**ಟೀಕು**:— ಜಲವೆಂದೊಡೆ, ಸಂಸಾರ ವಿಷಯ ಜಲ ಪ್ರವಾಹ. ಅಂತಪ್ಪ ಸಂಸಾರ ವಿಷಯ ಜಲದಲ್ಲಿ ಚರಿಸುತ್ತಿಹನು ಜೀವನೆಂಬುದೀಗ, ಜಲದೊಳಗಣ ಮತ್ಸ್ಯವೆಂಬ ಶಬ್ದಕ್ಕರ್ಥ. ಷಡಾಧಾರ ಚಕ್ರದ ಐವತ್ತೊಂದು ದಳಂಗಳಲ್ಲಿ, ಸಂಕಲ್ಪ-ವಿಕಲ್ಪ ಭಾವದಿಂ ಚರಿಸುತ್ತಿಹುದು ಮನಸ್ಸೆಂಬುದೀಗ, ವನದೊಳಗಣ ಮರ್ಕಟನೆಂಬ ಶಬ್ದಕ್ಕರ್ಥ. ಆತ್ಮಾಕಾಶ ಮಧ್ಯದಲ್ಲಿ ಸ್ವಲೀಲಾ ಪರವಾಗಿ ಚರಿಸುತ್ತಿಹುದು ಪರಮಾತ್ಮನೆಂಬುದೀಗ, ಆಕಾಶದ ಪಕ್ಷಿಯೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಾತ್ಮನು, ಮನಸ್ಸು, ಪರಮಾತ್ಮನು ತಮ್ಮ ತಮ್ಮ ಪ್ರಪಂಚಿನ ವರ್ತನೆಯ ಶಬ್ದ ಜಾಲದೊಳಗೆ ಸಿಲ್ಕಿ ಸಂದಣಿಗೊಳುತ್ತಿಹವೆಂಬುದೀಗ, ಇವುಕೂಡಿ ಮಾತಾಡುವಲ್ಲಿ ಎಂಬ ಶಬ್ದಕ್ಕರ್ಥ. ಭಿನ್ನವಿಟ್ಟು ಚರಿಸುತ್ತಿಹ ದ್ವೈತಿಗಳು ಜೀವನವರ್ತನೆಯ ಕ್ರಿಯಿಂದ ನಿಲಿಸಬೇಕೆನುತ್ತಿಹರೆಂಬುದೀಗ, ಶಬರ ಮತ್ಸ್ಯವ ನೋಡಿ ಎಂಬ ಶಬ್ದಕ್ಕರ್ಥ. ಲಕ್ಷಯೋಗಿಗಳು ಅಂತರ್ಲಕ್ಷ ಸಂಧಾನದಿಂ ಮನೋವರ್ತನೆಯ ನಿಲಿಸ, ನಿಲಿಸಬೇಕೆನುತ್ತಿಹರೆಂಬುದೀಗ, ಜೋಗಿ ವನಚರವ ಕಂಡು ಎಂಬ ಶಬ್ದಕ್ಕರ್ಥ. ಆತ್ಮಜ್ಞಾನದಿಂ ಅದ್ವೈತಿಗಳು ಪರಮಾತ್ಮ ತತ್ವವ ಗ್ರಹಿಸಬೇಕೆನುತ್ತಿಹರೆಂಬುದೀಗ, ಅಂಟಿನ ಡೊಂಬ ಹಕ್ಕಿಯ ಕಂಡು ಎಂಬ ಶಬ್ದಕ್ಕರ್ಥ. ಅಭ್ರಛಾಯೆ ಮಾತ್ರವಾದ ಮಾಯಾಡಂಬರವೆಂಬ ಮೇಘದಲ್ಲಿ ಸಂಸಾರ ವಿಷಯ ರಸವೆಂಬ ವೃಷ್ಟಿ ಸರ್ವಾಂಗದಲ್ಲಿ ಕರೆಯಲು, ದ್ವೈತಾದ್ವೈತಯೋಗ ಮಾರ್ಗಿಗಳ ಬಯಕೆ ನಷ್ಟವಾಯಿತ್ತೆಂಬುದೀಗ, ಇಂತಿ ಮೂವರ ಹದಹ ಕೆಡಿಸಿತ್ತು ಕಾರಮಳೆ ಸೊನೆಯೆದ್ದು ಸುರಿಯಿತ್ತು ಎಂಬ ಶಬ್ದಕ್ಕರ್ಥ. ತ್ರಿಕಾಂಡಿಗಳು ಶಿವತತ್ವಕ್ಕೆ ಭಿನ್ನವಾಗಿ ಹೋದ ಭೇದವ ಶರಣ ಕಂಡು ಆಶ್ಚರ್ಯ ಪಡುತ್ತಿರ್ದನೆಂಬುದೀಗ, ಇಂತಿ ಇನ್ನಾರ ಕೇಳುವೆ ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವೆ ನೀನೆ ಬಲ್ಲೆ ಎಂಬ ಶಬ್ದಕ್ಕರ್ಥ.

# ಡಕ್ಕೆಯ ಬೊಮ್ಮಣ್ಣನವರ ವಚನಗಳು

೧

ಕಾಯವೆಂಬ ಡಕ್ಕೆ, ಕ್ರಿಯಾಭಾವವೆಂಬ ಹೊದಕೆ
ಅರವೆಂಬ ನೇಣಿನಲ್ಲಿ, ಸ್ಥೂಲ ಸೂಕ್ಷ್ಮವೆಂಬ ಹೊಡೆಚೆಂಡು ಕಟ್ಟಿ
ಹೊಯ್ಯುತ್ತಿದೆ ಡಕ್ಕೆ ಕಾಲಾಂತಕ ಭೀಮೇಶ್ವರಲಿಂಗ
ವಲ್ಲದಿಲ್ಲ ಎಂದು

**ಟೀಕು:—** ಸುಜ್ಞಾನೋದಯವಾದ ಶರಣನ ಪಂಚಭೂತ ಕಾಯವಳಿದು, ಸತ್ಕ್ರಿಯಾಚಾರ ಸಂಬಂಧವಾಯಿತ್ತೆಂಬುದೀಗ, ಕಾಯವೆಂಬ ಡಕ್ಕೆ ಕ್ರಿಯೆಂಬ ಶಬ್ದಕ್ಕರ್ಥ. ಅಂತು ಸತ್ಕ್ರಿಯಾಚಾರ ಸಂಬಂಧವಾದ ಶರಣನ ಶಿವಭಾವವೆಲ್ಲಕ್ಕೂ ಮೇಲು ಹೊದಿಕೆಯಾಗಿಪ್ಪುದೆಂಬುದೀಗ, ಭಾವವೆಂಬ ಹೊದಕೆಯೆಂಬ ಶಬ್ದಕ್ಕರ್ಥ. ಅಂತಪ್ಪ ಶರಣ ಮಹಾಜ್ಞಾನ ಸೂತ್ರದಲ್ಲಿ ಬಂಧಿಸಿದನೆಂಬುದೀಗ, ಅರವೆಂಬ ನೇಣಿನಲ್ಲಿ ಎಂಬ ಶಬ್ದಕ್ಕರ್ಥ. ಆ ಶರಣ ತನ್ನಂತರಂಗ-ಬಹಿರಂಗದ ಸತ್ಕ್ರಿಯಾ ಜ್ಞಾನಂಗಳಲ್ಲಿ ಗುರುಕರುಣದಿಂ ಇಷ್ಟ, ಪ್ರಾಣಲಿಂಗ ಸಂಬಂಧವಾಗಿಹುದೆಂಬುದೀಗ, ಸ್ಥೂಲ, ಸೂಕ್ಷ್ಮ ಎಂಬ ಹೊಡೆಚೆಂಡ ಕಟ್ಟಿ ಎಂಬ ಶಬ್ದಕ್ಕರ್ಥ. ಆ ಇಷ್ಟ-ಪ್ರಾಣಲಿಂಗದಲ್ಲಿ ಸತ್ಕ್ರಿಯಾ ಜ್ಞಾನ ವಿಡಿದಾಚರಿಸಿ ಬೆರಸುತ್ತಿರ್ದ ಶರಣನೆಂಬುದೀಗ, ಹೊಯ್ಯುತ್ತಿದೆ ಡಕ್ಕೆ ಕಾಲಾಂತಕ ಭೀಮೇಶ್ವರಲಿಂಗ ವಲ್ಲದಿಲ್ಲ ಎಂದು ಎಂಬ ಶಬ್ದಕ್ಕರ್ಥ.

೨

ಅಂಗವೆಂಬ ಮೊರದಲ್ಲಿ ವಿಕಾರವೆಂಬ ಕೋಣನ
ನೆರೆ ತಾಯಿ ಬಂದಳಯ್ಯಾ
ಮೂರು ಮುಖವಾಗಿ, ಮೂರು ಮುಖದವ್ವೆಯ ಬಾಗಿಲಲ್ಲಿ
ಬಾಧೆ ಪಡುವವರೆಲ್ಲರು ಹೋದರು ಹೊಲಬುದಪ್ಪಿ-
ಕಾಲಾಂತಕ ಭೀಮೇಶ್ವರ ಲಿಂಗವ ನರಿಯದೆ

**ಟೀಕು:—** ಪಂಚಭೂತಾಶ್ರಯವಾದ ದೇಹವೆಂಬುದೀಗ, ಅಂಗವೆಂಬ ಮೊರದಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ದೇಹಿಯಾಗಿರ್ದಾತ್ಮನು ಕಾಮವಿಕಾರದಿಂದ ಅಹಂಕಾರಯುಕ್ತನಾಗಿರ್ದನೆಂಬುದೀಗ, ವಿಕಾರವೆಂಬ ಕೋಣನೆಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾರದಗ್ರದಲ್ಲಿ ಆ ಜೀವನಿಗೆ ಮಾತೃಸ್ಥಾನವಾಗಿರ್ದ ಮಾಯಾ ಶಕ್ತಿ ಇರುತ್ತಿಹಳೆಂಬುದೀಗ, ಕೋಣನ ನೆರೆ ತಾಯಿ ಬಂದಳಯ್ಯಾ ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯಾ ಶಕ್ತಿಗೆ ಹೊನ್ನು, ಹೆಣ್ಣು ಮಣ್ಣು ಮೂರು ಮುಖವಾಗಿಹನೆಂಬುದೀಗ, ಮೂರು ಮುಖವಾಗಿ ಎಂಬ ಶಬ್ದಕ್ಕರ್ಥ. ಅಂತು ಮಲತ್ರಯ ಮೂರು ಮುಖವಾಗಿಯುಳ್ಳ ಮಾಯಾಶಕ್ತಿಗೆ ಇಂದ್ರಿಯಂಗಳೆ ಬಾಗಿಲಾದ ಕಾರಣ ಆ ಇಂದ್ರಿಯ ಭೋಗಕ್ಕೆ ಸಿಲ್ಕಿದ ಜೀವರು,

ಕಾಲ, ಕಾಮಾದಿಗಳ ಬಾಧೆಯಿಂ ದುಃಖ ಬಡುತ್ತಿಹರೆಂಬುದೀಗ, ಮೂರು ದುಃಖ ದಪ್ಪೆಯ ಬಾಗಿಲಲ್ಲಿ ಬಾಧೆ ಬಡುವವರೆಲ್ಲರೂ ಎಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ಸುಖವನನುಭವಿಸಿದಾತ್ಮರು ಶಿವತತ್ವಕ್ಕೆ ಭಿನ್ನವಾಗಿ ಹೋದರೆಂಬುದೀಗ, ಹೋದರು ಹೊಲಬುದಪ್ಪಿ ಕಾಲಾಂತಕ ಭೀಮೇಶ್ವರ ಲಿಂಗವನರಿಯದೆ ಎಂಬ ಶಬ್ದಕ್ಕರ್ಥ.

೩

ಮೂರು ವಸ್ತಿಯಲ್ಲಿ ತೋರುವದು ಸತ್ವಗುಣ,<br>
ಆರು ವಸ್ತಿಯಲ್ಲಿ ತೋರುವದು ರಜೋಗುಣ,<br>
ಏಳು ವಸ್ತಿಯಲ್ಲಿ ತೋರುವದು ತಮೋಗುಣ<br>
ಇಂತಿ ತ್ರಿವಿಧಾವಸ್ತಿಯಲ್ಲಿ ತೋರುವವೆಲ್ಲವು<br>
ಅಪ್ಪುವಿನ ಸಂಚಾರದ ಗುಣ ಸತ್ವ, ರಜ, ತಮಂಗಳಲ್ಲಿ,<br>
ನಿಶ್ಚಯವಾಗಿ ನಿಂದುದು ಕಾಲಾಂತಕ ಭೀಮೇಶ್ವರ ಲಿಂಗದಲ್ಲಿ<br>
ಸಲೆ ನಿಂದು

ಟೀಕು: — ಸತ್ವಗುಣ ಸಂಬಂಧವಾದ ಸೂಕ್ಷ್ಮ ತನುವಿಂದ ತ್ರಿವಿಧಾವಸ್ತಿಯು ತೋರುತ್ತಿಹವೆಂಬುದೀಗ, ಮೂರುವಸ್ತಿಯಲ್ಲಿತೋರುವದು ಸತ್ವಗುಣವೆಂಬ ಶಬ್ದಕ್ಕರ್ಥ. ರಜೋಗುಣ ಸಂಬಂಧವಾದ ಸ್ಥೂಲತನುವಿನಿಂದ ಷಡೇಂದ್ರಿಯಂಗಳ ವ್ಯವಹಾರ ತೋರಿತ್ತೆಂಬುದೀಗ, ಆರವಸ್ತಿಯಲ್ಲಿ ತೋರುವದು ರಜೋಗುಣವೆಂಬ ಶಬ್ದಕ್ಕರ್ಥ. ತಮೋಗುಣ ಸಂಬಂಧವಾದಕಾರಣ ದೇಹದಿಂ ಸಪ್ತ ವ್ಯಸನಂಗಳ ವ್ಯವಹಾರ ತೋರಿತ್ತೆಂಬುದೀಗ, ಏಳು ವಸ್ತಿಯಲ್ಲಿ ತೋರುವದು ತಮೋಗುಣವೆಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧಾವಸ್ಥೆ, ಷಡ್ವಿಧಾವಸ್ಥೆ, ಮೊದಲಾದ ಸಕಲ ಕರಣಂಗಳ ವ್ಯವಹಾರವೆಲ್ಲವು ಅಪ್ಪುವೆಂದೊಡೆ ಮನಸ್ಸು, ಆ ಮನಸ್ಸಿನ ಸಂಕಲ್ಪ-ವಿಕಲ್ಪ ಮೊದಲಾದ ಚಾಂಚಲ್ಯದ ಗುಣವೆಂಬುದೀಗ, ಇಂತಿ ತ್ರಿವಿಧಾವಸ್ಥೆಯಲ್ಲಿ ತೋರುವವೆಲ್ಲವು ಅಪ್ಪುವಿನ ಸಂಚಾರದ ಗುಣವೆಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧಾವಸ್ಥೆಯಲ್ಲಿ ಕೂಡಿದಾತ್ಮಂಗೆ ಸುಜ್ಞಾನೋದಯವಾಗಿ ಗುಣತ್ರಯ ಮುಖ್ಯವಾದ ಸಕಲ ಪ್ರಪಂಚ ನಿವೃತ್ತಿ ಮಾಡಿ ಶ್ರೀ ಗುರೋಪಾಸ್ಥೆಯ ಮಾಡಲು ಆ ಶ್ರೀಗುರು ಕರುಣಿಸಿ ದೀಕ್ಷೆ ತ್ರಯಂಗಳಿಂ ತನುತ್ರಯಂಗಳ ನಷ್ಟವ ಮಾಡಿ ಇಷ್ಟ, ಪ್ರಾಣ, ಭಾವಲಿಂಗ ಸಂಬಂಧವ ಮಾಡಲು ತ್ರಿವಿಧ ಕ್ರಿಯೆಗಳಿಂದಾ ಚರಿಸುತ್ತಿರ್ದ ಶರಣನು ತ್ರಿವಿಧ ಪದಾರ್ಥವ ತ್ರಿವಿಧ ಲಿಂಗ ಮುಖಕ್ಕರ್ಪಿಸಿ ತ್ರಿವಿಧ ಪ್ರಸಾದವ ಸ್ವೀಕರಿಸಿದಲ್ಲಿ ತನುವೆ, ಶುದ್ಧ ಮನವೆ, ಸಿದ್ಧ ಭಾವವೆ ಪ್ರಸಿದ್ಧವಾಯಿತ್ತೆಂಬುದೀಗ, ಸತ್ವ, ರಜ, ತಮಂಗಳಲ್ಲಿ ನಿಶ್ಚಯವಾಗಿ ನಿಂದುದು ಕಾಲಾಂತಕ ಭೀಮೇಶ್ವರ ಲಿಂಗದಲ್ಲಿ ಸಲೆ ಸಂದುದು ಎಂಬ ಶಬ್ದಕ್ಕರ್ಥ.

ನಾಡೆಲ್ಲರು ಮುಟ್ಟಿ ಪೂಜಿಸುವದು ಸಿರಿದೇವಿ,
ಸತ್ಯರೆಲ್ಲರು ಮುಟ್ಟಿ ಪೂಜಿಸುವದು ಮಾದೇವಿ
ನಾ ಮೊರದಲ್ಲಿ ಹೊತ್ತಾಡುವದು ಉರಿ ಮಾರಿ ಸಿರಿವುರಿ
ಮಾದೇವಿ ಮೊರದ ಗೊಟಗೊಳಗಾಯಿತ್ತು ಡಕ್ಕೆಯ ಧ್ವನಿಗೆ
ಮುನ್ನವೆ ಸಿಕ್ಕದಿರಿ ಕಾಲಾಂತಕ ಭೀಮೇಶ್ವರ ಲಿಂಗವ
ನರಿಯು ಬಲ್ಲಡೆ.

**ಟೀಕು:**— ಗುರುಕಾರುಣ್ಯದಿಂದಂಗದಲ್ಲಿ, ಲಿಂಗ ಸಂಬಂಧವಾಗಿ ಆ ಇಷ್ಟ ಲಿಂಗಕ್ಕೆ ಉಪಾಧಿಯಿಂ ಕ್ರಿಯೆಗಳ ಮಾಡಿ ಫಲಪದಂಗಳ ಪಡದು ಭೋಗಿಸುತ್ತಿಹುದು ಉಪಾಧಿಯ ಮಾಟವೆಂಬುದೀಗ, ನಾಡೆಲ್ಲರು ಮುಟ್ಟಿ ಪೂಜಿಸುವದು ಸಿರಿದೇವಿಯೆಂಬ ಶಬ್ದಕ್ಕರ್ಥ. ಸತ್ಯ ಸದಾಚಾರವಂತರಪ್ಪ ಸದ್ಭಕ್ತರುಗಳು ಉಪಾಧಿಯಳಿದು ನಿರುಪಾಧಿ ಮಾಟದಲ್ಲಿ ನಿಂದು ಗುರು-ಲಿಂಗ-ಜಂಗಮದಲ್ಲಿ ತ್ರಿವಿಧಭಕ್ತಿಗಳಿಂದಾಚರಿಸುತ್ತಿಹರೆಂಬುದೀಗ, ಸತ್ಯರೆಲ್ಲರು ಮುಟ್ಟಿ ಪೂಜಿಸುವದು ಮಾದೇವಿಯೆಂಬ ಶಬ್ದಕ್ಕರ್ಥ. ಉಪಾಧಿ-ನಿರುಪಾಧಿಯೆಂಬ ಉಭಯವನು ಮೀರಿ ಸಹಜ ಮಾಟದಲ್ಲಿ ನಿಂದು ತನ್ನಾಚಾರಾಂಗದಲ್ಲಿ ಚಿದಾಗ್ನಿ ಸ್ವರೂಪವಾದ ಚಿದ್ ಘನಲಿಂಗವ ಧರಿಸಿಕೊಂಡು ಅಭಿನ್ನ ಜ್ಞಾನ ಕ್ರೀಯಿಂದಾಚರಿಸಿ ಸಕಲ ಪ್ರಪಂಚು ಸಂಹರಿಸಿದನೆಂಬುದೀಗ, ನಾ ಮೊರದಲ್ಲಿ ಹೊತ್ತಾಡುವದು ಉರಿಮಾರಿ ಎಂಬ ಶಬ್ದಕ್ಕರ್ಥ. ಉಪಾಧಿ-ನಿರುಪಾಧಿ ಸಹಜ ಮಾಟವೆಂಬ ತ್ರಿವಿಧವು ಶರಣನಾಚಾರ ಸ್ವರೂಪವಾದ ಅಂಗತ್ರಯದಲ್ಲಿ ಅಡಗಿರುತ್ತಿಹವು ತ್ರಿವಿಧ ಮಾಟವೆಂಬುದೀಗ, ಉರಿ ಮಾದೇವಿ ಮೊರದಗೊಟಗೊಳಗಾಯಿತ್ತೆಂಬ ಶಬ್ದಕ್ಕರ್ಥ. ದೇಹಾದಿ ಪ್ರಪಂಚಿನ ಶಬ್ದಜಾಲಕ್ಕೆ ಸಿಲ್ಕಿ ಕೆಡಬೇಡೆಂದು ಅನ್ಯೋಪದೇಶವಾಗಿ ನಿರೂಪಿಸುತ್ತಿರ್ದ ಶರಣನೆಂಬುದೀಗ, ಡಕ್ಕೆಯ ಧ್ವನಿಗೆ ಮುನ್ನವೆ ಸಿಕ್ಕದಿರಿ ಕಾಲಾಂತಕ ಭೀಮೇಶ್ವರ ಲಿಂಗವ ನರಿಯು ಬಲ್ಲಡೆ ಎಂಬ ಶಬ್ದಕ್ಕರ್ಥ.

---

## ಮನುಮುನಿ ಗೊಮ್ಮಟಯ್ಯನವರ ವಚನಗಳು

೧

ಹುಲ್ಲೆಯ ಕಣ್ಣಿನಲ್ಲಿ ಹುಲಿ ನಿಂದಿರ್ದುದ ಕಂಡೆ,
ಹುಲ್ಲಿನ ಮಧ್ಯದಲ್ಲಿ ಪಾವಕ ಅಲ್ಲಾಡಲಮ್ಮದೆ ಇರ್ದುದ ಕಂಡೆ,
ಎನ್ನ ಗೂಡಿನೊಡೆಯ ಗುಮ್ಮಟನಾಥ ಆಗಮೇಶ್ವರ ಲಿಂಗ
ಅಡಿಯಿಡಲಮ್ಮದುದ ಕಂಡೆ.

**ಟೀಕು:**— ಜೀವಾತ್ಮನೆಂಬುದೀಗ, ಹುಲ್ಲೆಯೆಂಬ ಶಬ್ದಕ್ಕರ್ಥ. ಆ ಜೀವನ ಅಜ್ಞಾನ ದೃಷ್ಟಿಯಲ್ಲಿ ಕಾಲವ್ಯಾಘ್ರನಿರುತ್ತಿಹುದೆಂಬುದೀಗ, ಹುಲ್ಲೆಯ ಕಣ್ಣಿನಲ್ಲಿ

ಹುಲಿ ಇಂದಿರ್ದುದ ಕಂಡೆನೆಂಬ ಶಬ್ದಕ್ಕರ್ಥ. ಪ್ರಪಂಚನೊಳಕೊಂಡಿರ್ಪ ದೇಹದ ಮಧ್ಯದಲ್ಲಿ ಚಿದಾಗ್ನಿ ಸ್ವರೂಪವಾದ ಪರಶಿವ ತತ್ವವು ಅಡಗಿರುತ್ತಿಹುದು ಪ್ರಭಾವಿಸದೆ ಎಂಬುದೀಗ, ಹುಲ್ಲಿನ ಮಧ್ಯದಲ್ಲಿ ಪಾವಕ ಅಲ್ಲಾಡಲಮ್ಮದೆ ಇರ್ದುದ ಕಂಡೆನೆಂಬ ಶಬ್ದಕ್ಕರ್ಥ. ಆ ಪರಬ್ರಹ್ಮವು ಪ್ರಪಂಚಿನಲ್ಲಿ ಮುಳುಗಿರ್ಪ ಜೀವನಿಗೆ ಇದಿರಿಟ್ಟು ಕಾಣಿಸಿಗೊಳ್ಳದೆ ಹೋಯಿತ್ತೆಂಬುದೀಗ, ಎನ್ನ ಗೂಡಿನೊಡೆಯ ಗುಮ್ಮಟನಾಥ ಆಗಮೇಶ್ವರಲಿಂಗ ಅಡಿಯಿಡಲಮ್ಮದುದ ಕಂಡೆನೆಂಬ ಶಬ್ದಕ್ಕರ್ಥ.

೨

ಜೆಕ್ಕಿನ ತಲೆಯು ಗಿಣಿ ತಿಂದು, ಕತ್ತೆ ಕುದುರೆಯ ರೂಪಾಯಿತ್ತು
ಮತ್ಸ್ಯ ಸಮುದ್ರವ ಕುಡಿದು, ಕೆರೆಯ ತಪ್ಪಲ
ನೀರಿಗಾರದೆ ಸತ್ತಿತ್ತು
ನೀರಕ್ಕದೆ ಈ ಬಚ್ಚಬಯಲ ಇನ್ನಾರಿಗೆ ಹೇಳುವೆ ?
ಗೂಡಿನೊಡೆಯ ಗುಮ್ಮಟನಾಥ ಆಗಮೇಶ್ವರ ಲಿಂಗ.

**ಟೀಕು:—** ಪರಶಿವ ತತ್ವವ ನರಿಯಬೇಕೆಂಬ ಏಕಾಗ್ರ ಚಿತ್ತದ ಸದ್ವಿವೇಕವೆಂಬ ಶಿರಸ್ಸನು ಪರಮ ಹಂಸನವಗ್ರಹಿಸಿತ್ತೆಂಬುದೀಗ, ಜೆಕ್ಕಿನ ತಲೆಯ ಗಿಣಿ ತಿಂದು ಎಂಬ ಶಬ್ದಕ್ಕರ್ಥ. ಅಂತು ಸುಜ್ಞಾನದ ಪರಮಹಂಸ ನವಗ್ರಹಿಸಿದಲ್ಲಿ ಜಡರೂಪವಾದ ಜೀವನ ಜೀವಭಾವವಳಿದು ಸತ್ಪ್ರಣವ ಸ್ವರೂಪವ ನೆಯ್ದಿತ್ತೆಂಬುದೀಗ, ಕತ್ತೆ ಕುದುರೆಯ ರೂಪಾಯಿತ್ತೆಂಬ ಶಬ್ದಕ್ಕರ್ಥ. ಅಂತು ಜೀವನಳಿದು ಸತ್ಪ್ರಣವ ಸ್ವರೂಪವನೆಯ್ದಲು ಆ ಜ್ಞಾನ ಕಲಾತ್ಮನು ಶ್ರೀಗುರು ಕಾರುಣ್ಯದಿಂ ಪರಶಿವ ಸಮುದ್ರವ ನವಗ್ರಹಿಸಿತ್ತೆಂಬುದೀಗ, ಮತ್ಸ್ಯ ಸಮುದ್ರವ ಕುಡಿದು ಎಂಬ ಶಬ್ದಕ್ಕರ್ಥ. ಆ ಪರಶಿವ ಸಮುದ್ರವನವಗ್ರಹಿಸಿದ ಜ್ಞಾನ ಕಲಾತ್ಮನು ಸ್ಥೂಲತನು ಮೊದಲಾದ ಅಂಗತ್ರಯಂಗಳಲ್ಲಿ ವೇದಿಸಿರ್ಪ ಸಂಸಾರ ವಿಷಯ ರಸೋದಕವ ಮುಟ್ಟನು ಎಂಬುದೀಗ, ಕೆರೆಯ ತಪ್ಪಲ ನೀರಿಗಾರದೆ ಎಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ರಸೋದಕವ ನಿವೃತ್ತಿಮಾಡಿದ ಚಿದಾತ್ಮನು ಪರಬ್ರಹ್ಮದಲ್ಲಿ ನಿಷ್ಪತಿಯಾದನೆಂಬುದೀಗ, ಸತ್ತಿತ್ತು ಎಂಬ ಶಬ್ದಕ್ಕರ್ಥ. ಅಂತು ಅಂಗದಲ್ಲಿ ನಿಷ್ಪತಿಯಾದ ಚಿದಾತ್ಮನು ಸಂಸಾರ ವಿಷಯ ರಸವ ಹೊದ್ದನೆಂಬುದೀಗ, ನೀರಕ್ಕದೆ ಎಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ರಸವರತ ಸುಜ್ಞಾನಿ ಶರಣನು ಪರವಸ್ತುವಿನಲ್ಲಿ ಕೂಡಿ ನಿರ್ದಯಲಾದನೆಂಬುದೀಗ, ಈ ಬಚ್ಚ ಬಯಲ ಇನ್ನಾರಿಗೆ ಹೇಳುವೆ, ಗೂಡಿನೊಡೆಯ ಗುಮ್ಮಟನಾಥ ಆಗಮೇಶ್ವರಲಿಂಗ ಎಂಬ ಶಬ್ದಕ್ಕರ್ಥ.

೩

ಕಲ್ಲು ಕವಣೆಯ ನುಂಗಿ, ಇಡುವಾತನ ಹಣೆಯ ತಾಗಿತ್ತು
ಹಣೆ ಹಗಿತ್ತು, ಮೂವರ ಸೇನೆಯಾಯಿತ್ತು
ಆ ಸೇನೆಯಲ್ಲಿ ಆರು ಮಂದಿ ಹುಟ್ಟಿ

ಮೂವರ ಕೊಂದು ಮೂವರು ಅಲುತ್ತೈದಾರೆ
ಅಲುಮೆಗೆ ಹೊರಗಾದ, ಅನಾಥಮಯ ಅನುಪಮ
ಎನ್ನ ಗೂಡಿನೊಡೆಯ ಗುಮ್ಮಟನಾಥ ಆಗಮೇಶ್ವರ ಲಿಂಗ.

**ಟೀಕು:**— ಸಚ್ಚಿದಾನಂದಂಗಳಿಂ ಘಟ್ಟಿಯಾಗಿರ್ಪ ಚಿಘನ ಲಿಂಗವೆಂಬುದೀಗ, ಕಲ್ಲು ಎಂಬ ಶಬ್ದಕ್ಕರ್ಥ. ಸುಜ್ಞಾನೋದಯವಾಗಿ ಭಕ್ತಿಯಿಂದುಪಾವಸ್ಥೆಯ ಮಾಡುತ್ತಿರ್ದ ಶಿಷ್ಯನ ಶಿವಶರಣೆಂಬ ಕವಣೆಯನು ಆ ಚಿಘನಲಿಂಗ ಒಳಕೊಂಡಿರುತ್ತಿಹುದೆಂಬುದೀಗ, ಕಲ್ಲು ಕವಣೆಯ ನುಂಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಶಿವಾದ್ವೈತ ಭಕ್ತಿಯನೊಳಕೊಂಡಿರ್ಪ ಮಹಾಘನಲಿಂಗವನು ಮೋಕ್ಷಾಪೇಕ್ಷರುಗಳಾದ ಶಿಷ್ಯಾದಿಗಳಿಗೆ ಸಾಹಿತ್ಯವ ಮಾಡುವಾತ ಶ್ರೀಗುರುವೆಂಬುದೀಗ, ಇಡುವಾತನು ಎಂಬ ಶಬ್ದಕ್ಕರ್ಥ. ಆ ಪರಶಿವ ತತ್ವವು ಶ್ರೀಗುರುವಿನ ಮಹಾಜ್ಞಾನದಲ್ಲಿ ಸಂಬಂಧವಾಯಿತ್ತೆಂಬುದೀಗ, ಹಣೆ ತಾಗಿತ್ತು ಎಂಬ ಶಬ್ದಕ್ಕರ್ಥ. ಆ ಗುರುತತ್ವದಲ್ಲಿರ್ಪ ಮಹಾಜ್ಞಾನವೆ ಭಕ್ತಿರಸಮಯದಿಂದೊಸರಿ ದೀಕ್ಷತ್ರಯ ಸ್ವರೂಪವನೆಯ್ದಿತ್ತೆಂಬುದೀಗ, ಹಣೆ ಹಗಿತ್ತು ಮೂವರ ಸೇನೆಯಾಯಿತ್ತೆಂಬ ಶಬ್ದಕ್ಕರ್ಥ. ಆ ದೀಕ್ಷತ್ರಯಂಗಳಿಂ ಶಿಷ್ಯನ ತನುತ್ರಯಂಗಳಲ್ಲಿ ಸಂಬಂಧವಾದ ತ್ರಿವಿಧ ಲಿಂಗವೆ ಷಡ್ವಿಧ ಲಿಂಗ ಸ್ವರೂಪವನೆಯ್ದಿದನೆಂಬುದೀಗ, ಆ ಸೇನೆಯಲ್ಲಿ ಆರು ಮಂದಿ ಹುಟ್ಟಿ ಎಂಬ ಶಬ್ದಕ್ಕರ್ಥ. ಮಾರ್ಗಕ್ರಿಯಾ ಸ್ವರೂಪವಾದ ತ್ರಿವಿಧ ಲಿಂಗಂಗಳನು ಮೀರಿದ ಕ್ರಿಯಾಸ್ವರೂಪವಾದ ತ್ರಿವಿಧ ಲಿಂಗಂಗಳವಗ್ರಹಿಸಿ ಸೋಹಂ-ಸೋಹಂ ಮೆನುತ್ತಿರ್ದವೆಂಬುದೀಗ, ಮೂವರ ಕೊಂದು ಮೂವರು ಅಲುತ್ತೈದಾರೆ ಎಂಬ ಶಬ್ದಕ್ಕರ್ಥ. ಆ ಚಿದೋಹಮೆಂಬ ಚಿದಹಂಕಾರವ ಹೊದ್ದದೆ ಲಿಂಗ ಶರಣನು ನಿಶ್ಶಬ್ದ ಬ್ರಹ್ಮವಾಗಿರ್ದನೆಂಬುದೀಗ, ಅಲುಮೆಗೆಹೊರಗಾದ ಅನಾಥಮಯ, ಅನುಪಮ ಎನ್ನಗೂಡಿನೊಡೆಯ ಗುಮ್ಮಟನಾಥ ಆಗಮೇಶ್ವರ ಲಿಂಗವೆಂಬ ಶಬ್ದಕ್ಕರ್ಥ.

೪

ಆಡು ಹಲ್ಲ ತಿಂಬಲ್ಲಿ ಕೊಡಗ ನೋಡಿ ಬಾಲವ ತಿಂದಿತ್ತು
ಕೊಡಗದ ದಾಡಿಯಾಡುವಾಗ ಬಳ್ಳು ಮಾತಾಡಿದುದಿಲ್ಲ.
ಗೊಲ್ಲನ ಬಿಲ್ಲು ಕೊಪ್ಪ ಕಂಡು ಆ ಬಳ್ಳು ನನಗಿಲ್ಲಾ ಎಂದು,
ಎಲ್ಲಿ ಅಡಗಿತ್ತೆಂದರಿಯೆ; ಅದರಡಿ ಒಜ್ಜೆಯ ತೋರು
ಗೂಡಿನೊಡೆಯ ಗುಮ್ಮಟನಾಥ ಆಗಮೇಶ್ವರ ಲಿಂಗವೆ.

**ಟೀಕು:**— ರಜೋಗುಣ ಸಂಬಂಧವಾದ ದೇಹದಲ್ಲಿರ್ಪ ಜೀವನೆಂಬುದೀಗ, ಆಡು ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನು ಕರಣ ಮಥನ ದಂತಂಗಳಿಂ ಸಕಲ ವಿಷಯಂಗಳ ನಗಿದಗಿದು ಭಕ್ಷಿಸುತ್ತಿಹುದೆಂಬುದೀಗ, ಹಲ್ಲತಿಂಬಲ್ಲಿ ಎಂಬ ಶಬ್ದಕ್ಕರ್ಥ. ಅಂತು ಜೀವನು ಕರಣ ಮಥನ ದಂತಂಗಳಿಂ ಸಕಲ ವಿಷಯಂಗಳನು ಭಕ್ಷಿಸುವಲ್ಲಿ ಮನೋಮರ್ಕಟನು ಭವ ಪಾಶವ ನವಗ್ರಹಿಸಿತ್ತೆಂಬುದೀಗ,

ಕೊಡಗನೋಡಿ ಬಾಲವ ತಿಂದಿತ್ತೆಂಬ ಶಬ್ದಕ್ಕರ್ಥ. ಅಂತು ಭವಪಾಶದಲ್ಲಿ ಸಿಲ್ಕಿರ್ದ ಮನಸ್ಸು ಸಂಕಲ್ಪ-ವಿಕಲ್ಪವೆಂಬ ದಂತಂಗಳಿಂ ಸಂಚರಿಸುವಲ್ಲಿ ಎಂಬುದೀಗ, ಕೊಡಗದ ದಾಡೆಯಾಡುವಾಗ ಎಂಬ ಶಬ್ದಕ್ಕರ್ಥ. ಅಂತು ಮನೋ ಪ್ರಕೃತಿಯಲ್ಲಿ ಕೂಡಿರ್ದ ಜೀವಾತ್ಮನ ಅಂತರ್ಗತವಾಗಿರ್ದ ಸತ್ತ್ರಣವು ಸೋಹಂ ಎಂದು ಧ್ವನಿಗೈಯದೆ ನಿಶ್ಶಬ್ದವಾಗಿಹುದೆಂಬುದೀಗ, ಬಳ್ಳು ಮಾತಾಡಿದುದಿಲ್ಲವೆಂಬ ಶಬ್ದಕ್ಕರ್ಥ. ಆ ಸತ್ತ್ರಣವ ನವಗ್ರಹಿಸಬೇಕೆಂದು ಸದ್ಭಾವವೆಂಬ ಬಿಲ್ಲಿಗೆ, ಸುಮನವೆಂಬ ನಾರಿಯ ಹೂಡಿ, ಸುಜ್ಞಾನವೆಂಬ ಸರಳ ತೊಟ್ಟು ಲಕ್ಷಿಸುತ್ತಿರಲು ಆ ಅದ್ವೈತ ಜ್ಞಾನಕ್ಕೆ ಸಾಧ್ಯವಲ್ಲದೆ ಆ ಸತ್ತ್ರಣವು ವಿಲಕ್ಷಣವಾಗಿ ಹೋಯಿತ್ತೆಂಬುದೀಗ, ಗೊಲ್ಲನ ಬಿಲ್ಲು ಕೊಪ್ಪಕಂಡು ಆ ಬಳ್ಳು ನನಗಿಲ್ಲಾ ಎಂದು ಎಂಬ ಶಬ್ದಕ್ಕರ್ಥ. ಅಂತು ಅದ್ವೈತ ಜ್ಞಾನಕ್ಕೆ ಸಾಧ್ಯವಲ್ಲದೆ ವಿಲಕ್ಷಣವಾಗಿರ್ದ ಸತ್ತ್ರಣವನೆ ಸುಜ್ಞಾನೋದಯವಾದ ಶರಣನು ಕೂಡಬೇಕೆಂದು ಭಕ್ತಿಯಿಂದುಪಾವಸ್ಥೆಯ ಮಾಡಲು ಶ್ರೀಗುರು ಕರುಣಿಸಿ ಆ ಸತ್ತ್ರಣವ ಲಿಂಗವ ಅಂಗದಲ್ಲಿ ಸಾಹಿತ್ಯವ ಮಾಡಿ ಅಭಿನ್ನ ಕ್ರಿಯಾಚಾರದ ನಿರ್ಧರವ ಕೃಪೆ ಮಾಡೆಂದು ಶಿಷ್ಯ ಬೆಸಗೊಳ್ಳುತ್ತಿರ್ದನೆಂಬುದೀಗ, ಎಲ್ಲಿ ಅಡಗಿತ್ತೆಂದರಿಯೆ ಅದರಡಿ ಒಜ್ಜೆಯ ತೋರು ಗೂಡಿನೊಡೆಯ ಗುಮ್ಮಟನಾಥ ಆಗಮೇಶ್ವರ ಲಿಂಗವೆ ಎಂಬ ಶಬ್ದಕ್ಕರ್ಥ .§

೫೫

ಹಾವಿನ ಹಲ್ಲಿನ ವಿಷದ ಕೊಳಪೆಯ ಮೂಲೆಯಲ್ಲಿ
ಮೂರು ಕಪ್ಪೆಗಳು ಹುಟ್ಟಿದವು.
ಒಂದಕ್ಕೆ ಕಾಲಿಲ್ಲ, ಒಂದಕ್ಕೆ ಬಾಯಿಲ್ಲ, ಒಂದಕ್ಕೆ ಕಣ್ಣಿಲ್ಲ
ಕಾಲಿಲ್ಲದ ಕಪ್ಪೆ ಮೂರು ಲೋಕವ ಸುತ್ತಿತ್ತು
ಬಾಯಿಲ್ಲದ ಕಪ್ಪೆ ಬ್ರಹ್ಮಾಂಡವ ನುಂಗಿತ್ತು
ಕಣ್ಣಿಲ್ಲದ ಕಪ್ಪೆ ಕಂಗಾಣದವರ ಕಂಡಿತ್ತು
ಈ ಕಂಡ ಮಂಡಲದ ಅಂಗವ ಬಿಡಿಸು
ಗೂಡಿನೊಡೆಯ ಗುಮ್ಮಟನಾಥ ಆಗಮೇಶ್ವರ ಲಿಂಗವೆ

**ಟೀಕು:**— ಶಂಕಾರೂಪವಾದ ಮನಸ್ಸೆಂಬುದೀಗ, ಹಾವು ಎಂಬ ಶಬ್ದಕ್ಕರ್ಥ. ಆ ಮನಸ್ಸಿಂಗೆ ಸಂಕಲ್ಪ ವಿಕಲ್ಪಂಗಳೆ ದಂತಂಗಳಾಗಿರುತ್ತಿಹವೆಂಬುದೀಗ, ಹಲ್ಲಿನ ಎಂಬ ಶಬ್ದಕ್ಕರ್ಥ. ಅಲ್ಲಿ ಪಂಚ ವಿಷಯಂಗಳಿರುತ್ತಿಹವೆಂಬುದೀಗ, ವಿಷದ ಎಂಬ ಶಬ್ದಕ್ಕರ್ಥ. ಆ ವಿಷಯಂಗಳನವಗ್ರಹಿಸುವದಕ್ಕೆ ಪಂಚೇಂದ್ರಿಯಂಗಳೇ ದ್ವಾರವಾಗಿರುತ್ತಿಹವೆಂಬುದೀಗ, ಕೊಳಪೆಯ ಎಂಬ ಶಬ್ದಕ್ಕರ್ಥ. ಆ ಇಂದ್ರಿಯಂಗಳು ಸಂಬಂಧವಾದ ಕಾರಣ ದೇಹದಲ್ಲಿ ಎಂಬುದೀಗ, ಮೂಲೆ

§ ಕೈ ಬರಹ ಪ್ರತಿಯೊಳಗೆ ಈ ವಚನದ ಪ್ರಾರಂಭದಲ್ಲಿ "ಈ ವಚನ ಉದ್ದೇಶ ಲಕ್ಷಣ ಪರೀಕ್ಷೆ ಮೂರು ತೆರನು" ಎಂದು ಹೇಳಲಾಗಿದೆ. —ಸಂ.

ಯಲ್ಲಿ ಎಂಬ ಶಬ್ದಕ್ಕರ್ಥ. ಆ ಪಂಚೇಂದ್ರಿಯಂಗಳ ವ್ಯವಹಾರದಲ್ಲಿ ಕೂಡಿರ್ದ ಜೀವನಿಂ ಜೀವತ್ರಯಂಗಳು ಉದಯಿಸಿದವೆಂಬುದೀಗ, ಮೂರು ಕಪ್ಪೆ ಹುಟ್ಟಿದವು ಎಂಬ ಶಬ್ದಕ್ಕರ್ಥ. ವಿಶ್ವಂಗೆ ಅಭಿನ್ನ ಕ್ರಿಯಾಚಾರವೆಂಬ ಚರಣವಿಲ್ಲದೆ ಇರುತ್ತಿಹನೆಂಬುದೀಗ, ಒಂದಕ್ಕೆ ಕಾಲಿಲ್ಲವೆಂಬ ಶಬ್ದಕ್ಕರ್ಥ. ತೈಜಸನಿಗೆ ಶಿವಾಪೇಕ್ಷೆ ಇಲ್ಲವೆಂಬುದೀಗ, ಒಂದಕ್ಕೆ ಬಾಯಿಲ್ಲವೆಂಬ ಶಬ್ದಕ್ಕರ್ಥ. ಪ್ರಾಜ್ಞನಿಗೆ ಶಿವಜ್ಞಾನ ಪ್ರಕಾಶವಿಲ್ಲವೆಂಬುದೀಗ, ಒಂದಕ್ಕೆ ಕಣ್ಣಿಲ್ಲವೆಂಬ ಶಬ್ದಕ್ಕರ್ಥ. ಆ ಭಿನ್ನಕ್ರಿಯಾಚಾರವಿಲ್ಲದಿರ್ದ ವಿಶ್ವನು ತನುತ್ರಯಂಗಳ ವ್ಯವಹಾರದಲ್ಲಿ ಪ್ರವರ್ತಿಸುತ್ತಿಹನೆಂಬುದೀಗ ಕಾಲಿಲ್ಲದ ಕಪ್ಪೆ ಮೂರು ಲೋಕವ ಸುತ್ತಿತ್ತೆಂಬ ಶಬ್ದಕ್ಕರ್ಥ. ಆ ಶಿವಾಪೇಕ್ಷೆ ಇಲ್ಲದ ತೈಜಸನು ಪ್ರಪಂಚು ಬ್ರಹ್ಮಾಂಡವ ಸವಗ್ರಹಿಸಿತ್ತೆಂಬುದೀಗ, ಬಾಯಿಲ್ಲದ ಕಪ್ಪೆ ಬ್ರಹ್ಮಾಂಡವ ನುಂಗಿತ್ತು ಎಂಬ ಶಬ್ದಕ್ಕರ್ಥ. ಆ ಶಿವಜ್ಞಾನ ಪ್ರಕಾಶವ ನಾಸ್ತಿಯಾಗಿರ್ದ ಪ್ರಾಜ್ಞನು ಸುಜ್ಞಾನ ದೃಷ್ಟಿ ನಷ್ಟವಾಗಿ ಸರ್ವ ಸಕಲ ಕರಣಂಗಳ ವ್ಯವಹಾರದಲ್ಲಿ ಕೂಡಿತ್ತೆಂಬುದೀಗ, ಕಣ್ಣಿಲ್ಲದ ಕಪ್ಪೆ ಕಂಗಾಣದವರ ಕಂಡಿತ್ತು ಎಂಬ ಶಬ್ದಕ್ಕರ್ಥ. ಇಂತಪ್ಪ ಖಂಡಿತ ಜ್ಞಾನ ಸಂಬಂಧವಾದ ತನು, ಭಾವವನು ನಿವೃತ್ತಿಯ ಮಾಡಿ ಸರ್ವಾಂಗ ಲಿಂಗ ಸಂಬಂಧವಹ ಭೇದವ ಕೃಪೆ ಮಾಡೆಂದು ಶ್ರೀಗುರುವಿಂಗೆ ಬಿನ್ನೈಸುತ್ತಿರ್ದನೆಂಬುದೀಗ, ಈ ಕಂಡ ಮಂಡಲದ ಅಂಗವ ಬಿಡಿಸು ಗೂಡಿನೊಡೆಯ ಗುಮ್ಮಟನಾಥ ಅಗಮ್ಯೇಶ್ವರಲಿಂಗವೆಂಬ ಶಬ್ದಕ್ಕರ್ಥ.

೬

ಗುಂಡಿಯ ಹಳ್ಳವ ತುಳುಕಲಾಗಿ ಇಳಿಯಿತ್ತು
ಮತ್ತೆ ಮತ್ಸ್ಯ ಖಂಡಿನ ತಂಡಕಾಗಿ ಕಂಡ ಮೆಲುವವರ ಬಾಯಲ್ಲಿ
ಮೂರು ಹೆಂಡವ ಕೂಡಿ ಭಂಡಾದರು, ಮಲತ್ರಯದ ಅಂಗದಲ್ಲಿ ಸಿಕ್ಕಿ
ಘನ ಲಿಂಗವ ನರಿಯದೆ ಆತ್ಮನ ಅಂಗದ ಲಿಂಗದ ಸಂಗವ ತೋರು
ಗೂಡಿನೊಡೆಯ ಗುಮ್ಮಟನಾಥ ಅಗಮ್ಯೇಶ್ವರ ಲಿಂಗ

**ಟೀಕು:**— ಸಂಸಾರ ವಿಷಯ ರಸೋದಕವ ತುಂಬಿಕೊಂಡಿರ್ದ ತನುವೆಬುದೀಗ, ಗುಂಡಿಯ ಹಳ್ಳವ ಎಂಬ ಶಬ್ದಕ್ಕರ್ಥ. ಆ ವಿಷಯ ರಸೋದಕವ ತುಂಬಿರ್ದ ದೇಹಭಾವವನು ಭಿನ್ನ ಯೋಗಾಭ್ಯಾಸದಿಂ ನಿವೃತ್ತಿಮಾಡಿ ಪರವಸ್ತುವ ಸಾಧಿಸಬೇಕೆನುತ್ತಿರಲು ಅಲ್ಲಿ ಪರವಸ್ತು ಸಾಧ್ಯವಾಗದೆ ಆ ಜೀವನು ಸಂಸಾರ ಪಂಕದಲ್ಲಿ ಮಗ್ನವಾದನೆಂಬುದೀಗ, ತುಳುಕಲಾಗಿ ಇಳಿಯಿತ್ತು ಮತ್ಸ್ಯ ಖಂಡಿನ ತಂಡಕಾಗಿ ಎಂಬ ಶಬ್ದಕ್ಕರ್ಥ. ಆ ಸಂಸಾರ ಪಂಕದಲ್ಲಿ ಸಿಲ್ಕಿರ್ದ ಭಿನ್ನ ಜ್ಞಾನಿಗಳು ಭಿನ್ನ ಯೋಗಾಭ್ಯಾಸದಿಂ ಖಂಡಿತ ಫಲಪದಂಗಳ ಪಡೆದು ಭೋಗಿಸುತ್ತಿಹರೆಂಬುದೀಗ, ಕಂಡವ ಮೆಲುವವರ ಎಂಬ ಶಬ್ದಕ್ಕರ್ಥ. ಅಂತು ಖಂಡಿತ ಫಲ

ಷಡಂಗಳ ಷಡಮ ಭೋಗಿಸಿ ಭಿನ್ನಾಪೇಕ್ಷೆಯ ಮುಂದುಗೊಂಡಿರ್ಪ ಜೀವರು ಮಲತ್ರಯದಲ್ಲಿ ಸಿಲ್ಕಿ ಕಾಲ-ಕಾಮರಿಂ ಬಡವಡಿಸಿಕೊಂಡು ಭಂಗಿತರಾದರೆಂಬುದೀಗ, ಬಾಯಲ್ಲಿ ಮೂರು ಹೆಂಡವ ಕೂಡಿ ಭಂಡಾದರು ಮಲತ್ರಯದ ಅಂಗದಲ್ಲಿ ಸಿಕ್ಕಿ ಎಂಬ ಶಬ್ದಕ್ಕರ್ಥ. ಆ ತನುತ್ರಯದಲ್ಲಿ ಸಿಲ್ಕಿರ್ಪ ಭಿನ್ನ ಜ್ಞಾನಿಗಳು ತಮ್ಮ ನಿಜವಪ್ಪ ಪರಬ್ರಹ್ಮವನರಿಯದೆ ಹೋದರೆಂಬುದೀಗ, ಘನಲಿಂಗವನರಿಯದೆ ಎಂಬ ಶಬ್ದಕ್ಕರ್ಥ. ಸುಜ್ಞಾನೋದಯವಾದ ಶರಣನು ದೇಹ-ಪ್ರಾಣೇಂದ್ರಿಯಂಗಳಲ್ಲಿ ಲಿಂಗ ಸಂಬಂಧವ ಮಾಡಿ ರಕ್ಷಿಸೆಂದು ಶ್ರೀ ಗುರುವಿಂಗೆ ಬಿನ್ನೈಸುತ್ತಿರ್ದನೆಂಬುದೀಗ, ಆತ್ಮನ ಅಂಗದ ಲಿಂಗದ ಸಂಗವ ತೋರು, ಗೂಡಿನೊಡೆಯ ಗುಮ್ಮಟನಾಥ ಆಗಮೇಶ್ವರಲಿಂಗವೆಂಬ ಶಬ್ದಕ್ಕರ್ಥ.

೭

ಫಣಿಯ ಹೆಡೆಯ ಮೇಲೊಂದು ಮಣಿ ಮಾಡದ ಮಂಟಪ
ಒಬ್ಬರಿಗಲ್ಲದೆ ಇಬ್ಬರಿಗಿಂಬಿಲ್ಲ, ಗಂಡಹೆಂಡರಿಬ್ಬರಿಹ ತೆರನಾವುದು,
ತೆರಪಿಲ್ಲದುದ ಕಂಡು ಗಂಡನ ಮಂಡಿಯ ಮೇಲೆ
ಹೆಂಡತಿ ಅಡಗಿರಲಾಗಿ
ಬಂದಬಂದವರೆಲ್ಲರು ಅವಳ ಕಂಡು ಮನಸೋತು ಗಂಡನಕೊಂದು
ಅವಳ ಕೊಂಡು ಹೋಹಾಗ ಹುದುಗು ಹಿಂಗದೆ
ಇವರಿಬ್ಬರು ಕೊಂಡಾಡಿ ಸತ್ತರು ಇದರಂಗವಾರಿಗೂ ಚೋದ್ಯ
ಎನ್ನ ಗೂಡಿನೊಡೆಯ ಗುಮ್ಮಟನಾಥ ಆಗಮೇಶ್ವರ ಲಿಂಗ.

**ಟೀಕು:—** ಶುದ್ಧ ವಿದ್ಯಾ ಸ್ವರೂಪವಾದ ಊರ್ಧ್ವ ಕುಂಡಲಿಯ ಸರ್ಪನ ಸುಜ್ಞಾನವೆಂಬ ಶಿರಸ್ಸಿನ ಮೇಲೆ ಎಂಬುದೀಗ, ಫಣಿಯ ಹೆಡೆಯ ಮೇಲೆ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಪ್ರಕಾಶದಗ್ರದಲ್ಲಿ ಚಿದಾಲಯ ಸ್ವರೂಪವಾದ ಹೃದಯ ಕಮಲವೆಂಬುದೀಗ, ಒಂದು ಮಣಿ ಮಾಡಿದ ಮಂಟಪವೆಂಬ ಶಬ್ದಕ್ಕರ್ಥ. ಆ ಹೃತ್ಕಮಲ ಕರ್ಣಿಕಾವಾಸವು ಚಿತ್ ಸ್ವರೂಪವಾದ ಪ್ರಾಣಲಿಂಗವಿರುವಡಕ್ಕಾಶ್ರಯವಾಗಿಹುದಲ್ಲದೆ ಶರಣಲಿಂಗವೆಂದೆರಡಿಟ್ಟಾಚರಿಸುವವರಿಗೆ ಅಸಾಧ್ಯವಾಗಿಹುದೆಂಬುದೀಗ, ಒಬ್ಬರಿಗಲ್ಲದೆ ಇಬ್ಬರಿಗಿಂಬಿಲ್ಲವೆಂಬ ಶಬ್ದಕ್ಕರ್ಥ. ಅಂತು ಶರಣಲಿಂಗವೆಂಬುಭಯವಳಿದು ಮಹಾಘನಲಿಂಗದಲ್ಲಿ ಸಮರಸವಹ ಭೇದವನಿವೇಕಿಸುತ್ತಿರ್ದನೆಂಬುದೀಗ, ಗಂಡ—ಹೆಂಡರಿಬ್ಬರಿಹ ತೆರನಾವುದು ಎಂಬ ಶಬ್ದಕ್ಕರ್ಥ. ಅಂತು ಶರಣಲಿಂಗವೆರಡಕ್ಕೆ ಭಿನ್ನವಿಲ್ಲದಿರ್ಪ ಭೇದವ ಸುಜ್ಞಾನ ದೃಷ್ಟಿಯಿಂ ಕಂಡು ಚಿತ್ ಪ್ರಕಾಶ ಸ್ವರೂಪವಾದ ಪ್ರಾಣಲಿಂಗದ ಪರಿಪೂರ್ಣ ಜ್ಞಾನವೆಂಬ ಶಿರಶ್ಸಿನ ಮೇಲೆ ಆ ಚಿತ್ ಸ್ವರೂಪನಾದ ಸತಿ ಸಮರಸವಾದಳೆಂಬುದೀಗ, ತೆರಪಿಲ್ಲದುದಕಂಡು ಗಂಡನ ಮಂಡಿಯ ಮೇಲೆ ಹೆಂಡತಿ ಅಡಗಿರಲಾಗಿ ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣ ಸತಿಗೆ ಅಂಗವಾಗಿರ್ಪ ಜ್ಞಾನಶಕ್ತಿಯ ಅದ್ವೈತಜ್ಞಾನಿಗಳು, ಯೋಗ ಮಾರ್ಗಿಗಳು ಕಂಡು ಅಜ್ಞಾನ ಶಕ್ತಿಯ ನವಗ್ರಹಿಸಬೇಕೆನುತ್ತಿಪರೆಂಬು

ದೀಗ, ಬಂದ-ಬಂದವರೆಲ್ಲರು ಅವಳ ಕಂಡು ಮನಸೋತು ಎಂಬ ಶಬ್ದಕ್ಕರ್ಥ. ಆ ಭಿನ್ನಜ್ಞಾನಿಗಳು ಚಿತ್ರಕಾಶವಾದ ಪ್ರಾಣಲಿಂಗವ ನಷ್ಟವ ಮಾಡಿ ಆ ಜ್ಞಾನ ಶಕ್ತಿಯ ನವಗ್ರಹಿಸಿಕೊಂಡು ಹೋಗುತ್ತಿರಲು ಎಂಬುದೀಗ, ಗಂಡನ ಕೊಂದು ಅವಳ ಕೊಂಡು ಹೋಹಾಗ ಎಂಬ ಶಬ್ದಕ್ಕರ್ಥ. ಆ ಅದ್ವೈತಿಯು, ಯೋಗ ಮಾರ್ಗಿಯು ಇಬ್ಬರು ಆ ಜ್ಞಾನ ಶಕ್ತಿಯ ಗ್ರಹಿಸಬೇಕೆನುತ್ತಿಹರೆಂಬುದೀಗ, ಮದುಗು ಹಿಂಗದೆ ಎಂಬ ಶಬ್ದಕ್ಕರ್ಥ. ಆ ಜ್ಞಾನ ಶಕ್ತಿ ಸಾಧ್ಯವಾಗದೆ ಇಬ್ಬರು ಕರಣ-ಕರ್ಕಶದಿಂ ಲಯವಾಗಿ ಹೋದರೆಂಬುದೀಗ, ಇವರಿಬ್ಬರು ಕೊಂಡಾಡಿ ಸತ್ತರು ಇವರಂಗವಾರಿಗೂ ಚೋದ್ಯ, ಎನ್ನ ಗೂಡಿನೊಡೆಯ ಗುಮ್ಮಟನಾಥ ಅಗಮೇಶ್ವರ ಲಿಂಗ ಎಂಬ ಶಬ್ದಕ್ಕರ್ಥ.

೮

ಕಲ್ಲು ಹೆಂಟೆ ಹೋರಾಡಿ ಕಲ್ಲು ಕರಗಿ ಹೆಂಟೆ ಉಳಿಯಿತ್ತು
ಅಳಿದ ಕಲ್ಲಿಗೆ ಹೆಂಟೆ ಹಿಂಡೆಯ ಕೂಳನಟ್ಟು ಉಂಬವರಿಲ್ಲದೆ
ಅಳುತ್ತಿದ್ದಿತ್ತು
ಎನ್ನ ಗೂಡಿನೊಡೆಯ ಗುಮ್ಮಟನಾಥ
ಅಗಮೇಶ್ವರಲಿಂಗ ಸತ್ತು ಕಾಣಲರಿಯದೆ

ಟೀಕು:— § ಕಲ್ಲೆಂದೊಡೆ ಅಹಂಕಾರ, ಹೆಂಟೆಯೆಂದೊಡೆ ಶಿವಾದ್ವೈತ ಭಕ್ತಿ. ಅಂತಪ್ಪ ಶಿವಾದ್ವೈತಭಕ್ತಿಯ ಮಥನದಿಂದ ಹಂಕಾರವಳಿದು ಶಿವಾದ್ವೈತ ಭಕ್ತಿಸಿಧ್ಧರವಾಯಿತ್ತೆಂಬುದೀಗ, ಹೋರಾಡಿ ‡ ಕಲ್ಲು ಕರಗಿ ಹೆಂಟೆ ಉಳಿಯಿತ್ತೆಂಬ ಶಬ್ದಕ್ಕರ್ಥ. ಅಂತು ಶಿವಾದ್ವೈತ ಭಕ್ತಿ ಸಿಧ್ಧರವಾದಲ್ಲಿ ಚಿದಹಂಕಾರ ಸ್ವರೂಪವಾದ ಚಿದ್ಘನಲಿಂಗಕ್ಕೆ ಆ ಸದ್ಭಕ್ತಿಯೇ ಅಂಗವಾಗಿರ್ದ ಶರಣನು ಸಕಲ ವಿಷಯ ಪದಾರ್ಥಂಗಳ ಜ್ಞಾನಾಗ್ನಿಯಲ್ಲಿ ಸಮರಸ ಪಾಕವಮಾಡಿದ ನೆಂಬುದೀಗ, ಅಳಿದ ಕಲ್ಲಿಗೆ ಹೆಂಟೆ ಹಿಂಡೆಯ ಕೂಳನಟ್ಟು ಎಂಬ ಶಬ್ದಕ್ಕರ್ಥ. ಅಂತು ಜ್ಞಾನಾಗ್ನಿಯಲ್ಲಿ ಸಮರಸ ಪಾಕವಾದ ಸಕಲಪ್ರಸ್ಥ ಪದಾರ್ಥಂಗಳನು ತಾನರಿದರ್ಪಿಸಿಹೆನೆಂಬದಕ್ಕೆ ತೆರಪಿಲ್ಲದೆ ಶಿವೋಹಂ-ಶಿವೋಹಮ್ಮೆನುತಿರ್ದ ನೆಂಬುದೀಗ, ಉಂಬವರಿಲ್ಲದೆ ಅಳುತ್ತಿದ್ದಿತ್ತೆಂಬ ಶಬ್ದಕ್ಕರ್ಥ. ಆ ಶಿವೋಹಂ ಭಾವದಲ್ಲಿರ್ಪ ಶರಣನ ಸರ್ವಾಂಗದಲ್ಲಿ ಲಿಂಗವು ನಿಷ್ಪತಿಯಾಗಲು ಎರಡಿಲ್ಲ, ಪರಬ್ರಹ್ಮವ ನರಿಯಲಿಲ್ಲವೆಂಬುದೀಗ, ಎನ್ನಗೂಡಿನೊಡೆಯ ಗುಮ್ಮಟನಾಥ ಅಗ ಮೇಶ್ವರ ಲಿಂಗಸತ್ತು ಕಾಣಲರಿಯದೆ ಎಂಬ ಶಬ್ದಕ್ಕರ್ಥ.

§ ಇದು ಮೂಲದಲ್ಲಿ ಈ ರೀತಿಯಾಗಿದೆ—

"ಕಲ್ಲೆಂದೊಡೆ ಅಂಹಕಾರವೆಂಬ ಶಬ್ದಕ್ಕರ್ಥ, ಹೆಂಟೆಯೆಂದೊಡೆ ಶಿವಾದ್ವೈತ ಭಕ್ತಿಯೆಂಬ ಶಬ್ದಕ್ಕರ್ಥ."

‡ ಮೂಲದಲ್ಲಿ ಇದು "ಹೋರಿಯಾಡಿ" ಎಂದಿದೆ.

೯

ಹಿಮಾಚಲದ ತಳದಲ್ಲಿ, ಮಹೀತಳದ ಮಧ್ಯದಲ್ಲಿ
ಹುಟ್ಟಿದಳೊಬ್ಬ ರಾಕ್ಷಸಿ
ಮುಂದೆ ಮೂವರು ಮಕ್ಕಳು, ಹಿಂದೆ ಐವರು ಒಡಹುಟ್ಟಿದವರು
ತಂದೆ ಎಡದಲ್ಲಿ, ತಾಯಿ ಬಲದಲ್ಲಿ ಬಂಧುಗಳೆಲ್ಲರು
ಹಿಂದು-ಮುಂದೆ ಸುತ್ತಿ
ರಾಕ್ಷಸಿ ಮುಂದಣ-ಹಿಂದಣ ಸುತ್ತಿಪ್ಪ ಬಂಧುಗಳ
ಒಂದೆ ಬಾರಿ ನುಂಗಿದಳು
ಕೈಗೆ § ಸ್ಪೃಶ್ಯವಳಲ್ಲ, ಮನಕೆ ಸಂಶಯದವಳಲ್ಲ
ಇವಳ ಕೊಂದರೆ ಸಂಹಾರಕ್ಕಿಲ್ಲ, ಇವಳಿದ್ದಡೆ ಭಯಂಕರ
ಈ ಭೀತಿಯ ಬಿಡಿಸು ಎನ್ನ ಗೂಡಿನೊಡೆಯ
ಗುಮ್ಮಟನಾಥ ಅಗಮ್ಯೇಶ್ವರಲಿಂಗ.

ಟೀಕು:— ಮೂಲಹಂಕಾರ ವೆಂಬುದೀಗ, ಹಿಮಾಚಲದ ತಳದಲ್ಲಿ ಎಂಬ ಶಬ್ದಕ್ಕರ್ಥ. ಅಂತು ಮೂಲಹಂಕಾರಯುಕ್ತವಾದ ಪಂಚಭೂತಾಶ್ರಯದ ದೇಹದ ಮಧ್ಯದಲ್ಲಿ ಎಂಬುದೀಗ, ಮಹೀತಳದ ಮಧ್ಯದಲ್ಲಿ ಎಂಬ ಶಬ್ದಕ್ಕರ್ಥ. ಆ ದೇಹದ ಮಧ್ಯದಲ್ಲಿ ಅಜ್ಞಾನ ಸ್ವರೂಪಿಣಿಯಾದ ಮಾಯೆ ಉದಯಿಸಿದಳೆಂಬುದೀಗ, ಹುಟ್ಟಿದಳೊಬ್ಬ ರಾಕ್ಷಸಿ ಎಂಬ ಶಬ್ದಕ್ಕರ್ಥ. ಅಂತು ಮಾಯಾ ಸಂಭೂತವಾದ ಜೀವತ್ರಯಂಗಳೆಂಬುದೀಗ, ಮುಂದೆ ಮೂವರು ಮಕ್ಕಳು ಎಂಬ ಶಬ್ದಕ್ಕರ್ಥ. ಆ ಪಂಚಭೂತಂಗಳೆ ಆ ಮಾಯೆಗೆ ಒಡಹುಟ್ಟಿದವರಾಗಿಹರೆಂಬುದೀಗ, ಹಿಂದೆ ಐವರು ಒಡಹುಟ್ಟಿದವರೆಂಬ ಶಬ್ದಕ್ಕರ್ಥ. ಆ ಮಾಯೆಗೆ ಶಿವಶಕ್ತಿಗಳೆ ತಂದೆ-ತಾಯಿಗಳಾಗಿಹರೆಂಬುದೀಗ, ತಂದೆ ಎಡದಲ್ಲಿ, ತಾಯಿ ಬಲದಲ್ಲಿ ಎಂಬ ಶಬ್ದಕ್ಕರ್ಥ. ಸಕಲ ಕರಣಂಗಳೆಲ್ಲವು ದೇಹಾತ್ಮರುಗಳಲ್ಲಿ ಕೂಡಿ ಪ್ರವರ್ತಿಸುತ್ತಿಹವೆಂಬುದೀಗ, ಬಂಧುಗಳೆಲ್ಲರು ಹಿಂದೆ-ಮುಂದೆ ಸುತ್ತಿ ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆ ದೇಹ-ಪ್ರಾಣಂಗಳಲ್ಲಿ ಕೂಡಿದ ಸಕಲ ಕರಣಂಗಳೆಲ್ಲವ ಭಕ್ಷಿಸುತ್ತಿಹಳೆಂಬುದೀಗ, ರಾಕ್ಷಸಿ ಮುಂದಣ-ಹಿಂದಣ, ಸುತ್ತಿರ್ಪ ಬಂಧುಗಳ ಒಂದೆ ಬಾರಿ ನುಂಗಿದಳೆಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆ ನಿರಾಕಾರವಾದ ಮನೋರೂಪವಾಗಿಹ ಕಾರಣ ಕೈಯಲ್ಲಿ ಹಿಡಿದಿಹೆನೆಂದಡೆ ಸಾಕಾರವಲ್ಲವೆಂಬುದೀಗ, ಕೈಗೆ ಸ್ಪೃಶ್ಯವಳಲ್ಲವೆಂಬ ಶಬ್ದಕ್ಕರ್ಥ. ಅಂತು ಮಾಯೆಯು ಮನೋರೂಪವಾಗಿಹ ಕಾರಣ ಸಂಶಯಮನೋರವೆಂಬುದೀಗ, ಮನಕ್ಕೆ ಸಂಶಯದವಳಲ್ಲವೆಂಬ

§ ಇದು ಮೂಲದಲ್ಲಿ "ಸ್ಪೃಗೆ ಸ್ಪೃಯವಳಲ್ಲ" ಎಂದಿದ್ದು ಮುಂದೆ ಟೀಕೆಯಲ್ಲಿ "ಕೈಗೆ" ಎಂದಿದೆ. ಆದಕ್ಕಾಗಿ ವಚನದಲ್ಲಿಯೂ ಕೈಗೆ ಎಂದೇ ತೆಗೆದುಕೊಂಡಿದೆ.

ಶಬ್ದಕ್ಕರ್ಥ. ಸುಜ್ಞಾನ ಸನ್ನಿಹಿತವಾದ ಶರಣನು ಆ ಮಾಯೆಯ ನಿವೃತ್ತಿಮಾಡಿದೊಡೆ ಜಗತ್‌ಸಂಹಾರಕ್ಕಿಲ್ಲವೆಂಬುದೀಗ, ಇವಳ ಕೊಂದಡೆ ಸಂಹಾರಕ್ಕಿಲ್ಲವೆಂಬ ಶಬ್ದಕ್ಕರ್ಥ. ಆ ಮಾಯೆ ಇದಿರಿಟ್ಟು ತೋರಿದೊಡೆ ಶರಣನ ಮನಕ್ಕೆ ಭಯಂಕರವೆಂಬುದೀಗ, ಇವಳಿದ್ದಡೆ ಎನ್ನ ಮನಕ್ಕೆ ಭಯಂಕರವೆಂಬ ಶಬ್ದಕ್ಕರ್ಥ. ಆ ಮಾಯೆಯ ನಿವೃತ್ತಿಮಾಡಿ, ಚಿಚ್ಛಕ್ತಿ ಸ್ವರೂಪಿನಿಂದಂಗವ ಮಾಡಿಕೊಡೆಂದು ಶ್ರೀಗುರುವಿಂಗೆ ಬಿನ್ನೈಸುತ್ತಿರ್ದ ಶಿಷ್ಯನೆಂಬುದೀಗ, ಈ ಭೀತಿಯ ಬಿಡಿಸು ಎನ್ನ ಗೂಡಿನೊಡೆಯ ಗುಮ್ಮಟನಾಥ ಆಗಮೇಶ್ವರಲಿಂಗ ಎಂಬ ಶಬ್ದಕ್ಕರ್ಥ.

೧೦

ಕಣ್ಣು ಮೂರು, ತಲೆ ಆರು, ಬಾಯಿ ಎಂಟು, ಭಗ ಒಂಭತ್ತು
ಆರ ಬಗೆಗೂ ಅಳವಡದ ಬಾಲೆ, ಬಾಲನರಸಿ ಬಳಲುತ್ತೈದಾಳೆ
ಆ ನಾಳಕ್ಕೊಡೆಯರಿಲ್ಲದೆ ಬಾಲನ ಬಗೆಯಂತಪ್ಪುದು-
ಎನಗೆ ಹೇಳಾ, ಗೂಡಿನೊಡೆಯ ಗುಮ್ಮಟನಾಥ
ಆಗಮೇಶ್ವರ ಲಿಂಗ !

ಟೀಕು:— ಚಿತ್ ಸ್ವರೂಪನಾದ ಶರಣ ಸತಿಗೆ ಜ್ಞಾನ, ಸುಜ್ಞಾನ, ಮಹಾಜ್ಞಾನವೇ ಚಕ್ಷುವಾಗಿಹವೆಂಬುದೀಗ, ಕಣ್ಣು ಮೂರು ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣ ಸತಿಗೆ ಷಡ್ವಿಧ ಭಕ್ತಿಗಳೆ ಸುಜ್ಞಾನ ಶಿರಸ್ಸುಗಳಾಗಿಹವೆಂಬುದೀಗ, ತಲೆ ಆರು ಎಂಬ ಶಬ್ದಕ್ಕರ್ಥ. ಆ ಶರಣಸತಿಗೆ ಅಷ್ಟವಿಧ ಭಕ್ತಿಗಳೇ ಬಾಯಾಗಿಹವೆಂಬುದೀಗ, ಬಾಯಿ ಎಂಟು ಎಂಬ ಶಬ್ದಕ್ಕರ್ಥ. ಅಂತು ಅಷ್ಟವಿಧ ಭಕ್ತಿಯಲ್ಲಿ ತತ್ಪರನಾದ ಶರಣ ಸತಿಗೆ ನವ ವಿಧ ಭಕ್ತಿಗಳೆ ನಿಜ ಸುಷುಪ್ತಿಗಳಾಗಿಹವೆಂಬುದೀಗ, ಭಗ ಒಂಭತ್ತು ಎಂಬ ಶಬ್ದಕ್ಕರ್ಥ. ಅಂತು ನವ ವಿಧ ಭಕ್ತಿಗಳ ಸುಷುಪ್ತಿಗಳಾಗಿರ್ದ ಶರಣ ಸತಿಯ ಶಿವಾದ್ವೈತ ಭಕ್ತಿ ಚರಿತ್ರವು ದ್ವೈತಾದ್ವೈತಗಳು ಮೊದಲಾದ ಭಿನ್ನ ಜ್ಞಾನಿಗಳಿಗಸಾಧ್ಯವೆಂಬುದೀಗ, ಆರ ಬಗೆಗೂ ಅಳವಡದ ಬಾಲೆಯೆಂಬ ಶಬ್ದಕ್ಕರ್ಥ- ಆ ಶಿವಾದ್ವೈತ ಭಕ್ತಿಯೆ ಅಂಗವಾಗಿರ್ದ ಶರಣ ಸತಿಯೂ ತನ್ನಾತ್ಮ ಚೈತನ್ಯಸ್ವರೂಪವಾದ ಮಹಾ ಘನಲಿಂಗದಲ್ಲಿ ಕೂಡಬೇಕೆಂದು ಉಪಾವಸ್ಥೆಯ ಮುಂದುಗೊಂಡಿರ್ದಳೆಂಬುದೀಗ, ಬಾಲನನರಸಿ ಬಳಲುತ್ತೈದಾಳೆಯೆಂಬ ಶಬ್ದಕ್ಕರ್ಥ. ಅಂತುಪಾವಸ್ಥೆಯ ಮುಂದುಗೊಂಡಿರ್ದ ಶರಣ ಸತಿಯ ಉನ್ಮನಿ ಸ್ವರೂಪವಾದ ಮನೋದ್ವಾರಕ್ಕೆ ಮಹಾಘನಲಿಂಗವೆ ಕರ್ತೃವಲ್ಲದೆ ಬೇರಿಲ್ಲವೆಂಬುದೀಗ, ಆ ನಾಳಕ್ಕೊಡೆಯರಿಲ್ಲದೆ ಎಂಬ ಶಬ್ದಕ್ಕರ್ಥ. ಆ ಮನೋಮಧ್ಯದಲ್ಲಿ ಮಹಾಘನಲಿಂಗವು ಸಾಹಿತ್ಯವಾಗದಿರ್ದೊಡೆ ಶರಣಸತಿ-ಲಿಂಗ ಪತಿಭಾವ ಘಟಿಸದೆಂದರಿದ ಶರಣನು ಶ್ರೀಗುರು ಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧಿಯಾಗಿ ಆ ಲಿಂಗವ ಮನದಲ್ಲಿ ಅವಗ್ರಹಿಸಿ ಪ್ರಾಣಲಿಂಗವ ಸಾಹಿತ್ಯವ ಮಾಡಿಕೊಂಡಿಹನೆಂಬುದೀಗ, ಬಾಲನ ಬಗೆಯಂತಪ್ಪುದು ಎನಗೆ ಹೇಳಾ ಗೂಡಿನೊಡೆಯ ಗುಮ್ಮಟನಾಥ ಆಗಮೇಶ್ವರ ಲಿಂಗವೆಂಬ ಶಬ್ದಕ್ಕರ್ಥ.

೧೧

ಬಾಯಲ್ಲಿ ಬಸುರು ಹುಟ್ಟಿ ಕಿವಿ ಬೆಸಲಾಯಿತ್ತು
ಕಣ್ಣಿನಲ್ಲಿ ಮೊಲೆ ಹುಟ್ಟಿ ನಾಶಿಕದಲ್ಲಿ ಹಾಲು ಬಂದಿತ್ತು
ತಲೆ ಹಣೆಯ ಮೇಲೆ ಕುಳಿತು ಕೂಸುಣುತ್ತಿರಲಾಗಿ
ಆಕಾಶದ ಬಿಜ್ಜು ಹೊಯ್ದುತ್ತಿತ್ತು
ಆಶಿಸುವ ನೆತ್ತಿ ಕೊಕ್ಕಿನಲ್ಲಿ ತಿವಿಯಲಾಗಿ ತಪ್ಪದೆ ನುಂಗಿತ್ತು
ಆ ಬಿಜ್ಜು ಹೊಟ್ಟೆಗೆಯ್ದದೆ ಅಪ್ಪಾ, ಅವ್ವಾ ಎನುತ್ತಿದ್ದಿತ್ತು
ಇದು ದೃಷ್ಟ ಸೋಜಿಗ ಗೂಡಿನೊಡೆಯ ಗುಮ್ಮಟನಾಥ
ಆಗಮೇಶ್ವರ ಲಿಂಗ ಅಪ್ರಮಾಣ

ಟೀಕು:— ಸುಜ್ಞಾನೋದಯವಾಗಿ ಶಿವತತ್ವವ ಕೂಡಬೇಕೆಂಬ ಶರಣನ ಶಿವಾಪೇಕ್ಷೆಯಲ್ಲಿ ಚಿದ್ ಗರ್ಭ ತಲೆದೋರಿತ್ತೆಂಬುದೀಗ, ಬಾಯಲ್ಲಿ ಬಸುರು ಹುಟ್ಟಿ ಎಂಬ ಶಬ್ದಕ್ಕರ್ಥ. ಆ ಚಿದ್‌ಗರ್ಭನ ಮಧ್ಯದಲ್ಲಿರ್ಪ ಚಿದ್ ಘನಲಿಂಗವು ಶ್ರೀ ಗುರುವಿನ ಪ್ರಣವ ಪಂಚಾಕ್ಷರಿ ಮಂತ್ರವನೊಳಕೊಂಡು ಶಿಷ್ಯನ ಅನಹತ ಕರ್ಣದ್ವಾರಂಗಳಿಂದುದಯಿಸಿ ಇಷ್ಟ ಲಿಂಗವಾಗಿ ಮೂರ್ತಿಗೊಂಡಿತ್ತೆಂಬುದೀಗ, ಕಿವಿ ಬೆಸಲಾಯಿತ್ತು ಎಂಬ ಶಬ್ದಕ್ಕರ್ಥ. ಆ ಕರಸ್ಥಲದಲ್ಲಿ ಸಾಹಿತ್ಯವಾಗಿರ್ಪ ಇಷ್ಟಲಿಂಗವ ಕಳಾಚೈತನ್ಯವೆ ಶರಣನ ಸುಜ್ಞಾನ ದೃಷ್ಟಿಯಲ್ಲಿ ಅಮೃತಕುಂಭ ಸ್ವರೂಪಿನಿಂ ಪ್ರಾಣಲಿಂಗ ಸಂಬಂಧವಾಯಿತ್ತೆಂಬುದೀಗ, ಕಣ್ಣಿನಲ್ಲಿ ಮೊಲೆಹುಟ್ಟಿ ಎಂಬ ಶಬ್ದಕ್ಕರ್ಥ ಆ ಪ್ರಾಣಲಿಂಗದಲ್ಲಿ ಅರಪು ಸಮರಸವಾದ ಶರಣನ ಸ್ವಾನುಭಾವ ವಿವೇಕದಲ್ಲಿ ಪರಮಾಮೃತ ರಸವೆ ವಸರುತ್ತಿಹುದೆಂಬುದೀಗ, ನಾಸಿಕದಲ್ಲಿ ಹಾಲು ಬಂದಿತ್ತೆಂಬ ಶಬ್ದಕ್ಕರ್ಥ. ಆ ಪರಮಾಮೃತ ರಸವ ಸ್ವೀಕರಿಸಿದ ಶರಣನು ಭಕ್ತಿ ಜ್ಞಾನದಲ್ಲಿ ಸ್ವಸ್ಥರವಾಗಿ ಎಂಬುದೀಗ, ತಲೆ ಹಣೆಯ ಮೇಲೆ ಕುಳಿತಿತ್ತು ಎಂಬ ಶಬ್ದಕ್ಕರ್ಥ. ಆ ಭಕ್ತಿಜ್ಞಾನವಿಡಿದಿರ್ಪ ಶರಣನು ತನ್ನ ಸ್ವಾನುಭಾವ ವಿವೇಕದಲ್ಲಿ ಒಸರುತ್ತಿರ್ದ ಪರಮಾಮೃತ ರಸವನು ಚಿದ್ವಾರದಿಂ ಸ್ವೀಕರಿಸುತ್ತಿರ್ದನೆಂಬುದೀಗ, ಕೂಸುಣುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಆ ಚಿದಾಕಾಶದಲ್ಲಿ ಸ್ವಲೀಲಾಪರನಾಗಿ ಚರಿಸುತ್ತಿರ್ಪ ಪರಮಹಂಸನು ಆ ಪರಮಾಮೃತವ ಸ್ವೀಕರಿಸುವ ಜ್ಞಾನಕಲಾತ್ಮನ ನವಗ್ರಹಿಸಿತ್ತೆಂಬುದೀಗ, ಆಕಾಶದ ಬಿಜ್ಜು ಹೊಯ್ದಿತ್ತಿತ್ತೆಂಬ ಶಬ್ದಕ್ಕರ್ಥ ಆ ಜ್ಞಾನಕಲಾತ್ಮನ ನವಗ್ರಹಿಸಿದ ಪರಮಾತ್ಮತತ್ವವು ಶಿವಭಾವವೆಂಬ ಕೊಕ್ಕಿನಿಂದವಗ್ರಹಿಸಿತ್ತೆಂಬುದೀಗ, ಆಶಿಸುವ ನೆತ್ತಿಕೊಕ್ಕಿನಲ್ಲಿ ತಿವಿಯಲಾಗಿ ಎಂಬ ಶಬ್ದಕ್ಕರ್ಥ. ಆ ಶಿವಭಾವದಲ್ಲಿ ಸನ್ನಹಿತವಾದ ಚಿತ್ ಸ್ವರೂಪನಾದ ಶರಣನ ಭಿನ್ನವಿಲ್ಲದೆ ಆ ಪರಮಾತ್ಮ ತತ್ವವು ಅವಗ್ರಹಿಸೆ ತನ್ನಂತರಭಾವಕ್ಕೆ ಸಾಲದೆ ಶಿವೋಹಂ-ಶಿವೋಹಂಮೆನುತಿರ್ದಿತ್ತೆಂಬುದೀಗ, ತಪ್ಪದೆನುಂಗಿತ್ತು ಆ ಬಿಜ್ಜು ಹೊಟ್ಟೆಗೆಯ್ದದೆ ಅಪ್ಪಾ, ಅವ್ವಾ ಎನ್ನುತ್ತಿದ್ದಿತ್ತು ಇದು ದೃಷ್ಟ ಸೋಜಿಗ ಗೂಡಿನೊಡೆಯ ಗುಮ್ಮಟನಾಥ ಆಗಮೇಶ್ವರಲಿಂಗ ಅಪ್ರಮಾಣವೆಂಬ ಶಬ್ದಕ್ಕರ್ಥ,

೧೨

ಗಿರಿಯ ಗುಹೆಯಲ್ಲಿ ಒಂದರಿಬಿರಿದಿನ ಹುಲಿ ಹುಲ್ಲೆಯ ಭಯಕ್ಕಾಗಿ'
ಎಲ್ಲಿಯೂ ಹೊರಡಲಮ್ಮದೆ ಅಲ್ಲಿಯೆ ಅದೆ.
ಅದ ಮೆಲ್ಲನೆ ನೋಡಿ ಬಿಲ್ಲಂಬಿನಲ್ಲಿ ಎಸೆಯೆ
ಹುಲಿಹಾರಿ ಹುಲ್ಲೆಯಾಯಿತ್ತು
ಆ ಹುಲ್ಲೆ ಬಲೆಯೊಳಗಲ್ಲ, ಬಾಣದೊಳಗಲ್ಲ ಎಲ್ಲಿಯೂ ಸಿಕ್ಕದು
ಇದ ಬಲ್ಲವರಾರು ಗೂಡಿನೊಡೆಯ ಗುಮ್ಮಟನಾಥ
ಆಗಮೇಶ್ವರ ಲಿಂಗ ಪರಿಪೂರ್ಣ ಭರಿತನು

**ಟೀಕು:**— ಅಹಂಕಾರಯುಕ್ತವಾದ ದೇಹಮಧ್ಯದಲ್ಲಿ ಎಂಬುದೀಗ, ಗಿರಿಯ ಗುಹೆಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದ ಮಧ್ಯದಲ್ಲಿ ಆರಿಗು ಅಸಾಧ್ಯವಾದ ಅನಂತ ಬ್ರಹ್ಮಾಂಡಂಗಳ ನವಗ್ರಹಿಸಿಕೊಂಡಿರ್ಪ ಪರ ಶಿವ ತತ್ವವು ಅಂತರ್ಗತವಾಗಿಹುದೆಂಬುದೀಗ, ಒಂದರಿ ಬಿರಿದಿನ ಹುಲಿಯೆಂಬ ಶಬ್ದಕ್ಕರ್ಥ. ಅಂತಪ್ಪ ಪರ ಬ್ರಹ್ಮವು ಮಾಯಾ ಸಂಬಂಧಿಗಳಾದ ಜೀವಂಗೆ ಕಾಣಿಸಿಕೊಳ್ಳದೆ ಅಲ್ಲಿಯೆ ಗೋಪ್ಯವಾಗಿಹುದೆಂಬುದೀಗ, ಹುಲ್ಲೆಯ ಭಯಕ್ಕಾಗಿ ಎಲ್ಲಿಯೂ ಹೊರಡಲಮ್ಮದೆ ಅಲ್ಲಿಯೆ ಅದೆಯೆಂಬ ಶಬ್ದಕ್ಕರ್ಥ. ಇಂತಪ್ಪ ಮಾಯಾ ಸಂಬಂಧವಾದ ದೇಹದ ಮಧ್ಯದಲ್ಲಿ ಸುಜ್ಞಾನೋದಯವಾದ ಶರಣನು ಸದ್ಭಾವವೆಂಬ ಬಿಲ್ಲಿಗೆ ಸುಮನವೆಂಬ ನಾರಿಯ ಹೂಡಿ ಸುಜ್ಞಾನವೆಂಬ ಬಾಣದಿಂ ಪ್ರಯೋಗಿಸಲು ಆ ಪರಶಿವತತ್ವವು ಶ್ರೀಗುರು ಮುಖದಿಂ ಪ್ರಭಾವಿಸಿ ಕರಸ್ಥಲಕ್ಕೆ ಇಷ್ಟಲಿಂಗವಾಗಿ ಬರಲು ಮಾಯೆಯಳಿದು ಚಿಚ್ಛಕ್ತಿ ಸ್ವರೂಪವಾಯಿತ್ತೆಂಬುದೀಗ, ಅದ ಮೆಲ್ಲನೆ ನೋಡಿ ಬಿಲ್ಲಂಬಿನಲ್ಲಿ ಎಸೆಯೆ ಹುಲಿ ಹಾರಿ ಹುಲ್ಲೆಯಾಯಿತ್ತೆಂಬ ಶಬ್ದಕ್ಕರ್ಥ. ಆ ಚಿಚ್ಛಕ್ತಿ ಸ್ವರೂಪವಾದ ಜ್ಞಾನ ಕಲಾತ್ಮನು ಮಾಯಾಪಾಶ ಭಿನ್ನ ಜ್ಞಾನವ ಹೊದ್ದನೆಂಬುದೀಗ, ಆ ಹುಲ್ಲೆ ಬಲೆಯೊಳಗಲ್ಲ, ಬಾಣದೊಳಗಲ್ಲವೆಂಬ ಶಬ್ದಕ್ಕರ್ಥ. ಚಿತ್ ಸ್ವರೂಪನಾದ ಶರಣನು ಸಕಲ ಪ್ರಪಂಚ ಹೊದ್ದದೆ ವಿಲಕ್ಷಣವಾಗಿಹನೆಂಬುದೀಗ, ಎಲ್ಲಿಯೂ ಸಿಕ್ಕದೆಂಬ ಶಬ್ದಕ್ಕರ್ಥ. ಈ ಲಿಂಗಾಂಗ ಸಮರಸದ ಸುಖವ ದ್ವೈತಾದ್ವೈತಿಗಳರಿಯರೆಂಬುದೀಗ, ಇದ ಬಲ್ಲವರಾರು ಗೂಡಿನೊಡೆಯ ಗುಮ್ಮಟನಾಥ ಆಗಮೇಶ್ವರ ಲಿಂಗ ಪರಿಪೂರ್ಣ ಭರಿತನೂ ಎಂಬ ಶಬ್ದಕ್ಕರ್ಥ.

೧೩

ಆರು ಇಲ್ಲದ ಮನೆಯಲ್ಲಿ ಹಾದರಿಗ ಹೊಕ್ಕು
ಹೆಂಡತಿಯಿಲ್ಲದ ಪುಂಡ ಬಂದು ಅವನಂಗವ ಹೊಯ್ಯಲಾಗಿ
ಸಂಡರು-
ಗ್ರಾಮದ ಪುಂಡೆಯರೆಲ್ಲರು ಕೂಡಿ; ಮಿಂಡನೊಬ್ಬನೇ ಸತ್ತ

ಅಂಗವಿಲ್ಲದ ಕಳವು, ಹೆಂಗುಸಿಲ್ಲದ ಹಾದರ
ಯಾವೂರ ಅಂಗವಲ್ಲಾ ಎಂದು,
ಲಿಂಗವಂತರೆಲ್ಲರು ಕೂಡಿ ಕೊಂಡಾಡುತ್ತಿರ್ದುದ ಕಂಡೆ
ಗೂಡಿನೊಡೆಯ ಗುಮ್ಮಟನಾಥ ಆಗಮೇಶ್ವರ ಲಿಂಗದಲ್ಲಿ
ನಂಬಲರಿಯದ ಸಂದೇಹಿಗಳಿಗುಂಟೆ ಘನ ಮಹಾ ಸಂಗದ ಕೂಟ!

**ಟೀಕು**:— ಸುಜ್ಞಾನೋದಯವಾದ ಶರಣನ ಪಂಚಭೂತಾಶ್ರಯವಳಿದು ಸರ್ವಾಂಗವು ಮಂತ್ರಸ್ವರೂಪವಾದ ಕಾರಣ, ಅರುಯಿಲ್ಲದ ಮನೆಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಸಕಲ ಪ್ರಪಂಚಳಿದ ಶರಣನ ನಿಜಾಂತರಂಗದ ಜ್ಞಾನ ಶಕ್ತಿಯಲ್ಲಿ ಇಷ್ಟಲಿಂಗದ ಚಿತ್ಕಳಾಸ್ವರೂಪವಾದ ಪ್ರಾಣಲಿಂಗವು ಚಿತ್ಪ್ರಾಣನಲ್ಲಿ ಸಮರಸವಾಗಿ ಎಂಬುದೀಗ, ಹಾದರಿನ ಹೊಕ್ಕು ಎಂಬ ಶಬ್ದಕ್ಕರ್ಥ. ಹೆಂಡತಿ ಎಂದೊಡೆ ಮಾಯಾಶಕ್ತಿ. ಅಂತಪ್ಪ ಮಾಯಾಶಕ್ತಿಯ ಸಂಗವಿಲ್ಲದ ನಿಜಾತ್ಮನು ಬಂದು ಆ ಸಚ್ಚಿದಾನಂದ ಸ್ವರೂಪವಾದ ಬ್ರಹ್ಮಕ್ಕೆ ಅಂಗವಾಗಿಹುದೆ ಪ್ರಣವು. ಆ ಪ್ರಣವು ನವಗ್ರಹಿಸಿತ್ತೆಂಬುದೀಗ, ಹೆಂಡತಿಯಿಲ್ಲದ ಪುಂಡಬಂದು ಅವಸಂಗವ ಹೊಯ್ಯಲಾಗಿ ಎಂಬ ಶಬ್ದಕ್ಕರ್ಥ. ಆ ಚಿತ್ಪ್ರಣವುದಲ್ಲಿ ಬೆರಸಿದ ನಿಜಾತ್ಮನು ಸಮರಸವಾದ ಭೇದವನು ಆ ದೇಹದಲ್ಲಿರ್ದ ಷಡ್ವಿಧಶಕ್ತಿಯರೆಲ್ಲರು ಕಂಡು ಅರಿವಿನಲ್ಲಿ ಏಕ ರಸಮಯವಾದರೆಂಬುದೀಗ, ಕಂಡರು ಗ್ರಾಮದ ಪುಂಡೆಯರೆಲ್ಲರು ಕೂಡಿ ಎಂಬ ಶಬ್ದಕ್ಕರ್ಥ. ಆ ಸತ್ಪ್ರಣವು ಸ್ವರೂಪನಾದ ಶರಣನು ಮಹಾ ಘನಲಿಂಗದಲ್ಲಿ ಬೆರಸಿ ನಿತ್ಯನಾಗಿರ್ದನೆಂಬುದೀಗ, ಮಿಂಡನೊಬ್ಬನೆ ಸತ್ತನೆಂಬ ಶಬ್ದಕ್ಕರ್ಥ. ಅಂತು ನಿತ್ಯ ಸ್ವರೂಪನಾದ ಶರಣನ ತನುಭಾವ ನಷ್ಟವಾಗಿ ಚಿದ್ಘನ ಲಿಂಗದಲ್ಲಿ ಬೆರಸಿ ಲಿಂಗ ಸ್ವರೂಪವಾಯಿತ್ತೆಂಬುದೀಗ, ಅಂಗವಿಲ್ಲದ ಕಳವು ಎಂಬ ಶಬ್ದಕ್ಕರ್ಥ. ಆ ಶರಣನು ಮಾಯಾ ಶಕ್ತಿಯ ಸಂಗವಳಿದು ಜ್ಞಾನ ಶಕ್ತಿಯೊಡನೆ ಕೂಡಿದ ಪ್ರಾಣಲಿಂಗದಲ್ಲಿ ಸಮರಸವಾಗಿ ಎಂಬುದೀಗ, ಹೆಂಗುಸಿಲ್ಲದಹಾದರನೆಂಬ ಶಬ್ದಕ್ಕರ್ಥ. ಇಂತಪ್ಪ ಅಭಿನ್ನ ಕ್ರಿಯಾ ಚರಿತ್ರವ ನರಿಯದೆ ಅಂಗದ ಮೇಲೆ ಲಿಂಗವ ಧರಿಸಿ ಭಿನ್ನ ಕ್ರಿಯೆಗಳ ಮಾಡಿ ಕೀರ್ತಿಸಿ ಭಿನ್ನ ಫಲ ಪದಂಗಳ ಪಡದು ಭೋಗಿಸುತ್ತಿಹರು, ಅಂತಪ್ಪ ವ್ಯಕ್ತಿಗಳಿಗೆ ಮಹಾಘನ ಲಿಂಗದಲ್ಲಿ ಏಕಾರ್ಥ ಘಟಿಸದೆಂಬುದೀಗ, ಈ ಊರು ಅಂಗವಲ್ಲವೆಂದು ಲಿಂಗವಂತರೆಲ್ಲರೂ ಕೂಡಿ ಕೊಂಡಾಡುತ್ತಿರ್ದುದ ಕಂಡೆ ಗೂಡಿನೊಡೆಯ ಗುಮ್ಮಟನಾಥ ಆಗಮೇಶ್ವರಲಿಂಗದಲ್ಲಿ ನಂಬಲರಿಯದ ಸಂದೇಹಿಗಳಿಗುಂಟೆ, ಘನ ಮಹಾ ಸಂಗದ ಕೂಟ ಎಂಬ ಶಬ್ದಕ್ಕರ್ಥ.

೧೪

ಕ್ತ್ರೀ ಗರ್ಭವಾಗಿ ನವಮಾಸ ತುಂಬಿತ್ತು ಕಣ್ಣಿನಲ್ಲಿ ಬೆಸಲಾಯಿತ್ತು.
ಬೆನ್ನಿನಲ್ಲಿ ಮೊಲೆ ಹುಟ್ಟಿ ನಡು ನೆತ್ತಿಯಲ್ಲಿ ಹಾಲು ಬಂದಿತ್ತು.

ನಾಲಗೆಯಿಲ್ಲದ ಶಿಶುವಿಂಗೆ ಹಾಲು ಯ್ಯೆಯ್ದದೆ
ಬಾಯ ಬಿಡುತ್ತಿದ್ದಿತ್ತು.
ಗೂಡಿನೊಡೆಯ ಗುಮ್ಮಟನಾಥ ಅಗಮೇಶ್ವರ ಲಿಂಗವ
ಗರ್ಭೀಕರಿಸಿದನೆಂದು

**ಟೀಕು:**— ಶಿವಾಂಶೀಕನಾಗಿರ್ದ ಆತ್ಮಂಗೆ ದೇಹಸಂಬಂಧವಾದಲ್ಲಿ ಸುಜ್ಞಾನೋದಯವಾಗಿ ಶಿವಭಾವ ಘಟಿಸಲು ಆ ಸದ್ಭಾವದ ಮಧ್ಯದಲ್ಲಿ ಮಹಾ ಘನ ಲಿಂಗದ ನಿಜವು ತಲೆದೋರಿತ್ತೆಂಬುದೀಗ, ಕೈ ಗರ್ಭವಾಗಿ ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣಂಗೆ ಚಿದ್ ಗರ್ಭ ತಲೆದೋರಿದಲ್ಲಿ ನವವಿಧ ಭಕ್ತಿಗಳು ಸಂಬಂಧವಾದವೆಂಬುದೀಗ, ನವಮಾಸ ತುಂಬಿತ್ತೆಂಬ ಶಬ್ದಕ್ಕರ್ಥ. ಅಂತು ನವ ವಿಧಕ್ರಿಯೆ ಅಂಗವಾಗಿರ್ಪ ಶರಣನು ಗುರೋಪಾವಸ್ಥೆಯ ಮಾಡಲು ಆ ಶ್ರೀ ಗುರು ಕರುಣಿಸಿ ಸುಜ್ಞಾನ ದೃಷ್ಟಿಯಲ್ಲಿ ಸಂಬಂಧವಾದ ಚಿದ್ ಘನಲಿಂಗವ ಶಿಷ್ಯನಕರಸ್ಥಲಕ್ಕೆ ಸಂಬಂಧವ ಮಾಡಿದನೆಂಬುದೀಗ, ಕಣ್ಣಿನಲ್ಲಿ ಬೆಸಲಾಯಿತ್ತು ಎಂಬ ಶಬ್ದಕ್ಕರ್ಥ. ಅಂತು ಸತ್ಕ್ರಿಯಾಕರ್ಮವೆಂಬ ಪೂರ್ವಭಾವನೆಯನಳಿದ ಶರಣ ಸತಿಯ ಸುಜ್ಞಾನವೆಂಬ ಅಪರಭಾಗೆಯಲ್ಲಿ ಅಮೃತ ಕುಂಭ ಸ್ವರೂಪ ನಿಂದೊಪ್ಪುತ್ತಿಹ ಪ್ರಾಣಲಿಂಗ ಸಂಬಂಧವಾಯಿತ್ತೆಂಬುದೀಗ, ಬೆನ್ನಿನಲ್ಲಿ ಮೊಲೆ ಹುಟ್ಟಿ ಎಂಬ ಶಬ್ದಕ್ಕರ್ಥ. ಅಂತು ಪ್ರಾಣಲಿಂಗದಲ್ಲಿ ಅವಿರಳ ಸಂಬಂಧಿಯಪ್ಪ ಶರಣಸತಿಯ ಆತ್ಮಾಂಗದರುವಿನಲ್ಲಿ ಭಾವಲಿಂಗ ಸಂಬಂಧವಾಯಿತ್ತೆಂಬುದೀಗ, ನಡುನೆತ್ತಿಯಲ್ಲಿ ಹಾಲು ಬಂದಿತ್ತೆಂಬ ಶಬ್ದಕ್ಕರ್ಥ. ಅಂತು ಭಿನ್ನಾಪೇಕ್ಷೆಯಿಲ್ಲ ಚಿತ್ ಸ್ವರೂಪನಾದನೆಂಬುದೀಗ, ನಾಲಗೆಯಿಲ್ಲದ ಶಿಶುವಿಂಗೆ ಎಂಬ ಶಬ್ದಕ್ಕರ್ಥ. ಆ ಇಷ್ಟ–ಪ್ರಾಣ-ಭಾವವೆಂಬ ತ್ರಿವಿಧಾಮೃತವನು ಸುಜ್ಞಾನ ದ್ವಾರದಿಂ ಸ್ವೀಕರಿಸುತ್ತಿರ್ದ ಶರಣನು ಮತ್ತೆಯೂ ಶಿವಾಪೇಕ್ಷೆಯ ಮುಂದುಗೊಂಡಿರ್ದನೆಂಬುದೀಗ, ಹಾಲುಯ್ಯೆಯ್ದದೆ ಬಾಯ ಬಿಡುತ್ತಿದ್ದಿತ್ತು ಗೂಡಿನೊಡೆಯ ಗುಮ್ಮಟನಾಥ ಅಗಮೇಶ್ವರ ಲಿಂಗವ ಗರ್ಭೀಕರಿಸಿದನೆಂದು ಎಂಬ ಶಬ್ದಕ್ಕರ್ಥ.

೧೫

ಇಕ್ಷು ದಂಡದ ತುದಿಯ ಸುಳಿಯಲ್ಲಿ ಹುಟ್ಟಿತ್ತೊಂದು ಗಿಣಿ
ರಟ್ಟೆ ಮೂರು, ಕಾಲೊಂದು, ಬಾಯಿ ಎರಡಾಗಿ
ಮುಚ್ಚಿದ ಕಣ್ಣು, ಮೂಗಿನ ಕೆಂಪು, ಮೈ ರಕ್ತವರ್ಣ,
ತುಪ್ಪುಳು ಕಪ್ಪು, ಕಾಲು ಹಳದಿ, ಬಾಯಿ ಬೆಳ್ಳಗೆ
ಹಾರಾಡುವ ಬಯಲ ರೂಪು ತೋರದ ಆಗರದಲ್ಲಿ
ಹಾರಿ ಹೋಯಿತ್ತು
ಆತ್ಮನೆಂಬ ರಾಮ ಪಂಜರವಿಲ್ಲದೆ ಹೋಯಿತ್ತು.
ಗೂಡಿನೊಡೆಯ ಗುಮ್ಮಟನಾಥ ಅಗಮೇಶ್ವರ ಲಿಂಗ.

**ಟೀಕು:—** ಶಿವಭಾಗದಗ್ರದಲ್ಲಿ ಎಂಬುದೀಗ, ಇಕ್ಷುದಂಡದ ತುದಿಯೆಂಬ ಶಬ್ದಕ್ಕರ್ಥ. ಅಂತಪ್ಪ ಶಿವಭಾಗದಗ್ರದಲ್ಲಿ ಪರಿಪೂರ್ಣಜ್ಞಾನ ಚಿತ್ತು ಉದಯವಾಯಿತ್ತೆಂಬುದೀಗ, ಸುಳಿಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪಚಿತ್ತಿನಿಂ ಪರಮ ಹಂಸನುದಯವಾಯಿತ್ತೆಂಬುದೀಗ, ಹುಟ್ಟಿತ್ತೊಂದು ಗಿಣಿಯೆಂಬ ಶಬ್ದಕ್ಕರ್ಥ. ಆ ಚಿದಾತ್ಮಂಗೆ ಕರ್ಮ ಭಕ್ತಿಜ್ಞಾನಂಗಳೆ ರೆಕ್ಕೆಯಾಗಿಹವೆಂಬುದೀಗ ಕಟ್ಟಿ ಮೂರು ಎಂಬ ಶಬ್ದಕ್ಕರ್ಥ. ಆ ಜ್ಞಾನ ಕಲಾತ್ಮನು ಅಭಿನ್ನ ಕ್ರಿಯಾಚಾರ ವಿಡಿದಾಚರಿಸುತ್ತಿಹನೆಂಬುದೀಗ, ಕಾಲೊಂದು ಎಂಬ ಶಬ್ದಕ್ಕರ್ಥ. ಆ ಸತ್ಕ್ರಿಯಾಚಾರದಲ್ಲಿ ಸ್ವಸ್ಥಿರಭಾವಿಯಾದ ಶರಣನು, ಅಂತರಂಗ-ಬಹಿರಂಗದಲ್ಲಿ ಶಿವತತ್ವವ ಗ್ರಹಿಸಬೇಕೆಂಬ ಶಿವಾಪೇಕ್ಷೆಯುಳ್ಳಿಹನೆಂಬುದೀಗ, ಬಾಯಿಎರಡಾಗಿ ಎಂಬ ಶಬ್ದಕ್ಕರ್ಥ. ಆ ಶಿವಾಪೇಕ್ಷೆಯ ಮುಂದುಗೊಂಡಿರ್ದ ಶರಣನು ತನ್ನ ಸುಜ್ಞಾನ ದೃಷ್ಟಿಯಿಂ ಧನ್ಯವಾದ ಮಾಯಾ ಪ್ರಪಂಚ ನಿರೀಕ್ಷಿಸನೆಂಬುದೀಗ, ಮುಚ್ಚಿದ ಕಣ್ಣು ಎಂಬ ಶಬ್ದಕ್ಕರ್ಥ. ಆ ಪ್ರಪಂಚ ನೋಡದೆಯಿರ್ಪ ಶರಣಂಗೆ ಸ್ವಾನುಭಾವ ಸದ್ವಾಸನೆ ನಾಸಿಕವಾದ ಕಾರಣ ಅದು ನಕಾರಮಂತ್ರ ಸ್ವರೂಪೆಂಬುದೀಗ, ಮೂಗಿನ ಕೆಂಪು ಎಂಬ ಶಬ್ದಕ್ಕರ್ಥ. ಆ ಜೀವಾತ್ಮನ ಸರ್ವಾಂಗವು ಮಕಾರ ಮಂತ್ರ ಸ್ವರೂಪವೆಂಬುದೀಗ, ಮೈ ರಕ್ತವರ್ಣವೆಂಬ ಶಬ್ದಕ್ಕರ್ಥ. ಆ ನಿಜಾತ್ಮನಲ್ಲಿ ಕುರುಹುದೋರಿದ ಜ್ಞಾನ ಶಿಕಾರ ಮಂತ್ರ ಸ್ವರೂಪೆಂಬುದೀಗ, ತುಪ್ಪುಳು ಕಪ್ಪೆಂಬ ಶಬ್ದಕ್ಕರ್ಥ. ಆ ಪ್ರಪಂಚುರಹಿತವಾದ ಶರಣನ ನಿಜಾಂತರಂಗದಲ್ಲೆಂಬುದೀಗ, ತೋರಿದ ಆಗರದಲ್ಲಿ ಎಂಬ ಶಬ್ದಕ್ಕರ್ಥ. ಆ ನಿಜಾನು ಭಾವಾಂತರಂಗದಲ್ಲಿ ಸಂಬಂಧವಾಗಿರ್ಪ ಪ್ರಾಣಲಿಂಗದತ್ತ ಸತ್ಕ್ರಿಯಾಜ್ಞಾನವಿಡಿದು ಯ್ದೈದುತ್ತಿರ್ದನೆಂಬುದೀಗ, ಹಾರಿಹೋಯಿತ್ತು ಆತ್ಮನೆಂಬ ರಾವು ಎಂಬ ಶಬ್ದಕ್ಕರ್ಥ. ಆ ನಿತ್ಯವಾದ ದೇಹಭಾವವಿಲ್ಲದೆ ಹೋಯಿತ್ತು ಶರಣಂಗೆ ಎಂಬುದೀಗ, ಪಂಜರ ವಿಲ್ಲದೆ ಹೋಯಿತ್ತುಗೂಡಿನೊಡೆಯ ಗುಮ್ಮಟನಾಥ ಅಗಮೋಶ್ವರಲಿಂಗವೆಂಬ ಶಬ್ದಕ್ಕರ್ಥ.

## ೧೬

ವಟ ವೃಕ್ಷವ ಘಟದ ಹೊಟ್ಟೆಯಲ್ಲಿ ತತ್ತಿಯ ಸಿಕ್ಕಿತ್ತೊಂದು ಗಿಣಿ
ತತ್ತಿ ಮೂರು, ಆ ತತ್ತಿಗೆ ಪಕ್ಷಿ ಮೂರು, ಕಂಡನೊಬ್ಬ ಅಂಧಕ,
ವೃಕ್ಷವ ಹತ್ತುವದಕ್ಕೆ ಮೆಟ್ಟಿಲ್ಲ, ಹೊಟ್ಟೆಯಲಿಕ್ಕುವದಕ್ಕೆ ಕೈಯಿಲ್ಲ.
ಗಿಣಿಯಾಸೆ ಬಿಡದು ಇವರಾಸೆಯ ಬಿಡಿಸು
ಗೂಡಿನೊಡೆಯ ಗುಮ್ಮಟನಾಥ ಅಗಮೋಶ್ವರ ಲಿಂಗ.

**ಟೀಕು:—** ಅನಂತಕೋಟಿ ಬ್ರಹ್ಮಾಂಡಂಗಳನೊಳಕೊಂಡಿರ್ಪದು ಪರಬ್ರಹ್ಮ ವೃಕ್ಷವೆಂಬುದೀಗ, ವಟವೃಕ್ಷದ ಎಂಬ ಶಬ್ದಕ್ಕರ್ಥ. ಅಂತಪ್ಪ ನಿಷ್ಕಲ ಶಿವ ತತ್ವಕ್ಕೆ ಚಿತ್ ಪ್ರಭಾಂಗವಾದ ನಿಷ್ಕಲ ಚಿಚ್ಛಕ್ತಿಯ ಚಿದ್ ಘಟದಲ್ಲಿ ಎಂಬುದೀಗ, ಘಟದ ಎಂಬ ಶಬ್ದಕ್ಕರ್ಥ. ಆ ಚಿಚ್ಛಕ್ತಿಯ ಸದ್ ಘಟದ ನಿಜಾಂತರಂಗದಲ್ಲಿ

ಚಿದಾಂಶೀಕನಾದ ಪರಮಾತ್ಮನು ದಯವಾದನೆಂಬುದೀಗ, ಹೊಟ್ಟೆಯಲ್ಲಿ ತತ್ತಿಯು ನಿಕ್ಕಿತೊಂದು ಗಿಣಿ ಎಂಬ ಶಬ್ದಕ್ಕರ್ಥ. ಅಂತಪ್ಪ ಚಿದಾತ್ಮನ ಸುಜ್ಞಾನ ಪ್ರಕಾಶದಿಂ ತನುತ್ರಯಂಗಳಳಿದು; ತ್ಯಾಗಾಂಗ, ಭೋಗಾಂಗ, ಯೋಗಾಂಗ ಸ್ವರೂಪವನೆಯ್ದಲು ಶ್ರೀ ಗುರುವಿನ ದೀಕ್ಷೆ ತ್ರಯಂಗಳ ನೊಳಕೊಂಡು ಸಚ್ಚಿದಾನಂದ ಸ್ವರೂಪವಾದ ಲಿಂಗತ್ರಯಂಗಳು ಉದಯಿಸಿದವೆಂಬುದೀಗ, ತತ್ತಿ ಮೂರು, ಆ ತತ್ತಿಗೆ ಪಕ್ಷಿ ಮೂರು ಎಂಬ ಶಬ್ದಕ್ಕರ್ಥ. ಅಂತು ತ್ರಿವಿಧಾಂಗದಲ್ಲಿ ತ್ರಿವಿಧ ಲಿಂಗ ಸಂಬಂಧವಾದ ಭೇದವ ಭಿನ್ನದೃಕ್ಕಿಲ್ಲದ ಪರಿಪೂರ್ಣ ಜ್ಞಾನ ದೃಷ್ಟಿಯಿಂ ಶರಣನೆಂಬುದೀಗ, ಕಂಡನೊಬ್ಬ ಅಂಧಕನೆಂಬ ಶಬ್ದಕ್ಕರ್ಥ. ಅಂತು ಸುಜ್ಞಾನ ದೃಷ್ಟಿಯಿಂ ಕಂಡು ಬ್ರಹ್ಮಾಂಡದಲ್ಲಿ ತತ್ಪರಿಪೂರ್ಣವಾದ ಪರಬ್ರಹ್ಮವೆ ತಾನಾದ ಶರಣನು ಭಿನ್ನಕ್ರಿಯಾಚಾರವಿಡಿದು ಆಚರಿಸಲಿಲ್ಲವೆಂಬುದೀಗ, ವೃಕ್ಷವ ಹತ್ತುವದಕ್ಕೆ ಮೆಟ್ಟಿಲ್ಲವೆಂಬ ಶಬ್ದಕ್ಕರ್ಥ. ಅಂತು ಭಿನ್ನಕ್ರಿಯಾಚಾರ ನಷ್ಟವಾದ ಶರಣನು ತನ್ನ ನಿಜಾನುಭಾವಾಂತರಂಗದಲ್ಲಿರ್ದ ಚಿತ್ಪ್ರಭಾಲಿಂಗವ ಸದ್ಭಾವಹಸ್ತದಿಂ ಗ್ರಹಿಸುತ್ತಿಹನಲ್ಲದೆ ಭಿನ್ನ ಭಾವ ಹಸ್ತದಿಂ ಗ್ರಹಿಸಲಿಲ್ಲವೆಂಬುದೀಗ, ಹೊಟ್ಟೆಯುಲ್ಲಿಕ್ಕುವದಕ್ಕೆ ಕೈಯಿಲ್ಲವೆಂಬ ಶಬ್ದಕ್ಕರ್ಥ. ಅಂತು ಭಿನ್ನ ಶ್ರೀ ಭಿನ್ನ ಭಾವ ನಾಸ್ತಿಯಾಗಿರ್ದ ಶರಣನು ಪರ ಶಿವ ತತ್ವದಲ್ಲಿ ಕೂಡಬೇಕೆಂಬ ತೂರ್ಯಾವಸ್ಥೆಯು ಮುಂದುಗೊಂಡಿರ್ದನೆಂಬುದೀಗ, ಗಿಣಿಯಾಶೆ ಬಿಡದು ಎಂಬ ಶಬ್ದಕ್ಕರ್ಥ. ಆ ತುರ್ಯಾವಸ್ಥೆಯು ಮುಂದು ಗೊಂಡಿರ್ದ ಶರಣನು ಸರ್ವಾಂಗಲಿಂಗ ಸಂಬಂಧವ ಮಾಡಿ ಲಿಂಗದಲ್ಲಿ ಸಮರಸೈಕ್ಯವಹ ಭೇದವ ಕೃಪೆಮಾಡೆಂದು ಶ್ರೀಗುರುವಿಂಗೆ, ಬಿನ್ನೈಸುತ್ತಿರ್ದನೆಂಬುದೀಗ, ಇದರಾಸೆಯು ಬಿಡಿಸು ಗೂಡಿನೊಡೆಯ ಗುಮ್ಮಟನಾಥ ಆಗಮೇಶ್ವರಲಿಂಗ ಎಂಬ ಶಬ್ದಕ್ಕರ್ಥ.

### ೧೭

ನಾನೊಂದು ಗಿಣಿಯು ತಂದೆ ಬೆಕ್ಕಿನ ಬಾಧೆ ಘನ
ತಾ ಕೋಲಿನಲ್ಲಿದ್ದಡೆ ಶಯನಕ್ಕಾಸೆಯಿಲ್ಲ
ಪಂಜರಕ್ಕೆ ಸಂದ ಕೂಡುವ ಸಂಗವವನಿಲ್ಲ
ಕೊರತೆ ಕೂಳ ನಿಕ್ಕುವವಕ್ಕೆ ಅಡಿಗರವು ನಿಲ್ಲ
ಗಿಣಿಯು ಹಿಡಿದು ನಾಕೆಟ್ಟೆ ಹಕ್ಕಿಯು ಹಂಬಲಿಲ್ಲ.
ಗೂಡಿನೊಡೆಯ ಗುಮ್ಮಟನಾಥ ಆಗಮೇಶ್ವರ ಲಿಂಗ

**ಟೀಕು:** — ಶಿವಾಂಶೀಕನಾದ ಆತ್ಮನು ದೇಹ ಸಂಬಂಧಿಯಾಗಿ ಬಂದನೆಂಬುದೀಗ, ನಾನೊಂದು ಗಿಣಿಯು ತಂದೆನೆಂಬ ಶಬ್ದಕ್ಕರ್ಥ. ಅಂತಪ್ಪ ದೇಹ ಸಂಬಂಧಿಯಾಗಿರ್ದಾತ್ಮಂಗೆ ಮಾಯಾ ಮಾರ್ಜಾಲನ ಭೀತಿ ಘನವೆಂಬುದೀಗ, ಬೆಕ್ಕಿನ ಬಾಧೆ ಘನವೆಂಬ ಶಬ್ದಕ್ಕರ್ಥ. ಅಂತಪ್ಪಾತ್ಮನು ತಮೋಗುಣ ಸಂಬಂಧವಾದ ಕಾರಣ ತನುವಿನ ಮರವೆಯುಲ್ಲಿರುತ್ತಿಹನಲ್ಲದೆ, ಪರಬ್ರಹ್ಮದಲ್ಲಿ ಪರವಶ

ನೆಯ್ದುವವಕ್ಕೆ ಆಸ್ಪದವಿಲ್ಲವೆಂಬುದೀಗ, ತಾ ಕೋಲಿನಲ್ಲಿದ್ದಡೆ ಶಯನಕ್ಕಾಶೆ ಯಿಲ್ಲವೆಂಬ ಶಬ್ದಕ್ಕರ್ಥ. ಅಂತಪ್ಪಾತ್ಮಂಗೆ ಪಂಚಭೂತಾಶ್ರಯವಾದ ದೇಹ ಭಾವವ ಕೆಡಿಸಿ ಸರ್ವಾಂಗಲಿಂಗ ಸಂಬಂಧವ ಮಾಡುವ ಶ್ರೀಗುರು ಕಾರುಣ್ಯ ವಿಲ್ಲದೆ ಹೋಯಿತ್ತೆಂಬುದೀಗ, ಪಂಜರಕ್ಕೆ ಸಂದ ಕೂಡುವ ಸಂಗವನಿಲ್ಲವೆಂಬ ಶಬ್ದಕ್ಕರ್ಥ. ಅಂತು ಗುರುಕಾರುಣ್ಯವಿಲ್ಲದೆ ಹೋದಾತ್ಮಂಗೆ ರೂಪು, ರುಚಿ, ತೃಪ್ತಿ ಮೊದಲಾದ ಸಕಲ ಪದಾರ್ಥವ ಲಿಂಗಾರ್ಪಿತವ ಮಾಡಿ ಪ್ರಸಾದವ ಸ್ವೀಕ ರಿಸುವವಕ್ಕೆ ಅಭಿನ್ನ ಕ್ರಿಯಾಚಾರವಿಲ್ಲದೆ ಹೋಯಿತ್ತೆಂಬುದೀಗ, ಕೊರೆ ಕೂಳ ನಿಕ್ಕುವವಕ್ಕೆ ಆಡಿಗರವು ನಿಲ್ಲವೆಂಬ ಶಬ್ದಕ್ಕರ್ಥ. ಅಂತಪ್ಪಾತ್ಮಂಗೆ ಸುಜ್ಞಾನೋ ದಯವಾದಲ್ಲಿ ದೇಹಭಾವವಳಿದು ಶಿವಭಾವ ಘಟಿಸಲು ಶ್ರೀಗುರು ಕಾರುಣ್ಯದಿಂ ತನ್ನಾತ್ಮಚೈತನ್ಯ ಸ್ವರೂಪವಪ್ಪ ಪರಬ್ರಹ್ಮವ ಕರಸ್ಥಲದಲ್ಲಿ ಗ್ರಹಿಸಲು ಜೀವಭಾವ ನಷ್ಟವಾಗಿ ಹೋಯಿತ್ತೆಂಬುದೀಗ, ಗಿಣಿಯ ಹಿಡಿದು ನಾಕೆಟ್ಟೆನೆಂಬ ಶಬ್ದಕ್ಕರ್ಥ. ಆ ಇಷ್ಟಲಿಂಗದಲ್ಲಿ ಸಮರಸಭಾವ ಘಟಿಸಿದ ಶರಣಂಗೆ ಜೀವತ್ರಯಂಗಳ ವ್ಯಾಪ್ತಿ ನಷ್ಟವಾಗಿ ಪರಶಿವ ತತ್ವದಲ್ಲಿ ನಿರ್ವಯಲಾದನೆಂಬುದೀಗ, ಹಕ್ಕಿಯು ಹಂಬಲಿಲ್ಲ ಗೂಡಿನೊಡೆಯ ಗುಮ್ಮಟನಾಥ ಆಗಮೇಶ್ವರ ಲಿಂಗವೆಂಬ ಶಬ್ದಕ್ಕರ್ಥ.

೧೮

ಹಾರುವ ಹಕ್ಕಿಯ ಹಿಡಿದೆ, ಬೀಸುವ ಗಾಳಿಯ ಹಿಡಿದೆ,
ವೈಶಾಖದ ಬಿಸಿಲ ಹಿಡಿದೆ, ಜಗವ ಹಾಸಿ ಕಟ್ಟಿದೆ
ಒಂದು ತಾರು ಗಂಟು, ಒಂದು ಜಿಗುಳು ಗಂಟು,
ಒಂದು ಕುರುಹು ಗಂಟು
ಮೂರರ ಮುದ್ರೆಯ ಮೀರಿ ಹಾರಿತ್ತು ಹಕ್ಕಿ, ಬೀಸಿತ್ತು ಗಾಳಿ,
ಹೋಯಿತ್ತು ಬಿಸಿಲು, ಬಿಸಿಲ ದಗೆ ತಾಗಿ,
ವಸುಧೆಯವರೆಲ್ಲರು ಬಾಯ ಕಿಸಿವುತ್ತಿರ್ದರು ಕಿಸುಕುಳರ ನೋಡಿ
ಶರೀರದ ಗೂಡಿನೊಡೆಯ ಗುಮ್ಮಟನಾಥನ ಪ್ರಾಣ
ಆಗಮೇಶ್ವರ ಲಿಂಗವ ನೊಡಗೂಡುತ್ತಿರ್ದಾ

**ಟೀಕು:—** ಸುಜ್ಞಾನೋದಯದಿಂ ಶ್ರೀ ಗುರು ಕಾರುಣ್ಯವ ಪಡದು ಸರ್ವಾಂಗಲಿಂಗ ಸಂಬಂಧವನರಿಯದ ಭಿನ್ನ ಜ್ಞಾನಿಗಳು ಅಷ್ಟದಳಕಮಲದಲ್ಲಿ ಹಂಸಗತಿಯಿಂ ಚರಿಸುತ್ತಿರ್ಪ ಜೀವನಹಿಡಿದು ಚತುಷ್ಕಮಲದಲ್ಲಿರ್ಪ ಪರಮಾತ್ಮ ಲಿಂಗದಲ್ಲಿ ಏಕಾರ್ಥವ ಮಾಡಬೇಕೆನ್ನುತ್ತಿಹರೆಂಬುದೀಗ, ಹಾರುವ ಹಕ್ಕಿಯ ಹಿಡಿದೆನೆಂಬ ಶಬ್ದಕ್ಕರ್ಥ. ಅಂತಪ್ಪ ಭಿನ್ನಯೋಗಿಗಳು ನವದ್ವಾರಂಗಳಲ್ಲಿ ಸಂಚರಿ ಸುತ್ತಿರ್ದ ಪ್ರಾಣವಾಯುವ ನಿಲಿಸಬೇಕೆನ್ನುತ್ತಿಹರೆಂಬುೀಗ, ಬೀಸುವ ಗಾಳಿಯ ಹಿಡಿದೆನೆಂಬ ಶಬ್ದಕ್ಕರ್ಥ. ಆ ಭಿನ್ನಯೋಗಿಗಳು ತಾಪತ್ರಯಾಗ್ನಿಯನು ನಿಲಿಸ ಬೇಕೆನ್ನುತ್ತಿಹರೆಂಬುದೀಗ, ವೈಶಾಖದ ಬಿಸಿಲಹಿಡಿದೆನೆಂಬ ಶಬ್ದಕ್ಕರ್ಥ. ಅಂತು ಸರ್ವಾಂಗವನು ಅಭಿನ್ನಯೋಗಿಗಳು ತಪದಿಂ ಬಂಧಿಸಿದರೆಂಬುದೀಗ, ಜಗವ

ಹಾಕಿ ಕಟ್ಟಿದೆನೆಂಬ ಶಬ್ದಕ್ಕರ್ಥ. ಅವರು ನಿರಾಕಾರವಾದ ಪರಬ್ರಹ್ಮವ ಅಂತ ರ್ಲಕ್ಷ್ಯಯೋಗದಿಂ ಗ್ರಹಿಸುತ್ತಿಹರೆಂಬುದೀಗ, ಒಂದು ತಾರು ಗಂಟು ಎಂಬ ಶಬ್ದಕ್ಕರ್ಥ. ಅಂದಮಾತ್ರದಲ್ಲಿ ಅಹಂ ಬ್ರಹ್ಮವೆಂಬ ವಾಗಾದ್ವೈತವೆಂಬುದೀಗ, ಒಂದು ಕುರುಹುಗಂಟು ಎಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧ ಭಿನ್ನ ಯೋಗಂ ಗಳಿಂ ಪರಮಾತ್ಮಲಿಂಗದಲ್ಲಿ ಏಕಾರ್ಥ ಘಟಿಸದೆ ಹೋಯಿತ್ತು ಜೀವಂಗೆಂಬು ದೀಗ, ಮೂರರ ಮುದ್ರೆಯು ಮೀರಿಹಾರಿತ್ತು ಹಕ್ಕಿ ಎಂಬ ಶಬ್ದಕ್ಕರ್ಥ. ಅಂತು ಜೀವನು ಶಿವತತ್ವಕ್ಕೆ ಭಿನ್ನವಾಗಲು ದುಸ್ಸಂಚಲ ಪ್ರಾಣವಾಯು ಪ್ರವರ್ತಿಸಿ ತ್ತೆಂಬುದೀಗ, ಬೀಸಿತ್ತು ಗಾಳಿಯೆಂಬ ಶಬ್ದಕ್ಕರ್ಥ. ಅಂತು ಪ್ರಾಣವಾಯು ವಿಕಾರ ವಿಶೇಷವಾಗಲು ತಾಪತ್ರಯಾಗ್ನಿಯು ಜ್ವಾಲೆ ಸರ್ವಾಂಗದಲ್ಲಿ ದಷ್ಟವಾ ಗಲು ಭೂಮಿಯ ಮೇಲೆ ಚರಿಸುತ್ತಿರ್ಪ ಭಿನ್ನ ಜ್ಞಾನಿಗಳೆಲ್ಲರು ದುಃಖಜೀವಿ ಗಳಾಗಿರುತ್ತಿಹರೆಂಬುದೀಗ, ಬಿಸಿಲದಗೆತಾಗಿ ವಸುಧೆಯವರೆಲ್ಲರು ಬಾಯಕಿಸಿವು ತ್ತಿರ್ದರೆಂಬ ಶಬ್ದಕ್ಕರ್ಥ. ಅಂತು ಸಂಸಾರ ಪ್ರಪಂಚಿನ ಹೇಸಿಕೆಯಲ್ಲಿ ಸಿಲ್ಕಿ ಕೆಡು ತ್ತಿರ್ದ ಭಿನ್ನಜ್ಞಾನಿಗಳಕಂಡು ಲಿಂಗಶರಣ ಅವರ ವರ್ತನೆಯ ಮುಟ್ಟದೆ ಪರ ಬ್ರಹ್ಮದಲ್ಲಿ ಸಮರಸವನೆಯ್ದುತ್ತಿರ್ದನೆಂಬುದೀಗ, ಕಿಸುಕುಳುರ ನೋಡಿ ಶರೀರದ ಗೂಡಿನೊಡೆಯ ಗುಮ್ಮಟನ ಪ್ರಾಣ ಅಗಮೇಶ್ವರಲಿಂಗವ ನೊಡಗೂಡುತ್ತಿರ್ದ ನೆಂಬ ಶಬ್ದಕ್ಕರ್ಥ.

೧೯

ಅಷ್ಟ ಭೂಮಿಯ ಮಧ್ಯದಲ್ಲಿ ಹುಟ್ಟಿತ್ತೊಂದು ಬೆಟ್ಟ
ತಳ ಸೂಜಿಯ ಮೊನೆಯಗಲ, ಹಣೆ ಲೆಕ್ಕಕ್ಕೆ ಬಾರದ ವಿಸ್ತೀರ್ಣ
ಆ ವಿಸ್ತೀರ್ಣದಲ್ಲಿ ಹುಟ್ಟಿದರು ಮೂವರು ಮಕ್ಕಳು
ಒಬ್ಬ ಹೇಮವರ್ಣ, ಒಬ್ಬ ಕಪೋತ ವರ್ಣ, ಒಬ್ಬ ಶ್ವೇತ ವರ್ಣ,
ಈ ಮೂವರ ಮಕ್ಕಳ ತಾಯಿ, ಒಬ್ಬಳಿಗೆ ಬಾಯಿಲ್ಲ
ಒಬ್ಬಳಿಗೆ ನಾಲಿಗೆಯಿಲ್ಲ,
ಒಬ್ಬಳಿಗೆ ಹಲ್ಲಿಲ್ಲ; ಇಂತೀ ಮೂವರು ಕೂಡಿ ಮಾತಾಡುವದ ಕಂಡು
ಇದೇತರ ಮಾತೆಂದು ಅಡಗಿದ ಗೂಡಿನೊಡೆಯ
ಗುಮ್ಮಟನಾಥ ಅಗಮೇಶ್ವರ ಲಿಂಗ.

**ಟೀಕು:**— ಅಷ್ಟತನು ಯುಕ್ತವಾದ ದೇಹದ ಮಧ್ಯದಲ್ಲಿ ಎಂಬುದೀಗ, ಅಷ್ಟ ಭೂಮಿಯ ಮಧ್ಯದಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದ ಮಧ್ಯದಲ್ಲಿ ಅಹಂಕಾರವೆಂಬ ಗಿರಿ ಹುಟ್ಟಿತ್ತೆಂಬುದೀಗ, ಹುಟ್ಟಿತ್ತೊಂದು ಬೆಟ್ಟವೆಂಬ ಶಬ್ದ ಕ್ಕರ್ಥ. ಅಂತಪ್ಪಹಂಕಾರ ಯುಕ್ತವಾದ ಜೀವಂಗೆ ಸುಜ್ಞಾನೋದಯವಾಗಲು, ಆ ಸುಜ್ಞಾನ ಪ್ರಕಾಶವು ಅತ್ಯಂತ ಸೂಕ್ಷ್ಮವಾಗಿರುತ್ತಿಹುದೆಂಬುದೀಗ, ತಳ ಸೂಜಿಯ ಮೊನೆಯಗಲವೆಂಬ ಶಬ್ದಕ್ಕರ್ಥ. ಆ ಸುಜ್ಞಾನ ಸನ್ನಹಿತವಾದ ಸದ್ಭಕ್ತಿ

ಯೆಂಬುದು ಸದಾಚಾರ ಸಂಪತ್ತನೊಳಕೊಂಡು ಏಲ ಸತ್ತ್ವವಾಗಿರುತ್ತಿಹು ದೆಂಬುದೀಗ, ಹಣೆ ಲಿಖಿತಕ್ಕೆ ಬಾರದ ವಿಸ್ತೀರ್ಣವೆಂಬ ಶಬ್ದಕ್ಕರ್ಥ. ಶ್ರೀಗುರು ಕಾರುಣ್ಯದಿಂ ಆ ಸದಾಚಾರ ಸಂಪತ್ತೆ ಅಂಗವಾಗಿರ್ದ ಶರಣನ ನಿಜಾಂತರಂಗ ದಿಂ ತ್ರಿವಿಧ ಲಿಂಗಗಳು ಉದಯಿಸಿದವೆಂಬುದೀಗ, ಆ ವಿಸ್ತೀರ್ಣದಲ್ಲಿ ಹುಟ್ಟಿ ದರು ಮೂವರು ಮಕ್ಕಳು ಎಂಬ ಶಬ್ದಕ್ಕರ್ಥ. ರಜೋಗುಣ ಸಂಬಂಧವಾದ ಸ್ಥೂಲ ದೇಹದಲ್ಲಿ ಇಷ್ಟಲಿಂಗ ಸಾಹಿತ್ಯವಾಯಿತ್ತೆಂಬುದೀಗ, ಒಬ್ಬ ಹೇಮವರ್ಣ ವೆಂಬ ಶಬ್ದಕ್ಕರ್ಥ. ಅಂತು ಇಷ್ಟಲಿಂಗ ಸಂಬಂಧವಾಗಲು ತಮೋಗುಣ ಸಂಬಂಧ ವಾದ ಕಾರಣ ದೇಹದಲ್ಲಿ ಭಾವಲಿಂಗ ಸಂಬಂಧವಾಯಿತ್ತೆಂಬುದೀಗ, ಒಬ್ಬ ಕಪೋತ ವರ್ಣವೆಂಬ ಶಬ್ದಕ್ಕರ್ಥ. ಅಂತು ಭಾವಲಿಂಗ ಸಂಬಂಧವಾಗಲು, ಸಾತ್ವಿಕ ಗುಣ ಸಂಬಂಧವಾದ ಸೂಕ್ಷ್ಮ ದೇಹದಲ್ಲಿ ಪ್ರಾಣಲಿಂಗ ಸಂಬಂಧವಾಯಿ ತ್ತೆಂಬುದೀಗ, ಒಬ್ಬ ಶ್ವೇತ ವರ್ಣವೆಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧಲಿಂಗಕ್ಕೆ ಮಾತೃಸ್ಥಾನವಾದ ಇಚ್ಛಾ ಜ್ಞಾನ ಕ್ರಿಯೆಯೆಂಬ ತ್ರಿವಿಧಶಕ್ತಿಗಳೆಂಬುದೀಗ, ಈ ಮೂವರ ಮಕ್ಕಳ ತಾಯಿ ಎಂಬ ಶಬ್ದಕ್ಕರ್ಥ. ಇಚ್ಛಾಶಕ್ತಿಗೆ ಶಿವಾಪೇಕ್ಷೆ ಯುಂಟಾಗಿ, ಭಿನ್ನಾಪೇಕ್ಷೆ ಇಲ್ಲವೆಂಬುದೀಗ, ಒಬ್ಬಳಿಗೆ ಬಾಯಿಲ್ಲವೆಂಬ ಶಬ್ದ ಕ್ಕರ್ಥ. ಜ್ಞಾನ ಶಕ್ತಿಗೆ ಪರಮಾಮೃತರಸನೆಯುಂಟಾಗಿ ವಾಗ್ಜಾಲವಿಲ್ಲವೆಂಬು ದೀಗ, ಒಬ್ಬಳಿಗೆ ನಾಲಿಗೆಯಿಲ್ಲವೆಂಬ ಶಬ್ದಕ್ಕರ್ಥ. ಮತ್ತೆ ಕ್ರಿಯಾಶಕ್ತಿಗೆ ಸಕಲ ಕರಣಂಗಳೆಲ್ಲ ಜ್ಞಾನಕರಣಂಗಳಾಗಿರ್ದ ಕರಣ ಮಥನ ವಿಲ್ಲವೆಂಬುದೀಗ, ಒಬ ಳಿಗೆ ಹಲ್ಲಿಲ್ಲವೆಂಬ ಶಬ್ದಕ್ಕರ್ಥ. ಇಂತಪ್ಪ ಇಚ್ಛಾ ಜ್ಞಾನ ಕ್ರಿಯೆಯೆಂಬ ತ್ರಿವಿಧಶಕ್ತಿ ಗಳು ತ್ರಿವಿಧ ಭಕ್ತಿಗಳಿಂ ತ್ರಿವಿಧ ಲಿಂಗದಲೊಡಗೂಡಿ ಶಿವೋಹಂ-ಶಿವೋಹಂ ಯೆನುತ್ತಿರ್ದರೆಂಬುದೀಗ, ಇಂತೀ ಮೂವರು ಕೂಡಿ ಮಾತಾಡುತ್ತಿರ್ದರೆಂಬ ಶಬ್ದಕ್ಕರ್ಥ. ಆ ಸೋಹಂ ಭಾವವು ನಿರಹಂಭಾವದಿಂ ಲಿಂಗದಲ್ಲಿ ನಿಷ್ಪತ್ತಿಯಾಯಿ ತ್ತೆಂಬುದೀಗ, ಮಾತಾಡುವದ ಕಂಡು ಇದೇತರ ಮಾತೆಂದು ಅಡಗಿದ ಗೂಡಿ ನೊಡೆಯ ಗುಮ್ಮಟನಾಥ ಅಗಮ್ಯೇಶ್ವರ ಲಿಂಗವೆಂಬ ಶಬ್ದಕ್ಕರ್ಥ.

೨೦

ಗುಡಿಯೊಡೆಯಂಗೆ ಕಂಬವೊಂದು ಬಿಗಿವೊಳೆಯುಂಟು
ಕಂಬಕ್ಕೆ ಕಟ್ಟಿದ ಆಧಾರದ ದಾರ ಒಯ್ಯು,
ಗುಡಿಯ ಸಂದು ಹದಿನಾರು
ಕೂಟದ ಸಂಪಿನ ಪಟ್ಟಿ ಇಪ್ಪತ್ತೈದು,
ಒಂಭತ್ತು ಬಾಗಿಲು ಮುಗಿಯಿತ್ತು,
ಗುಡಿ, ಗುಡಿಯ ಮೇಲೆ ಮೂರು ಕಳಸ
ಮೂರಕ್ಕೊಂದೇ ರತ್ನದ ತುದಿಬೆಳಗು,
ಬೆಳಗಿನ ಪ್ರಜ್ವಲತದಿಂ ಗುಡಿಯೊಡೆಯಿತ್ತು
ಗುಡಿಯೊಳಗಾದವೆಲ್ಲವೂ ಅಲ್ಲಿಯೆ ಅಡಗಿತ್ತು ಕಳಸದ ಕಳೆ ಹಿಂಗಿತ್ತು

ಮಾಣಿಕ್ಯದ ಬೆಳಗಿನಲ್ಲಿ ಆ ಬೆಳಗಡಗಿತ್ತು
ಗೂಡಿನೊಡೆಯ ಗುಮ್ಮಟನಾಥ ಅಗಮೇಶ್ವರ ಲಿಂಗದಲ್ಲಿ
ಒಡಗೂಡಿತ್ತು

**ಟೀಕು:—** ಪಂಚಭೂತಾಶ್ರಯವಾದ ದೇಹಕ್ಕೆ ಕರ್ತನಾಗಿರ್ಪ ಜೀವನೆಂಬುದೀಗ, ಗೂಡಿನೊಡೆಯಂಗೆ ಎಂಬ ಶಬ್ದಕ್ಕರ್ಥ. ಅಂತಾದೇಹ ಸಂಬಂಧಿಯಾಗಿರ್ಪ ಜೀವಂಗೆ, ಭಾವಸ್ತಂಭ ವೊಪ್ಪುತ್ತಿಹುದೆಂಬುದೀಗ, ಕಂಭವೊಂದು ಎಂಬ ಶಬ್ದಕ್ಕರ್ಥ. ಅಷ್ಟತನುಗಳ ದೇಹದಲ್ಲಿ ಬಂಧಿಸಿಕೊಂಡಿರುತ್ತಹೆಂಬುದೀಗ, ಬಿಗಿ ಮೊಳೆಯೆಂಟು ಎಂಬ ಶಬ್ದಕ್ಕರ್ಥ. ಆ ಭಾವಸ್ತಂಭದಲ್ಲಿ ಪಂಚಪ್ರಾಣವಾಯುಗಳು ಬಂಧಿಸಿರುತ್ತಿಹವೆಂಬುದೀಗ, ಕಂಬಕ್ಕೆ ಕಟ್ಟಿದ ಆಧಾರದ ದಾರವೈದು ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ಅಂತರಂಗದ ಅಷ್ಟಮದಂಗಳು, ಬಹಿರಂಗದ ಅಷ್ಟಮದಂಗಳು ಸಂಬಂಧವಾಗಿಹವೆಂಬುದೀಗ, ಗುಡಿಯ ಸಂದು ಹದಿನಾರು ಎಂಬ ಶಬ್ದಕ್ಕರ್ಥ. ಆ ದೇಹಕ್ಕೆ ಸಂಬಂಧವಾಗಿರ್ಪ ತತ್ವವಿಪ್ಪತ್ತೈದು ಎಂಬುದೀಗ, ಕೂಡಿದ ಸಂಧಿನ ಪಟ್ಟಿ ಇಪ್ಪತ್ತೈದು ಎಂಬ ಶಬ್ದಕ್ಕರ್ಥ. ಆ ದೇಹಕ್ಕೆ ನವದ್ವಾರಂಗಳೆ ಬಾಗಿಲವಾಗಿಹವೆಂಬುದೀಗ, ಒಂಭತ್ತು ಬಾಗಿಲೆಂಬ ಶಬ್ದಕ್ಕರ್ಥ. ಇಂತಪ್ಪ ತತ್ವಂಗಳನೊಳಕೊಂಡು ದೇಹವೆಂಬ ದೇಗುಲವೊಪ್ಪುತ್ತಿಹುದಾತ್ಮಂಗೆಂಬುದೀಗ, ಮುಗಿದಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹ ಮಧ್ಯದಲ್ಲಿ ಜ್ಞಾನ, ಸುಜ್ಞಾನ, ಮಹಾಜ್ಞಾನ, ಪ್ರಭಾವಿಸಿದವೆಂಬುದೀಗ, ಗುಡಿಯ ಮೇಲೆ ಮೂರು ಕಳಸವೆಂಬ ಶಬ್ದಕ್ಕರ್ಥ. ಅಂತು ಸುಜ್ಞಾನೋದಯವಾದ ಶರಣಂಗೆ ಶ್ರೀಗುರು ಕಾರುಣ್ಯದಿಂದ ಆ ತ್ರಿವಿಧ ಜ್ಞಾನಂಗಳ ಮಧ್ಯದಲ್ಲಿರ್ಪ ಚಿತ್ಪ್ರಭಾಲಿಂಗ ಪ್ರಭಾವಿಸಿ ತ್ರಿವಿಧಲಿಂಗ ಸ್ವರೂಪವಾಯಿತ್ತೆಂಬುದೀಗ, ಮೂರಕ್ಕೊಂದೆ ರತ್ನದ ಕುಡಿಬೆಳಗು ಎಂಬ ಶಬ್ದಕ್ಕರ್ಥ. ಆ ತ್ರಿವಿಧಲಿಂಗದ ಪರಮ ಪ್ರಕಾಶದಿಂ ಶರಣನ ತ್ರಿವಿಧಾಂಗವು ನಿಷ್ಪತ್ತಿಯಾದವೆಂಬುದೀಗ, ಗುಡಿಯೊಳಗಾದವೆಲ್ಲವು ಅಲ್ಲಿಯೆ ಅಡಗಿತ್ತೆಂಬ ಶಬ್ದಕ್ಕರ್ಥ. ಶರಣನ ಜ್ಞಾನತ್ರಯಂಗಳಿಗೆ ಚೈತನ್ಯವಾದ ಲಿಂಗತ್ರಯಂಗಳು ಚಿತ್ಪ್ರಭಾಲಿಂಗದ ಪರಮ ಪ್ರಕಾಶದಲ್ಲಿ ನಿಷ್ಪತ್ತಿಯಾದವೆಂಬುದೀಗ, ಕಳಶದ ಕಳೆ ಹಿಂಗಿತ್ತು, ಮಾಣಿಕ್ಯದ ಬೆಳಗಿನಲ್ಲಿ ಎಂಬ ಶಬ್ದಕ್ಕರ್ಥ. ಆ ಮಹಾಘನಲಿಂಗದ ಚಿತ್ಪ್ರಕಾಶವು ನಿಷ್ಕಲ ಪರಬ್ರಹ್ಮದಲ್ಲಿ ಸಮರಸಭಾವದಿಂ ನಿಷ್ಪತ್ತಿಯಾಯಿತ್ತೆಂಬುದೀಗ, ಬೆಳಗಡಗಿತ್ತು ಗೂಡಿನೊಡೆಯ ಗುಮ್ಮಟನಾಥ ಅಗಮೇಶ್ವರಲಿಂಗದಲ್ಲಿ ಒಡಗೂಡಿತ್ತು ಎಂಬ ಶಬ್ದಕ್ಕರ್ಥ.

೨೧

ಅಂಬುಧಿಯಲ್ಲಿ ಅಂಬಿಗ ಮನೆಯ ಮಾಡಿ ಕುಂಭಿನಿಯಲ್ಲಿರಲೊಲ್ಲದೆ
ಹರುಗೋಲ ಬೆಂಬಳಿಯಲ್ಲಿ ಬದುಕಿಹೆನೆಂದು ಹೋದಡೆ
ಹರುಗೋಲ ತುಂಬಿ ಮುಂದಿ ಸಂವಣಿಸಿತ್ತು
ಗಣೆಯ ಹಿಡಿದು ಒತ್ತುವದಕ್ಕೆ ದಾವಿಲ್ಲದೆ

ಅಂಬಿಗ ಹಿಂಗಿ ಹೆರೆ ಸಾರಿ ಹರುಗೋಲಂಬುಧಿಯಲ್ಲಿ ಮುಳುಗಿತ್ತು
ಗೂಡಿನೊಡೆಯ ಗುಮ್ಮಟನಾಥ ಅಗಮೇಶ್ವರ ಲಿಂಗವನರಿಯದೆ

**ಟೀಕು:—** ಶಿವಸಾಗರವೆಂಬುದೀಗ, ಅಂಬುಧಿಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಭವಸಾಗರದಲ್ಲಿ ಶಿವಾಂಶೀಕನಾದ ಜ್ಞಾನ ಕಲಾತ್ಮನು ದೇಹವನಾಶ್ರಯವ ಮಾಡಿಕೊಂಡನೆಂಬುದೀಗ, ಅಂಬಿಗ ಮನೆಯ ಮಾಡಿ ಎಂಬ ಶಬ್ದಕ್ಕರ್ಥ. ಅಂತು ದೇಹ ಸಂಬಂಧಿಯಾಗಿರ್ಪ ಜೀವನ ಶಿವಾದ್ವೈತ ಭಕ್ತಿಯಲ್ಲಿ ಸ್ವಸ್ಥಿರವಾಗದೆ ಆ ದೇಹದ ಬಳಿ ಹಿಡಿದು ಭಿನ್ನಕ್ರೀಗಳ ಮಾಡಿ ಫಲಪದಂಗಳ ಪಡೆವುತ್ತಿಹರೆಂಬುದೀಗ, ಕುಂಭಿನಿಯಲ್ಲಿರಲೊಲ್ಲದೆ ಹರುಗೋಲು ಬೆಂಬಳಿಯಲ್ಲಿ ಬದುಕಿಹೆನೆಂದು ಹೋದಡೆ ಎಂಬ ಶಬ್ದಕ್ಕರ್ಥ. ಅಂತು ಭಿನ್ನ ಫಲ ಪದಂಗಳ ಪಡೆದು ಭೋಗಿಸಿದಾತ್ಮನ ದೇಹದಲ್ಲಿ ಸಂಸಾರ ವಿಷಯ ಜಲವೇ ತತ್ಪರಿಪೂರ್ಣವಾಗಿ ಸಕಲ ಕರಣಂಗಳ ಪ್ರವರ್ತನೆ ಹೆಚ್ಚಿತ್ತೆಂಬುದೀಗ, ಅಂಬಿಗ ಹಿಂಗಿ ಹೆರೆ ಸಾರಿ ಎಂಬ ಶಬ್ದಕ್ಕರ್ಥ. ಅಂತು ಸುಜ್ಞಾನ ನಷ್ಟವಾಗಲು ಪಂಚಭೂತ ಸಂಬಂಧವಾದ ದೇಹವು ಸಂಸಾರ ವಿಷಯ ಜಲ ಪ್ರವಾಹದಲ್ಲಿ ಲಯವಾಯಿತ್ತೆಂಬುದೀಗ, ಹರುಗೋಲಂಬುಧಿಯಲ್ಲಿ ಮುಳುಗಿತ್ತು ಗೂಡಿನೊಡೆಯ ಗುಮ್ಮಟನಾಥ ಅಗಮೇಶ್ವರ ಲಿಂಗವನರಿಯದೆ ಎಂಬ ಶಬ್ದಕರ್ಥ.

೨೨

ಕಣ್ಣೆಂಬ ಹರುಗೋಲದಲ್ಲಿ ಮಾರ ನಂಬಿಗನಾಗಿ
ಮಥನದ ಹೊಳೆಯಲ್ಲಿ
ರಸದ ಕೋಲನಿಕ್ಕಿ ಒತ್ತಲಾಗಿ ಮುಸಕಿತ್ತು
ಹರುಗೋಲ ದೆಸೆಗೆ ಹೊರಲಾರದು ತಡಿಗೆ ಸಾಗದು
ಮಡುವಿನಲ್ಲಿ ಮುರಳಿತ್ತು, ಇದಕಂಜಿ ನಡುಗಿದೆ ಹರುಗೋಲ ಕಂಡು,
ಗೂಡಿನೊಡೆಯ ಗುಮ್ಮಟನಾಥ ಅಗಮೇಶ್ವರ ಲಿಂಗವ ನರಿಯದೆ.

**ಟೀಕು:—** ಅಜ್ಞಾನ ಚಕ್ಷು ಸಂಬಂಧವಾದ ದೇಹವೆಂಬುದೀಗ, ಕಣ್ಣೆಂಬ ಹರುಗೋಲವಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹಭಾವದ ಸ್ಥಿತಿಗತಿಯ ನಡುಸುವದಕ್ಕೆ ಕಾಮನಂಬಿಗನಾದನೆಂಬುದೀಗ, ಮಾರನಂಬಿಗನಾಗಿ ಎಂಬ ಶಬ್ದಕ್ಕರ್ಥ. ಅಂತು ಅನುಭವಿಸುತ್ತಿದ್ದಾತ್ಮನು, ನಾಫುನ, ತಾಫುನವೆಂಬ ವಾಗಾದ್ವೈತದ ಸಂಸಾರ ವಿಷಯ ಜಾಲವ ಪ್ರವಾಹದಲ್ಲಿ ಎಂಬುದೀಗ, ಮಥನದ ಹೊಳೆಯಲ್ಲಿ ಎಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ಜಲದಲ್ಲಿ ಕೂಡಿ ದುರ್ಭಾವದಿಂ ನಡಸುತ್ತಿರಲು ಎಂಬುದೀಗ, ರಸದ ಕೋಲನಿಕ್ಕಿ ಒತ್ತಲಾಗಿ ಎಂಬ ಶಬ್ದಕ್ಕರ್ಥ. ಅಂತು ಸಂಸಾರ ವಿಷಯ ಜಲದಲ್ಲಿ ಚರಿಸುತ್ತಿರ್ದ ದೇಹವು ಕಾಲಕಾಮಾದಿಗಳಿಂ ಘಾಸಿಯಾಗುತ್ತಿಹುದೆಂಬುದೀಗ, ಮುಸುಕಿತ್ತು ಹರುಗೋಲೆಂಬ ಶಬ್ದಕ್ಕರ್ಥ. ಅಂತಪ್ಪ ದೇಹವು ಸತ್ಪಥವಿಡಿದು ಮೋಕ್ಷ ಮಾರ್ಗದತ್ತ ಲೆಯ್ದಲರಿಯದೆಂಬುದೀಗ, ದೆಸೆಗೆ ಹೋಗಲಾರದೆಂಬ ಶಬ್ದಕ್ಕರ್ಥ. ಅಂತು

ಗುರು ಮಾರ್ಗಾಚಾರಕ್ಕೆ ಬಾರದೆ ಘಾತಕಾಣಬಾರದೆಯಿರ್ದ ಸಂಸಾರ ವಿಷಯ ಜಲಪ್ರವಾಹಪತ್ತ ಲಭಿಮುಖವಾಯಿತ್ತೆಂಬುದೀಗ, ತಡಿಗೆ ಸಾಗದು ಮಡುವಿನಲ್ಲಿ ಮರಳಿತ್ತು ಎಂಬ ಶಬ್ದಕ್ಕರ್ಥ. ಸುಜ್ಞಾನ ಸನ್ನಹಿತವಾದ ಲಿಂಗಶರಣನು ದೇಹ ಸಂಸಾರದ ಸ್ಥಿತಿಗತಿ ಪ್ರಪಂಚಗಳು ಕಡಿಗೆ ತೊಲಗಿಸಿದನೆಂಬುದೀಗ, ಇದಕಂಜಿ ನಡುಗಿದೆ ಹರುಗೋಲ ಕಂಡು ಗೂಡಿನೊಡೆಯ ಗುಮ್ಮಟನಾಥ ಅಗಮೇಶ್ವರ ಲಿಂಗವನರಿಯದೆ ಎಂಬ ಶಬ್ದಕ್ಕರ್ಥ.

## ೨೩

ತನುವಿನೊಳಗಣ ತನು, ಮನದೊಳಗಣ ಮನ,
ಜ್ಞಾನದೊಳಗಣ ಜ್ಞಾನ, ಕಾಣುವ ಕಣ್ಣಿಗೆ ಮತ್ತ
ಮೂಕಣ್ಣ ತೆಗೆದು ನೋಡಲಾಗಿ ಬ್ರಹ್ಮ ಹರುಗೋಲವಾದ
ವಿಷ್ಣು ಸಟ್ಟುಗವಾದ, ರುದ್ರನಂಬಿಗನಾಗಿ ಹೊತ್ತಿದ ಹರುಗೋಲು
ಸಿಕ್ಕಿತ್ತು ಹಾತಾಂಗವೆಂಬ ಪರ್ವತದ ತಪ್ಪಲಿನ ಸಿಲುಕುಗಲ್ಲಿನಲ್ಲಿ
ಹರುಗೋಲು ಕೊಳತಿತ್ತು ಹುಟ್ಟು ಮುರಿಯಿತ್ತು
ಅಂಬಿಗ ಎತ್ತ ಹೋದನೆಂದರಿಯೆ, ಎನಗಾ ಬಟ್ಟೆಯ ಹೇಳಾ,
ಗೂಡಿನೊಡೆಯ ಗುಮ್ಮಟನಾಥ ಅಗಮೇಶ್ವರ ಲಿಂಗ.

**ಟೀಕು:—** ಸುಜ್ಞಾನೋದಯವಾದ ಶರಣಂಗೆ ಶ್ರೀಗುರು ಕಾರುಣದಿಂ ಸ್ಥೂಲಾಂಗದಲ್ಲಿ ಚೈತನ್ಯಸ್ವರೂಪವಾದ ಇಷ್ಟಲಿಂಗ ಸಾಹಿತ್ಯವಾಯಿತ್ತೆಂಬುದೀಗ, ತನುವಿನೊಳಗಣ ತನುವೆಂಬ ಶಬ್ದಕ್ಕರ್ಥ. ಶರಣನ ಪುನ್ಮನಿಸ್ವರೂಪವಾದ ಮನೋಮಧ್ಯದಲ್ಲಿ ಚಿದ್ರೂಪವಾದ ಪ್ರಾಣಲಿಂಗ ಸಂಬಂಧವಾಯಿತ್ತೆಂಬುದೀಗ, ಮನದೊಳಗಣ ಮನವೆಂಬ ಶಬ್ದಕ್ಕರ್ಥ. ಶರಣನು ಸುಜ್ಞಾನ ಪ್ರಕಾಶದಲ್ಲಿ ಆನಂದಸ್ವರೂಪವಾದ ಭಾವಲಿಂಗ ಸಂಬಂಧವಾಯಿತ್ತೆಂಬುದೀಗ, ಜ್ಞಾನದೊಳಗಣ ಜ್ಞಾನವೆಂಬ ಶಬ್ದಕ್ಕರ್ಥ. ಈ ತ್ರಿವಿಧಲಿಂಗದ ನಿಜಸ್ವರೂಪವನು ಶರಣನ ಭಿನ್ನ ಜ್ಞಾನದೃಷ್ಟಿಯಿಂ ನೋಡುತ್ತಿರ್ದನೆಂಬುದೀಗ, ಕಾಣುವಕಣ್ಣಿಗೆ ಎಂಬ ಶಬ್ದಕ್ಕರ್ಥ. ಈ ತ್ರಿವಿಧ ಲಿಂಗದ ನಿಜಸ್ವರೂಪವನು ಸುಜ್ಞಾನದೃಷ್ಟಿಯಿಂ ನಿರೀಕ್ಷಿಸುತ್ತಿರಲು ಮೂಲ ಜ್ಞಾನ ಪ್ರಭಾವಿಸಿತ್ತೆಂಬುದೀಗ, ಮತ್ತ ಮೂಕಣ್ಣ ತೆಗೆದು ನೋಡಲಾಗಿ ಎಂಬ ಶಬ್ದಕ್ಕರ್ಥ. ಆಚಾರ ಸಂಬಂಧವಾದ ಶ್ರೀ ಗುರುತತ್ವವೆಂಬುದೀಗ, ಬ್ರಹ್ಮ ಹರುಗೋಲವಾದನೆಂಬ ಶಬ್ದಕ್ಕರ್ಥ. ನೈಷ್ಟಸಂಬಂಧವಾದ ಮಹಾಘನಲಿಂಗವೆಂಬುದೀಗ, ವಿಷ್ಣುಸಟ್ಟುಗವಾದನೆಂಬ ಶಬ್ದಕ್ಕರ್ಥ. ಮಹಾಜ್ಞಾನ ಸ್ವರೂಪವಾದ ಜಂಗಮವೆ ಸುಜ್ಞಾನ ಬೋಧೆಯ ಬೋಧಿಸುತ್ತಿಹನೆಂಬುದೀಗ, ರುದ್ರನಂಬಿಗನಾಗಿ ಎಂಬ ಶಬ್ದಕ್ಕರ್ಥ. ತನುತ್ರಯಂಗಳಲ್ಲಿ ಗುರು—ಲಿಂಗ–ಜಂಗಮ ಸಾಹಿತ್ಯವಾಗಿ ಶರಣನ ತ್ರಿವಿಧ ಭಕ್ತಿವಿಡಿದಾಚರಿಸುತ್ತಿಹನೆಂಬುದೀಗ, ಒತ್ತಿದ ಹರುಗೋಲು ಎಂಬ ಶಬ್ದಕ್ಕರ್ಥ. ಶಿವೋಹಂ ಭಾವ ಸನ್ನಹಿತವಾದ ಚಿದಹಂಕಾರ

ವೆಂಬಗಿರಿಯು ನಿವೃತ್ತಿಮಾರ್ಗವನೆಯ್ದಿದ ತನು ತ್ರಯಂಗಳ ಮಧ್ಯದಲ್ಲಿರ್ಪ ಜ್ಞಾನ ಸ್ವರೂಪವಾದ ಪರಶಿವತತ್ವದಲ್ಲಿ ಗುರುತತ್ವಸಂಬಂಧವಾದ ಆಚಾರಾಂಗವು ಲಿಯ್ಯವಾಯಿತ್ತೆಂಬುದೀಗ, ಸಿಕ್ಕಿತ್ತು ಮಾತಾಂಗವೆಂಬ ಪರ್ವತದ ತಪ್ಪಲಿನ ಸಿಲುಕು ಗಲ್ಲಿನಲ್ಲಿ ಎಂಬ ಶಬ್ದಕ್ಕರ್ಥ. ಆಚಾರಾಂಗವು ಪರಶಿವ ತತ್ವದಲ್ಲಿ ಸಮರಸವಾಯಿತ್ತೆಂಬುದೀಗ, ಹರುಗೋಲು ಕೊಳತಿತ್ತೆಂಬ ಶಬ್ದಕ್ಕರ್ಥ- ಆಚಾರಾಂಗವು ಲಿಂಗದಲ್ಲಿ ಸಮರಸವನೆಯ್ದಲು ಶರಣನ ನೈಷ್ಠಿಯು ಚಿದ್ ಘನಲಿಂಗದಲ್ಲಿ ವಿಶ್ರಮಿಸಿತ್ತೆಂಬುದೀಗ, ಪುಟ್ಟುಮುರಿಯಿತ್ತೆಂಬ ಶಬ್ದಕ್ಕರ್ಥ. ಆ ಸುಜ್ಞಾನ ಜಂಗಮವು ಶರಣನರಿವಿನಲ್ಲಿ ಸಮರಸವಾಗಲು ತಾನಾಭೇದವನರಿಯದೆ ಆ ಸುಜ್ಞಾನಮಾರ್ಗವ ಬೆಸಗೊಳ್ಳುತ್ತಿರ್ದನೆಂಬುದೀಗ, ಅಂಬಿಗ ಎತ್ತಹೋದನೆಂದರಿಯೆ ಎನಗಾ ಬಟ್ಟೆಯ ಹೇಳಾ, ಗೂಡಿನೊಡೆಯ ಗುಮ್ಮಟನಾಥ ಆಗಮೇಶ್ವರಲಿಂಗಾ ಎಂಬ ಶಬ್ದಕ್ಕರ್ಥ.

೨೪

ಕಾಡಗುರಿ ತನೆಯಾಗಿ ಬಂದು ಊರೊಳಗೆ ಮೂರು ಮರಿಯನಿತ್ತು
ಅವರ ವರ್ಣವು ಒಂದೆಡೆವೊಂದು ಕಾಡವೊಂದು
ಎಲ್ಲರ ಕೂಡಿದ ಬಣ್ಣ ಹೆಂಗುರಿ ಸತ್ತಿತ್ತು
ಮರಿಗೊಡೆಯರಿಲ್ಲ, ಆ ಮರಿಯ ಕಾವಡಿ ಕಾಲಿಲ್ಲದೆ ಕೈಯಿಲ್ಲದೆ,
ಕಣ್ಣಿಲ್ಲದೆ ಕಾಯಬೇಕು ಆ ಮರಿಯರಿದು
ನಮಗಿನ್ನಾರು ಇಲ್ಲವೆಂದು
ಎಡಕಾಡ ನೊಳಡಗಿ, ನಾನಾ ವರ್ಣದೊಳಗಡಗಿ,
ನಾನಾವರ್ಣ ನಾಡಿನೊಳಗಡಗಿ, ನಾಡು ನಾದದೊಳಗಡಗಿ
ನಾದ ಸುನಾದದೊಳಗಡಗಿ, ಸುನಾದ ಸುರಾಳವಾಗಿದ್ದಲ್ಲಿ
ಗುಡಿ ಗುಹೆಯ ಗುಮ್ಮಟನಾಥ ಆಗಮೇಶ್ವರ ಲಿಂಗ ನಿರಾಳನಾಗಿರ್ದ

ಟೀಕು:— ಭವಾರಣ್ಯ ಪ್ರವೇಶಿಯಾಗಿರ್ದ ಮಾಯೆ ಎಂಬುದೀಗ, ಕಾಡಗುರಿ ಎಂಬ ಶಬ್ದಕ್ಕರ್ಥ. ಆ ಮಾಯೆಗೆ ಜೀವನ ಸಂಯೋಗದಿಂ ಪ್ರಪಂಚಿನ ಗರ್ಭಚಿನ್ಹ ತೋರಿ ಪಂಚಭೂತ ಗ್ರಾಮವನಾಶ್ರಯಿಸಲು ಅಲ್ಲಿ ಜೀವತ್ರಯಂಗಳು ಉದಯಿಸಿದವೆಂಬುದೀಗ, ತನೆಯಾಗಿಬಂದು ಊರೊಳಗೆ ಮೂರು ಮರಿಯನಿತ್ತು ಎಂಬ ಶಬ್ದಕ್ಕರ್ಥ. ಸ್ಥೂಲದೇಹ ಸಂಬಂಧಿಯಾದ ವಿಶ್ವನು ಅಜ್ಞಾನಿಯಾಗಿರುತ್ತಿಹನೆಂಬುದೀಗ, ಅವರ ವರ್ಣ ಒಂದೆಡನೆಂಬ ಶಬ್ದಕ್ಕರ್ಥ. ಸೂಕ್ಷ್ಮದೇಹ ಸಂಬಂಧಿಯಾದ ತೈಜಸನು ಅರಿವು ಮರವೆಯೊಳಗಿರುತ್ತಿಹನೆಂಬುದೀಗ, ಒಂದು ಕಾಡನೆಂಬ ಶಬ್ದಕ್ಕರ್ಥ. ಕಾರಣದೇಹ ಸಂಬಂಧಿಯಾದ ಪ್ರಾಜ್ಞನು ಸಕಲ ಕರಣಂಗಳ ವ್ಯವಹಾರದಲ್ಲಿ ಕೂಡಿರುತ್ತಿಹನೆಂಬುದೀಗ, ಒಂದು ಎಲ್ಲರ ಕೂಡಿದ ಬಣ್ಣವೆಂಬ ಶಬ್ದಕ್ಕರ್ಥ. ಇಂತಪ್ಪ ಪಿಂಡದ ಮಧ್ಯದಲ್ಲಿ ಶಿವಕೃಪೆಯಿಂದ ಸಮ್ಯಜ್ಞಾನವು ಉದಯವಾಗಲು ಆ ಮಾಯೆ ಅಳಿಯಿತ್ತೆಂಬುದೀಗ, ಹೆಂಗುರಿ ಸತ್ತಿ

ತ್ತೆಂಬ ಶಬ್ದಕ್ಕರ್ಥ. ಆ ಮಾಯೆಯಳಿಯಲು ಜೀವ ತ್ರಯಂಗಳ ಅಜ್ಞಾನ ನಿವೃತ್ತಿಯಾಗಿ ಕಾಲ-ಕಾಮರ ಭಯ ಹಿಂಗಿತ್ತೆಂಬುದೀಗ, ಮರಿಗೊಡೆಯಿಲ್ಲವೆಂಬ ಶಬ್ದಕ್ಕರ್ಥ. ಅನ್ಯವಾದ ಮಾಯಾ ಪ್ರಪಂಚಿನತ್ತ ಅಡಿಯಿಡದ ಹಾಗೆ ಶಿವ ಭಾವದಲ್ಲಿ ಅವಗ್ರಹಿಸಿಹವೆಂಬುದೀಗ, ಆ ಮರಿಯ ಕಾವಡೆಯೆಂಬ ಶಬ್ದಕ್ಕರ್ಥ. ಆ ಶಿವಭಾವದಲ್ಲಿ ಸನ್ನಿಹಿತವಾದ ಜೀವತ್ರಯಂಗಳನು ಭಿನ್ನಕ್ರಿಯಾಚಾರವಳಿದ ಅಭಿನ್ನಕ್ರಿಯಾಚಾರ ಸಂಬಂಧವಾದ ವಿಶ್ವನಲ್ಲಿ ಕ್ರಿಯಾದೀಕ್ಷೆಯಿಂದ ಇಷ್ಟಲಿಂಗ ಸಂಬಂಧವ ಮಾಡಿದನೆಂಬುದೀಗ, ಕಾಲಿಲ್ಲದೆಯೆಂಬ ಶಬ್ದಕ್ಕರ್ಥ. ಭಿನ್ನಭಾವವಳಿದು ಅಭಿನ್ನ ಭಾವಸಂಬಂಧವಾದ ತೈಜಸನಲ್ಲಿ ಮಂತ್ರದೀಕ್ಷೆಯಿಂ ಪ್ರಾಣಲಿಂಗ ಸಂಬಂಧವಾಯಿತ್ತೆಂಬುದೀಗ, ಕೈಯಿಲ್ಲದೆ ಎಂಬ ಶಬ್ದಕ್ಕರ್ಥ. ಭಿನ್ನಜ್ಞಾನ ದೃಷ್ಟಿಯಿಲ್ಲದ, ಅಭಿನ್ನ ಜ್ಞಾನ ದೃಷ್ಟಿಯುಳ್ಳ ಪ್ರಾಜ್ಞನಲ್ಲಿ ವೇಧಾದೀಕ್ಷೆಯಿಂ ಭಾವಲಿಂಗ ಸಂಬಂಧವಾಯಿತ್ತೆಂಬುದೀಗ, ಕಣ್ಣಿಲ್ಲದೆ ಎಂಬ ಶಬ್ದಕ್ಕರ್ಥ. ಆ ಜೀವತ್ರಯಂಗಳಲ್ಲಿ ಲಿಂಗತ್ರಯ ಸಂಬಂಧವಾಗಿ ಕ್ರಿಯಾಜ್ಞಾನ ಭಾವ ವಿವಾಚರಿಸಿ ರಕ್ಷಿಸುತ್ತಿಹ ಶರಣನೆಂಬುದೀಗ, ಕಾಯಬೇಕು ಎಂಬ ಶಬ್ದಕ್ಕರ್ಥ. ಆ ಜೀವತ್ರಯಂಗಳು ತಮ್ಮಲ್ಲಿ ಗುರುಕರುಣದಿಂ ಲಿಂಗತ್ರಯ ಸಂಬಂಧವಾದ ಭೇದವ ಶಿವಜ್ಞಾನ ಪ್ರಕಾಶದಿಂ ತಿಳಿದು ಎಂಬುದೀಗ, ಆ ಮರಿಯರಿದು ಎಂಬ ಶಬ್ದಕ್ಕರ್ಥ. ಆ ಶಿವಜ್ಞಾನ ಪ್ರಕಾಶದಿಂ ಸಕಲ ಮಾಯಾ ಪ್ರಪಂಚೆಲ್ಲವು ನಿವೃತ್ತಿಯಾಯಿತ್ತೆಂಬುದೀಗ, ಇಷ್ಟಲಿಂಗ ಸಂಬಂಧಿಯಾದ ವಿಶ್ವನು ಪ್ರಾಣಲಿಂಗ ಸಂಬಂಧಿಯಾದ ತೈಜಸನ ಅರಿವಿನಲ್ಲಿ ಲಿಯ್ಯವಾದನೆಂಬುದೀಗ, ನಮಗಿನ್ನಾರು ಇಲ್ಲ ಎಂದು ಎಡಕಾಡಿನೊಳಡಗಿ ಎಂಬ ಶಬ್ದಕ್ಕರ್ಥ. ಆ ಪ್ರಾಣಲಿಂಗ ಸಂಬಂಧಿಯಾದ ತೈಜಸನು ಭಾವ ಲಿಂಗ ಸಂಬಂಧಿಯಾದ ಪ್ರಾಜ್ಞನ ಶಿವಭಾವದಲ್ಲಿ ಏಕಾರ್ಥವಾದನೆಂಬುದೀಗ, ಕಾಡು ನಾನಾವರ್ಣದೊಳಡಗಿ ಎಂಬ ಶಬ್ದಕ್ಕರ್ಥ. ಆ ಭಾವಲಿಂಗ ಸಂಬಂಧಿಯಾದ ಪ್ರಾಜ್ಞನು ಸದಾಚಾರ ಸಂಪತ್ತಿನಲ್ಲಿ ಲಿಯ್ಯವಾಗಿಹನೆಂಬುದೀಗ, ನಾನಾ ವರ್ಣದ ನಾಡಿನೊಳಡಗಿ ಎಂಬ ಶಬ್ದಕ್ಕರ್ಥ. ಆ ಸದಾಚಾರ ಸಂಪತ್ತು ಪ್ರಣವ ಮಂತ್ರ ಸ್ವರೂಪವಾದ ಗುರು ತತ್ವದಲ್ಲಿ ಏಕಾರ್ಥವಾಯಿತ್ತೆಂಬುದೀಗ, ನಾಡು ನಾದದೊಳಡಗಿ ಎಂಬ ಶಬ್ದಕ್ಕರ್ಥ. ಆ ಸತ್ಪ್ರಣವ ಸ್ವರೂಪವಾದ ಗುರು ತತ್ವವು ಸುಚೈತನ್ಯ ಸ್ವರೂಪವಾದ ಮಹಾಘನಲಿಂಗದಲ್ಲಿ ಲಿಯ್ಯವಾಯಿತ್ತೆಂಬುದೀಗ, ನಾದ ಸುನಾದದೊಳಡಗಿ ಎಂಬ ಶಬ್ದಕ್ಕರ್ಥ. ಆ ಸುಚೈತನ್ಯ ಸ್ವರೂಪವಾದ ಮಹಾಘನಲಿಂಗವು ಸಾಕಾರವಾದ ಇಷ್ಟಲಿಂಗ ಸ್ವರೂಪವಾಗಿ ಶರಣನ ಸರ್ವಾಂಗವ ಸವಗ್ರಹಿಸಿ ಸಿರ್ದಯಲಾಗಿತ್ತೆಂಬುದೀಗ, ಸುರಾದ ಸುರುಳವಾಗಿರ್ದಲ್ಲಿ ಗುಡಿಯ ಗುಹೆಯ ಗುಮ್ಮಟನಾಥ ಅಗಮೇಶ್ವರಲಿಂಗ ನಿರಾಳನಾಗಿರ್ದನೆಂಬ ಶಬ್ದಕ್ಕರ್ಥ.

೨೫

ಒಂದುಪ್ಪರಿಗೆಯ ಮಂದಿರದಲ್ಲಿ ಉಭಯ ಮಧ್ಯದ ಬಾಗಿಲಲ್ಲಿ
ಕಟ್ಟಿತ್ತೊಂದು ಬಲುಗೊಡಗ, ಬಾಯ ಆಣಲಿನ ಸಂಚವ

ಕೂಳು ಉಡಿಯೊಳಗಣ ಬೆಂಬೆಯು ಹಂಬು
ಹಂಬಿನೊಳಗಣ ಬಹು ಧಾನ್ಯದ ತೆನೆ ನೆಟ್ವಾಗಳೆ
ಮೂರು ತಿಪ್ಪಣದ ಮಣೆಯೊಂದು ಮಣೆಯಲ್ಲಿ ಕುಳಿತು
ಅಣಲ ಸಂಚಲದಿಂದಿತ್ತು, ಒಂದು ಮಣೆಯಲ್ಲಿ ಕುಳಿತು
ಉಡಿಯ ತೆನೆಯ ತಿಂದಿತ್ತು, ಮತ್ತೊಂದು ಮಣಿಗೆ ಹೋಗಿ
ಕುಳಿತು ಹಾರೈಸಿತ್ತು
ದೆಸೆಯ ಕಾಣದೆ ನೆಗೆಯಲಾಗಿ ಗಣೆಯ ದಸಿ ತಾಗಿ
ಕೊಡಗದಸು ಹೋಯಿತ್ತು
ಗುಡಿಯ ಗುಮ್ಮಟನೊಡೆಯ ಆಗಮೇಶ್ವರ ಲಿಂಗವ ನರಿಯದೆ.

**ಟೀಕು**:— ಷಡಾಧಾರ ಚಕ್ರಂಗಳ ನೊಳಕೊಂಡೊಪ್ಪುತ್ತಿರ್ದ ತನುವಿನ ಮಧ್ಯದಲ್ಲಿ ಎಂಬುದೀಗ, ಒಂದುಪ್ಪರಿಗೆಯ ಮಂದಿರದಲ್ಲಿ ಎಂಬ ಶಬ್ದಕ್ಕರ್ಥ. ಸ್ಥೂಲಕ್ಕೂ ಕಾರಣಕ್ಕೂ ಮಧ್ಯವಾದಂತರ್ದೇಹದ ಇಂದ್ರಿಯ ದ್ವಾರಂಗಳಲ್ಲಿ ಮನ ವೆಂಬ ಮರ್ಕಟನು ಭವಪಾಶದಲ್ಲಿ ಬಿಗಿವಡೆದಿರುತ್ತಿಹುದೆಂಬುದೀಗ, ಉಭಯ ಮಧ್ಯದ ಬಾಗಿಲಲ್ಲಿ ಕಟ್ಟಿತ್ತೊಂದು ಬಲುಗೂಡಗವೆಂಬ ಶಬ್ದಕ್ಕರ್ಥ. ಆ ಮನಸ್ಸು ಭಿನ್ನಾಪೇಕ್ಷೆಯೆಂಬ ಬಾಯಿಂ ಸಂಕಲ್ಪ-ವಿಕಲ್ಪಂಗಳೆಂಬ ದಂತಂಗಳಿಂ, ಸಂಚಿತ ಕರ್ಮವನವಗ್ರಹಿಸಿತ್ತೆಂಬುದೀಗ, ಬಾಯ ಆ ಗೋಲಿನ ಸಂಚದ ಕೂಳು ಎಂಬ ಶಬ್ದಕ್ಕರ್ಥ. ಆ ಮನಕ್ಕೆ ಜ್ಞಾನ ಸೂತ್ರವೆ ಉಡಿದಾರವಾಗಿಹುದೆಂಬುದೀಗ, ಉಡಿ ಯೊಳಗಣ ಬೆಂಬೆಯು ಹಂಬು ಎಂಬ ಶಬ್ದಕ್ಕರ್ಥ. ಆ ಅಜ್ಞಾನ ಸೂತ್ರದಲ್ಲಿ ಸಕಲ ಕರಣಂಗಳನೊಳಕೊಂಡು ಪಂಚವಿಷಯಂಗಳು ತೋರುತ್ತಿಹುದೆಂಬುದೀಗ, ಹಂಬಿನೊಳಗಣ ಬಹುಧಾನ್ಯದ ತೆನೆಯೆಂಬ ಶಬ್ದಕ್ಕರ್ಥ. ಆ ಮನಸ್ಸಿಂಗೆ ಅಹಂಕಾರ ತ್ರಯಂಗಳೆಂಬುದೀಗ, ನೆಟ್ವಾಗಳೆಮೂರು ಎಂಬ ಶಬ್ದಕ್ಕರ್ಥ. ಆ ಆ ಮನಸ್ಸು ಸ್ಥೂಲದೇಹದಲ್ಲಿರ್ದ ಸಕಲ ಸಂಕಲ್ಪ-ವಿಕಲ್ಪಗಳೆಂಬ ದಂತಂಗಳಿಂ ಸಂಚಿತ ಕರ್ಮವ ನನುಭವಿಸುತ್ತಿಹುದೆಂಬುದೀಗ, ತಿಪ್ಪಣದ ಮಣೆಯೊಂದು ಮಣೆಯಲ್ಲಿ ಕುಳಿತು ಅಣಲ ಸಂಚವ ತಿಂದಿತ್ತು ಎಂಬ ಶಬ್ದಕ್ಕರ್ಥ. ಆ ಮನಸ್ಸು ಸೂಕ್ಷ್ಮತನುವಿನಲ್ಲಿರ್ದ ಪ್ರಾರಬ್ಧ ಭೋಗವ ಭೋಗಿಸುತ್ತಿಹುದೆಂಬುದೀಗ, ಒಂದು ಮಣೆಯಲ್ಲಿ ಕುಳಿತು ಉಡಿಯ ತೆನೆಯ ತಿಂದಿತ್ತು ಎಂಬ ಶಬ್ದಕ್ಕರ್ಥ. ಆ ಮನಸ್ಸು ಕಾರಣ ದೇಹದಲ್ಲಿರ್ದ ಆಶಾ ತೃಷ್ಣೆಯಿಂದಾಗಮ ಕರ್ಮವ ನವ ಗ್ರಹಿಸಿತ್ತೆಂಬುದೀಗ, ಮತ್ತೊಂದು ಮಣಿಗೆ ಹೋಗಿ ಕುಳಿತು ಹಾರೈಸಿತ್ತು ಎಂಬ ಶಬ್ದಕ್ಕರ್ಥ. ಆ ಕರ್ಮತ್ರಯದಲ್ಲಿ ಬದ್ಧವಾದ ಮನೋಮರ್ಕಟನು ಸತ್ಪಥ ಮಾರ್ಗಹಿಡಿದು ಮೋಕ್ಷವ ನೆಯ್ದಲರಿಯದೆ ಹೋಯಿತ್ತೆಂಬುದೀಗ, ದೆಸೆಯ ಕಾಣದೆ ಎಂಬ ಶಬ್ದಕ್ಕರ್ಥ. ಆ ಮನೋ ಮರ್ಕಟನು ಸಕಲ ಪ್ರಪಂಚಿನತ್ತ ಲಂಘಿಸುತ್ತಿರಲು ಅಹಂಕಾರ ಪೂರಿತವಾಯಿತ್ತೆಂಬುದೀಗ, ನೆಗೆಯಲಾಗಿ ಗಣೆಯ ದಸಿತಾಗಿ ಎಂಬ ಶಬ್ದಕ್ಕರ್ಥ. ಆ ಮನಸ್ಸಿಂಗೆ ಅಹಂಕಾರ ಪೂರಿತವಾಗಲು

ಚೈತನ್ಯಸ್ವರೂಪವಾದ ತ್ರಿವಿಧಲಿಂಗದ ನಿಜ ಸ್ವರೂಪು ಕಾಣಿಸಿಕೊಳ್ಳದೆ ಹೋಯಿತ್ತೆಂಬುದೀಗ, ಕೊಡಗದಸು ಹೋಯಿತ್ತು ಗುಡಿಯು ಗುಮ್ಮಟನೊಡೆಯು ಆಗಮೇಶ್ವರ ಲಿಂಗವನರಿಯದೆ ಎಂಬ ಶಬ್ದಕ್ಕರ್ಥ.

---

## ಕಲ್ಯಾಣದ ಭಂಡಾರಿ ಶಾಂತರಸರ ವಚನಗಳು

೧

ಅಗಿಯದ ಭಾವಿಯಲ್ಲಿ ಸೆಲೆಯಿಲ್ಲದ ನೀರಿದೆ,
ಸೇದುವದಕ್ಕೆ ಹುರಿಯಿಲ್ಲದ ಕಣ್ಣಿ, ತುಂಬುವದಕ್ಕೆ ಬಾಯಿಲ್ಲದ ಕುಂಭ,
ಸೇದುವಾತನ ಕಣ್ಣು ತಲೆಯ ಹಿಂದೆ,
ಕಣ್ಣಿಯ ತೆಗೆವ ಕೈಯಿಲ್ಲದೆ ಬಾವಿಯ ತಡಿ ತಡವಾಯಿತ್ತು,
ಅಲೇಖನಾದ ಶೂನ್ಯ ಕಲ್ಲಿನೊಳಗಾದ ಕಾರಣ.

**ಟೀಕು:**— ಶ್ರುತ ಜ್ಞಾನಕ್ಕೆ ಅಸಾಧ್ಯವಾದ ಪರಮಾಮೃತವ ತುಂಬಿಕೊಂಡಿರ್ದ ಚಿತ್ ಕೂಪ ವೆಂಬುದೀಗ, ಅಗಿಯದ ಭಾವಿಯಲ್ಲಿ ಎಂಬ ಶಬ್ದಕ್ಕರ್ಥ. ಆ ಚಿತ್ ಕೂಪದಲ್ಲಿ ಭಿನ್ನ ಜ್ಞಾನವಿಲ್ಲದ ಪರಮಾಮೃತ ರಸ ವಿರುತ್ತಿಹುದೆಂಬುದೀಗ, ಸೆಲೆಯಿಲ್ಲದ ನೀರಿದೆಯೆಂಬ ಶಬ್ದಕ್ಕರ್ಥ. ಆ ಪರಮಾಮೃತ ರಸವ ಸಂತರಂಗ-ಬಹಿರಂಗದಲ್ಲಿ ಸಂಬಂಧವ ಮಾಡುವದಕ್ಕೆ ಶಿವತತ್ವವ ನರಿಯಬೇಕೆಂಬಭ್ರಾಂತಳಿದ ಸ್ವಾನುಭಾವ ಸೂತ್ರದಿಂ ಸಂಬಂಧವ ಮಾಡಿದನೆಂಬುದೀಗ, ಸೇದುವದಕ್ಕೆ ಹುರಿಯಿಲ್ಲದ ಕಣ್ಣಿಯೆಂಬ ಶಬ್ದಕ್ಕರ್ಥ. ಆ ಪರಮಾಮೃತ ರಸವ ನವಗ್ರಹಿಸುವದಕ್ಕೆ ಭಿನ್ನಾಪೇಕ್ಷೆಯಿಲ್ಲದ ಅಖಂಡ ಚಿದ್ಭಾಂಡವೆ ಗಡಿಗೆಯಾಗಿಹುದೆಂಬುದೀಗ, ತುಂಬುವದಕ್ಕೆ ಬಾಯಿಲ್ಲದ ಕುಂಭವೆಂಬ ಶಬ್ದಕ್ಕರ್ಥ. ಆ ಪರಮಾಮೃತ ರಸವನು ಸ್ವಾನುಭಾವ ಸೂತ್ರದಿಂ ಸಂಬಂಧವ ಮಾಡುತ್ತಿರ್ದ ಶರಣನ ಸುಜ್ಞಾನ ದೃಷ್ಟಿಯು ಜ್ಞಾನ ಸ್ವರೂಪನಾದ ಪರಶಿವ ತತ್ವದಲ್ಲಿ ಲಯ್ಯವಾಗಲಾ ಸ್ವಾನುಭಾವ ಸೂತ್ರದಿಂದವ ನವಗ್ರಹಿಸುವ ಸದ್ಭಾವ ಹಸ್ತವಿಲ್ಲದೆ ಅಹಂಬ್ರಹ್ಮವೆನಲು ಚಿತ್ ಸ್ವರೂಪವ ನೊಳಕೊಂಡಿರ್ದ ಗುರು ಮಾರ್ಗಾಚಾರ ಭಿನ್ನವಾಯಿತ್ತೆಂಬುದೀಗ, ಸೇದುವಾತನ ಕಣ್ಣು ತಲೆಯ ಹಿಂದೆ, ಕಣ್ಣಿಯ ತೆಗೆವ ಕೈಯಿಲ್ಲದೆ ಭಾವಿಯ ತಡಿ ತಡಹಾಯಿತ್ತು ಎಂಬ ಶಬ್ದಕ್ಕರ್ಥ. ಆ ಗುರು ಮಾರ್ಗಾಚಾರ ಭಿನ್ನವಾಗಲು, ಸಮಸ್ತ ವಿಶ್ವವು ಗಮಿಸುವದಕ್ಕೆಯೂ, ಲೈಸುವದಕ್ಕೆಯೂ ಮಾತೃಸ್ಥಾನವಾದ ಚಿತ್ತುವಿಂಗೆ ಚೈತನ್ಯ ಸ್ವರೂಪವಾದ ಪರಬ್ರಹ್ಮವೆಂಬುದೀಗ, ಅಲೇಖನಾದ ಎಂಬ ಶಬ್ದಕ್ಕರ್ಥ. ಆ ನಿರಾಕಾರವಾದ ಪರಬ್ರಹ್ಮವು ಕಲು ಹೃದಯವಾದಾತ್ಮನ ಮಧ್ಯದಲ್ಲಿ ಅಂತರ್ಗತವಾಯಿತ್ತೆಂಬುದೀಗ, ಶೂನ್ಯ ಕಲ್ಲಿನೊಳಗಾದ ಕಾರಣ ಎಂಬ ಶಬ್ದಕ್ಕರ್ಥ.

೨

ಬಾಯಿಲ್ಲದ ಪಶು ಬಿತ್ತದ ಹೊಲನ ಹೊಕ್ಕು
ಹುಟ್ಟದ ಸಸಿಯ ಮೇದು, ಒಡೆಯನಿಲ್ಲದ ಪರವತೊಂಡ ಕೂಡಿದ.
ತೊಂಡಿನ ಹಟ್ಟಿನ ಬಾಗಿಲೊಂದು, ಬೀಗ ಒಂಭತ್ತು
ಮೂರೆಸಳಿನ ಬೀಗ ಮೂರು, ಆರೆಸಳಿನ ಬೀಗ ಮೂರು
ಇಪ್ಪತ್ತೈದೆಸಳಿನ ಬೀಗ ಮೂರು ತೆಗೆವ ಕೈಗೆ ನಾಭಿಯಿಲ್ಲ
ಸಿಕ್ಕಿತ್ತು ಹಸು ಹಟ್ಟಿಯಲ್ಲಿ, ಇನ್ನಾರಿಗೆ ಹೇಳುವೆ
ಅಲೇಖನಾದ ಶೂನ್ಯ ಕಲ್ಲಿನೊಳಗಾದವನ ಬಲ್ಲವರಾರೊ.

ಟೀಕು:— ಭಿನ್ನಾಪೇಕ್ಷೆಯಿಲ್ಲದ ಶಿವಾಪೇಕ್ಷೆಯ ಮುಂದುಗೊಂಡಿರ್ಪ ಚಿತ್ತೆಂಬ ಕಾಮಧೇನುವೀಗ, ಬಾಯಿಲ್ಲದ ಪಶುವೆಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಭಿನ್ನಕ್ರಿಯಾಚಾರವಿಲ್ಲದ ಭಕ್ತಿಕ್ಷೇತ್ರದಲ್ಲಿ ನಿಂದು ಎಂಬುದೀಗ, ಬಿತ್ತದ ಹೊಲನಹೊಕ್ಕು ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಜನನಾಂಕುರ ನಷ್ಟವಾದ ಸದ್ಭಾವೆಂಬ ಸಸಿಯ ಸವಿಯುತ್ತಿಹನೆಂಬುದೀಗ, ಹುಟ್ಟದ ಸಸಿಯ ಮೇದು ಎಂದು ಶಬ್ದಕ್ಕರ್ಥ. ಅಂತು ಸ್ವೀಕರಿಸಿದ ಶರಣನು ಅಹಂಪೆಂಬ ಅದ್ವೈತಜ್ಞಾನವಿಲ್ಲದ ನಿಷ್ಕಲ ಪರಬ್ರಹ್ಮ ತನ್ನಾಚಾರ ಸ್ವರೂಪವಾದ ತನು-ಮನ-ಪ್ರಾಣಂಗಳಲ್ಲಿ ಅವಗ್ರಹಿಸಿದನೆಂಬುದೀಗ, ಒಡೆಯನಿಲ್ಲದ ಪರವೆ ತೊಂಡಕೂಡಿದನೆಂಬ ಶಬ್ದಕ್ಕರ್ಥ. ಅಂತಪ್ಪಾಚಾರಾಂಗವ ನೊಳಕೊಂಡಿರ್ಪ ಸತ್ಪಥಮಾರ್ಗವೊಂದೇ ಎಂಬುದೀಗ, ತೊಂಡಿನ ಹಟ್ಟಿಯ ಬಾಗಿಲೊಂದು ಎಂಬ ಶಬ್ದಕ್ಕರ್ಥ. ಅಂತು ಸತ್ಪಥ ಮಾರ್ಗವಿಡಿದಿರ್ಪ ಶರಣಂಗೆ ತನುತ್ರಯಂಗಳೆಂಬ ಮೂರೆಸಳ ನೊಳಕೊಂಡಿಹುದೆ ಗುರುತತ್ವ, ಮನತ್ರಯಂಗಳೆಂಬ ಮೂರೆಸಳನೊಳಕೊಂಡಿರ್ಪ ಲಿಂಗತತ್ವ, ಧನತ್ರಯಂಗಳೆಂಬ ಮೂರೆಸಳನೊಳಕೊಂಡಿರ್ಪುದೆ ಜಂಗಮ ತತ್ವ, ಇಂತಿನವ ವಿಧವನೊಳಕೊಂಡಿರ್ಪುದೆ ಸಚ್ಚಿದಾನಂದ ಸ್ವರೂಪವಾದ ಗುರು-ಲಿಂಗ-ಜಂಗಮವೆಂಬುದೀಗ, ಬೀಗ ಒಂಬತ್ತು, ಮೂರೆಸಳಿನ ಬೀಗ ಮೂರು ಎಂಬ ಶಬ್ದಕ್ಕರ್ಥ. ಆ ಶರಣಂಗೆ ಷಡ್ವಿಧಲಿಂಗ, ಷಡ್ವಿಧ ಭಕ್ತಿ, ಷಡ್ವಿಧಗಳೆಂಬ ಹದಿನೆಂಟು ಎಸಳನೊಳಕೊಂಡು ಲಿಂಗತ್ರಯ ತೋರುತ್ತಿಹವೆಂಬುದೀಗ, ಆರೆಸಳಿನ ಬೀಗ ಮೂರೆಂಬ ಶಬ್ದಕ್ಕರ್ಥ. ಅಂಗಸ್ಥಲ ಇಪ್ಪತ್ತೈದು, ಲಿಂಗಸ್ಥಲ ಇಪ್ಪತ್ತೈದು, ಭಕ್ತಿಸ್ಥಲವಿಪ್ಪತ್ತೈದು, ಇಂತು ಎಪ್ಪತ್ತೈದೆಸಳನೊಳಕೊಂಡಿರ್ಪ ಕ್ರಿಯಾಜ್ಞಾನ ಭಾವಂಗಳೆಂಬವೀಗ, ಇಪ್ಪತ್ತೈದೆಸಳಿನ ಬೀಗ ಮೂರೆಂಬ ಶಬ್ದಕ್ಕರ್ಥ. ಈ ಸ್ಥಲಕುಳ ಸಂಬಂಧವಾದ ಶರಣನ ಸದ್ಭಾವಹಸ್ತಕ್ಕೆ ಭಿನ್ನಜ್ಞಾನದ್ವಾರವಿಲ್ಲವೆಂಬುದೀಗ, ತೆಗೆವ ಕೈಗೆ ನಾಭಿಯಿಲ್ಲವೆಂಬ ಶಬ್ದಕ್ಕರ್ಥ. ಆ ಚಿತ್ತೆಂಬ ಸುರಧೇನು ಶರಣನಾಚಾರಾಂಗದಲ್ಲಿ ಸಂಬಂಧವಾದ ಭೇದವ ದ್ವೈತಾದ್ವೈತಿಗಳಿಗುಸುರದೆ ಶಬ್ದಮುಗ್ಧವಾಗಿರ್ಪನೆಂಬುದೀಗ, ಸಿಕ್ಕಿತ್ತು ಪಸುಹಟ್ಟಿಯಲ್ಲಿ ಇನ್ನಾರಿಗೆ ಹೇಳುವೆ ಅಲೇಖನಾದ ಶೂನ್ಯ ಕಲ್ಲಿನೊಳಗಾದವನ ಬಲ್ಲವರಾರೋ ಎಂಬ ಶಬ್ದಕ್ಕರ್ಥ.

೩

ಒಡೆಯನಿಲ್ಲದ ಭಂಟ ತಲೆಯ ಕೊಯಿತಂದ, ಕಣ್ಣು
ಬಾಯ ಹೊರನಿರಿಸಿ ಇದು ತಲೆಯಲ್ಲ ಎಂಬುದ ಕೇಳಿ
ಅಂಗವ ಹಾಕಿದ ಕಣ್ಣಿನ ಬೆಂಬಳಿಯಲ್ಲಿ
ಇದನೆಲ್ಲರಿಗೂ ಹೇಳಲಾದೀತೆಂದು
ಅಲೇಖನಾದ ಶೂನ್ಯ ಕಲ್ಲಿನ ಮರೆಯಾದ.

**ಟೀಕು:**— ಸೇವ್ಯ ಸೇವಕತ್ವವೆಂಬ ಭಯವಳಿದ ಶರಣ ತನ್ನಾತ್ಮಂತರ್ಗತವಾಗಿರ್ದ ಪರಿಪೂರ್ಣ ಜ್ಞಾನವ ಸಂಗ್ರಹಿಸಿದನೆಂಬುದೀಗ, ಒಡೆಯನಿಲ್ಲದ ಬಂಟ ತಲೆಯ ಕೊಯಿತಂದನೆಂಬ ಶಬ್ದಕ್ಕರ್ಥ. ಆ ಪರಿಪೂರ್ಣಜ್ಞಾನದಿಂ ತಾನೆ ಬ್ರಹ್ಮವೆನಲು ಅಲ್ಲಿ ಶಿವಜ್ಞಾನ ದೃಷ್ಟಿಯ ಶಿವಾಪೇಕ್ಷೆಯು ನಾಸ್ತಿಯಾಯಿತ್ತೆಂಬುದೀಗ, ಕಣ್ಣು ಬಾಯ ಹೊರಗಿರಿಸಿ ಎಂಬ ಶಬ್ದಕ್ಕರ್ಥ. ಇದು ಲಿಂಗಾಂಗ ಸಂಬಂಧದ ಏಕಾರ್ಥವ ನರಿವ ಸಹಜ ಜ್ಞಾನವಲ್ಲಾ ಎಂದು ಶ್ರೀಗುರು ಸೂಚಿಸಲು ಆ ಸುಜ್ಞಾನ ಬೋಧೆಯ ಕೇಳಿದ ಶಿಷ್ಯನು ತನ್ನಾತ್ಮಾಂಗವ ಮಹಾಜ್ಞಾನ ಸ್ವರೂಪವಾದ ಶ್ರೀಗುರುತತ್ವದಲ್ಲಿ ಏಕೀಕರಿಸಿದನೆಂಬುದೀಗ, ಇದು ತಲೆಯಲ್ಲ ಎಂಬುದ ಕೇಳಿ ಅಂಗವ ಹಾಕಿದ ಕಣ್ಣಿನ ಬೆಂಬಳಿಯಲ್ಲಿ ಎಂಬ ಶಬ್ದಕ್ಕರ್ಥ. ಆ ಶಿಷ್ಯನು ಶ್ರೀಗುರುತತ್ವದಲ್ಲಿ ಸಮರಸವಾದ ಭೇದವ ದ್ವೈತಾದ್ವೈತಿಗಳಿಗುಸುರದೆ ಪಂಚಭೂತಾಶ್ರಯವಾದ ದೇಹದಲ್ಲಿ ಆ ಶಿವತತ್ವವಡಗಿತ್ತೆಂಬುದೀಗ, ಇದನೆಲ್ಲರಿಗೂ ಹೇಳಲಾದೀತೆಂದು ಅಲೇಖನಾದ ಶೂನ್ಯ ಕಲ್ಲಿನ ಮರೆಯಾದನೆಂಬ ಶಬ್ದಕ್ಕರ್ಥ

೪

ಬಾಯಲ್ಲಿ ಕಾಲು ಹುಟ್ಟಿ, ಕೈಯಲ್ಲಿ ಕಣ್ಣು ಹುಟ್ಟಿ
ನಾಶಿಕ ಕಿವಿಯಾಯಿತ್ತು
ಇಷ್ಟ ಹೇಳಲಾರದೆ ಅಲೇಖನಾದ ಶೂನ್ಯ ಕಲ್ಲಿನೊಳಗಾದಾ.

**ಟೀಕು:**— ಸುಜ್ಞಾನೋದಯವಾದ ಶರಣನು ಶಿವಾಪೇಕ್ಷೆಯ ಮುಂದುಗೊಂಡಲ್ಲಿ ಶ್ರೀಗುರು ಕರುಣದಿಂದ ಅಂಗದಲ್ಲಿ ಮಹಾ ಘನಲಿಂಗ ಸಂಬಂಧವಾಗಲಾಗಿ ಲಿಂಗದಲ್ಲಿ ಅಭಿನ್ನ ಕ್ರಿಯಾಚಾರ ವಳವಟ್ಟಿತ್ತೆಂಬುದೀಗ, ಬಾಯಲ್ಲಿ ಕಾಲು ಹುಟ್ಟಿ ಎಂಬ ಶಬ್ದಕ್ಕರ್ಥ. ಆ ಲಿಂಗದಲ್ಲಿ ಸತ್ಕ್ರಿಯಾಚಾರ ವಳವಟ್ಟ ಶರಣನ ಸದ್ಭಾವ ಹಸ್ತದಲ್ಲಿ ಶಿವಜ್ಞಾನ ಸ್ವರೂಪವಾದ ಭಾವಲಿಂಗ ಸಂಬಂಧವಾಯಿತ್ತೆಂಬುದೀಗ, ಕೈಯಲ್ಲಿ ಕಣ್ಣು ಹುಟ್ಟಿ ಎಂಬ ಶಬ್ದಕ್ಕರ್ಥ. ಆ ಭಾವಲಿಂಗ ಸಂಬಂಧವಾದ ಶರಣನ ಸ್ವಾನುಭಾವ ಸದ್ವಾಸನೆ ಪ್ರಣವ ಮಂತ್ರವನೊಳಕೊಂಡು ಅಂತರಂಗದಲ್ಲಿ ಪ್ರಾಣಲಿಂಗ ಸಂಬಂಧವಾಯಿತ್ತೆಂಬುದೀಗ, ನಾಸಿಕ ಕಿವಿಯಾಯಿತ್ತು ಇಷ್ಟ ಹೇಳಲಾರದೆ ಅಲೇಖನಾದ ಶೂನ್ಯ ಕಲ್ಲಿನೊಳಗಾದನೆಂಬ ಶಬ್ದಕ್ಕರ್ಥ.

೫

ಮಗನ ಕೊಂದು ತಿಂದ ತಾಯ ಕಂಡೆ,
ಬಂಧುಗಳ ಕೊಂದು ನಂಟರಲ್ಲಿ ಕೂಪನ ಕಂಡೆ
ಅತ್ತೆ ಅಳಿಯನ ವೊತ್ತಿನಲ್ಲಿ ಮಲಗಿ ಕೂಸು ಹುಟ್ಟಿತ್ತು
ಅಳಿಯ ಅತ್ತೆಯ ನೋಡಿ, ಅತ್ತೆ ಅಳಿಯನ ನೋಡಿ ಹೋಯಿತ್ತು,
ಹೊಗರಿದೆ ಎಂದು ನಗುವರ ಕಂಡೆ, ಆವರಿಬ್ಬರ ನೋಡಿ
ಹೆತ್ತ ಕೂಸು ನಾನಿವರಳಿಯನಲ್ಲಾ ಎಂದು ಹೋಯಿತ್ತು
ಇದ ಕೇಳಿಹರೆಂದು ಹೇಳಲಂಜಿ ಅಲೇಖನಾದ
ಶೂನ್ಯ ಕಲ್ಲಿನೊಳಹೊಕ್ಕ

**ಟೀಕು:**— ಮಗನೆಂದೊಡೆ ಜೀವನು. ಅಂತಪ್ಪ ಜೀವನ ಜೀವಭಾವವ ಜ್ಞಾನಶಕ್ತಿ ನಿವೃತ್ತಿಮಾಡಿದಳೆಂಬುದೀಗ, ಮಗನಕೊಂದು ತಿಂದ ತಾಯ ಕಂಡೆ ನೆಂಬ ಶಬ್ದಕ್ಕರ್ಥ. ಅಂತು ಜೀವಭಾವ ಪ್ರಪಂಚು ನಿವೃತ್ತಿಯಾಗಲು ಸಕಲ ಕರಣಂಗಳ ಪ್ರಕೃತಿ ಭಾವವ ಸುಜ್ಞಾನ ಪ್ರಕಾಶದಿಂ ಸಂಹರಿಸಿ ಲಿಂಗಸಂಬಂಧವ ಮಾಡಲು, ಆ ಕರಣಂಗಳೆಲ್ಲವೂ ಅಮರ ಗಣತ್ವವನೆಯ್ದಿ ನಿತ್ಯಸ್ವರೂಪನಾದ ಶರಣಂಗೆ, ಸ್ವಯಾತ್ಮ ಬಂಧುಗಳಾಗಿರ್ದವೆಂಬುದೀಗ, ಬಂಧುಗಳಕೊಂದು ನಂಟರಲ್ಲಿ ಕೂಪನಕಂಡೆನೆಂಬ ಶಬ್ದಕ್ಕರ್ಥ. ಜ್ಞಾನಶಕ್ತಿಯಿಂದ ಹುಟ್ಟಿದ ಕ್ರಿಯಾ ಶಕ್ತಿಯ ವಲ್ಲಭನೆ ಶರಣ, ಆ ಶರಣನಲ್ಲಿ ಜ್ಞಾನಶಕ್ತಿ ಸ್ವರೂಪನಾದ ಶ್ರೀ ಗುರು ಆ ಚಿತ್‌ಸ್ವರೂಪನಾದ ಶಿಷ್ಯನಲ್ಲಿ ದೀಕ್ಷತ್ರಯಂಗಳಿಂದ ಅವಿರಳಸಂಗವಮಾಡಲು, ಆತ್ಮಾಂತರ್ಗತವಾಗಿರ್ದ ಚಿತ್ ಪ್ರಭಾವಾಂಗವೇ ಬಹಿಷ್ಕರಿಸಿ ಇಷ್ಟಲಿಂಗವಾಗಿ ಉದಯಿಸಿತ್ತೆಂಬುದೀಗ, ಅತ್ತೆ ಅಳಿಯ ವೊತ್ತಿನಲ್ಲಿ ಮಲಗಿ ಕೂಸುಹುಟ್ಟಿತ್ತೆಂಬ ಶಬ್ದಕ್ಕರ್ಥ. ಅಂತು ಸರ್ವಾಂಗಲಿಂಗ ಸಂಬಂಧ ಘಟಿಸಿದ ಶರಣನು ತನಗೆ ಪ್ರಾಣ ಚೈತನ್ಯ ಸ್ವರೂಪವಾದ ಶ್ರೀ ಗುರು ತತ್ವವ ಸುಜ್ಞಾನ ದೃಷ್ಟಿಯಿಂ ನಿರೀಕ್ಷಿಸುತ್ತಿ ನೆಂಬುದೀಗ, ಅಳಿಯ ಆತ್ತೆಯನೋಡಿ ಎಂಬ ಶಬ್ದಕ್ಕರ್ಥ. ಶ್ರೀ ಗುರು ತನ್ನ ಕೃಪಾದೃಷ್ಟಿಯಿಂ ಚಿದ್ರೂಪನಾದ ಶಿಷ್ಯನೆ ಚಿತ್‌ಪ್ರಭಾವ ಸ್ವರೂಪನೆಂದು ನಿರೀಕ್ಷಿಸುತ್ತಿರ್ದನೆಂಬುದೀಗ, ಅತ್ತೆ ಅಳಿಯನ ನೋಡಿ, ಎಂಬ ಶಬ್ದಕ್ಕರ್ಥ. ಆ ಗುರು ಶಿಷ್ಯರೆಂಬ ಭಿನ್ನಭಾವ ನಿವೃತ್ತಿಯಾಗಲು ಆ ಭಿನ್ನ ಭಾವದಿಂ ಶಿಷ್ಯನು ಗುರುತತ್ವ ದಲ್ಲಿಡಗಿ, ಸೇವ್ಯ ಬ್ರಹ್ಮಸ್ವರೂಪನಾಗಿರ್ದನೆಂಬುದೀಗ, ಹೋಯಿತ್ತು ಹೋಗ ರಿದೆಯೆಂಬ ಶಬ್ದಕ್ಕರ್ಥ. ಇಂತು ಗುರು–ಶಿಷ್ಯರ ಸಮರಸವೇಕಾರ್ಥವ ಸಕಲ ಕರಣಂಗಳು ಸುಜ್ಞಾನ ದೃಷ್ಟಿಯಿಂ ಕಂಡು ಶಿವೋಹಂ–ಶಿವೋಹಂವೆಂದು ಪರಮ ಹರುಷತೆಯ ನೆಯ್ದಿತ್ತೆಂಬುದೀಗ, ಎಂದು ನಗುವವರ ಕಂಡೆನೆಂಬ ಶಬ್ದಕ್ಕರ್ಥ. ಆ ಗುರು- ಶಿಷ್ಯರ ಸಂಪರ್ಕದಿಂ ಉದಯವಾದ ಭಕ್ತ್ಯಾಂಗನೆಗೆ ಇಷ್ಟ ಲಿಂಗವೆ ವಲ್ಲಭನಾದ ಕಾರಣ ಅಳಿಯನೆಂಬುದೀಗ, ಆವರಿಬ್ಬರ ನೋಡಿ ಹೆತ್ತಕೂಸುನಾನಿ

ವರಳಿಯುಸಲ್ಲ ಎಂದು ಎಂಬ ಶಬ್ದಕ್ಕರ್ಥ. ಆ ಸದ್ರೂಪವಾದ ಇಷ್ಟಲಿಂಗವು ಗುರು–ಶಿಷ್ಯರೀರ್ವರ ಸವಗ್ರಹಿಸಿ ಸಿರ್ವಯು ಲಾಯಿತ್ತೆಂಬುದೀಗ, ಹೋಯಿತ್ತು ಎಂಬ ಶಬ್ದಕ್ಕರ್ಥ. ಆ ಗುರು ಶಿಷ್ಯರಿಬ್ಬರು ಮಹಾಘನಲಿಂಗದಲ್ಲಿ ಏಕಾರ್ಥವಾದ ಭೇದವ ದ್ವೈತಾದ್ವೈತಿಗಳಿಗುಸುರಲಿಲ್ಲವೆಂಬುದೀಗ, ಇದ ಕೇಳಿಹರೆಂದು ಹೇಳ ಲಂಜಿ ಅಲೇಖಕನಾದ ಶೂನ್ಯ ಕಲ್ಲಿನೊಳಹೊಕ್ಕನೆಂಬ ಶಬ್ದಕ್ಕರ್ಥ.

೬

ಕಾಲಲ್ಲಿ ಕಟ್ಟಿದ ಸಡ್ಡೆಯ ಕೀಳುವರಿಲ್ಲ,
ಕೈಯಲ್ಲಿ ಹಿಡಿದ ಮೊರನ ಬೇಡ ಎಂಬವರಿಲ್ಲ
ತಲೆಯಲ್ಲಿ ಹೊತ್ತ ಕೊಂಗವ ಇಳುಹುವವರಿಲ್ಲ
ಸಡ್ಡೆಗೆ ಮೂರು ಕವೆವೊಂದೆ ಚಿತ್ತಪಟ್ಟ ಮೊರಕ್ಕೆ
ಮೂರು ಗೋಟು ಮಾಡುವಾಕೆ ಒಬ್ಬಳೆ
ಕೊಂಗಕ್ಕೆ ಎರಡು ಗೊಟು ತೋರುವವರು ಮೂವರು,
ರಾಶಿ ಒಂದೇ, ಕೊಳಗವೆರಡು ಅಳವರು ಲೆಖ್ಖಕ್ಕೆ ಕಡೆಯಿಲ್ಲ
ಇದ ಕೇಳಿಹರೆಂದಂಜಿ ಅಲೇಖನಾದ ಶೂನ್ಯ ಕಲ್ಲಿನೊಳಹೊಕ್ಕ.

**ಟೀಕು:**— ಶರಣನ ಅಭಿನ್ನಕ್ರೀಯಲ್ಲಿ ಸಂಬಂಧವಾದ ಶಿವಾದ್ವೈತ ಭಕ್ತಿಯನು ಬೇರ್ಪಡಿಸಬಾರದೆಂಬುದೀಗ, ಕಾಲಲ್ಲಿ ಕಟ್ಟಿದ ಸಡ್ಡೆಯ ಕೀಳುವರಿಲ್ಲ ಎಂಬ ಶಬ್ದಕ್ಕರ್ಥ. ಆ ಶರಣನ ಸದ್ಭಾವದಲ್ಲಿ ಸಂಬಂಧವಾದ ಅಭಿನ್ನಾಚಾರವ ಬಿಡಿಸಲಾರಳವಲ್ಲವೆಂಬುದೀಗ, ಕೈಯಲ್ಲಿ ಹಿಡಿದ ಮೊರನ ಬೇಡ ಎಂಬುವರಿಲ್ಲ ಎಂಬ ಶಬ್ದಕ್ಕರ್ಥ. ಆ ಶರಣನ ಅಭಿನ್ನ ಜ್ಞಾನದಲ್ಲಿ ಸಂಬಂಧವಾದ ಶಿವಭಾವವ ವಿಸರ್ಜಿಸಿಹೆನೆಂದೊಡೆ ಆರಿಗೂ ಸೌಖ್ಯವಲ್ಲವೆಂಬುದೀಗ, ತಲೆಯಲ್ಲಿ ಹೊತ್ತ ಕೊಂಗವ ಇಳುಹುವರಿಲ್ಲವೆಂಬ ಶಬ್ದಕ್ಕರ್ಥ. ಆ ಶಿವಾದ್ವೈತ ಭಕ್ತಿಯಿಂ ತ್ರಿವಿಧ ಭಕ್ತಿ ಪ್ರಭಾವಿಸಿದವೆಂಬುದೀಗ, ಸಡ್ಡೆಗೆ ಮೂರು ಕವೆಯೆಂಬ ಶಬ್ದಕ್ಕರ್ಥ. ಆ ತ್ರಿವಿಧ ಭಕ್ತಿವಿಡಿದಾಚರಿಸುವ ಶರಣಂಗೆ, ನಿತ್ಯವದ ಸ್ವರೂಪವಾದ ಮಹಾ ಘನ ಲಿಂಗವೊಂದೇ ಎಂಬುದೀಗ, ಒಂದೆ ಚಿತ್ತಪಟ್ಟವೆಂಬ ಶಬ್ದಕ್ಕರ್ಥ. ಸಕಲ ತತ್ವ ಬ್ರಹ್ಮಾಂಡಗಳಿಗೆ ಕಾರಣವಾದ ಮಹಾಘನಲಿಂಗವ ನೊಳಕೊಂಡಿರ್ಪ ಶರಣನ ಅಭಿನ್ನಾಚಾರದಲ್ಲಿ ತ್ರಿವಿಧಾಚಾರ ವಡಗಿಹವೆಂಬುದೀಗ, ಮೊರಕ್ಕೆ ಮೂರು ಗೊಟು ಎಂಬ ಶಬ್ದಕ್ಕರ್ಥ. ಜ್ಞಾನಶಕ್ತಿ ಸ್ವರೂಪವಾದ ಶರಣನು ಅಭಿನ್ನಾಚಾರದಲ್ಲಿ ಸಕಲ ತತ್ವ ಕರಣಂಗಳೆಲ್ಲವ ನಾನು ಮಾಡಿ ಶಿವಾರ್ಪಿತಕ್ಕೊಡಗಿ ಸುತ್ತಿಹಳೆಂಬುದೀಗ, ಮಾಡುವಾಕೆ ಒಬ್ಬಳೆ ಎಂಬ ಶಬ್ದಕ್ಕರ್ಥ. ಆ ಲಿಂಗ ಸುಖ ಪ್ರಸನ್ನ ಪ್ರಸಾದವ ಸ್ವೀಕರಿಸಿದ ಶರಣನ ಶಿವಭಾವದಲ್ಲಿ ಭಾವ-ನಿರ್ಭಾವವೆಂಬು ಭಯ ಸನ್ನಹಿತ ವಾಗಿಹುವೆಂಬುದೀಗ, ಕೊಂಗಕ್ಕೆ ಎರಡು ಗೋಟು ಎಂಬ ಶಬ್ದಕ್ಕರ್ಥ. ಆ ಶಿವ ಭಾವ ಘಟಸಿದ ಶರಣನ ಆತ್ಮತ್ರಯಂಗಳಲ್ಲಿ ಕ್ರಿಯಾಜ್ಞಾನ ಭಾವವಳವಡಲು ಸಕಲ ಪ್ರಪಂಚ ನಿವೃತ್ತಿ ಮಾಡಿದ ನೆಂಬುದೀಗ, ತೋರುವವರು ಮೂವರು

ಎಂಬ ಶಬ್ದಕ್ಕರ್ಥ. ಆ ಸಕಲ ಪ್ರಪಂಚನಿವೃತ್ತಿಯಾದ ಶರಣನಲ್ಲಿ ನಿಜದ ನಿಧಿಯಪ್ಪ ಪರಶಿವ ತತ್ವವೊಂದೇ ಎಂಬುದೀಗ, ರಾಶಿವೊಂದೇ ಎಂಬ ಶಬ್ದಕ್ಕರ್ಥ. ಆ ಲಿಂಗ ಸಂಬಂಧಿಯಾಗಿರ್ಪ ಶರಣನು ಜ್ಞಾನ ಕ್ರಿಯಿಡಿದಾಚರಿಸಲು ಆ ಲಿಂಗ ಚೈತನ್ಯ ಅಂತರಂಗಕ್ಕೆ ವೇದಿಸಿ ಪ್ರಾಣಲಿಂಗ ಸಂಬಂಧವಾದ ಸಕಲ ಕರಣಂಗಳು ಅಮರಗಣತ್ವನೆಯ್ದಿ ಶಿವೋಹಂ ಶಿವೋಹಂ ಮೆನುತ್ತಿರ್ದವೆಂಬುದೀಗ, ಕೊಳಗ ಪೆರಡು ಅಳವರು ಲೆಖ್ಖಕ್ಕೆ ಕಡೆಯಿಲ್ಲ ಇದ ಕೇಳಿಹರೆಂದಂಜಿ ಅಲೇಖನಾದ ಶೂನ್ಯ ಕಲ್ಲಿನೊಳ ಹೊಕ್ಕನೆಂಬ ಶಬ್ದಕ್ಕರ್ಥ.

೭

ಎತ್ತ ಬಾರದ ಕಲ್ಲು ನೀರ ಮೇಲೆ ತೆಪ್ಪದಂತೆ ಹೋದಾಗ
ಮೇಲೆ ಕುಳಿತು ಒತ್ತುವರ ನುಂಗಿತ್ತು
ನುಂಗಿದವರು ಅಲ್ಲಿದ್ದಂತೆ ಹೊಳೆಯ ನೀರ ತಪ್ಪಲಿಕೆ ಕುಡಿದು
ಆ ತೆಪ್ಪ ಪೃಥ್ವಿಯಲ್ಲಿ ನಿಂದಿತ್ತು
ಈ ಗುಣ ಬಿತ್ತಿಯ ಕೇಳಿಹರೆಂದು, ಅಲೇಖನಾದ
ಶೂನ್ಯ ಕಲ್ಲಿನ ಮರೆಯಾದ.

**ಟೀಕು:—** ಭಿನ್ನಜ್ಞಾನಿಗಳ ಆಹ್ವಾನಕ್ಕೆ ಸಾಧ್ಯವಾದ ಸರ್ವಾಚಾರ ಸಂಪತ್ತನೊಳಕೊಂಡಿರ್ಪ ನಿಷ್ಕಲ ಪರಬ್ರಹ್ಮವೆಂಬುದೀಗ, ಎತ್ತಬಾರದ ಕಲ್ಲು ಎಂಬ ಶಬ್ದಕ್ಕರ್ಥ. ಆ ಭಿನ್ನ ಜ್ಞಾನಿಗಳ ಸಂಚಲರೂಪವಾದ ಮನೋಮಧ್ಯದಲ್ಲಿ ಆ ಪರಬ್ರಹ್ಮವು ಅನ್ಯೋನ್ಯವಾಗಿಹುವೆಂಬುದೀಗ, ನೀರಮೇಲೆ ತೆಪ್ಪದಂತೆ ಹೋಹಾಗಲೆಂಬ ಶಬ್ದಕ್ಕರ್ಥ. ಆ ಲಿಂಗಸಂಬಂಧಿಗಳಾಗಿ ಜ್ಞಾನಕ್ರಿಯಿಡಿದಾಚರಿಸುತ್ತಿರ್ಪ ಭಕ್ತಜನಂಗಳ ತಾನೆ ಒಳಕೊಂಡಿರುತ್ತಿಹುದೆಂಬುದೀಗ, ಮೇಲೆ ಕುಳಿತು ಒತ್ತುವರನುಂಗಿತ್ತು ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮದಲ್ಲಿ ಅಡಗಿರ್ಪ ಭಕ್ತಜನಂಗಳು ತಮ್ಮ ನಿಜವ ತಾವರಿಯದೆ, ಭಿನ್ನಾಪೇಕ್ಷೆಯಿಂ ಫಲಪದಂಗಳ ನಿಶ್ಚಯಿಸಿ ಆ ಫಲಪದಗಳಿಂ ಸಂಸಾರ ವಿಷಯ ಜಲಪ್ರವಾಹ ಭಿನ್ನಾಚಾರದಲ್ಲಿನಿಂದು ಸೇವಿಸುತ್ತಿಹರೆಂಬುದೀಗ, ನುಂಗಿದವರು ಅಲ್ಲಿದ್ದಂತೆ ಹೊಳೆಯನೀರು ತಪ್ಪಲಿಕೆ ಕುಡಿದು ಎಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ಜಲಪ್ರವಾಹದಲ್ಲಿ ಮುಳುಗಿದ ದ್ವೈತಿಗಳ ದೇಹದಲ್ಲಿ ಸರ್ವಾಚಾರ ಸಂಪತ್ತಿನ ಪಾತ್ರಸ್ವರೂಪವಾದ ಚಿದ್ಘನಲಿಂಗವು ಅಡಗಿ ಹೋಯಿತ್ತೆಂಬುದೀಗ, ಆ ತೆಪ್ಪ ಪೃಥ್ವಿಯಲ್ಲಿನಿಂದಿತ್ತು ಈ ಗುಣಬಿತ್ತಿಯ ಕೇಳಿಹರೆಂದು ಅಲೇಖನಾದ ಶೂನ್ಯ ಕಲ್ಲಿನ ಮರೆಯಾದನೆಂಬ ಶಬ್ದಕ್ಕರ್ಥ.

೮

ಜೊಚ್ಚಿಲ ಕೂಸು ಹೆತ್ತ ತಾಯ ಮೊಲೆಯನುಂಬಾಗ
ಕತ್ತೆಯ ಮರಿ ಕೊರಳ ಕಚ್ಚಿತ್ತು
ಕತ್ತೆಯ ಮರಿಯ ಜೊಚ್ಚಿಲ ಕೂಸ ಮೊಲೆಯ ತೊಟ್ಟು ನುಂಗಿತ್ತು

ಮೊಲೆಯು ಹೊತ್ತಿರ್ದಳಟೊಟ್ಟೆಯು ಸುಳಿ ನುಂಗಿತ್ತು
ಈ ಬಟ್ಟೆಯು ಕೇಳಿಹರೆಂದಂಜಿ ಅಲೇಖನಾದ
ಶೂನ್ಯ ಕಲ್ಲಿನಾಥನಾದಾ

**ಟೀಕು:—** ಚಿಚ್ಛಕ್ತಿಯು ಚಿದ್ಗರ್ಭದಿಂದುದಯವಾದ ಜ್ಞಾನಕಲಾತ್ಮನೆಂಬುದೀಗ, ಚೊಚ್ಚಿಲಕೂಸು ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣನು ಆಚಿಚ್ಛಕ್ತಿಯಲ್ಲಿ ಅಮೃತ ಕುಂಭ ಸ್ವರೂಪಿನಿಂದೊಪ್ಪುತ್ತಿರ್ದ ಚಿದ್ ಘನ ಲಿಂಗವ ಸದ್ವಿವೇಕ ಮುಖದಿಂ ಸ್ವೀಕರಿಸುತ್ತಿರಲು ಎಂಬುದೀಗ, ಹೆತ್ತತಾಯಿ ಮೊಲೆಯನುಂಬಾಗ ಎಂಬ ಶಬ್ದಕ್ಕರ್ಥ. ಅಂತು ಸ್ವೀಕರಿಸುತ್ತಿರಲು ಮಾಯಾ ಸಂಬಂಧವಾದ ಜಡವೇಹದಲ್ಲಿ ಸಂಕಲ್ಪರೂಪವಾದ ಮನಸ್ಸುಹುಟ್ಟಿ ಪೃಥಕಂಡವ ನವಗ್ರಹಿಸಿತ್ತೆಂಬುದೀಗ, ಕತ್ತೆಯ ಮರಿಯ ಚೊಚ್ಚಿಲಕೂಸ ಮೊಲೆಯುತೊಟ್ಟು ನುಂಗಿತ್ತು ಎಂಬ ಶಬ್ದಕ್ಕರ್ಥ. ಆ ಅಮೃತ ಕುಂಭ ಸ್ವರೂಪಿನಿಂದೊಪ್ಪುತ್ತಿರ್ದ ಪರಶಿವ ತತ್ವವ ಹೊರಗೆನ್ನದೆ ಸರ್ವಾಂಗದಲ್ಲಿ ಧರಿಸಿಕೊಂಡಿರ್ದ ಶರಣಸತಿಯು ಅಂತರ್ಭಾವದಲ್ಲಿರ್ದ ಚಿದ್ಬಿಂಬು ಸ್ವರೂಪವಾದ ಶಿವಲಿಂಗವೆ ಬಂದವ ಗ್ರಹಿಸಿತ್ತೆಂಬುದೀಗ, ಮೊಲೆಯ ಹೊತ್ತಿರ್ದವಳ ಹೊಟ್ಟೆಯ ಸುಳಿನುಂಗಿತ್ತು ಈ ಬಟ್ಟೆಯ ಕೇಳಿಹರೆಂದಂಜಿ ಅಲೇಖನಾದ ಶೂನ್ಯ ಕಲ್ಲಿನಾಥನಾದಾ ಎಂಬ ಶಬ್ದಕ್ಕರ್ಥ.

೯

ನಾಸುವೆಯ ಹಾಲು ನಾಥಕಾಂಗರ ನಾಸಿಕದ ನೀರ ಬರಿಸಿತ್ತು
ಮೂಷಕನ ಮೀಸೆಯ ಬಿಂದು ಮೂರು ಲೋಕವ ಮುಳುಗಿಸಿತ್ತು
ಕಾಸಿದ ನೀರು ಬಿಸಿಯಾಗಿ ಕುಡಿವವರ ಮೀಸೆಯ ಸುಟ್ಟಿತ್ತು
ನಾಸುವೆಯ ಮೂಷಕನ ಮೀಸೆಯ ಬಿಸಿ ನೀರ ಕುಡಿವಾತನ
ಬಾಯೊತ್ತಿನ ಮೀಸೆಯಲ್ಲಿ ಹುಟ್ಟಿತೊಂದು,
ಹಾಸುರುಗಲ್ಲಿನ ಮೇಲೆ ಕುಳ್ಳಿರ್ದಾತನ ಕೇಳಿಹರೆಂದು
ಅದೇತಕ್ಕಡಗಿದೆ, ಅಲೇಖಮಯ ಶೂನ್ಯ ಕಲ್ಲಿನ ಮನೆಯೊಳಗೆ?

**ಟೀಕು:—** ಶಿವಾದ್ವೈತ ಭಕ್ತಿರಸವೆಂಬುದು ಎಲ್ಲಕ್ಕೂ ಕಠಿಣವಾಗಿಹುದೆಂಬುದೀಗ, ನಾಸುವೆಯ ಹಾಲು ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ಭಕ್ತಿಯಿಂ ಶ್ರೀಗುರು ಕಾರುಣ್ಯವ ಹಿಡಿದು ಸತ್ಕ್ರಿಯಾ ಜ್ಞಾನ ವಿಡಿದಾಚರಿಸವ ಸದ್ಭಕ್ತ ಜನಂಗಳ ಸ್ವಾನುಭಾವ ವಾಸನೆಯಲ್ಲಿ ಅಡಗಿರ್ದ ಸದ್ವಿವೇಕ ಜಲವ ಪ್ರಭಾಪಿಸಿತ್ತೆಂಬುದೀಗ, ನಾಸಿಕದ ನೀರ ಬರಸಿತ್ತು ಎಂಬ ಶಬ್ದಕ್ಕರ್ಥ. ಆ ಸದ್ವಿವೇಕ ಜಲವನೊಳಕೊಂಡಿರ್ದ ಶರಣನ ಮನಸ್ಸಿನಲ್ಲಿ ಸೃಷ್ಟಿಕಾ ಸ್ವರೂಪವಾದ ಸಕಲ ಕರಣಂಗಳಲ್ಲಿ ಸಂಬಂಧವಾದ ಚಿದ್ಬಿಂದು ತನುತ್ರಯಂಗಳನೊಳಕೊಂಡು ತೋರುತ್ತಿಹುದೆಂಬುದೀಗ, ಮೂಷಕನ ಮೀಸೆಯ ಬಿಂದು ಮೂರು ಲೋಕವ ಮುಳುಗಿ

ಚಿತ್ತು ಎಂಬ ಶಬ್ದಕ್ಕರ್ಥ. ಆ ಚಿದ್ಬಿಂದು ತನುತ್ರಯಂಗಳನೊಳಕೊಂಡಲ್ಲಿ
ತಾಪತ್ರಯಾಗ್ನಿಯಲ್ಲಿ ಕಾಯುತಿರ್ದ ಪರಮಾನಂದ ಜಲವು ಜ್ಞಾನಾಗ್ನಿ ಸ್ವರೂಪ
ವಾಗಿ ಆ ಪರಮಾನಂದ ಜಲವ ಸ್ವೀಕರಿಸುವ ಭಕ್ತ ಜನಂಗಳ ಸೃಷ್ಟಿಯನೊಳ
ಕೊಂಡಿರ್ದ ಸಕಲ ಕರಣಂಗಳ ಸಮಗ್ರಹಿಸಿತ್ತೆಂಬುದೀಗ, ಕಾಸಿದ ನೀರು ಬಿಸಿ
ಯಾಗಿ ಕುಡಿವವರ ಸುಟ್ಟಿತ್ತು ಎಂಬ ಶಬ್ದಕ್ಕರ್ಥ. ಶಿವಾದ್ವೈತ ಭಕ್ತಿರಸವೆಂಬು
ದೀಗ, ಕಾಸುವೆಯು ಎಂಬ ಶಬ್ದಕ್ಕರ್ಥ. ಆ ಭಕ್ತಿಯಲ್ಲಿ ಸಂಬಂಧವಾದ ಶರಣನ
ಮನಸ್ಸೆಂಬುದೀಗ, ಮಾಪಕನು ಎಂಬ ಶಬ್ದಕ್ಕರ್ಥ. ಆ ಮನೋಮಧ್ಯದಲ್ಲಿ
ಸೃಷ್ಟಿಯೊಡನೆ ಕೂಡಿದ ಸಕಲ ಕರಣಂಗಳೆಂಬುದೀಗ, ಮೀಸೆಯು ಎಂಬ ಶಬ್ದ
ಕ್ಕರ್ಥ. ಆ ಸೃಷ್ಟಿಯಿಂ ಜ್ಞಾನಾಗ್ನಿ ಸ್ವರೂಪವಾದ ಪರಮಾನಂದ ಜಲವ ಸ್ವೀಕರಿ
ಸುತ್ತಿಹ ಶರಣನು ಎಂಬುದೀಗ, ಬಿಸಿ ನೀರ ಕುಡಿವಾತನ ಎಂಬ ಶಬ್ದಕ್ಕರ್ಥ.
ಆ ಪರಮಾನಂದ ಜಲವ ಸ್ವೀಕರಿಸುವ ಶರಣನ ಶಿವಾಪೇಕ್ಷೆಯಲ್ಲಿ ಕೂಡಿರ್ದ ಸಕಲ
ಕರಣಂಗಳ ಮಧ್ಯದಲ್ಲಿ ಅನೇಕ ತತ್ವಂಗಳನೊಳಕೊಂಡಿರ್ದ ಅಖಂಡ ಜ್ಞಾನಚಿತ್ತು
ಉದಯವಾಯಿತ್ತೆಂಬುದೀಗ, ಬಾಯೊತ್ತಿನ ಮೀಸೆಯಲ್ಲಿ ಹುಟ್ಟಿತ್ತೊಂದು
ಹಾಸರುಗಲ್ಲು ಎಂಬ ಶಬ್ದಕ್ಕರ್ಥ. ಆ ಚಿತ್ತಿನ ಮಧ್ಯದಲ್ಲಿ ಸಾಹಿತ್ಯವಾಗಿರ್ಪುದೆ
ಮಹಾಘನಲಿಂಗವೆಂಬುದೀಗ, ಹಾಸರುಗಲ್ಲಿನ ಮೇಲೆ ಕುಳ್ಳಿರ್ದಾತನ ಕೇಳಿಹ
ರೆಂದು ಅವೇತಕ್ಕಡಗಿದೆ, ಅಲೇಖಮಯ ಶೂನ್ಯ ಕಲ್ಲಿನ ಮನೆಯೊಳಗೆ ಎಂಬ
ಶಬ್ದಕ್ಕರ್ಥ.

೧೦

ಕಂಬಳಿ ಕೌಪ ಕಟ್ಟಿದ ಮತ್ತೆ ಅವರವರ ಬೆಂಬಳಿಯಲ್ಲಿ
ಕಂಬಳಿಯ ಹೊದ್ದಿಹನೆಂಬ ಆಸೆ ಯಾಕೆ,
ಹೊದೆಯಲಿಲ್ಲದ ಕಂಬಳಿಯ ಉಡಿಗೆ ಕಟ್ಟಿದ
ಮತ್ತೆ ಈ ಕೈಯ್ಯ ಗಡಿಗೆಯಣ್ಣಗಳ ಒಡಗೂಡಲೇಕೆ,
ಅವರ ತೊಡೆಯ ಸಂದಿಯಲ್ಲಿ ಕುಳಿತು ಅವರ ಮಾತಿಗೆ
ಅಡುಮೆಯಾಗಲೇಕೆ,
ಇಂತಿವನರಿದಹರೆಂದು ಅಡಗಿದ ಅಲೇಖನಾದ
ಶೂನ್ಯ ಕಲ್ಲಿನ ಮರೆಯಾದ.

**ಟೀಕು:—** ಪರಿಪೂರ್ಣ ಜ್ಞಾನವನು ಶರಣ ಸರ್ವಾಂಗದಲ್ಲಿ ಸಮರಸವ
ಮಾಡಿ ಸಕಲ ಕರಣಂಗಳ ವ್ಯವಹಾರವ ಕೆಡಿಸಿ ಜ್ಞಾನಕರಣಂಗಳ ಮಾಡಿದನೆಂಬು
ದೀಗ, ಕಂಬಳಿಯು ಕೌಪಕಟ್ಟಿದ ಮತ್ತೆ ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣ
ಜ್ಞಾನಿಯಾದ ಶರಣನು ತನು ಮನ ಪ್ರಾಣೇಂದ್ರಿಯಂಗಳು ಮೊದಲಾದ ಸಕಲ
ತತ್ವಂಗಳೆಲ್ಲ ಲಿಂಗತತ್ವಂಗಳಾಗಿರ್ದು ದ್ವೈತಾದ್ವೈತಯೋಗಿ ಮಾರ್ಗಗಳ ಅವರ
ವರ ಕ್ರಿಯಾಜ್ಞಾನ ಯೋಗ ಮಾರ್ಗಂಗಳ ನರಿಯಬೇಕೆಂಬಾಸೆ ಇರಬಾರದು ಶರ
ಣಂಗೆಂಬುದೀಗ, ಅವರವರ ಬೆಂಬಳಿಯಲ್ಲಿ ಕಂಬಳಿಯು ಹೊದ್ದಿಹೆನೆಂಬ ಆಸೆ

ಯಾಕೆ ಎಂಬ ಶಬ್ದಕ್ಕರ್ಥ. ಅಂತಪ್ಪ ದ್ವೈತಾದ್ವೈತ ಯೋಗ ಮಾರ್ಗಗಳಿಗೆ ಸಾಧ್ಯವಲ್ಲದುದೆ ಪರಿಪೂರ್ಣ ಜ್ಞಾನ ಅಂತಪ್ಪ ಅರಿವನೆ ಶರಣನು ಗುರು ಮಾರ್ಗಾಚಾರದಲ್ಲಿ ಸಂಬಂಧವ ಮಾಡಿದನೆಂಬುದೀಗ, ಹೊದೆಯಲಿಲ್ಲದ ಕಂಬಳಿಯ ಉಡಿಗೆ ಕಟ್ಟಿದ ಮುತ್ತೆ ಎಂಬ ಶಬ್ದಕ್ಕರ್ಥ. ಕರಸ್ಥಲದಲ್ಲಿ ಲಿಂಗವ ಹಿಡಿದು ಲಿಂಗವೇ ನಿರ್ಮಲ, ಅಂಗವೇ ಮಲಿನವೆಂದು ದ್ವೈತಭಾವದಿಂದೆರಡಿಟ್ಟಾಚರಿಸುವ ಕರ್ಮಕಾಂಡಿಗಳ ಷಟಸ್ಥಲ ಮಾರ್ಗದಲ್ಲಿ ಕೂಡಲಾಗದೆಂಬುದೀಗ, ಈ ಕೈಯ ಗಡಿಗೆಯಣ್ಣಗಳ ಒಡಗೂಡಲೇಕೆ, ಅವರ ತೊಡೆಯ ಸಂದಿಯಲ್ಲಿ ಕುಳಿತು ಅವರ ಮಾತಿಗೆ ಆದುಮೆಯಾಗಲೇಕೆ ಇಂತಿವನರಿದವರೆಂದು ಅಡಗಿದ ಅಲೇಖನಾದ ಶೂನ್ಯ ಕಲ್ಲಿನ ಮರೆಯಾದ ನೆಂಬ ಶಬ್ದಕ್ಕರ್ಥ.

೧೧

ಊರ್ಧ್ವಭೂಮಿಯ ವಿರಾಗದಲ್ಲಿ ಸಪ್ತ ಸಮುದ್ರಕ್ಕೆ ಭೂಮಿಯೊಂದೆ
ಆ ಭೂಮಿಯ ಮಧ್ಯದಲ್ಲೊಂದು ವಟವೃಕ್ಷವ ಹುಟ್ಟಿತ್ತು
ಕೊಂಬು ಮೂರು ಅದರ ಬೆಂಬಳಿಯಲ್ಲಿ ಹುಟ್ಟಿದ
ಕವಲಿಗೆ ಲೆಖ್ಖವಿಲ್ಲ
ಆ ಆಲದ ಹಣ್ಣಿಗೆ ಮೌನದ ಹಕ್ಕಿ ಈರೇಳು ಕೋಟಿ ಕೂಡಿ
ಎಂಭತ್ತು ನಾಲ್ಕು ಲಕ್ಷ ಬೇಟೆಗಾರರ ಬಲೆಗೊಳಗಾಯಿತ್ತು
ಇದರೊಲರವ ಕೇಳಿಹರೆಂದು ಅಲೇಖಮಯ
ಶೂನ್ಯ ಕಲ್ಲಿನ ನಿಳಯದೊಳಗಾದ

**ಟೀಕು:—** ಅನೇಕ ಕೋಟಿ ಬ್ರಹ್ಮಾಂಡಗಳನೊಳಕೊಂಡು ಊರ್ಧ್ವವಾಗಿರ್ಪ ನಿಷ್ಕಲ ಶಿವತತ್ವವೆಂಬುದೀಗ, ಊರ್ಧ್ವವೆಂಬ ಶಬ್ದಕ್ಕರ್ಥ. ಆ ನಿಷ್ಕಲ ಶಿವತತ್ವಕ್ಕಾಧಾರವಾದ ಚಿತ್‌ಪೃಥ್ವಿಗೆ ಮತ್ತೊಂದು ಬಯಕೆ ಇಲ್ಲದೆ ಪರಮ ಸಂತೋಷದಲ್ಲಿರುತ್ತಿಹವೆಂಬುದೀಗ, ಭೂಮಿಯ ವಿರಾಗದಲ್ಲಿ ಎಂಬ ಶಬಕ್ಕರ್ಥ. ಸಪ್ತಸಮುದ್ರಂಗಳು ಮೊದಲಾದ ಅನೇಕತತ್ವ ಬ್ರಹ್ಮಾಂಡಗಳಿಗೆ ಆ ಚಿತ್ತೇ ಆಧಾರವಾಗಿಹುದೆಂಬುದೀಗ, ಸಪ್ತಸಮುದ್ರಕ್ಕೆ ಭೂಮಿಯೊಂದೇ ಎಂಬ ಶಬ್ದಕ್ಕರ್ಥ. ಆ ಚಿತ್‌ಪೃಥ್ವಿಯ ಮಧ್ಯದಲ್ಲಿ ಅನೇಕ ಬ್ರಹ್ಮಾಂಡಗಳನೊಳಕೊಂಡಿರ್ಪ ಪರಬ್ರಹ್ಮ ವೃಕ್ಷ ಹುಟ್ಟಿತ್ತೆಂಬುದೀಗ, ಆ ಭೂಮಿಯಮಧ್ಯದಲ್ಲೊಂದು ವಟವೃಕ್ಷ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಆ ಪರಬ್ರಹ್ಮವೃಕ್ಷದಿಂ ಶಿವತತ್ವ, ಸದಾಶಿವತತ್ವ, ಮಾಹೇಶ್ವರತತ್ವವೆಂಬ ತ್ರಿತತ್ವ ಉದಯವಾದವೆಂಬುದೀಗ, ಕೊಂಬು ಮೂರು ಎಂಬ ಶಬ್ದಕ್ಕರ್ಥ. ಆ ಮಾಹೇಶ್ವರ ತತ್ವದಿಂ ಹುಟ್ಟಿದ ಅನೇಕ ಲೀಲಾ ವಿಗ್ರಹಮೂರ್ತಿಗಳೆಂಬುದೀಗ, ಅದರ ಬೆಂಬಳಿಯಲ್ಲಿ ಹುಟ್ಟಿದ ಕವಲಿಗೆ ಲೆಖ್ಖವಿಲ್ಲವೆಂಬ ಶಬ್ದಕ್ಕರ್ಥ. ಆ ಪರಬ್ರಹ್ಮವೃಕ್ಷದಲ್ಲಿ ಉದಯವಾದ ಮುಕ್ತಿಫಳವೆನಿಸುವ ಚಿದ್ಘನ ಲಿಂಗದ ಶಬ್ದ ಜಾಲಂಗಳಳಿದು ನಿಶ್ಶಬ್ದಸ್ವರೂಪವಾದ ಪರಮಾತ್ಮನೆಂಬ ಪಕ್ಷಿಯ ಅನೇಕ ಕರಣಂಗಳನು ತನ್ನ ಶಿವಭಾವದಲ್ಲಿ ಅವಗ್ರಹಿಸಿಕೊಂಡು ಸರ್ವಾಚಾರ

ಸಂಪತ್ತು ಮೊದಲಾದ ಅನೇಕ ಶೀಲ, ವ್ರತ, ನಿಯಮಂಗಳಿಂ ಸಾಧಿಸುವ ಭಕ್ತ ಜನಂಗಳ ಭಕ್ತಿಪಾಶಕ್ಕೊಳಗಾಯಿತ್ತೆಂಬುದೀಗ, ಆ ಆಲದ ಹಣ್ಣಿಗೆ ಮೌನದ ಹಕ್ಕಿ ಈರೇಳು ಕೋಟಿ ಕೂಡಿ ಎಂಬತ್ತು ನಾಲ್ಕು ಲಕ್ಷ ಬೇಟೆಗಾರರ ಬಲೆಯೊಳಗಾಯಿತ್ತು ಇದರೊಲವರವ ಕೇಳಿಹರೆಂದು ಅಲೇಖಮಯ ಶೂನ್ಯ ಕಲ್ಲಿನ ನಿಳಯದೊಳಗಾದನೆಂಬ ಶಬ್ದಕ್ಕರ್ಥ.

## ೧೨

ಊರೊಳಗಣ ಅರಳಿಯ ಮರದಲ್ಲಿ ಮೂರು ವರ್ಣದ ಗಿಣಿ
ಮರಿಯನಿಕ್ಕಿತ್ತು
ರಟ್ಟೆ ಬಲಿದು ಹಾರಲಾರದು, ಕೊಕ್ಕು ಬಲಿದು ಕೆಂಪಾಗದು,
ಬಾಯಿ ಬಲಿದು ಹಣ್ಣ ಮೆಲಲಾಗದು, ಅದು ಓದಿಸುವವರಿಗಸಾಧ್ಯ,
ಅಲೇಖನಾದ ಶೂನ್ಯ ಇದರೊಲವರವ ಕೇಳಿಹರೆಂದು
ಕಲ್ಲಿನೊಳಗಾದ

**ಟೀಕು:**— ಪಂಚಭೂತ ಗ್ರಾಮವೆಂಬುದೀಗ, ಊರೆಂಬ ಶಬ್ದಕ್ಕರ್ಥ. ಅಂತಪ್ಪ ದೇಹಮಧ್ಯದಲ್ಲಿ ಶಬ್ದಜಾಲಂಗಳಿಂದುಲುವೃತ್ತಿಪ ವಾಗ್ಜಾಲವೆಂಬುದೀಗ, ಊರೊಳಗಿನ ಅರಳಿಯ ಮರದಲ್ಲಿ ಎಂಬ ಶಬ್ದಕ್ಕರ್ಥ. ಆ ವಾಗ್ಜಾಲ ಭ್ರಾಂತಿನಲ್ಲಿರ್ಪ ಗುಣತ್ರಯ ಸಂಬಂಧಿಯಾದ ಜೀವಹಂಸನಿಂ ಜೀವತ್ರಯಂಗಳು ಉಪಯಿಸಿದವೆಂಬುದೀಗ, ಮೂರು ವರ್ಣದ ಗಿಣಿ ಮರಿಯನಿಕ್ಕಿತ್ತೆಂಬ ಶಬ್ದಕ್ಕರ್ಥ. ಶಿವಕೃಪೆಯಿಂದ ಜೀವತ್ರಯಂಗಳ ಮಧ್ಯದಲ್ಲಿ ಸಮ್ಯಜ್ಞಾನ ಪ್ರಭಾವಿಸಲು ಶ್ರೀ ಗುರು ಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧಿಯಾಗಲು ಭಕ್ತಿಜ್ಞಾನಂಗಳು ನಿರ್ಧರವಾದವೆಂಬುದೀಗ, ರಟ್ಟೆ ಬಲಿದು ಎಂಬ ಶಬ್ದಕ್ಕರ್ಥ. ಆ ಭಕ್ತಿಜ್ಞಾನಂಗಳೆರಡೂ ನಿರ್ಧರವಾದ ಚಿದಾತ್ಮನು ಅನ್ಯವಾದ ಮಾಯಾಪ್ರಪಂಚಿನತ್ತ ಹೋಗದೆಂಬುದೀಗ. ಹಾರಲಾರದು ಎಂಬ ಶಬ್ದಕ್ಕರ್ಥ. ಅಂತು ಮಾಯಾ ಪ್ರಪಂಚು ನಷ್ಟವಾಗಲು ಶರಣನ ಶಿವಭಾವ ನಿರ್ಧರವಾಗಿ ರಜೋಗುಣ ಹೊದ್ದದೆಂಬುದೀಗ, ಕೊಕ್ಕುಬಲಿದು ಕೆಂಪಾಗದು ಎಂಬ ಶಬ್ದಕ್ಕರ್ಥ. ಅಂತು ರಜೋಗುಣ ನಿವೃತ್ತಿಯಾಗಲು ಶರಣನ ಶಿವಾಪೇಕ್ಷೆ ಲಿಂಗದಲ್ಲಿ ಸ್ವಸ್ಥಿರವಾಗಿ ಭಿನ್ನ ಫಲ ಪದಂಗಳ ಸ್ವೀಕರಿಸದೆಂಬುದೀಗ, ಬಾಯಿಬಲಿದು ಹಣ್ಣು ಮೆಲಲಾರದು ಎಂಬಶಬ್ದಕ್ಕರ್ಥ. ಆ ಜ್ಞಾನಕಲಾತ್ಮನ ಶ್ರುತಜ್ಞಾನದಿಂಪರಿದಿಹೆನೆಂದೊಡೆ ಸಾಧ್ಯವಲ್ಲವೆಂಬುದೀಗ, ಅದ ಓದಿಸುವವರಿಗೆ ಅಸಾಧ್ಯ ಅಲೇಖನಾದಶೂನ್ಯ ಇದರೊಲವರವ ಕೇಳಿಹರೆಂದು ಕಲ್ಲಿನೊಳಗಾದಾ ಎಂಬ ಶಬ್ದಕ್ಕರ್ಥ.

## ೧೩

ಕಾಳಾಡಿನ ಹಾಲ ಕಂಬಳಿಯ ಕುರಿ ಕುಡಿಯಿತ್ತು
ಮೂರು ಲೋಕವೆಲ್ಲವೂ ಎನ್ನ ಕಂಬಳಿಯ

ಗೊಪ್ಪಿಯಲ್ಲಿ ತುಂಬಿದೆಯೆಂದು ಸಂಭ್ರಮವ ಮಾಡುತ್ತದೆ.
ಇದರ ಸಂಗದ ಸುಖವ ಹೇಳಾ ಅಲೇಖನಾದ
ಶೂನ್ಯ ಕಲ್ಲಿನ ಮರೆಬೇಡ

**ಟೀಕು:—** ಅಖಂಡ ಪರಿಪೂರ್ಣವಾದ ಚಿತ್ತಿನ ಅವಿರಳ ಜ್ಞಾನದ ಪರವಶದ ಪರಮಕಾಷ್ಟಿಯೆಂಬುದೀಗ, ಕಾಳಾಡಿನ ಎಂಬ ಶಬ್ದಕ್ಕರ್ಥ. ಆ ಚಿತ್ತೆಂಬ ಚಿದ್ಭೂಮಿಯಲ್ಲಿ ತುಂಬಿರ್ದ ಜ್ಞಾನಾಮೃತರಸವ ಮಹಾ ಜ್ಞಾನವನೊಳಕೊಂಡಿರ್ದ ಸಜ್ಜೀವನ ಸವಗ್ರಹಿಸಿತ್ತೆಂಬುದೀಗ, ಹಾಲ ಕಂಬಳಿಯ ಕುರಿ ಕುಡಿಯಿತ್ತು ಎಂಬ ಶಬ್ದಕ್ಕರ್ಥ. ಆ ಚಿದಾಮೃತವ ಸ್ವೀಕರಿಸಿದ ಚಿದಾತ್ಮನು ತನ್ನ ಮಹಾಜ್ಞಾನದ ಮೂರ್ತಿಯಲ್ಲಿ ಅಂಗತ್ರಯ ಸಂಬಂಧವಾದ ತನುತ್ರಯಂಗಳಡಗಿದ ಭೇದವ ಕಂಡು ಹರುಷೋಲ್ಲಾಸದಿಂದ ಇರುತ್ತಿಹುದೆಂಬುದೀಗ, ಮೂರು ಲೋಕವೆಲ್ಲವೂ ಎನ್ನ ಕಂಬಳಿಯ ಗೊಪ್ಪಿಯಲ್ಲಿ ತುಂಬಿದೆಯೆಂದು ಸಂಭ್ರಮವ ಮಾಡುತ್ತದೆ ಎಂಬ ಶಬ್ದಕ್ಕರ್ಥ. ಈ ಲಿಂಗಾಂಗ ಸಮರಸಾನಂದ ಸುಖವ ಕೃಪೆ ಮಾಡೆಂದು ಶ್ರೀಗುರುವಿಂಗೆ ಬಿನ್ನೈಸುತ್ತಿರ್ದನೆಂಬುದೀಗ, ಇದರ ಸಂಗದ ಸುಖವ ಹೇಳಾ ಅಲೇಖನಾದ ಶೂನ್ಯ ಕಲ್ಲಿನ ಮರೆ ಬೇಡಾ ಎಂಬ ಶಬ್ದಕ್ಕರ್ಥ.

೧೪

ಪೃಥ್ವಿ ಆಕಾಶದ ಮಧ್ಯದಲ್ಲಿ ಖೇಚರ ಮಂಡಲ
ಆ ಮಂಡಲದರಸು ವಿಹಂಗರಾಜ ಮರೀಚಕ
ಪ್ರಧಾನ ಮಹಾತಳ ತಳವಾರ ಇಂತಿ ಮಂಡಲ
ಸುರಕ್ಷದಲ್ಲಿರುತ್ತಿರಲಾಗಿ
ಗೋರಕ್ಷನೆಂಬರಸು ಮುತ್ತಿದ ಮಂಡಲ ಪಟ್ಟಣಕೊಳು ಹೋಗದು
ಮುತ್ತಿದರಸು ಬಿಟ್ಟು ಹೋಗಲಾದ ಸಂತೈಸಲಂಜಿ
ಅಲೇಖನಾದ ಶೂನ್ಯ ಕಲ್ಲಿನ ಒಳಹೊಕ್ಕು ಎಲ್ಲರ ಗೆದ್ದ

**ಟೀಕು:—** ದೇಹಾತ್ಮರುಗಳ ಮಧ್ಯದಲ್ಲಿ ಎಂಬುದೀಗ, ಪೃಥ್ವಿಯಾಕಾಶದ ಮಧ್ಯದಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹಾತ್ಮರ ಮಧ್ಯದಲ್ಲಿ ಚಿದಾಕಾಶವು ಇರುತ್ತಿಹುದೆಂಬುದೀಗ ಖೇಚರ ಮಂಡಲವೆಂಬ ಶಬ್ದಕ್ಕರ್ಥ. ಆ ಚಿದಾಕಾಶ ಮಂಡಲದಲ್ಲಿ ಸಕಲ ಕರಣಂಗಳಿಗೆ ಕರ್ತನಾದ ಮಹಾ ಘನಲಿಂಗವೆಂಬರಸು ಒಪ್ಪುತ್ತಿಹನೆಂಬುದೀಗ, ಆ ಮಂಡಲದರಸು ವಿಹಂಗರಾಜನೆಂಬ ಶಬ್ದಕ್ಕರ್ಥ. ಸಕಲ ಪ್ರಪಂಚು ನಿವೃತ್ತಿಯ ಸದ್ವಿವೇಕ ಸ್ವರೂಪವನೆಯ್ದಿದ ಮನಸ್ಸೇ ಪ್ರಧಾನಾಗಿಹುದೆಂಬುದೀಗ, ಮರೀಚಿಕ ಪ್ರಧಾನನೆಂಬ ಶಬ್ದಕ್ಕರ್ಥ. ಈ ದೇಹವ ತಾಳಿರ್ದ ಜೀವನು ಏಕಾಗ್ರ ಚಿತ್ ಸ್ವರೂಪಿನಿಂ ಎಚ್ಚತ್ತಿಹ ಕಾರಣ ಮಹಾ ತಳ ತಳ ತಳವಾರನೆಂಬ ಶಬ್ದಕ್ಕರ್ಥ. ಸಕಲ ತತ್ವಂಗಳೆಲ್ಲ ಲಿಂಗತತ್ವಂಗಳಾಗಿ, ಸಕಲ ಕರಣಂಗಳೆಲ್ಲ ಲಿಂಗಕರಣಂಗಳಾಗಿ ಸುಖಮಯದಿಂದೊಪ್ಪುತ್ತಿರಲು ಎಂಬ

ದೀಗ, ಇಂತಿ ಮಂಡಲ ಸುರಕ್ಷದಲ್ಲಿರುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಅಹಂವೆಂಬ ಅದ್ವೈತ-ಜ್ಞಾನದಿಂ ಬಂದು ಆ ಚಿದಾಕಾಶ ಮಂಡಲದಲ್ಲಿರ್ಪ ಪರವಸ್ತುವನವ ಗ್ರಹಿಸಲು ಆ ಚಿದಾಕಾಶವು ಕಾಯಪುರವೆಂಬ ಪಟ್ಟಣವು ಸಾಧ್ಯವಲ್ಲದೆ ಹೋಯಿತ್ತೆಂಬುದೀಗ, ಗೋರಕ್ಷನೆಂಬರಸು ಮುತ್ತಿದ ಮಂಡಲ ಪಟ್ಟಣಕೊಳು ಹೋಗದು ಎಂಬ ಶಬ್ದಕ್ಕರ್ಥ. ಆ ಅದ್ವೈತ ಜ್ಞಾನಿಗಳು ಸಾಧಿಸುತ್ತಿಹರು ಅವರಿಗಸಾಧ್ಯವಾಗಿಹುದು ಚಿದಾಕಾಶವೆಂಬುದೀಗ, ಮುತ್ತಿದರಸು ಬಿಟ್ಟು ಹೋಗನೆಂಬ ಶಬ್ದಕ್ಕರ್ಥ. ಅಂತಪ್ಪ ಅದ್ವೈತ ಜ್ಞಾನಿಗಳಿಗೆ ಸುಜ್ಞಾನ ಬೋಧೆಯ ಬೋಧಿಸಲಂಜಿ ಆ ಶರಣ ವಿಲಕ್ಷಣವಾಗಿ ಶಿವಾದ್ವೈತ ಭಕ್ತಿಯಿಂ ವಾಗಾದ್ವೈತವ ನಿವೃತ್ತಿಮಾಡಿದನೆಂಬುದೀಗ, ಇದ ಸಂತೈಸಲಂಜಿ ಅಲೇಖನಾದ ಶೂನ್ಯ ಕಲ್ಲಿನೊಳ ಹೊಕ್ಕು ಎಲ್ಲರ ಗೆದ್ದ ಎಂಬ ಶಬ್ದಕ್ಕರ್ಥ.

೧೫

ಅಂಗ ಕೋಟಿ ಭುಜ, ಆಳುವೇರಿ ತಲೆ, ತೆನೆ ಕಣ್ಣು,
ಅಂಬುಗಂಡಿ ಕಾದುವ ಆರಸು ಅಸುರಾಜ ಕೂಟದ
ಮನ್ನೆಯರೈದು ಮಂದಿ
ಎಂಟು ಘಟಾನೆ ಪಂಚವಿಂಶತಿ ಕುದುರೆ
ಆಳುವ ಪರಿವಾರ ಕರಣಂಗಳ ಮೊತ್ತ ಕೂಡಿ ಇರಿಯಿತ್ತು
ಅರಿರಾಜ ತಮ ವಿರೋಧಿಯೊಡ್ಡನೆ ಮುರಿದ ಅಸುರಾಜ
ಪಶುಪತಿಯ ಗೆದ್ದ
ಎನಗಾಯಿತ್ತು ಹೇಳಾ, ಅಲೇಖನಾದ ಶೂನ್ಯ ಕಲ್ಲಿನೊಳಗಾದವನೆ

**ಟೀಕು:—** ಸರ್ವಾಂಗ ಲಿಂಗ ಸಂಬಂಧಿಯಾದ ಶರಣನ ಪ್ರಸಾದ ಕಾಯವೆ ಕೋಟಿಯಾದ ಕಾರಣ ಅಂಗಕೋಟಿಯೆಂಬ ಶಬ್ದಕ್ಕರ್ಥ. ಭಕ್ತಿ ನೈಷ್ಠಿಯೊಡನೆ ಕೂಡಿದ ಭುಜವೇ ಆಳುವೇರಿಯಾದವೆಂಬುದೀಗ, ಭುಜ ಆಳುವೇರಿಯೆಂಬ ಶಬ್ದಕ್ಕರ್ಥ. ಸುಜ್ಞಾನ ಪ್ರಕಾಶವೆ ತೆನೆಯಾಯಿತ್ತಾಗಿ, ತಲೆ ತೆನೆಯೆಂಬ ಶಬ್ದಕ್ಕರ್ಥ. ಅವಿರಳ ಜ್ಞಾನ ದೃಕ್ಕಿಂ ನೋಡುತ್ತಿಹನೆಂಬುದೀಗ, ಕಣ್ಣು ಅಂಬು ಗಂಡಿ ಎಂಬ ಶಬ್ದಕ್ಕರ್ಥ. ಜ್ಞಾನಕ್ರಿಯಿಂದಾಚರಿಸುವ ಶರಣನ ಅಸುವೆಂದೊಡೆ ಜೀವನು. ಅಂತಪ್ಪ ಜೀವಂಗೆ ಒಡೆಯನಾಗಿಪ ಶರಣನೆಂಬುದೀಗ, ಕಾದುವ ಆರಸು ಅಸುರಾಜನೆಂಬ ಶಬ್ದಕ್ಕರ್ಥ. ಪಂಚಕರಣಂಗಳ ವರ್ತನೆ ನಿವೃತ್ತಿಯಾಗಿ ಜ್ಞಾನ ಕರ್ತ ಗಣಂಗಳಾಗಿ ಆತ್ಮನಿಗೆ ಸಹಾಯವಾಗಿಪ ಕಾರಣ, ಕೂಟದ ಮನ್ನೆಯರೈದು ಮಂದಿ ಎಂಬ ಶಬ್ದಕ್ಕರ್ಥ. ಅಷ್ಟಮದವಳಿದು ಚಿದಹಂಕಾರ ಸ್ವರೂಪವಾದ ಕಾರಣ ಎಂಟು ಘಟಾನೆಯೆಂಬ ಶಬ್ದಕ್ಕರ್ಥ. ಇಪ್ಪತ್ತೈದು ತತ್ವಭಾವವಳಿದು ಲಿಂಗ ತತ್ವವಾಗಿಪವೆಂಬುದೀಗ, ಪಂಚ ವಿಂಶತಿ ಕುದುರೆಯೆಂಬ ಶಬ್ದಕ್ಕರ್ಥ. ಜೀವತ್ರಯಂಗಳಿಗೆ ಆತ್ಮೆಂಬ, ಆತ್ಮತ್ರಯ, ಮಲತ್ರಯವೆಂಬುದೀಗ, ಪರಿವಾರವೆಂಬ ಶಬ್ದಕ್ಕರ್ಥ. ಸಕಲ ಕರಣಂಗಳ ಮೊತ್ತವೆಲ್ಲವೂ ಜ್ಞಾನ ಕರಣಂಗಳಾಗಿ

ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪವಾದ ಶರಣನು ಈ ಪ್ರಕಾರದಲ್ಲಿ ಜ್ಞಾನ ಕ್ರೀವಿಡಿದಾಚರಿಸುತ್ತಿರಲಾಗಿ ಎಂಬುದೀಗ, ಕೂಡಿ ಇರಿಯಿತ್ತು ಎಂಬ ಶಬ್ದಕ್ಕರ್ಥ. ಜ್ಞಾನ ಕಲಾತ್ಮಂಗೆ ಹಗೆಯಾಗಿರ್ದ ಅರಿಷಡ್ವರ್ಗವೆಂಬುದೀಗ, ಅರಿ ರಾಜನೆಂಬ ಶಬ್ದಕ್ಕರ್ಥ. ಆ ಅರಿಷಡ್ವರ್ಗವನು ಕ್ರೀಯಿಂ ನಿವೃತ್ತಿಮಾಡಿದ ಶರಣನು ಚಿದಾಗ್ನಿಯಿಂದ ಜ್ಞಾನ ತಮಸ್ಸ ದಹಿಸಿದನೆಂಬುದೀಗ, ತನು ವಿರೋಧಿಯೆಂಬ ಶಬ್ದಕ್ಕರ್ಥ. ಇಂತಪ್ಪ ಶರಣನಿಗೆ ಪರಶಿವ ಸೋತು ತನ್ನ ನಿಜಪದವ ಕೊಟ್ಟನೆಂಬುದೀಗ, ಒಡನೆ ಮುರಿದನೆಂಬ ಶಬ್ದಕ್ಕರ್ಥ. ಆ ಜ್ಞಾನ ಕಲಾತ್ಮನು ಶಿವನು ಕೊಡುವ ಖಂಡಿತ ಫಲ ಪದಂಗಳ ಸತ್ಕ್ರಿಯಾ ಚರಣದಿಂದ ಧ್ವಂಸವ ಮಾಡಿದನೆಂಬುದೀಗ, ಅಸುರಾಜ ಪಶುಪತಿಯು ಗೆಲ್ದ ಎನಗಾಯಿತ್ತು ಹೇಳಾ ಅಲೇಖನಾದ ಶೂನ್ಯ ಕಲ್ಲಿಗೊಳಗಾದವನೆ ಎಂಬ ಶಬ್ದಕ್ಕರ್ಥ.

೧೬

ಕಾಳಮೇಘ ಮಂದಿರದ ಜಾಳಾಂದರದ ಮನೆಯಲ್ಲಿ
ಒಬ್ಬ ಸೂಳೆಯು ಬಾಗಿಲಲ್ಲಿ ಎಂಭತ್ತುನಾಲ್ಕು ಲಕ್ಷ ಮಿಂಡಗಾರರು,
ಅವಳ ಸಂಗವಲ್ಲಿರಲಮ್ಮರು; ಅವಳು ತಾವೆ ಬರಲೆಂದು
ಕರೆಯುದಿಹಳು.
ಅವಳಿಗೆ ಯೋನಿ ಹಿಂದು, ಅಂಡ ಮುಂದು, ಕಣ್ಣು ಅಂಗಾಲಿನಲ್ಲಿ
ಕಿವಿ ಭುಜವಲ್ಲಿ, ಕೈ ಮಂಡಿಯ ಮೇಲೆ, ಮೂಗು ಹಣೆಯಲ್ಲಿ
ಮೂಗಿನ ದ್ವಾರವು ಉಂಗುಷ್ಟದಲ್ಲಿ, ಬಸುರು ಬಾಯಲ್ಲಿ
ನಡೆವಳು ತಲೆ ಮುಂದಾಗಿ, ಕಾಲು ಮೇಲಾಗಿ,
ಅವಳು ಕೂಡುವ ಪರಿಯ ಹೇಳಾ
ಅಲೇಖನಾದ ಶೂನ್ಯವ ಗೆದ್ದಿಯಲ್ಲ ಕಲ್ಲಿನ ಹೊಟ್ಟೆಯ ಮರೆಯಲ್ಲಿ.

ಟೀಕು:— ಅಭ್ರಛಾಯ ಮಾತ್ರನಾದ ದೇಹವು ಅಜ್ಞಾನ ಸಂಬಂಧವಾಗಿರುತ್ತಿಹುದೆಂಬುದೀಗ, ಕಾಳಮೇಘಮಂದಿರದ ಎಂಬ ಶಬ್ದಕ್ಕರ್ಥ. ನವದ್ವಾರಯುಕ್ತವಾದ ಅಂತರ್ದೇಹವೆಂಬುದೀಗ, ಜಾಳಾಂದರ ಮನೆಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಅಂತರ್ದೇಹದಲ್ಲಿ ನಿಷ್ಕಲ ಚಿಚ್ಛಕ್ತಿ ಇರುತ್ತಿಹಳೆಂಬುದೀಗ, ಒಬ್ಬ ಸೂಳೆಯೆಂಬ ಶಬ್ದಕ್ಕರ್ಥ. ಆ ಚಿಚ್ಛಕ್ತಿಯು ಮೋಕ್ಷಮಾರ್ಗದಲ್ಲಿ ಎಂಬುದೀಗ, ಬಾಗಿಲಲ್ಲಿ ಎಂಬ ಶಬ್ದಕ್ಕರ್ಥ. ಎಂಬತ್ತು ನಾಲ್ಕು ಲಕ್ಷ ಯೋನಿದ್ವಾರದಲ್ಲಿ ಹುಟ್ಟಿ ಹುಟ್ಟಿ ಬರುತ್ತಿಹ ಸಕಲ ಜೀವರುಗಳು ಮೋಕ್ಷಮಾರ್ಗವ ಇಚ್ಛೈಸುತ್ತಿಹರಲ್ಲದೆ ಆ ಚಿಚ್ಛಕ್ತಿಯೊಡಗೂಡಿ ಪರಮಾನಂದ ಸುಖವ ಸುಖಿಸಿಹೆವೆಂದೊಡೆ ಜೀವಭಾವ ಹಿಂಗದಾಗಿ ಅಸಾಧ್ಯವಾಗಿರುತ್ತಿಹುದೆಂಬುದೀಗ, ಎಂಬತ್ತು ನಾಲ್ಕು ಲಕ್ಷ ಮಿಂಡಗಾರರು ಅವಳ ಸಂಗದಲ್ಲಿರಲಮ್ಮರು ಎಂಬ ಶಬ್ದಕ್ಕರ್ಥ. ಆ ಚಿತ್ತೇಗುರು ಸ್ವರೂಪವಾದ ಕಾರಣ ಸುಜ್ಞಾನೋದಯವಾಗಿ ಸಕಲ ಪ್ರಪಂಚು ನಿವೃತ್ತಿಯ ಮಾಡಿಉಪಾವಸ್ಥೆಯ ಮುಂದುಗೊಂಡು ತಾವೆ ಬರಲೆಂದು ಸುಮ್ಮನಿರುತ್ತಿಹನು

ಶ್ರೀ ಗುರುವೆಂಬುದೀಗ, ಅವಳು ತಾವೇ ಬರಲೆಂದು ಕರೆಯುದಿಪಳು ಎಂಬ ಶಬ್ದಕ್ಕರ್ಥ- ಅಂತಪ್ಪ ಚಿಚ್ಛಕ್ತಿ ನಿಜಸುಷುಪ್ತಿಯ ಮೂಲದಲ್ಲಿ ಕೂಡಿಪುದೆಂಬುದೀಗ, ಅವಳಿಗೆ ಯೋನಿ ಹಿಂದೆ ಎಂಬ ಶಬ್ದಕ್ಕರ್ಥ. ಆ ಚಿಚ್ಛಕ್ತಿಯ ಸ್ವಸ್ಥಿರ ಚಿತ್ತವೆಂಬುದೀಗ, ಮೋಕ್ಷದಲ್ಲಿ ಲಿಯ್ಯವಾಗಿಹುದೆಂಬುದೀಗ, ಅಂಡ ಮುಂದು ಎಂಬ ಶಬ್ದಕ್ಕರ್ಥ. ಆ ಚಿಚ್ಛಕ್ತಿಯ ಜ್ಞಾನ ದೃಷ್ಟಿಯು ಚರಿಯಾ ಪಾದದಲ್ಲಿ ಸಂಬಂಧವಾಗಿಹುದೆಂಬುದೀಗ, ಕಣ್ಣು ಅಂಗಾಲಿನಲ್ಲಿ ಎಂಬ ಶಬಕ್ಕರ್ಥ. ಆ ಚಿಚ್ಛಕ್ತಿಯ ಸುಜ್ಞಾನ ಶಿರಸ್ಸು ಕ್ರಿಯಾಪಾದದಲ್ಲಿ ಸಂಬಂಧವಾಗಿಹುದೆಂಬುದೀಗ, ತಲೆ ಮುಂಗಾಲಿನಲ್ಲಿ ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶ್ರೀ ಗುರುವಿನ ಷಡಕ್ಷರಿಯ ಮಂತ್ರವು ಸೃಷ್ಟಿಕೆಯಲ್ಲಿ ಸಂಬಂಧವಾಗಿಹುದೆಂಬುದೀಗ, ಕಿವಿ ಭುಜದಲ್ಲಿ ಎಂಬ ಶಬ್ದಕ್ಕರ್ಥ. ಆ ಚಿಚ್ಛಕ್ತಿಯ ಸದ್ಭಾವ ಹಸ್ತವು ಜ್ಞಾಯ ಸ್ವರೂಪವಾದ ಪರಶಿವ ತತ್ವದಲ್ಲಿ ಸಂಬಂಧವಾಗಿಹುದೆಂಬುದೀಗ, ಕೈ ಮುಂಡೆಯ ಮೇಲೆ ಎಂಬ ಶಬ್ದಕ್ಕರ್ಥ. ಆ ಚಿಚ್ಛಕ್ತಿಯ ಸ್ವಾನುಭಾವ ಸದ್ವಾಸನೆಯು ಶಿವಾದ್ವೈತ ಭಕ್ತಿಯಲ್ಲಿ ಸನ್ನಿಹಿತವಾಗಿಹುದೆಂಬುದೀಗ, ಮೂಗು ಹಣೆಯಲ್ಲಿ ಎಂಬ ಶಬ್ದಕ್ಕರ್ಥ. ಆ ಸ್ವಾನುಭಾವದಲ್ಲಿ ಸಂಬಂಧವಾದ ಸದ್ವಿವೇಕ ದ್ವಾರವು ಸತ್ಕ್ರಿಯಾ ಸ್ವರೂಪವಾದ ಇಷ್ಟಲಿಂಗದಲ್ಲಿ ಸಂಯೋಗವಾಗಿಹುದೆಂಬುದೀಗ, ಮೂಗಿನ ದ್ವಾರವು ಉಂಗುಷ್ಟದಲ್ಲಿ ಎಂಬ ಶಬ್ದಕ್ಕರ್ಥ. ಆ ಮಹಾಲಿಂಗದ ನಿಜವನೊಳಕೊಂಡಿರ್ಪ ಚಿಚ್ಛಕ್ತಿಯ ಚಿದ್ಗರ್ಭವು ಶಿವಾಪೇಕ್ಷೆಯಲ್ಲಿ ಸಂಬಂಧವಾಗಿಹುದೆಂಬುದೀಗ, ಬಸುರು ಬಾಯಲ್ಲಿ ಎಂಬ ಶಬ್ದಕ್ಕರ್ಥ. ಆ ಚಿಚ್ಛಕ್ತಿಯ ಸುಜ್ಞಾನ ಪ್ರಕಾಶವು ಮಾರ್ಗಕ್ರೀಯಲ್ಲೊಡಗೂಡಿ ಆ ಅಭಿನ್ನ ಕ್ರಿಯಾಚಾರವು ಮೀರಿದ ಕ್ರೀಯಲ್ಲಿ ಸಂಬಂಧವಾಗಿ ಆಚರಿಸುತ್ತಿಹಳೆಂಬುದೀಗ, ನಡೆವಳು ತಲೆ ಮುಂದಾಗಿ ಕಾಲು ಮೇಲಾಗಿ ಎಂಬ ಶಬ್ದಕ್ಕರ್ಥ. ಆ ಅನಾದಿ ಚಿಚ್ಛಕ್ತಿ ಸ್ವರೂಪವಾದ ಶ್ರೀ ಗುರು ತತ್ವದಲ್ಲಿ ಸಮರಸವಹ ಭೇಧವ ನಿರೂಪಿಸೆಂದು ಬಿನ್ನೈಸುತ್ತಿರ್ಪನೆಂಬುದೀಗ, ಆವಳ ಕೂಡುವ ಪರಿಯ ಹೇಳಾ, ಅಲೇಖನಾದ ಶೂನ್ಯವಗೆಟ್ಟಿಯಲ್ಲ ಕಲ್ಲಿನ ಹೊಟ್ಟೆಯ ಮರೆಯಲ್ಲಿ ಎಂಬ ಶಬ್ದಕ್ಕರ್ಥ.

೧೭

ಊರ ಹೊರಗೊಂದು ಗಿಡುಮುತ ಅದರೊಳಗೆ ಅಡಗಿರ್ಪರೈವರು ಕಳ್ಳರು
ಒಬ್ಬ ನರಿಯ ಬಲೆಯುವ, ಒಬ್ಬ ಹುಲಿಯ ಬಲೆಯುವ,
ಒಬ್ಬ ಉಡು ಬೇಟೆಗಾರ
ಒಬ್ಬ ಬಳ್ಳುವಿನ ಕಾಲುಕಣ್ಣಿಯ ಪಾಳಿಂದ, ಒಬ್ಬ ನಾಲ್ವರ
ಬೇಟೆಯ ನೋಡುವ ಉಡುಗಳ್ಳ
ಬೇಟೆ ಕಂಬಳಿಯಾದುದಿಲ್ಲ, ಬೇಟೆಗೆ ಹೋದವರೆಲ್ಲರು
ಕಾಟಕ್ಕೊಳಗಾದರು
ಇವರಾಟ ಕೇಳಿಹರೆಂದಂಜಿ ಅಲೇಖನಾದ ಶೂನ್ಯ
ಕಲ್ಲಿನ ನೆಲೆಮನೆಯ ಹೊಕ್ಕೆಯಲ್ಲ.

**ಟೀಕು:**— ಊರೆಂದೊಡೆ ದೇಹ. ಆ ದೇಹಭಾವಕ್ಕೆ ಹೊರಗಾದ ಶರಣನ ಜ್ಞಾನ ಕಾಯುವೆಂಬುದೀಗ, ಊರ ಹೊರಗೊಂದು ಗಿಡುಮುಹವೆಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ದ್ವೈತಿ-ಅದ್ವೈತಿ, ಲಕ್ಷ-ಅಂತರ್ಲಕ್ಷ, ಭಕ್ತಿಕಾಂಡಿಗಳೆಂಬ ಐವರು ಅಡಗಿರುತ್ತಿಹರೆಂಬುದೀಗ, ಅದರೊಳಗೆ, ಅಡಗಿಪ್ಪ ೫ವರು ಕಳ್ಳರೆಂಬ ಶಬ್ದಕ್ಕರ್ಥ. ಚಿತ್ತ ವಸ್ತುವಿನಲ್ಲಿ ಲೈಸಿ ಕೂಡಬೇಕೆನುತ್ತಿಹನು ಅಂತರ್ಲಕ್ಷಯೋಗಿ ಎಂಬುದೀಗ, ಒಬ್ಬ ನರಿ ಬಲೆಯುವನೆಂಬ ಶಬ್ದಕ್ಕರ್ಥ. ಭಿನ್ನಕ್ರಿಯಾನಾಚರಿಸಿ ಕಾಲವ್ಯಾಘ್ರನ ಬಾಧೆಯ ನಿಲಿಸಬೇಕೆನುತ್ತಿಹ ಸಿದ್ಧಾಂತಿಯೆಂಬುದೀಗ, ಒಬ್ಬ ಹುಲಿ ಬಲೆಯುವನೆಂಬ ಶಬ್ದಕ್ಕರ್ಥ. ಚಿತ್ ಪ್ರಕಾಶಮಯವಾದ ಪರಶಿವ ತತ್ವವ ಲಕ್ಷಿಸಿ ಕೂಡಬೇಕೆನುತ್ತಿಹ ಲಕ್ಷಯೋಗಿಯೆಂಬುದೀಗ, ಒಬ್ಬ ಉಡು ಬೇಟೆಗಾರ ನೆಂಬ ಶಬ್ದಕ್ಕರ್ಥ. ಪ್ರಣವ ಸಂಬಂಧವಾದ ಅಭಿನ್ನ ಕ್ರಿಯಾಜ್ಞಾನ ಸೂತ್ರ ವಿಡಿದು ವಸ್ತುವಿನಲ್ಲಿ ಕೂಡಬೇಕೆನುತ್ತಿಹ ಭಕ್ತಿಕಾಂಡಿಯೆಂಬುದೀಗ, ಒಬ್ಬ ಬಳ್ಳುವಿನ ಕಾಲುಕಣ್ಣಿಯ ಪುಳಿಂದನೆಂಬ ಶಬ್ದಕ್ಕರ್ಥ. ಈ ನಾಲ್ವರಾಚರಣೆಯ ಹೊಲ್ಲದೆ ಅರಿವಿನಿಂ ಅಹಂಮೆಂಬ ಅದ್ವೈತಜ್ಞಾನಿಯೆಂಬುದೀಗ, ಒಬ್ಬ ನಾಲ್ವರ ಬೇಟೆಯ ನೋಡುವ ಉಡುಗಳ್ಳನೆಂಬ ಶಬ್ದಕ್ಕರ್ಥ. ತಮ್ಮ ನಿಜವೇ ಮಹಾಘನಲಿಂಗ ವೆಂದರಿಯದೆ ಭಿನ್ನವಿಟ್ಟಾಚರಿಸುವ ಭಿನ್ನ ಜ್ಞಾನಗಳಿಗೆ ಮೋಕ್ಷಮಾರ್ಗವು ಸಾಧ್ಯವಾದುದಿಲ್ಲವೆಂಬುದೀಗ, ಬೇಟೆ ಬೆಂಬಳಿಯಾದುದಿಲ್ಲವೆಂಬ ಶಬ್ದಕ್ಕರ್ಥ. ಇಂತು ತಮ್ಮ ಭಿನ್ನಜ್ಞಾನ, ಭಿನ್ನ ಕ್ರೀ, ಭಿನ್ನಯೋಗಾಭ್ಯಾಸಂಗಳಿಂ ಸಾಧಿಸಿಹೆನೆಂಬುವರೆಲ್ಲರು ಫಲಪದಕ್ಕೊಳಗಾದರೆಂಬುದೀಗ, ಬೇಟೆಗೆ ಹೋದವರೆಲ್ಲರೂ ಕಾಟಕ್ಕೊಳಗಾದರು, ಇವರಾಟವ ಕೇಳಿಹರೆಂದಂಜಿ ಅಲೇಖನಾದ ಶೂನ್ಯ ಕಲ್ಲಿನ ನೆಲೆಯ ಮನೆಯ ಹೊಕ್ಕೆಯಲ್ಲ ಎಂಬ ಶಬ್ದಕ್ಕರ್ಥ.

## ೧೪

ಸಿರಿಯ ಭೂಮಿಯ ಮಧ್ಯದಲ್ಲಿ ಉರಿಯ ಮಡು ಹುಟ್ಟಿತ್ತು
ಆ ಮಡುವಿನ ಮಧ್ಯದಲ್ಲಿ ಐದು ಸರಗೂಡಿದಭಾವಿ,
ಆ ಬಾವಿಯೊಳಗೆ ಮೂರು ಮುಖದ ಹುಲಿ ಹುಟ್ಟಿತ್ತು
ಒಂದು ಕೊಂದು ತಿಂಬುದು, ಒಂದು ಕೊಲ್ಲದೆ ತಿಂಬುದು
ಒಂದು ಎಲ್ಲರ ನೋಡಿತಿಂಬುದು,
ಅಲ್ಲ ಎಂಬುದು ಆ ಹುಲಿಯ ಬಣ್ಣ, ಮೊದಲು ಕಪ್ಪು,
ನಡುವೆ ಬಾಸುರ, ತುದಿಯಲ್ಲಿ ಬಿಳಿದು ಹಗೆವಣ್ಣ ಸಹಿತವಾಗಿ
ಹುಟ್ಟಿದಹುಲಿ
ಉರಿಯ ಮಡುವನೀಂಟಿ, ರಸದ ಬಾವಿಯ ಕುಡಿದು
ತಿಂಬವೆರಡು ಮುಖ

ತ್ರಿಣ್ಣದ ಮುಖದಲ್ಲಿಯಡಗಿ ಕಡೆಕಪ್ಪು, ನಡುವಳ ಬಾಸುರ
ತುದಿಯು ಬಿಳಿಪಿನಲ್ಲಿ
ಅಡಗಿ ಒಡಗೂಡಿತ್ತು ಅದರ ತೊಡಿಗೆಯು,
ಕೇಳಿಹರೆಂದಂಜಿ ಅಡಗಿದೆ ಅಲೇಖನಾದ ಶೂನ್ಯ ಕಲ್ಲಿನೊಳಗಾಗಿ.

**ಟೀಕು:—** ಪ್ರಾರಬ್ಧಭೋಗ ಸಂಬಂಧವಾದ ಸ್ಥೂಲದೇಹವೆಂಬುದೀಗ, ಸಿರಿಯ ಭೂಮಿಯ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹ ಮಧ್ಯದಲ್ಲಿ ತಾಪತ್ರಯಾಗ್ನಿಯನೊಳಕೊಂಡಿರ್ಪ ಸಂಸಾರ ವಿಷಯ ರಸದ ಘಾತವ ಕಾಣಬಾರದೆಂಬುದೀಗ, ಮಧ್ಯದಲ್ಲಿ ಉರಿಯಮಡು ಹುಟ್ಟಿತ್ತೆಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ರಸದ ಮಧ್ಯದಲ್ಲಿ ಸಂಸಾರ ವಿಷಯ ರಸವನೊಳಕೊಂಡು ಪಂಚ ವಿಷಯಂಗಳ ಕೂಪವಾಗಿರುತ್ತಿಹವೆಂಬುದೀಗ, ಆ ಮಡುವಿನ ಮಧ್ಯದಲ್ಲಿ ಐದು ರಸಗೂಡಿದ ಬಾವಿಯೆಂಬ ಶಬ್ದಕ್ಕರ್ಥ. ಆ ವಿಷಯ ಕೂಪದಲ್ಲಿ ಅವಸ್ಥಾತ್ರಯಂಗಳೆ ಮುಖವಾಗಿಯುಳ್ಳ ಜೀವನಿಂ, ಜೀವತ್ರಯಂಗಳು ಉದಯಿಸಿದವೆಂಬುದೀಗ, ಆ ಬಾವಿಯೊಳಗೆ ಮೂರು ಮುಖದ ಹುಲಿ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಆ ಜಾಗ್ರತಾವಸ್ಥೆಯೇ ಮುಖವಾಗಿರ್ಪ ವಿಶ್ವನು ಸಕಲ ಪ್ರಾಣಿಗಳ ಸಂಹರಿಸಿ ಭಕ್ಷಿಸುತ್ತಿಹುದೆಂಬುದೀಗ, ಒಂದು ಕೊಂದು ತಿಂಬುದು ಎಂಬ ಶಬ್ದಕ್ಕರ್ಥ. ಆ ಸ್ವಪ್ನಾವಸ್ಥೆಯ ಮುಖದಿಂ ತೈಜಸನು ಇಂದ್ರಿಯಂಗಳಲ್ಲಿ ವಿಷಯ ಸುಖವನನುಭವಿಸುತ್ತಿಹುದೆಂಬುದೀಗ, ಒಂದು ಕೊಲ್ಲದೆ ತಿಂಬುದು ಎಂಬ ಶಬ್ದಕ್ಕರ್ಥ. ಆ ಸುಷುಪ್ತಾವಸ್ಥೆಯ ಮುಖದಿಂ ಪ್ರಾಜ್ಞನು ಸಕಲ ಕರಣಂಗಳ ಅಜ್ಞಾನ ದೃಷ್ಟಿಯಿಂ ನಿರೀಕ್ಷಿಸಿ ಆ ಸುಷುಪ್ತಾವಸ್ಥೆಯ ಸುಖವನನುಭವಿಸುತ್ತಿಹುದೆಂಬುದೀಗ, ಒಂದು ಎಲ್ಲರ ನೋಡಿ ತಿಂಬುದು ಎಂಬ ಶಬ್ದಕ್ಕರ್ಥ. ಆ ವಿಶ್ವ ತೈಜಸನ ವರ್ತನೆಯ ಪ್ರಾಜ್ಞನು ವಿವೇಕ ಮುಖದಿಂ ಕಂಡು ವಿಡಂಬಿಸುತ್ತಿಹುದೆಂಬುದೀಗ, ಅಲ್ಲ ಎಂಬುದು ಎಂಬ ಶಬ್ದಕ್ಕರ್ಥ. ಆ ವಿಶ್ವನು ಅಜ್ಞಾನ ಸಂಬಂಧಿಯಾಗಿಹನೆಂಬುದೀಗ, ಆ ಹುಲಿಯ ಬಣ್ಣ ಮೊದಲು ಕಪ್ಪು ಎಂಬ ಶಬ್ದಕ್ಕರ್ಥ. ಆ ತೈಜಸನು ಜ್ಞಾನಾಜ್ಞಾನ ಸಂಬಂಧಿಯಾಗಿಹನೆಂಬುದೀಗ, ನಡುವೆ ಬಾಸುರವೆಂಬ ಶಬ್ದಕ್ಕರ್ಥ. ಆ ಪ್ರಾಜ್ಞನು ನಿರ್ಮಲ ಸ್ವರೂಪವಾದ ಸುಜ್ಞಾನಿಯಾಗಿಹನೆಂಬುದೀಗ, ತುದಿಯಲ್ಲಿ ಬಿಳಿದು ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವ ತ್ರಯಂಗಳ ಮಧ್ಯದಲ್ಲಿ ಶಿವಕೃಪೆಯಿಂ ಸಮ್ಯಜ್ಞಾನ ಪ್ರಕಾಶಿಸಲು, ಸಕಲ ಕರಣಂಗಳ ವರ್ತನೆಯ ಲಯವ ಮಾಡುತ್ತಿಹುದೆಂಬುದೀಗ, ಹಗೆ ಬಣ್ಣ ಸಹಿತವಾಗಿ ಹುಟ್ಟಿದ ಹುಲಿಯೆಂಬ ಶಬ್ದಕ್ಕರ್ಥ. ಆ ಸಕಲ ಕರಣಂಗಳ ಲಯವ ಮಾಡಿದ ಸುಜ್ಞಾನ ಪ್ರಕಾಶದಿಂ ತಾಪತ್ರಯಾಗ್ನಿಯೊಡನೆ ಕೂಡಿದ ಸಂಸಾರ ವಿಷಯ ರಸದ ಘಾತವನವಗ್ರಹಿಸಿತ್ತೆಂಬುದೀಗ, ಉರಿಯ ಮಡುವನೀಂಟಿ ಎಂಬ ಶಬ್ದಕ್ಕರ್ಥ. ಅಂತು ಪಂಚ ವಿಷಯಂಗಳಲ್ಲಿ ತುಂಬಿರ್ಪ ಸಂಸಾರ ವಿಷಯ ರಸದ ನಿವೃತ್ತಿ ಮಾಡಿದನೆಂಬುದೀಗ, ಸರದ ಬಾವಿಯ ಕುಡಿದು ಎಂಬ ಶಬ್ದಕ್ಕರ್ಥ. ಅಂತು ಜಾಗ್ರ ಸ್ವಪ್ನಂಗಳಿಂ ಸಕಲ ಪ್ರಪಂಚು ಗ್ರಹಿಸುತ್ತಿರ್ಪ ವಿಶ್ವ ತೈಜಸನೆಂಬುಭಯವು ಪ್ರಾಜ್ಞನ ಅರಿವಿನಲ್ಲಿ ಐಕ್ಯವಾದವೆಂಬುದೀಗ, ತಿಂಬ

ವೆರಡು ಮುಖ, ತಿನ್ನದ ಮುಖದಲ್ಲಿ ಅಡಗಿ ಎಂಬ ಶಬ್ದಕ್ಕರ್ಥ. ಶ್ರೀಗುರು ಕಾರುಣ್ಯದಿಂ ತ್ರಿವಿಧಲಿಂಗ ಸಂಬಂಧವಾಗಲು ಇಷ್ಟಲಿಂಗ ಸಂಬಂಧಿಯಾದ ತೈಜಸನ ಅರಿವಿನಲ್ಲಿ ಸಮರಸವಾಗಿ ಎಂಬುದೀಗ, ಕಡೆ ಕಪ್ಪು ನಡುವಳ ಬಾಸುರವೆಂಬ ಶಬ್ದಕ್ಕರ್ಥ. ಆ ಪ್ರಾಣಲಿಂಗ ಸಂಬಂಧಿಯಾದ ತೈಜಸನು, ಭಾವಲಿಂಗ ಸಂಬಂಧಿಯಾದ ಪ್ರಾಜ್ಞನ ಮಹಾ ಜ್ಞಾನ ದರಿವಿನಲ್ಲಿ ಸಮರಸವಾದನೆಂಬುದೀಗ, ತುದಿಯ ಬಿಳುಪಿನಲ್ಲಿ ಅಡಗೆಯೆಂಬ ಶಬ್ದಕ್ಕರ್ಥ. ಆ ಮಹಾಜ್ಞಾನ ಸ್ವರೂಪವಾದ ಪ್ರಾಜ್ಞನು ಭಾವಲಿಂಗದಲ್ಲಿ ಅಡಗಿ ನಿಷ್ಪತಿಯಾಯಿತ್ತೆಂಬುದೀಗ, ಒಡಗೂಡಿತ್ತು ಅದರ ತೊಡಿಗೆಯ ಕೇಳಿದರೆಂದಂಜಿ ಅಡಗಿದೆ ಅಲೇಖನಾದ ಶೂನ್ಯ ಕಲ್ಲಿನೊಳಗಾಗಿ ಎಂಬ ಶಬ್ದಕ್ಕರ್ಥ.

೧೯

ಆಡಿನ ಕೋಡಿನ ತುದಿಯ ಇಂಬಿನಲ್ಲಿ,
ಮೂರು ತೋಳನ ಅಗಡ ಘನವಾಯಿತ್ತು
ಬೇಟೆಯ ಬೆಂಬಳಿಗೆ ಸಿಕ್ಕವು ನಾಯತೋಟಿಗೆ ತೊಡಕವು
ಹಿಂಡಿನ ಗೊಂದಣದಲ್ಲಿ ಹೊಕ್ಕು ಆಡತಿಂದಹವು
ಆಡ ಕೂಡುವ ಕಳಲಿಲ್ಲ, ತೋಳನಬಾಧೆ ಬಿಡದು
ಕೋಳುಹೋಗದ ಮುನ್ನವೆ ಅರಿಅಲೇಖನಾದ
ಶೂನ್ಯ ಕಲ್ಲಿನೊಳಗಾದವನ,

**ಟೀಕು:**— ರಜೋಗುಣ ಸಂಬಂಧವಾದ ಜೀವನ ಅಹಂಕಾರ ಮಮಕಾರಂಗಳಗ್ರದಲ್ಲಿ ಎಂಬುದೀಗ, ಆಡಿನ ಕೋಡಿನ ತುದಿಯ ಇಂಬಿನಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾರ ಮಮಕಾರಂಗಳ ಸಂಕಲ್ಪಮಾರ್ಗದಿಂದ ಉತ್ಪತ್ತ್ಯ ಸ್ಥಿತಿ ಲಯಂಗಳ ಭೀತಿ ಘನವಾಯಿತ್ತಾತ್ಮಂಗೆಂಬುದೀಗ, ಮೂರು ತೋಳನ ಅಗಡ ಘನವಾಯಿತ್ತೆಂಬ ಶಬ್ದಕ್ಕರ್ಥ. ಅಂತು ತಮ್ಮ ನಿಜವನರಿಯದೆಯಿರ್ಪ ಖಂಡಿತ ಜ್ಞಾನಿಗಳ ಭಿನ್ನಕ್ರಿಯ ಭಿನ್ನಜ್ಞಾನಕ್ಕೆ ಸಾಧ್ಯವಲ್ಲವೆಂಬುದೀಗ, ಬೇಟೆಯ ಬೆಂಬಳಿಗೆ ಸಿಕ್ಕವು ಎಂಬ ಶಬ್ದಕ್ಕರ್ಥ. ಅಂತು ಪಂಚೇಂದ್ರಿಯಂಗಳೆಂಬ ಶ್ವಾನಗಳ ಕರಣ ಕರ್ಕಶಕ್ಕೆ ಸಿಕ್ಕವೆಂಬುದೀಗ, ನಾಯತೋಟಿಗೆ ತೊಡಕವು ಎಂಬ ಶಬ್ದಕ್ಕರ್ಥ. ಆ ಸಕಲ ಕರಣಂಗಳ ಸಮೂಹದಲ್ಲಿ ಹೊಕ್ಕ ಜೀವತ್ರಯಂಗಳ ಭಕ್ಷಿಸುತ್ತಿಹವೆಂಬುದೀಗ, ಹಿಂಡಿನಗೊಂದಣದಲ್ಲಿ ಹೊಕ್ಕು ಆಡತಿಂದವು ಎಂಬ ಶಬ್ದಕ್ಕರ್ಥ. ಆ ಜೀವತ್ರಯಂಗಳನೊಳಕೊಂಬುವದಕ್ಕೆ ಗುರುಮಾರ್ಗಾಚಾರವಿಲ್ಲದೆ ಹೋಯಿತ್ತೆಂಬುದೀಗ, ಆಡಕೂಡುವ ಕಳಲಿಲ್ಲವೆಂಬ ಶಬ್ದಕ್ಕರ್ಥ. ಅಂತಪ್ಪ ಗುರುಮಾರ್ಗಾಚಾರವಿಲ್ಲಾಗಿ ಉತ್ಪತ್ತ್ಯ ಸ್ಥಿತಿಲಯದ ಭೀತಿ ಘನವಾಯಿತ್ತಾತ್ಮಂಗೆಂಬುದೀಗ, ತೋಳನ ಬಾಧೆ ಬಿಡದು ಎಂಬ ಶಬ್ದಕ್ಕರ್ಥ. ಅಂತು ಉತ್ಪತ್ತ್ಯಸ್ಥಿತಿಲಯಕ್ಕೊಳಗಾಗಿ ಹೋಗುವದಕ್ಕೆ ಮೊದಲೆ ಸುಜ್ಞಾನೋದಯದಿಂ ನಿಜವನರಿದು ಗುರುಕಾರುಣ್ಯದಿಂ ಮೋಕ್ಷವನೆಯ್ದುದೆಂಬುದೀಗ, ಕೋಳುಹೋಗದ ಮುನ್ನವೆ ಅರಿ ಅಲೇಖನಾದ ಶೂನ್ಯಕಲ್ಲಿನೊಳಗಾದವನ ಎಂಬ ಶಬ್ದಕರ್ಥ.

೨೦

ಆದಿಯನಾದಿಯ ಮಧ್ಯದ ಭೂಮಿಯಲ್ಲಿ ಒಂದು ಸಾಗರ ಹುಟ್ಟಿತ್ತು
ಸಾಗರದ ನಡುವೆ ಒಂದು ಸಲಿಲ, ಸಲಿಲದ ಮೇಲೊಂದು ನಿಳಯ
ನಿಳಯದೊಳಗೊಬ್ಬ ಸೂಳೆ, ಯೋನಿ ಎಂಟು, ಮೊಲೆ ಮೂರು
ತಲೆಯಾರು, ಕೈ ಐದು, ಕಾಲೊಂದು, ಇಂತಿ ನಟನೆಯ
ನಾಡುತ್ತಿರಲಾಗಿ
ನೋಡಿದ ಮನವ ಸೋತು, ಕೂಡಿಹೆನೆಂದೊಡೆ ಕೂಡಬಾರದು
ಯೋನಿ ಎಂಟಾದವಳ ಹಿಡಿವಡೆ, ಮೊಲೆ ಕೂರಲಗು
ಚುಂಬನಕ್ಕಧರ ನಂಜು, ತೆಕ್ಕೆಗೆ ಅಳವಲ್ಲ,
ಇದು ಎನಗೆ ಸುಖಕ್ಕಚ್ಚುಗವೆಂದು ಬೆಚ್ಚಿದೆ
ಇವಳ ಕೂಟವ ನಚ್ಚಬೇಡ ಅಲೇಖನಾದ ಶೂನ್ಯ ಕಲ್ಲಿನ ಮನೆ
ಯಾದವನೆ

ಟೀಕು:— ದೇಹಪ್ರಾಣಂಗಳ ಮಧ್ಯವೆನಿಸುವ ಅಂತರ್ವೇದಿಯಲ್ಲಿ ಸಂಸಾರ ಸಾಗರ ಏರುತ್ತಿಹುದೆಂಬುದೀಗ, ಆದಿಯನಾದಿಯ ಮಧ್ಯದ ಭೂಮಿಯಲ್ಲಿ ಒಂದು ಸಾಗರ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಸಂಸಾರ ಸಮುದ್ರದ ಮಧ್ಯದಲ್ಲಿ ಸಾಂಚಲ್ಯರೂಪವಾದ ಮನೋ ಜಲ ಸಂಬಂಧವಾಗಿಹುದೆಂಬುದೀಗ, ಸಾಗರದ ನಡುವೆ ಒಂದು ಸಲಿಲವೆಂಬ ಶಬ್ದಕ್ಕರ್ಥ. ಅಂತಪ್ಪ ಮನೋ ಜಲವನೊಳ ಕೊಂಡು ಸೂಕ್ಷ್ಮಾಂತರಂಗವೆಂಬ ನಿಳಯ ಉತ್ಪತ್ತಿಹುದೆಂಬುದೀಗ, ಸಲಿಲದ ಮೇಲೊಂದ ನಿಳಯವೆಂಬ ಶಬ್ದಕ್ಕರ್ಥ. ಅಂತಪ್ಪ ಅಂತರಂಗದಲ್ಲಿ ಪ್ರಪಂಚು ರೂಪವಾದ ಮಾಯೆ ಇರುತ್ತಿಹಳೆಂಬುದೀಗ, ನಿಳಯದೊಳಗೊಬ್ಬ ಸೂಳೆ ಯೆಂಬ ಶಬ್ದಕ್ಕರ್ಥ. ಆ ಪ್ರಪಂಚು ರೂಪವಾದ ಮಾಯೆಗೆ ಅಷ್ಟತನುಗಳೆ ಭಗ ವಾಗೊಪ್ಪುತ್ತಿಹವೆಂಬುದೀಗ, ಯೋನಿ ಎಂಟೆಂಬ ಶಬ್ದಕ್ಕರ್ಥ. ಆ ಮಾಯೆಗೆ ಮಲತ್ರಯ ಮೂರು ಸ್ಥಾನವಾಗಿಹುದೆಂಬುದೀಗ, ಮೊಲೆ ಮೂರು ಎಂಬ ಶಬ್ದ ಕ್ಕರ್ಥ. ಆ ಮಾಯೆಗೆ ಅರಿಷಡ್ವರ್ಗಂಗಳೆ ಅಜ್ಞಾನ ಸಂಬಂಧದಿಂ ಸರಸ್ಸುಗಳಾ ಗಿರುತ್ತಿಹವೆಂಬುದೀಗ, ತಲೆ ಆರು ಎಂಬ ಶಬ್ದಕ್ಕರ್ಥ. ಆ ಮಾಯೆಗೆ ಸಕಲ ಪ್ರಪಂಚು ಹಿಡಿವುದಕ್ಕೆ ಪಂಚಕರಣಂಗಳೆ ಹಸ್ತವಾಗಿರುತ್ತಿಹವೆಂಬುದೀಗ, ಕೈ ಐದು ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆಗೆ ದುಶ್ಚರಿತ್ರವೆಂಬ ಚರಣ ವೊಂದೇ ಎಂಬುದೀಗ, ಕಾಲೊಂದು ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆ ನಾನಾ ಪ್ರಪಂಚಿನ ವಿಕಾರದ ಹೆಚ್ಚುಗೆಯಿಂ ಚರಿಸುತ್ತಿರಲು ಎಂಬುದೀಗ, ಇಂತಿ ನಟನೆಯುಲಾಡುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಆ ಮಾಯೆಯ ಸ್ವರೂಪು, ಲಾವಣ್ಯವನು ಕಾಮ ವಿಕಾರ ದೃಷ್ಟಿಯಿಂ ನೋಡಿದ ಜೀವನು ಆ ಕಾಮ ವಿಕಾರ ದಲ್ಲಿ ಮಗ್ನವನೆಯ್ದಿರುತ್ತಿಹನೆಂಬುದೀಗ, ನೋಡಿದವನ ಮನಸೋತು ಎಂಬ ಶಬ್ದಕ್ಕರ್ಥ. ಅಂತಪ್ಪ ಅಷ್ಟತನುಗಳೆ ಭಗವಾಗಿರ್ಪ ಅದ್ಭುತವಾದ ಮಾಯೆಯಲ್ಲಿ

ಕೂಡಿಪನೆಂದೊಡೆ ಕೂಡಬಾರದೆಂಬುದೀಗ, ಕೂಡಿಹೆನೆಂದೊಡೆ ಕೂಡಬಾರದು ಯೋನಿ ಎಂಬಾಪವಳನೆಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ರಸವ ತುಂಬಿಕೊಂಡಿರ್ದ ಘಟಸ್ವರೂಪ ಸ್ತನವ ಸಂಕಲ್ಪ ಹಸ್ತದಿಂ ಪಿಡಿವಡೆ ಅತ್ಯಂತ ಕ್ರೂರಿತವಾದ ಅಜ್ಞಾನ ಸ್ವರೂಪವಾಗಿಪುದೆಂಬುದೀಗ, ಹಿಡಿವಡೆ ಮೊಲೆ ಕೂರಲಗು ಎಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ಸುಖವನನುಭವಿಸಿಹೆನೆಂದೊಡೆ, ಅತ್ಯಂತ ವಿಷಮಯವಾಗಿರುತ್ತಿಹುದೆಂಬುದೀಗ, ಚುಂಬನಕ್ಕಧರ ನಂಜೆಂಬ ಶಬ್ದಕ್ಕರ್ಥ. ಅಂತಪ್ಪ ಅಜ್ಞಾನ ಮಾಯೆಯನಪ್ಪಿಹೆನೆಂದೊಡೆ ಅಸಾಧ್ಯ ತರವಾತಹುದು ಜೀವರಿಗೆಂಬುದೀಗ, ತೆಕ್ಕೆಗೆ ಅಳವಲ್ಲ ಇದು ಎನಗೆ ಸುಖಕಚ್ಚುಗವೆಂದು ಬೆಚ್ಚಿದೆ ಇವಳ ಕೂಟವಚ್ಚುತಬೇಡ ಅಲೇಖನಾದ ಶೂನ್ಯ ಕಲ್ಲಿನ ಮರೆಯಾದವನೆ ಎಂಬ ಶಬ್ದಕ್ಕರ್ಥ.

೨೧

ಮಾರ್ಜಾಲನ ಹೃದಯದಲ್ಲಿ ಮೂಷಕ ಮನೆಯ ಮಾಡಿತ್ತು
ಅದಕ್ಕೆ ಮಣಿ ಮಾಡಂಗಳಿಂದ ಆಶ್ರಯ ಒಂದು ಬಾಗಿಲು ಬೇರೆ
ಅದಕ್ಕೆ ಹೊಗೆಯಾಡುವ ನಾಟಕಸಾಲೆ, ಪವನನೆಂಬ ಸೂಳೆ
ಆ ಘಟದಿಂದಾಡುತ್ತಿರಲಾಗಿ ಕಾಲುಜಾರಿ ನೆಲಕ್ಕೆ ಬಿದ್ದಳು
ಬಿದ್ದ ಘಾಯಕ್ಕೆ ಯೋನಿ ಒಡೆಯಿತ್ತು, ಮೊಲೆ ಹರಿಯಿತ್ತು,
ಕಿವಿಕಿತ್ತು ಕಣ್ಣು ಹಿಂಚು ಮುಂಚಾಯಿತ್ತು
ನೋಡುವ ಅಣ್ಣಗಳ ಬಯಕೆ ಹರಿಯಿತ್ತು
ಯೊನಿ ಕಿತ್ತಲ್ಲಿ ಕೂಟಕ್ಕೆ ಸುಖವಿಲ್ಲ, ನೋಟಕ್ಕೆ ಬೆಂಬಳಿಯಿಲ್ಲ
ಪವನನ ಆಘಾಟ ಹೋಯಿತ್ತು, ಕಾಲನ ಕನ್ಮಟಕ್ಕೆ
ಅಲೇಖನಾದ ಶೂನ್ಯ ಕಲ್ಲಿನೊಳಗಾಗಿ ಇತ್ತ ಬಾರಯ್ಯ.

**ಟೀಕು:—** ಪಂಚಭೂತಾಶ್ರಯವಾದ ದೇಹಮಧ್ಯದಲ್ಲಿರ್ಪ ಮಾಯಾಮಾರ್ಜಾಲನ ಹೃದಯವನೆ ಮನಸ್ಸು ಆಶ್ರಯವ ಮಾಡಿಕೊಂಡಿತ್ತೆಂಬುದೀಗ, ಮಾರ್ಜಾಲನ ಹೃದಯದಲ್ಲಿ ಮೂಷಕ ಮನೆಯ ಮಾಡಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಮನಕ್ಕೆ ಷಡಾಧಾರ ಚಕ್ರಂಗಳನೊಳಕೊಂಡಿರ್ಪ ದೇಹವೆ ಆಶ್ರಯವಾಯಿತ್ತೆಂಬುದೀಗ, ಆದಕ್ಕೆ ಮಣಿಮಾಡಂಗಳಿಂದ ಆಶ್ರಯ ಒಂದೆಂಬ ಶಬ್ದಕ್ಕರ್ಥ. ಆ ದೇಹಕ್ಕೆ ನವದ್ವಾರಂಗಳೆ ಬಾಗಿಲುವಾಡವಾಗಿ ಒಪ್ಪುತ್ತಿಹವೆಂಬುದೀಗ, ಬಾಗಿಲು ಬೇರೆಯೆಂಬ ಶಬ್ದಕ್ಕರ್ಥ. ಆ ಷಡಾಧಾರ ಚಕ್ರದಲ್ಲಿ ಷಡು ಸೋಪಾನವಿಟ್ಟು ಸಾಧಿಸುತ್ತಿಹರು ಯೋಗಿಜನಂಗಳೆಂಬುದೀಗ, ಅದಕ್ಕೆ ಹೋಗೆಆಡುವ ನಾಟಕ ಸಾಲೆಯೆಂಬ ಶಬ್ದಕ್ಕರ್ಥ. ಸ್ವಸ್ತ ಪದ್ಮಾಸನದಲ್ಲಿ ಕಳಿತು ಅಧೋಮುಖವ ವಾಯುವನು ಊರ್ಧ್ವಮುಖವಮಾಡಿ ರೇಚಕ-ಪೂರಂಕಗಳ ಪ್ರಾಣಾಯಾಮದಿಂ ಕುಂಭಕದಲ್ಲಿ ನಿಲಿಸಿ ಮನಮಾರುತಂಗಳ ಒಬ್ಬಳಿಯಿಂ ಶುಷುಮ್ನಾದ್ವಾರದಿಂ ಬ್ರಹ್ಮರಂಧ್ರವನೆಯ್ದಿ ಪರದಲ್ಲಿ ಬೆರಸಿಹೆನೆಂಬ ವಾಯುಸಾಧಕರಿಗೆ

ಸಾಧ್ಯವಾಗದು ಪರಬ್ರಹ್ಮವೆಂಬುದೀಗ, ಪವನನೆಂಬ ಸೂಳೆ ಆ ಘಟದಿಂದಾಡುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಭಿನ್ನಯೋಗಕ್ಕೆ ಮೋಕ್ಷಮಾರ್ಗವು ಸಾಧ್ಯವಾಗದೆ ದೇಹಭಾವದಲ್ಲಿ ಲಯವಾದವೆಂಬುದೀಗ, ಕಾಲುಜಾರಿ ನೆಲಕ್ಕೆ ಬಿದ್ದಳು ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹಭಾವದಲ್ಲಿ ಕೂಡಿದಾತ್ಮಂಗೆ ನಿಜಸುಷುಪ್ತಿ ಭಗ್ನವಾಯಿತ್ತೆಂಬುದೀಗ, ಬಿದ್ದಘಾಯಕ್ಕೆ ಯೋನಿಯೊಡೆಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ನಿಜಸುಷುಪ್ತಿ ಭಿನ್ನವಾದಲ್ಲಿ ಪರಮಾಮೃತಸ್ತನ ನಷ್ಟವಾಯಿತ್ತೆಂಬುದೀಗ, ಮೊಲೆಹರಿಯಿತ್ತೆಂಬ ಶಬ್ದಕ್ಕರ್ಥ. ಆ ಪರಮಾಮೃತ ಸ್ತನ ನಷ್ಟವಾದಲ್ಲಿ ಅನಿಹತ ಕರ್ನದ್ವಾರವು ಭಿನ್ನವಾಗಿ ಸುಜ್ಞಾನ ದೃಷ್ಟಿ ಪಲ್ಲಟವಾಯಿತ್ತೆಂಬುದೀಗ, ಕಿವಿಕಿತ್ತು ಕಣ್ಣು ಹಿಂಚು ಮುಂಚಾಯಿತ್ತೆಂಬ ಶಬ್ದಕ್ಕರ್ಥ. ಇಂತಿವೆಲ್ಲವು ನಷ್ಟವಾಗಲು ಪರಶಿವತತ್ವವ ನಿರೀಕ್ಷಿಸಬೇಕೆಂಬ ಖಂಡಿತ ಜ್ಞಾನಿಗಳ ಬಯಕೆಯಾಗಿತ್ತೆಂಬುದೀಗ, ನೋಡುವ ಅಣ್ಣಗಳಬಯಕೆ ಹರಿಯಿತ್ತೆಂಬ ಶಬ್ದಕ್ಕರ್ಥ. ಆ ನಿಜಸುಷುಪ್ತಿಸ್ಥಾನ ಭಗ್ನವಾದಲ್ಲಿ ಲಿಂಗಾಂಗದ ಸಮರಸವ ಕೂಟಕ್ಕೆ ತೆರಪಿಲ್ಲದದೆ ಹೋಯಿತ್ತೆಂಬುದೀಗ, ಯೋನಿಕಿತ್ತಲ್ಲಿ ಕೂಟಕ್ಕೆ ಸುಖವಿಲ್ಲವೆಂಬ ಶಬ್ದಕ್ಕರ್ಥ, ಆ ಭಿನ್ನಯೋಗಿಗಳು ಇನ್ನು ಭಿನ್ನಪಿಟ್ಟು ಲಕ್ಷಿಸಿಹೆನೆಂದೊಡೆ ತೆರಪಿಲ್ಲವೆಂಬುದೀಗ, ಸೋಟಕ್ಕೆ ಬೆಂಬಳಿಯಿಲ್ಲವೆಂಬ ಶಬ್ದಕ್ಕರ್ಥ. ಪವನಯೋಗದಿಂ ಸಾಧಿಸಿಹೆನೆಂಬ ಭಿನ್ನಯೋಗಿಗಳ ಹೆಚ್ಚುಗೆಯಲ್ಲವು ಯಮನ ಮರಣ ಬಾಧೆಗೊಳಗಾಯಿತ್ತೆಂಬುದೀಗ, ಪವನನ ಅಘಾಟಹೋಯಿತ್ತು ಕಾಲನಕಮ್ಮಟಿಕ್ಕೆ ಅಲೇಖನಾದಶೂನ್ಯ ಕಲ್ಲಿನೊಳಗಾಗಿ ಇತ್ತಬಾರಯ್ಯಾ ಎಂಬ ಶಬ್ದಕ್ಕರ್ಥ.

## ಮಾದಾರ ಧೂಳಯ್ಯನವರ ವಚನಗಳು

೧

ಕಟ್ಟಿದೆ ಘಟವಟ್ಟೆಯ ಹೊಲಿದು ಇವಕ್ಕೆ ಚತುರ್ವಿಧದ ನಾಲ್ಕು ಗುಂಟವ ಬಲಿದು
ಗುಂಟವ ದ್ವಾರದಲ್ಲಿ ಉಭಯ ಸಂಚದಭಾರ ತೆಗೆದು ತೊಡಕ್ಕು ಬಂಧವನಿಕ್ಕಿ
ಅಡಿಯ ಬಿಡದಂತೆ ಹಿಂದಣಮಡ, ಮುಂದಣ ಉಂಗುಷ್ಟಕ್ಕೆ ಒಂದನ್ನೊಂದು ಜಾರದಂತೆ ಬಂಧಿಸಿ,
ಸಕಲೇಂದ್ರಿಯವೆಂಬ ಉಭಯವ ಸಂಧಿಸಿ ಕುಣಿಕೆಯ ನಿಕ್ಕಿ ಕಾಮದ
ಒಡಲ ಮಾಗಿಗ ಬಂದೆ ಘಟ ತೊಕುಳು ತೊಗಲು ಹದ ಬಂದಿತ್ತು
ಹೊತ್ತು ಹೋಯಿಹಿತಣ್ಣ ಮೆಟ್ಟಡಿಯ ಕೊಂಡ ರೊಕ್ಕವ ಕೊಡಿ

ಒಪ್ಪಿದರಿರಲಿ, ಒಪ್ಪದಿರ್ದಡೆ ಮೂರು ಮುಖದಪ್ಪೈಗೆ ಕೊಟ್ಟೈಹೆ
ತಪ್ಪಡಿಯ ಮೆಟ್ಟಿ ಹೋಗುತ್ತಿದೇನೆ, ಚನ್ನಯ್ಯಪ್ರಿಯ ಧೂಳನ
ಘೂಳಿಗೊಳಗಾಗಿ

**ಟೀಕು:**— ಶಿವಜ್ಞಾನೋದಯವಾದ ಶರಣನು ತನುತ್ರಯ ಮುಖ್ಯವಾದ ಸಕಲ ಪ್ರಪಂಚ ನಿವೃತ್ತಿಯಮಾಡಿ ಶ್ರೀಗುರು ಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧವಾದಲ್ಲಿ ತನ್ನ ಸರ್ವಾಂಗಕ್ಕಾಚಾರವನು ಸ್ವಾನುಭಾವ ಸೂತ್ರದಿಂ ಸಂಬಂಧಿಸಿಕೊಂಡನೆಂಬುದೀಗ, ಕಟ್ಟಿದೆ ಘಟದಟ್ಟೆಯ ಹೊಲಿದು ಎಂಬ ಶಬ್ದಕ್ಕರ್ಥ. ಅಂತಪ್ಪಾಚಾರದಲ್ಲಿ ಚತುರ್ವಿಧ ಭಕ್ತಿಯನು ಸ್ಥಿರದಿಂ ನೆಲೆಗೊಳಿಸಿದನೆಂಬುದೀಗ, ಇದಕ್ಕೆ ಚತುರ್ವಿಧ ನಾಲ್ಕು ಗುಂಟವ ಬಲಿದು ಎಂಬ ಶಬ್ದಕ್ಕರ್ಥ. ಆ ಚತುರ್ವಿಧದ ಭಕ್ತಿಯನೊಳಕೊಂಡಿರ್ಪ ಸದ್ವಿವೇಕದ್ವಾರದಲ್ಲಿ ಮೀರಿದ ಶ್ರೀಮಾನ, ಕ್ರಿಯಾಚಾರವ ಸಂಬಂಧಿಸಿದನೆಂಬುದೀಗ, ಗುಂಟದ ದ್ವಾರದಲ್ಲಿ ಉಭಯ'ಸಂಚದ ಭಾರತೆಗೆದು ಎಂಬ ಶಬ್ದಕ್ಕರ್ಥ. ಅಂತಪ್ಪ ಮಾರ್ಗ ಕ್ರೀಮಿರಿದ ಅನೇಕಸ್ಥಲಂಗಳ ಸಂಬಂಧವ ಮಾಡಿ ಎಂಬುದೀಗ, ತೊಡಕು ಬಂಧವನಿಕ್ಕಿ ಎಂಬ ಶಬ್ದಕ್ಕರ್ಥ. ಆ ಸ್ಥಲಂಗಳಲ್ಲಿ ಗುರು ಮಾರ್ಗಾಚಾರ ಅಭಿನ್ನವಾಯಿತ್ತೆಂಬುದೀಗ, ಅಡಿಯ ಬಿಡದಂತೆ ಎಂಬ ಶಬ್ದಕ್ಕರ್ಥ. ಆ ಗುರುಮಾರ್ಗಾಚಾರವಾಸರಿಸದಂತೆ ಮೂಲಜ್ಞಾನವ ನಾಚಾರದಲ್ಲಿಸಂಬಂಧಿಸಿ ಆ ಆಚಾರವನು ಮೂಲಜ್ಞಾನವನು ಸಂಬಂಧಿಸಿ ಅಂತಪ್ಪ ಜ್ಞಾನಕ್ರೀ ನಿರ್ಧರವಾಗಿ ತೊಲಗದಂತೆ ಎಂಬುದೀಗ, ಹಿಂದಣ ಮತ ಮುಂದಣ ಉಂಗುಷ್ಟಕ್ಕೆ ಒಂದನ್ನೊಂದು ಜಾರದಂತೆ ಬಂಧಿಸಿ ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನಕ್ರೀ ನಿರ್ಧರವಾದ ಶರಣನು ಬಹಿಃಕರಣಂಗಳೆಲ್ಲವನು ಕ್ರಿಯಾಚಾರದಲ್ಲಿ ಅಂತಃಕರಣಂಗಳೆಲ್ಲವನು ಅರಿವಿನಲ್ಲಿ ಸಮರಸವ ಮಾಡಿ ಉಭಯವು ಹಿಂಗದಂತೆ ಪರಿಪೂರ್ಣಜ್ಞಾನನೆಂಬ ಕುಣಿಕಿಯ ನಿಕ್ಕಿದನೆಂಬುದೀಗ, ಸಕಲೇಂದ್ರಿಯವೆಂಬ ಉಭಯವ ಸಂಧಿಸಿ ಕುಣಿಕೆಯನಿಕ್ಕಿ ಎಂಬ ಶಬ್ದಕ್ಕರ್ಥ. ಆ ಉಭಯಕರಣಂಗಳ ಮಹಾಜ್ಞಾನದಲ್ಲಿ ಸಂಬಂಧಿಸಿದ ಶರಣ ಶಿವಾಪೇಕ್ಷೆಯ ಮುಂದುಗೊಂಡು ಸತ್ಕ್ರೀಯಿಂದಾಚರಿಸುತ್ತಿರ್ದನೆಂಬುದೀಗ, ಕಾಮದ ಒಡಲ ಮಾದಿಗ ಬಂದೆನೆಂಬ ಶಬ್ದಕ್ಕರ್ಥ. ಆ ಪರಮಾನಂದ ಜಲದಲ್ಲಿ ಸಮರಸವಾದ ಶರಣನು ವೃಥಾ ದಿನ ಕಾಲಂಗಳು ಸವೆದು ಹೋಗದಂತೆ ತ್ರಿವಿಧ ಭಕ್ತಿಗಳ ಮಾಡಿ ಎಂಬುದೀಗ, ಹೊತ್ತು ಹೋದಿಪತಣ್ಣ ಎಂಬ ಶಬ್ದಕ್ಕರ್ಥ. ಆ ಗುರು ಸ್ವರೂಪನಾದ ಶರಣನು, ಮೋಕ್ಷಾಪೇಕ್ಷರಾಗಿ ಬಂದ ಭಕ್ತಜನಂಗಳ'ಅಂಗಕ್ಕೆ ಅಭಿನ್ನ ಕ್ರಿಯಾಚಾರವ ಸಂಬಂಧವ ಮಾಡಿ ತನು ಮನ ಧನಂಗಳನು ಗುರುಲಿಂಗ ಜಂಗಮಕ್ಕೆ ನಿವೇದಿಸಿಯೆಂದು ಬೋಧಿಸುತ್ತಿರ್ದನೆಂಬುದೀಗ, ಮೆಟ್ಟಡಿಯಕೊಂಡ ರೊಕ್ಕವ ಕೊಡಿಯೆಂಬ ಶಬ್ದಕ್ಕರ್ಥ. ಅಭಿನ್ನ ಕ್ರಿಯಾಚಾರವನು ವಿಶ್ವಾಸದಿಂ ಗ್ರಹಿಸಿ ವಿಶ್ವಾಸ ಹೀನನಾಗಿ ಅನುಸರಣೆಯಾದೊಡೆ ಬೇಡವೆಂಬುದೀಗ, ಒಪ್ಪಿದರಿರಲಿ, ಒಪ್ಪದಿರ್ದಡೆಯೆಂಬ ಶಬ್ದಕ್ಕರ್ಥ. ಆ ಅಭಿನ್ನಕ್ರಿಯಾಚಾರವ ತ್ರಿವಿಧ ಲಿಂಗವನೊಳಕೊಂಡಿರ್ಪ ಪರಶಿವ ತತ್ವದಲ್ಲಿ ಸಂಬಂಧವ ಮಾಡಿದ

ನೆಂಬುದೀಗ, ಮೂರು ಮುಖದಪ್ಪಗೆ ಕೊಟ್ಟಿಹೆನೆಂಬ ಶಬ್ದಕ್ಕರ್ಥ. ಆ ಶರಣ ಭಿನ್ನ ಕ್ರಿಯಾಚಾರವ ಧ್ವಂಸವ ಮಾಡಿ ಅಭಿನ್ನ ಕ್ರಿಯಾಚಾರವವಿಡಿದೆಯ್ವುತ್ತಿರ್ದನೆಂಬುದೀಗ, ತಪ್ಪಡಿಯ ಮೆಟ್ಟಿ ಹೋಗುತ್ತಿದೇನೆ ಚನ್ನಯ್ಯಪ್ರಿಯ ಧೂಳನ ಧೂಳಿಗೊಳಗಾಗಿ ಎಂಬ ಶಬ್ದಕ್ಕರ್ಥ.

೨

ಸತ್ತು ಸಾಯುದುದ ಕಂಡು, ಸಾಯುದುದು ಸತ್ತಿತ್ತೆಂಬುದನರಿದು
ಈ ಉಭಯದ ಗೊತ್ತಿನಲ್ಲಿ ಲಕ್ಷದಭಾವ ನಷ್ಟವಾಗಿ
ಉರಿಸಾರವಕೊಂಡು ಉರಿದಂತೆ ಆ ಉರಿನಂದಿದಲ್ಲಿ
ಉಭಯವು ನಿರವಯವಾಯಿತ್ತು ಕಾಮಧೂಮ ಧೂಳೇಶ್ವರಾ.

**ಟೀಕು:—** ಸದ್ರೂಪವಾದ ಬ್ರಹ್ಮವು ಜನನ ಮರಣಂಗಳಿಲ್ಲದೆ ನಿತ್ಯ ಸ್ವರೂಪವಾದ ಭೇವವ ಶರಣ ಸುಜ್ಞಾನ ದೃಷ್ಟಿಯಿಂ ಕಂಡನೆಂಬುದೀಗ, ಸತ್ತು ಸಾಯುದುಪ ಕಂಡು ಎಂಬ ಶಬ್ದಕ್ಕರ್ಥ. ಆ ದೇಹ ಸಂಬಂಧಿಯಾದ ಜೀವಂಗೆ ಜೀವ, ಭಾವ, ಭ್ರಾಂತು ಕೆಡದೆ ಇರುತ್ತಿಹುದೆಂಬುದೀಗ, ಸಾಯುದುದು ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ, ಶಿವಜ್ಞಾನೋದಯವಾಗಲು ಶಿವಭಾವ ಭ್ರಾಂತು ನಷ್ಟವಾಗಿ ಶಿವಭಾವ ಘಟಿಸಿತ್ತೆಂಬುದೀಗ, ಸತ್ತಿತ್ತು ಎಂಬುದನರಿದು ಎಂಬ ಶಬ್ದಕ್ಕರ್ಥ. ಅಂತು ಶಿವಭಾವ ಘಟಿಸಿದ ಸಜ್ಜೀವ ಸ್ವರೂಪವಾದ ಶರಣ ಸತಿಯ ಅಂಗದಲ್ಲಿ ಶ್ರೀಗುರು ಮುಖದಿಂ ಚಿದ್ ಘನಲಿಂಗವು ಸಂಬಂಧವಾಗಲು ಆ ಲಿಂಗದಲ್ಲಿ ಜ್ಞಾನಕ್ರೀವಿಡಿದಾಚರಿಸುತ್ತಿರ್ದನೆಂಬುದೀಗ, ಈ ಉಭಯದ ಗೊತ್ತಿನಲ್ಲಿ ಎಂಬ ಶಬ್ದಕ್ಕರ್ಥ. ಇಂತು ಜ್ಞಾನ ಕ್ರಿವಿಡಿದಾಚರಿಸುತ್ತಿರ್ದ ಶರಣನ ಸರ್ವಾಂಗವು ಮಹಾಘನಲಿಂಗದಲ್ಲಿ ಸಂಬಂಧವಾಗಿ ಆ ಲಿಂಗಭಾವಿಸುರ ಭಾವವ ಚಿದ್ಘನಲಿಂಗದಲ್ಲಿಯೆ ನಿಷ್ಪತಿಯಾಯಿತ್ತೆಂಬುದೀಗ, ಲಕ್ಷದ ಭಾವ ನಷ್ಟವಾಗಿ ಎಂಬ ಶಬ್ದಕ್ಕರ್ಥ. ಜ್ಯೋತಿಯು ಕರ್ಪುರದ ಸಾರವ ಗ್ರಹಿಸಿ ತಾನೇ ಪ್ರಕಾಶಿಸಿ ನಿರ್ವಯಲಾದ ಹಾಗೆ ಆ ಚಿದಾಗ್ನಿ ಸ್ವರೂಪವಾದ ಚಿತ್ರಭಾಲಿಂಗವು ಸ್ವಾನುಭಾವ ಸದ್ವಾಸನಾ ಸ್ವರೂಪವಾದ ಶರಣನ ಸರ್ವಾಂಗವ ನವಗ್ರಹಿಸಿ ನಿರವಯಲಾಗಿತ್ತೆಂಬುದೀಗ, ಉರಿಸಾರವಕೊಂಡು ಉರಿದಂತೆ; ಆ ಉರಿ ನಂದಿದಲ್ಲಿ ಉಭಯವು ನಿರವಯವಾಯಿತ್ತು ಕಾಮಧೂಮ ಧೂಳೇಶ್ವರಾ ಎಂಬ ಶಬ್ದಕ್ಕರ್ಥ.

೩

ಬೇರು ಮೇಲಾದ ವೃಕ್ಷದ ತುದಿಯಲ್ಲಿ,
ನಾದ ಬಿಂದು ಕಳೆಯಿಲ್ಲದ ಹಣ್ಣು ತಲೆದೋರಿತ್ತು
ವಿಭೇಧವಿಲ್ಲದ ಪಕ್ಷಿ ಸುನಾದವಿಲ್ಲದೆರಗಿತ್ತು
ಎರಗಿ ಮುಟ್ಟುವದಕ್ಕೆ ಮುನ್ನವೆ ಹಣ್ಣು ತೊಟ್ಟು
ಬಿಟ್ಟು ಬಯಲಾಯಿತ್ತು
ಕಾಮಧೂಮ ಧೂಳೇಶ್ವರ ಭಾವವಿಲ್ಲವಾಗಿ.

ಟೀಕು:— ಮೂಲ ಜ್ಞಾನವೇ ಮೇಲಾಗಿರ್ದ ಸದ್ವಿವೇಕ ವೃಕ್ಷವಗ್ರದಲ್ಲಿ ಎಂಬುದೀಗ, ಬೇರುಮೇಲಾದ ವೃಕ್ಷದ ತುದಿಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ ವೃಕ್ಷದಲ್ಲಿ ದೇಹಪ್ರಾಣೇಂದ್ರಿಯಂಗಳೆಂಬ ತ್ರಿವಿಧವು ಪೊದ್ದೆಯಿರ್ದ ಚಿದಾಮೃತ ರಸಮಯದಿಂದೊಪ್ಪುತ್ತಿರ್ದ ಮುಕ್ತಫಳ ಗುರುಮುಖದಿಂ ಪ್ರತ್ಯಕ್ಷ ವಾಯಿತೆಂಬುದೀಗ, ನಾದಬಿಂದು ಕಳೆಯಿಲ್ಲದ ಹಣ್ಣು ತಲೆದೋರಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಚಿದಾಮೃತ ರಸಮಯದಿಂದೊಪ್ಪುತ್ತಿರ್ದ ಮುಕ್ತಿಫಳವನು ಎರಡಿಲ್ಲದೆ ಇರ್ಪ ಪರಮಾತ್ಮ ಸ್ವರೂಪವಾದ ಶರಣನು ಸೋಹಂ ಭಾವವಿಲ್ಲದೆ ದಾಸೋಹ ಭಾವದಿಂದ ನವಗ್ರಹಿಸಿತ್ತೆಂಬುದೀಗ, ವಿಭೇದ ವಿಲ್ಲದಪಕ್ಷಿ ಸುನಾದ ವಿಲ್ಲದೆರಗಿತ್ತು ಎಂಬ ಶಬ್ದಕ್ಕರ್ಥ. ಆ ಮುಕ್ತಫಳ ಸ್ವರೂಪವಾದ ಚಿದ್ಘನ ಲಿಂಗವನು ಚಿತ್ ಸ್ವರೂಪನಾದ ಶರಣನು ನಿರಹಂಭಾವದಿಂದವಗ್ರಹಿಸಿದಾಕ್ಷಣವೆ ಒಳಹೊರಗೆನ್ನದೆ ಸರ್ವಾಂಗದಲ್ಲಿ ತತ್ಪರಿಪೂರ್ಣವಾಗಿ ತಾನೆಂಬ ಮೂಲಹಂಕಾರವು ನಷ್ಟವಾದಲ್ಲಿ ಶರಣನನೊಳಕೊಂಡು ಮುಕ್ತಿ ಫಳ ಸ್ವರೂಪವಾದ ಚಿದ್ಘನ ಲಿಂಗವು ನಿರ್ವಯಲಾಯಿತ್ತೆಂಬುದೀಗ, ಎರಗಿ ಮುಟ್ಟುವಡಕ್ಕೆ ಮುನ್ನವೆ ಹಣ್ಣು ತೊಟ್ಟು ಬಿಟ್ಟುಬಟ್ಟ ಬಯಲಾಯಿತ್ತು ಕಾಮ ಕಾಮಧೂಮ ಧೂಳೇಶ್ವರ ಭಾವ ವಿಲ್ಲವಾಗಿ ಎಂಬ ಶಬ್ದಕ್ಕರ್ಥ.

## ಅವಸರದ ರೇಚಣ್ಣನವರ ವಚನಗಳು

೧

ನೀತಿಭಕ್ತಿ, ಕ್ರಿಯಾಭಕ್ತಿ, ಸದ್ಭಾವಭಕ್ತಿ, ಜ್ಞಾನಭಕ್ತಿ,
ಇಂತಿ ಭಕ್ತಿಯ ವಿವರ :
ನೀತಿ ಭಕ್ತಿಗೆ, ಸರ್ವಗುಣ ಪ್ರೀತಿವಂತನಾಗಿ,
ಕ್ರಿಯಾಭಕ್ತಿಗೆ, ಬಿಡುಮಾಡಿ ಉಭಯವನರಿದು,
ಭಾವಭಕ್ತಿಗೆ, ಸಂಕಲ್ಪ-ವಿಕಲ್ಪ ದೋಷವ ಕಂಡು
ಸದ್ಭಾವಭಕ್ತಿಗೆ, ಮನ-ವಚನ-ಕಾಯ ತ್ರಿಕರಣ ಶುದ್ಧವನರಿತು
ಜ್ಞಾನಭಕ್ತಿಗೆ, ಜ್ಞಾತೃಜ್ಞಾನಜ್ಞೆಯ ಮುಂತಾದ
ಮರ್ಕಟ ವಿಹಂಗ ಪಿಪಿಲಿಕ ಸಂಚಿತ ಪ್ರಾರಬ್ಧ
ಆಗಾಮಿಗಳೆಂಬ ತೆರನತಿಳಿದು ವಿಷಚರಣಾಂಗುಲದಲ್ಲಿ ಛೇದಿಸಿ,
ಕಪಾಲದಲ್ಲಿನಿಂದು ಮೂರ್ಛೆಗೊಂಡಂತೆ;
ಇಂತಿ ಭಕ್ತಿ ಸ್ಥಲದ ವಿವರ ಹೆಚ್ಚು ಕುಂದ ನರಿತು
ಕೊಡುವಲ್ಲಿ, ಕೊಂಬಲ್ಲಿ, ತಟ್ಟುವಲ್ಲಿ, ಮುಟ್ಟುವಲ್ಲಿ,
ತಾಗುವಲ್ಲಿ, ಸೋಂಕುವಲ್ಲಿ

ನಾನಾ ಗುಣಂಗಳಲ್ಲಿ ವಿವರವ ನರಿತು ಮರ್ಮವನಾಗಿಪ್ಪ
ಭಕ್ತನಂಗ ಆ ಸುಖದಸಂಗ ಸದ್ಯೋಜ್ಯಾತಲಿಂಗದ ನಿರಂಗಾ

**ಟೀಕು:—** ತನು, ಮನ, ಧನವೆಂಬ ತ್ರಿವಿಧಪದಾರ್ಥವ ಗುರು-ಲಿಂಗ-ಜಂಗಮಕ್ಕೆ ತ್ರಿವಿಧ ಭಕ್ತಿಗಳಿಂದರ್ಪಿಸಿ ಆ ಪ್ರಸಾದ ತ್ರಯವ ಸ್ವೀಕರಿಸಿ ಗುರು-ಲಿಂಗ-ಜಂಗಮದಲ್ಲಿ ಅತಿರತಿಯಿಂದ ಸಮಾನವಾಗಿರುವದೆ ನೀತಿ ಭಕ್ತಿಯೆಂಬುದೀಗ, ನೀತಿಭಕ್ತಿಗೆ ಸರ್ವಗುಣಪ್ರೀತಿವಂತನಾಗಿ ಎಂಬ ಶಬ್ದಕ್ಕರ್ಥ. ಪರಧನ ಪರಸ್ತ್ರೀಯರ ಅತಿಕಾಂಕ್ಷೆಗಳ ಬಿಟ್ಟು ಇಹಮುತ್ತರ ಫಲಭೋಗವಳಿದ ಷಡ್ವಿಧ ವ್ರತ ನಿಯಮಂಗಳಲ್ಲಿ ತತ್ಪರವಾಗಿ ಎಂಬುದೀಗ, ಕ್ರಿಯಾ ಭಕ್ತಿಗೆ ಬಿಡುಮುಡಿಯನರಿತು ಎಂಬ ಶಬ್ದಕ್ಕರ್ಥ. ಸಂಕಲ್ಪ-ವಿಕಲ್ಪಭಾವವನರಿತು ಉಭಯವ ನಿವೃತ್ತಿಯ ಮಾಡಿ ದುರ್ಗುಣಂಗಳಿಲ್ಲದೆ ಸುಜ್ಞಾನ ಸ್ವರೂಪವಾಗಿ ಎಂಬುದೀಗ, ಭಾವಭಕ್ತಿಗೆ ಸಂಕಲ್ಪವಿಕಲ್ಪದೋಷವಕಂಡು ಎಂಬ ಶಬ್ದಕ್ಕರ್ಥ. ಮಾನಸ, ವಾಚಕ, ಕಾಯಕ ತ್ರಿಕರಣ ಶುದ್ಧವಾಗಿ ಹೊರೆಯಿಲ್ಲದೆ ಆಚರಿಸುವದೆಂಬುದೀಗ, ಸದ್ಭಾವ ಭಕ್ತಿಗೆ ಮನ—ವಚನ—ಕಾಯ ತ್ರಿಕರಣ ಶುದ್ಧವನರಿದು ಎಂಬ ಶಬ್ದಕ್ಕರ್ಥ. ಜ್ಞಾತೃ—ಜ್ಞಾನ—ಜ್ಞೇಯವೆಂಬ ತ್ರಿಪುಟನಷ್ಟವಾಗಿ ಷಟುಸ್ಥಲ ಸಂಬಂಧವಾದಮರ್ಕಟಜ್ಞಾನ, ನೂರೊಂದು ಸ್ಥಲಸಂಬಂಧವಾದ ಪಿಪಿಲಿಕಜ್ಞಾನ, ಚಿತ್ಪಿಂಡ ಸಂಬಂಧವಾದ ಸಂಬಂಧವಾದ ವಿಹಂಗಜ್ಞಾನ, ತ್ರಿವಿಧರವಿನ ಭೇದವ ನರಿದು ತ್ರಿವಿಧ ಪ್ರಸಾದವ ಸ್ವೀಕರಿಸಿ ಉತ್ಪತ್ಯ, ಸ್ಥಿತಿ ಲಯವೆಂಬ ತ್ರಿವಿಧವ ನಷ್ಟವಮಾಡಿದನೆಂಬುದೀಗ, ಜ್ಞಾನ ಭಕ್ತಿಗೆ ಜ್ಞಾತೃಜ್ಞಾನ ಜ್ಞಾಯಮುಂತಾದ ಮರ್ಕಟ, ವಿಹಂಗ, ಪಿಪಿಲಿಕ, ಸಂಚಿತ ಪ್ರಾರಬ್ಧಆಗಾಮಿಗಳೆಂಬ ತೆರನತಿಳಿದು ಎಂಬ ಶಬ್ದಕ್ಕರ್ಥ.

" ಸರ್ಪದಷ್ಟಯದ್ದೇಹಂ । ತದ್ದೇಹಂ ವಿಷದೇಹವತ್ ।
ಲಿಂಗದಷ್ಟಸ್ಯಯದ್ದೇಹಂ । ತದ್ದೇಹಂ ಲಿಂಗದೇಹವತ್ "

— ಎಂಬ ಜ್ಞಾಯವಂತೆ ಸರ್ವಾಂಗಲಿಂಗ ಸಂಬಂಧಿಯಾದ ಸದ್ಭಕ್ತನು ಗುರು—ಚರಲಿಂಗಕ್ಕೆ ತನು, ಮನ, ಧನವೆಂಬ ತ್ರಿವಿಧಪದಾರ್ಥವ ನಿರ್ವಂಚಕ ದ್ವಾರದಲ್ಲಿನಿಂದು ಸಮರ್ಪಿಸುವಲ್ಲಿ ಶ್ರೇಷ್ಠಾ ಶ್ರೇಷ್ಟವಿಲ್ಲದೆ ಸಮಾನಪಕ್ಷವಾಗಿ ವಿಶ್ವಾಸಹುಟ್ಟಿಸಿ ಭಕ್ತಿಯ ಮಾಡುತ್ತಿಹನೆಂಬುದೀಗ, ವಿಷಚರಣಾಂಗುಲದಲ್ಲಿ ವೇದಿಸಿ ಕಪಾಲವಲ್ಲಿನಿಂದು ಮೂರ್ಛೆಗೊಂಡಂತೆ ಇಂತಿಭಕ್ತಿಸ್ಥಲದ ವಿವರ ಹೆಚ್ಚುಕುಂದನರಿದು ಕೊಡುವಲ್ಲಿ, ಕೊಂಬುವಲ್ಲಿ, ತಟ್ಟುವಲ್ಲಿ, ಮುಟ್ಟುವಲ್ಲಿ, ತಾಗುವಲ್ಲಿ, ಸೋಂಕುವಲ್ಲಿ, ನಾನಾ ಗುಣಂಗಳಲ್ಲಿ ವಿವರವನರಿತು ಮರ್ಮಜ್ಞನಾಗಿರ್ಪ ಭಕ್ತನಂಗ ಆ ಸುಖದ ಸಂಗ ಸದ್ಯೋಜಾತಲಿಂಗದ ನಿರಂಗಸಂಗವೆಂಬ ಶಬ್ದಕ್ಕರ್ಥ.

೨

ಪೃಥ್ವಿಯಲ್ಲಿ ಅಪ್ಪುಕೂಡಲಿಕೆ ಅಗ್ನಿ ಕೂಡೆ ನಾಲ್ಕುಭೇದವಾಗಿಪ್ಪುದು
ಅಗ್ನಿಯಲ್ಲಿ ವಾಯುಕೂಡೆ ಏಳು ಭೇದವಾಗಿಪ್ಪುದು

ಆ ವಾಯುವಿನಲ್ಲಿ ಆಕಾಶಕೂಡೆ ಹದಿನಾರು ಭೇದವಾಗಿಪ್ಪುದು
ಇಂತಿ ಪೃಥ್ವಿಭೇದ, ಅಪ್ಪುವಿನ ಸರ್ವಸಾರ
ಅಗ್ನಿಗೆ ತನ್ಮಯ ಜಿಂಹ್ವೆ ವಾಯುವಿಂಗೆ ಸರ್ವಗಂಧ
ಆಕಾಶಕ್ಕಾವರಣ ಅಲಕ್ಷ್ಯ ಇಂತಿ ಪಂಚಕರಣಂಗಳು
ವಿಭಾಗಿಸಿ ಸೂತ್ರವಿಟ್ಟು
ಒಂದರಿಂದ ಹಲವು ಲೆಖ್ಖವ ಸಂದಣಿಸುವಂತೆ ಲೆಖ್ಖ ಹಲವಕಂಡು
ಒಂದರಿಂದ ವಿಭಾಗಿಸಿದರೆಂಬುದನರಿದು
ತಾಯ ಗರ್ಭದ ಶಿಶುಭಿನ್ನವಾದಂತೆ ಸುಖದುಃಖ ವಿಚಾರಿಸಬೇಕು,
ಸದ್ಯೋಜಾತ ಲಿಂಗವೆಂದರಿದನ್ನಕ್ಕ ಉಭಯವ ವಿಚಾರಿಸಬೇಕು.

**ಟೀಕು:**— ಪೃಥ್ವಿಸಂಬಂಧವಾದ ಗಂಧ, ಅಪ್ಪುಸಂಬಂಧವಾದ ರಸ, ಅಗ್ನಿ ಸಂಬಂಧವಾದ ರೂಪು ಈ ತ್ರಿವಿಧ ಸಮರಸವಾದುದೇ ದೇಹ. ಅಂತಪ್ಪ ದೇಹ ಅಹಂಕಾರ ಒಂದು ಇಂತಿ ಚತುರ್ವಿಧವೆಂಬುದೀಗ, ಪೃಥ್ವಿಯಲ್ಲಿ ಅಪ್ಪುಕೂಡಲಿಕೆ ಅಗ್ನಿಕೂಡೆ ನಾಲ್ಕು ಭೇದವಾಗಿರ್ಪುದೆಂಬ ಶಬ್ದಕ್ಕರ್ಥ. ಆ ಚತುರ್ವಿಧದಲ್ಲಿ ವಾಯು ಬೆರೆಸಲಾಗಿ ಸ್ಪರ್ಶನದಿಂದ ಸಪ್ತವ್ಯಸನಂಗಳು ಉದಯಿಸಿದವೆಂಬುದೀಗ, ಅಗ್ನಿಯಲ್ಲಿ ವಾಯು ಕೂಡೆ ಏಳು ಭೇದವಾಗಿರ್ಪದೆಂಬ ಶಬ್ದಕ್ಕರ್ಥ. ಆ ವಾಯುವಿನಲ್ಲಿ ಆಕಾಶ ತತ್ವ ಕೂಡಲಾಗಿ ಪಂಚಕರಣಂಗಳು ಹುಟ್ಟಿನಿಂದಣ ಹನ್ನೊಂದು ಕೂಡಿಕೊಂಡು ಷೋಡಶ ಕರಣಂಗಳಾಗಿಪವೆಂಬುದೀಗ, ಆ ವಾಯುವಿನಲ್ಲಿ ಆಕಾಶ ಕೊಡೆ ಹದಿನಾರು ಭೇದವಾಗಿರ್ಪುದೆಂಬ ಶಬ್ದಕ್ಕರ್ಥ. ಸರ್ವರಲ್ಲಿ ಪೃಥ್ವಿ ಭಿನ್ನವಿಲ್ಲದೆ ಎಂಬುದೀಗ, ಇಂತಿ ಪೃಥ್ವಿಯ ಭೇದವೆಂಬ ಶಬ್ದಕ್ಕರ್ಥ. ಉದಕವು ಸರ್ವರಲ್ಲಿ ಚೈತನ್ಯವಾಗಿ ಪೂರ್ಣವಾಗಿಹುದೆಂಬುದೀಗ, ಅಪ್ಪುವಿನ ಸರ್ವಸಾರವೆಂಬ ಶಬ್ದಕ್ಕರ್ಥ. ಸರ್ವರಲ್ಲಿ ಅಗ್ನಿ ತನ್ಮಯವಾಗಿಹುದೆಂಬುದೀಗ, ಅಗ್ನಿಗೆ ತನ್ಮಯ ಜಿಂಹ್ವೆಯೆಂಬ ಶಬ್ದಕ್ಕರ್ಥ. ಗಾಳಿ-ಗಂಧ ಭಿನ್ನವಿಲ್ಲದಿಹುದೀಗ, ವಾಯುವಿಗೆ ಸರ್ವ ಗಂಧವೆಂಬ ಶಬ್ದಕ್ಕರ್ಥ. ಸರ್ವಕ್ಕೆ ಆಕಾಶವೆ ಹೊದಿಕೆಯಾಗಿ ನಿರ್ಲಕ್ಷವಾಗಿಹುದೆಂಬುದೀಗ, ಆಕಾಶಕ್ಕಾವರಣ ಅಲಕ್ಷವೆಂಬ ಶಬ್ದಕ್ಕರ್ಥ. ಇಂತಪ್ಪ ಪಂಚತತ್ವಂಗಳು ಮುಖ್ಯವಾದ ಅನೇಕ ತತ್ವಂಗಳ ಲೆಖ್ಖವಿಟ್ಟು ಒಂದರಿಂದ ಹಲವು ಲೆಕ್ಕವ ನರಿವಂತೆ ಸೂತ್ರವಿಟ್ಟು ವಿಭಾಗಿಸಿ ಆ ತತ್ವಂಗಳನೆಲ್ಲವ ನಿವೃತ್ತಿ ಮುಖದಿಂ ಸುಜ್ಞಾನದಲ್ಲಿ ನಿಲಿಸಿದನೆಂಬುದೀಗ, ಇಂತಿ ಪಂಚಕರಣಂಗಳ ವಿಭಾಗಿಸಿ ಸೂತ್ರವಿಟ್ಟು ಒಂದರಿಂದ ಹಲವು ಲೆಖ್ಖವ ಸಂದಸುವಂತೆ ಲೆಖ್ಖಹಲವಕಂಡು ಒಂದರಿಂದ ವಿಭಾಗಿಸಿದರೆಂಬುದುನರಿದು ಎಂಬ ಶಬ್ದಕ್ಕರ್ಥ. ಅಂತಪ್ಪ ಅಂಗ ತತ್ವಂಗಳನೆಲ್ಲವ ಸುಜ್ಞಾನದಲ್ಲೇಕವ ಮಾಡಿ ಶಿವಾಪೇಕ್ಷೆಯ ಮುಂದುಗೊಂಡಿರ್ಪ ಶರಣನ ಪರಿಯೆಂತೆಂದೊಡೆ ತಾಯಗರ್ಭದ ಶಿಶು ನವಮಾಸ ತುಂಬಿ ಉದಯಿಸಿ ಸಾಕಾರವಾಗಿ ತೋರಿದಂತೆ ಆತ್ಮಾಂತರ್ಗತ ವಾಗಿರ್ಪ ಚಿತ್‌ಪ್ರಭಾಲಿಂಗವೆ ಗುರೋಪದೇಶದಿಂ ಬಹಿಷ್ಕರಿಸಿ ಕರಸ್ಥಲಕ್ಕೆ ಇಷ್ಟ ಲಿಂಗವಾಗಿ ಬರಲು ಅಂಗ, ಪ್ರಾಣಂಗಳ ರೂಪು, ರುಚಿಯ

ಲಿಂಗಕ್ಕರ್ಪಿಸಿ ಆ ಲಿಂಗ ಸುಖ ಪ್ರಸನ್ನ ಪ್ರಸಾದವ ಸ್ವೀಕರಿಸುತ್ತಿಹ ಶರಣನೆಂಬುದೀಗ, ತಾಯಗರ್ಭದ ಶಿಶು ಭಿನ್ನವಾದಂತೆ ಸುಖ-ದುಃಖವ ವಿಚಾರಿಸಬೇಕು ಸದ್ಯೋಜಾತಲಿಂಗವೆಂದರಿವನ್ನಕ್ಕ ಉಭಯ ವಿಚಾರಿಸಬೇಕು ಎಂಬ ಶಬ್ದಕ್ಕರ್ಥ.

ಕಾಡೆಮ್ಮೆ ಊರಗೋಣನನೀದು, ಆ ಊರಗೋಣಂಗೆ
ಮೂರು ಬಾಯಿ, ಆರು ಕಾಲು, ಕೊಂಬೆಂಟು, ಕಿವಿ ಹದಿನಾರು
ನಾಲಗೆ ಇಪ್ಪತ್ತೈದು, ಬಾಲ ಮೂವತ್ತಾರು,
ನೂರರ ಕಂಬಳಿಯಲ್ಲಿ ನೋಡುವ ಕಣ್ಣು ಒಂದೇ ಆಯಿತ್ತು
ಆ ಒಂದು ಕಣ್ಣು ಇಂಗಲಾಗಿ ಗ್ರಾಸವಿಲ್ಲದೆ ಅದು
ಅಲ್ಲಿಯೆ ಹೋಯಿತ್ತು ಸದ್ಯೋಜಾತ ಲಿಂಗದಲ್ಲಿ.

**ಟೀಕು:—** ಭವಾರಣ್ಯ ಪ್ರವೇಶವಾದ ಮಾಯೆಯೆಂಬುದೀಗ, ಕಾಡೆಮ್ಮೆಯೆಂಬ ಶಬ್ದಕ್ಕರ್ಥ. ಅಂತಪ್ಪ ಭವಾರಣ್ಯ ಪ್ರವೇಶಿಯಾದ ಮಾಯಾ ಶಕ್ತಿಯಿಂದ ಜೀವಾತ್ಮನುದಯವಾಗಿ ದೇಹ ಸಂಬಂಧಿ ಯಾಗಿರುತ್ತಿಹನೆಂಬುದೀಗ, ಕಾಡೆಮ್ಮೆ ಊರು ಗೋಣನನೀದು ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹ ಸಂಬಂಧಿಯಾದ ಜೀವಂಗೆ ಸುಜ್ಞಾನೋದಯವಾಗಲು, ಗುರುಕಾರುಣ್ಯದಿಂದ ತ್ರಿವಿಧಲಿಂಗ ಸಂಬಂಧವಾಗಲು ಅವಸ್ಥಾತ್ರಯಂಗಳಳಿದು ಕ್ರಿಯಾಜ್ಞಾನ ಭಾವವಿಡಿದಾಚರಿಸುತ್ತಿಹನೆಂಬುದೀಗ, ಆ ಊರು ಗೋಣಂಗೆ ಮೂರು ಬಾಯಿಯೆಂಬ ಶಬ್ದಕ್ಕರ್ಥ. ಅಂತು ಕ್ರಿಯಾಜ್ಞಾನ ಭಾವವಿಡಿದಾಚರಿಸುತ್ತಿಹ ಚಿತ್ ಸ್ವರೂಪನಾದ ಶರಣಂಗೆ ಷಟ್ಕರಣಂಗಳು ನಿವೃತ್ತಿಯಾಗಿ ಷಟುಸ್ಥಲ ಸಂಬಂಧವಾಗಿಹುದೆಂಬುದೀಗ, ಆರು ಕಾಲು ಎಂಬ ಶಬ್ದಕ್ಕರ್ಥ. ಆ ಷಟುಸ್ಥಲವಿಡಿದಾಚರಿಸುವ ಚಿತ್ ಸ್ವರೂಪನಾದ ಸಜ್ಜೀವಂಗೆ ಅಷ್ಟ ತನುಗಳಳಿದು ಅಷ್ಟವಿಧಭಕ್ತಿ ಸ್ವರೂಪವಾಗಿಹವೆಂಬುದೀಗ, ಕೊಂಬೆಂಟು ಎಂಬ ಶಬ್ದಕ್ಕರ್ಥ. ಅಂತಪ್ಪ ಅಷ್ಟ ವಿಧ ಭಕ್ತಿಯಲ್ಲಿ ತತ್ಪರನಾದ ಜ್ಞಾನ ಕಲಾತ್ಮಂಗೆ ಅಂತರಂಗದ ಅಷ್ಟಮದಂಗಳು ಬಹಿರಂಗದ ಅಷ್ಟಮದಂಗಳು ಆ ಷೋಡಶ ಭಕ್ತಿಯಲ್ಲಿ ಸಂಬಂಧವಾಗಿಹುದೆಂಬುದೀಗ, ಕಿವಿ ಹದಿನಾರು ಎಂಬ ಶಬ್ದಕ್ಕರ್ಥ. ಅಂತು ಷೋಡಶ ಭಕ್ತಿಯಲ್ಲಿ ನಿರ್ಭರವಾದ ಲಿಂಗಶರಣಂಗೆ ಇಪ್ಪತ್ತೈದು ತತ್ವಂಗಳಳಿದು ಪರಮಾಮೃತ ರಸನೆಯಾಗಿಹವೆಂಬುದೀಗ, ನಾಲಗೆ ಇಪ್ಪತ್ತೈದು ಎಂಬ ಶಬ್ದಕ್ಕರ್ಥ. ಆ ತತ್ವಂಗಳೆ ಪರಮಾಮೃತ ರಸನೆಯಾದ ಶರಣನ ಷಡಾಧಾರ ಚಕ್ರಂಗಳಲ್ಲಿರ್ಪ ಮೂವತ್ತಾರು ತತ್ವಭಾವವಳಿದು, ಮೂವತ್ತಾರು ಸ್ಥಲಸಂಬಂಧವಾಗಿಹುದೆಂಬುದೀಗ, ಬಾಲ ಮೂವತ್ತಾರು ಎಂಬ ಶಬ್ದಕ್ಕರ್ಥ. ಇಂತಪ್ಪ ಸರ್ವಾಚಾರ ಸಂಪತ್ತವಿಡಿದಿರ್ಪ ಶರಣಂಗೆ, ಪಿಂಡಾದಿ ಭಾವಾಂತ್ಯವಾದ ನೂರು ಸ್ಥಲಂಗಳು ಸುಜ್ಞಾನದೃಷ್ಟಿಗೆ ತೋರುತ್ತಿಹುದೆಂಬುದೀಗ, ನೂರರ ಕಂಬಳಿಯಲ್ಲಿ ನೋಡುವ ಕಂಣು ಒಂದೇ ಯಾಯಿತ್ತು ಎಂಬ

ಶಬ್ದಕ್ಕರ್ಥ. ಇಂತಪ್ಪ ಸ್ಥಲವಿಡಿದಿರ್ಪ ಶರಣನ ಜ್ಞಾನ ಶೂನ್ಯ ಸ್ಥಲವು ಮಹಾ ಘನಲಿಂಗದಲ್ಲಿ ನಿಷ್ಪತಿಯಾಗಲು ರೂಪು ಚಿತ್ತೃಪ್ತಿಯೆಂಬ ತ್ರಿವಿಧ ಪದಾರ್ಥವ ತ್ರಿವಿಧ ಲಿಂಗ ಮುಖದಲ್ಲಿ ಅರ್ಪಿಸಿ ಭೋಗಿಸಿಹೆನೆಂಬ ಭಾವವಾಸ ಸಜ್ಜೀವಂಗೆ ಇಲ್ಲದೆ ಹೋಯಿತ್ತೆಂಬುದೀಗ, ಆ ಒಂದು ಕಣ್ಣು ಇಂಗಲಾಗಿ ಕೋಣಂಗೆ ಗ್ರಾಸ ವಿಲ್ಲದೆ ಅದು ಅಲ್ಲಿಯೆ ಹೋಯಿತ್ತು ಸದ್ಯೋಜಾತ ಲಿಂಗದಲ್ಲಿ ಎಂಬ ಶಬ್ದಕ್ಕರ್ಥ.

೪

ಕಾಳಮೇಘವೆಂಬ ಭೂಮಿಯಲ್ಲಿ ಕಾಳರಾತ್ರಿಯೆಂಬ ಏರಿಗಟ್ಟಿ
ಮಂಜಿನ ನೀರ ತೊರೆಗಟ್ಟಿ ಹಾಯ್ದು ತುಂಬಿತ್ತು
ಆ ಕೆರಿಗೆ ತೂಬು ಬಿಸಿಲ ಸಂಭ್ರಮದ ಕಲ್ಲು
ಕಂಜನಾಳದ ನೂಲಿನ ಕಂಭ ಆ ತಲಿಪಿಂಗೆ
ಅಂದಿನ ಮುಚ್ಚಳು ಇಂದಿನ ದ್ವಾರದಲ್ಲಿ ಸೂಸುತ್ತಿರಲಾಗಿ
ಸಾಳಿವನ ಬೆಳೆಯಿತ್ತು ಕೊಯ್ದು ಅರಿಯ ಹಾಕಲಾಗಿ
ಒಂದಕ್ಕೆ ಎರಡಾಗಿ, ಎರಡಕ್ಕೆ ಮೂರುಗೂಡಿ ಹೊರೆಗಟ್ಟಿತ್ತು
ಒಕ್ಕುವದಕ್ಕೆ ಕಣವಿಲ್ಲದೆ, ನೋಡುವದಕ್ಕೆ ಮೇಟಿ ಇಲ್ಲದೆ
ಒಕ್ಕುವದಕ್ಕೆ ಎತ್ತಿಲ್ಲದೆ, ಹೊರೆ ಎತ್ತ ಹೋಯಿತ್ತೆಂದರಿಯೆ
ಸದ್ಯೋಜಾತ ಲಿಂಗದಲ್ಲಿಗಾಗಿ.

**ಟೀಕು:**— ಅಭ್ರಛಾಯ ಮಾತ್ರವಾದ ತನು ಅಜ್ಞಾನ ಸಂಬಂಧವಾಗಿರುತ್ತಿಹುದೆಂಬುದೀಗ, ಕಾಳಮೇಘವೆಂಬ ಭೂಮಿಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ಸುಜ್ಞಾನೋದಯವಾಗಲು ಸಕಲ ಕರಣಂಗಳೆಲ್ಲ ನಿವೃತ್ತಿಯಾಗಿ, ಜ್ಞಾನ ಕರಣಂಗಳಾಗಿ ಮಹಾಜ್ಞಾನದಲ್ಲಿ ಪರವಶವಾಗಿರುತ್ತಿಹವೆಂಬುದೀಗ, ಕಾಳರಾತ್ರಿಯೆಂಬ ಏರಿಗಟ್ಟಿ ಎಂಬ ಶಬ್ದಕ್ಕರ್ಥ. ಆ ಸಕಲ ಕರಣಂಗಳ ತನ್ನ ಮಹಾಜ್ಞಾನದ ಪರವಶದಲ್ಲಿ ಏಕೀಕರಿಸಿದ ಶರಣನು ಚಿದ್ ಘನ ಲಿಂಗದಲ್ಲಿ ಮೋರೆಯಿಡಗಲು ಪಟ್ಟ ಸದ್ವಿವೇಕ ಸ್ವರೂಪವಾದ ಪರಮಾನಂದ ಜಲವನು ತನ್ನ ಸರ್ವಾಂಗದಲ್ಲಿ ಪರಿಪೂರ್ಣವಾಗಿ ವೇದಿಸಿಹನೆಂಬುದೀಗ, ಮಂಜಿನನೀರು ತೊರೆಗಟ್ಟಿ ಹಾಯ್ದು ತುಂಬಿತ್ತೆಂಬ ಶಬ್ದಕ್ಕರ್ಥ. ಶರಣನಾಚಾರಂಗದಲ್ಲಿ ವೇದಿಸಿರ್ಪ ಪರಿಪೂರ್ಣವಾದ ಪರಮಾನಂದ ಜಲಕ್ಕೆ ಉನ್ಮನಿದ್ವಾರವೆ ತೂಬಾಗಿ ಪರಿಪೂರ್ಣ ಜ್ಞಾನ-ಪ್ರಕಾಶದ ಹೆಚ್ಚಿಗೆಯ್ಯೆ ಆ ತೂಬಿನಲ್ಲಿ ಸಂಬಂಧವಾಗಿಹುದೆಂಬುದೀಗ, ಆ ಕೆರೆಗೆ ತೂಬು ಬಿಸಿಲ ಸಂಭ್ರಮವಾದ ಕಲ್ಲು ಎಂಬ ಶಬ್ದಕ್ಕರ್ಥ. ಹೃದಯ್ಯ ಕಮಲದ ಸದ್ವಿವೇಕದ್ವಾರವೆಂಬುದೀಗ, ಕಂಜನಾಳದ ಎಂಬ ಶಬ್ದಕ್ಕರ್ಥ. ಅಲ್ಲಿ ಸ್ವಾನುಭಾವ ಸೂತ್ರವನೊಳಕೊಂಡು ಶಿವಭಾವಸ್ತಂಭ ಒಪ್ಪುತ್ತಿಹುದೆಂಬುದೀಗ, ನೂಲಿನಕಂಬವೆಂಬ ಶಬ್ದಕ್ಕರ್ಥ. ಆ ಶಿವಭಾವದಗ್ರದಲ್ಲಿ ಪರಶಿವನಂತರ್ಗತವಾಗಿರ್ದ ಪರಿಪೂರ್ಣಜ್ಞಾನ ಚಿತ್ತೆ ಅವಗ್ರಹಿಸಿಕೊಂಡಿರುತ್ತಿಹುದೆಂಬುದೀಗ, ಆ

ತಲಪಿಂಗೆ ಅಂದಿನ ಮುಚ್ಚುಳು ಎಂಬ ಶಬ್ದಕ್ಕರ್ಥ. ಅಂತಪ್ಪ ಪರಮಾನಂದ ಜಲವೆ ಚಿದ್ರೂಪನಾದ ಶರಣನ ಒಳ ಹೊರಗೆನ್ನದೆ ಸರ್ವಾಂಗದಲ್ಲಿ ತುಂಬಿ ಕ್ರಿಯಾ ಚಾರದಲ್ಲಿ ಸಂಬಂಧವಾಗಿ ಚರಿಸುತ್ತಿರಲು ಎಂಬುದೀಗ, ಇಂದಿನ ದ್ವಾರದಲ್ಲಿ ಸೂಸುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ ಜಲ ಸೇವನೆಯಿಂದ ಜ್ಞಾನಕರಣಂಗಳಾಗಿ ಪ್ರಭಾವಿಸಿದವೆಂಬುದೀಗ, ಸಾಳಿವನ ಬೆಳಯಿತ್ತೆಂಬ ಶಬ್ದ ಕ್ಕರ್ಥ. ಅಂತು ಸುಜ್ಞಾನೋದಯದಿಂ ಗುರೋಪಾವಸ್ಥೆಯ ಮಾಡುವ ಶಿಷ್ಯನ, ಜ್ಞಾನಕರಣಂಗಳ ಮಧ್ಯದಲ್ಲಿರ್ಪ ಪರಮ ಚಿತ್ಕಲೆಯನು ತನ್ನ ಭಾವ-ಮನ-ದೃಕ್ಕಿಂ ಬಹಿಷ್ಕರಿಸಿ ಸತ್ಕ್ರಿಯಾಚಾರದಲ್ಲಿ ಸಂಬಂಧವ ಮಾಡಿದನೆಂಬುದೀಗ, ಕೊಯ್ದು ಅರಿಯುಹಾಕಲಾಗಿ ಎಂಬ ಶಬ್ದಕ್ಕರ್ಥ. ಆ ಸತ್ಕ್ರಿಯಾಚಾರದಲ್ಲಿ ಸಂಬಂಧವಾದ ಒಂದೇ ಪರಬ್ರಹ್ಮವು ಲಿಂಗಾಂಗ ವೆಂದೆರಡಾಗಿ ತೋರಿತ್ತೆಂಬು ದೀಗ ಒಂದಕ್ಕೆ ಎರಡಾಗಿ ಎಂಬ ಶಬ್ದಕ್ಕರ್ಥ. ಆ ಲಿಂಗಸ್ಥಲವೇ ತ್ರಿವಿಧಲಿಂಗ ಸ್ವರೂಪವಾಗಿ ಆ ಅಂಗಸ್ಥಲವೆ ತ್ರಿವಿಧಾಂಗ ಸ್ವರೂಪವಾಯಿತ್ತೆಂಬುದೀಗ, ಎರ ಡಕ್ಕೆ ಮೂವರುಗೂಡಿ ಎಂಬ ಶಬ್ದಕ್ಕರ್ಥ. ಇಂತಪ್ಪಇಷ್ಟ ಪ್ರಾಣ ಭಾವಲಿಂಗದಲ್ಲಿ ಕ್ರಿಯಾಜ್ಞಾನ ಭಾವವಿಡಿದಾಚರಿಸುತ್ತಿರ್ದ ಶರಣನ ತ್ರಿವಿಧಾಂಗವು ತ್ರಿವಿಧಲಿಂಗ ದಲ್ಲಿ ಸ್ವಾನುಭಾವಸೂತ್ರದಿಂದ ಏಕಾರ್ಥವಾದವೆಂಬುದೀಗ, ಹೊರೆಗಟ್ಟಿತ್ತೆಂಬ ಶಬ್ದಕ್ಕರ್ಥ. ಆ ಲಿಂಗದಲ್ಲಿ ಸಮರಸೈಕ್ಯವಾದ ಶರಣನು ತ್ರಿವಿಧ ಲಿಂಗಾಂಗ ಸ್ಥಲ ವಿಡಿದಾಚರಿಸಿಹೆನೆಂದೊಡೆ, ಆಚಾರ ಇದಿರಿಟ್ಟು ತೋರಲಿಲ್ಲವೆಂಬುದೀಗ, ನೆಡುವ ದಕ್ಕೆ ಮೇಟಿಯಿಲ್ಲದೆ ಎಂಬ ಶಬ್ದಕ್ಕರ್ಥ. ಆ ಶರಣನ ಆತ್ಮತ್ರಯಂಗಳು ತ್ರಿವಿಧ ಲಿಂಗದಲ್ಲಿ ನಿಷ್ಪತಿಯಾದ ಬಳಿಕ ಕ್ರಿಯಾಜ್ಞಾನ ಭಾವವಿಡಿದು ಆಚರಿಸಲಿಲ್ಲವೆಂಬು ದೀಗ, ಒಕ್ಕುವದಕ್ಕೆ ಎತ್ತಿಲ್ಲದೆ ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸ್ಥಲಂಗಳು ಅವಿರಳ ಪರಬ್ರಹ್ಮದಲ್ಲಿ ಸಮರಸವಾಗಲು ಶರಣ ಪರಮುಕಾಷ್ಟಿಯ ನೆಯ್ದಿದ ನೆಂಬುದೀಗ, ಹೊರೆಯುತ್ತ ಹೋಯಿತ್ತೆಂದರಿಯೆ ನಾ ಹೋದೆ ಸದ್ಯೋ ಜಾತಲಿಂಗದಲ್ಲಿಗಾಗಿ ಎಂಬ ಶಬ್ದಕ್ಕರ್ಥ.

ಕೆಡದೊಡವೆಗೆ ಕೆಟ್ಟವನೋಡಿ ದೃಷ್ಟವಕಂಡ
ಕಂಡುದ ಕಾಣದುದ ಒಡಗೂಡಿ ಕೆಡಿಸಿ ಮತ್ತೆ
ಆ ರಸಹಿಂಡಿನಲ್ಲಿ ನೋಡಿ
ಕುರಿ ನುಂಗಿದವೆಂದು ಒಂದೇ ಕೊರಳಲ್ಲಿ-
ಆಳುತ್ತಿರ್ದ, ಸದ್ಯೋಜಾತ ಲಿಂಗವ ಕೇಳಬೇಕೆಂದು.

**ಟೀಕು**:— ಜನನ ಮರಣಂಗಳಿಲ್ಲದ ನಿತ್ಯಸ್ವರೂಪವಾದ ಪರಬ್ರಹ್ಮವೆಂಬುದೀಗ, ಕೆಡದೊಡವೆಗೆ ಎಂಬ ಶಬ್ದಕ್ಕರ್ಥ. ಚಿದಾಂಶೀಕನಾದಾತ್ಮನು ದೇಹಸಂಬಂಧ ವಾದಲ್ಲಿ ತನ್ನ ನಿಜವ ಮರೆದು ಅಜ್ಞಾನಿಯಾದರ್ನೆಂಬುದೀಗ, ಕೆಟ್ಟವನೆಂಬ ಶಬ್ದ ಕ್ಕರ್ಥ. ಅಂತಪ್ಪ ಆತ್ಮಂಗೆ ಶಿವಕೃಪೆಯಿಂದ ಸುಜ್ಞಾನೋದಯವಾಗಲು ತನ್ನ

ನಿಜವೆ ಪರಬ್ರಹ್ಮವೆಂದರಿದಲ್ಲಿ ಗುರುಕರುಣದಿಂದ ಪ್ರತ್ಯಕ್ಷವಾಗಿ ಕರಸ್ಥಲದಲ್ಲಿ ಮೂರ್ತಿಗೊಂಡುದ ಕಂಡನೆಂಬುದೀಗ, ಕೆಟ್ಟವನೋಡಿ ದೃಷ್ಟವ ಕಂಡನೆಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣನು ತನ್ನ ಕರಸ್ಥಲದಲ್ಲಿ ಅಗೋಚರವಾಗಿರ್ದ ಇಷ್ಟಲಿಂಗದಲ್ಲಿ ಅಂತರಂಗದಲ್ಲಿರ್ದ ನಿರಾಕಾರವಾಗಿಪ್ಪ ಪ್ರಾಣಲಿಂಗದಲ್ಲಿ ಸುಜ್ಞಾನ ಕ್ರೀಯಿಂದಾಚರಿಸಿ ಬೆರಸಿದನೆಂಬುದೀಗ, ಕಂಡುದ ಕಾಣುವುದ ಒಡಗೂಡಿ ಎಂಬ ಶಬ್ದಕ್ಕರ್ಥ. ಅಂತು ಸುಜ್ಞಾನ ಕ್ರೀಯಿಂದಾಚರಿಸುತ್ತಿರ್ದ ತಮ್ಮ ನಿಜದ ತಾವಾರೆಂದರಿಯದೆ ಆಚರಣೆಯ ಅನುಸರಣೆಯಿಂದ ತಾವುಸವೆದೆಗೊಳಲು ಅಲ್ಲಿ ಉಭಯಲಿಂಗದ ನಿಲವು ಕಾಣಬಾರದೆಂಬುದೀಗ, ಕೆಡಸಿ ಎಂಬ ಶಬ್ದಕ್ಕರ್ಥ. ಆ ಉಭಯಲಿಂಗದ ಇರವು ಕಾಣಬಾರದೆ ಇರಲು ಕೂಡಬೇಕೆಂಬ ಅವಸ್ಥೆಯಿಂದ ಶೃತಜ್ಞಾನವಿಡಿದು ಅರಸುತ್ತಿರ್ದನೆಂಬುದೀಗ, ಮತ್ತೆ ಅರಸಿ ಎಂಬ ಶಬ್ದಕ್ಕರ್ಥ. ಆ ಪರವಸ್ತುವಿನ ನಿಲವನು ಸಕಲಕರಣಂಗಳಲ್ಲಿ ವಿವೇಕಿಸುತ್ತಿರ್ದನೆಂಬುದೀಗ, ಹಿಂದಿನಲ್ಲಿನೋಡಿ ಎಂಬ ಶಬ್ದಕ್ಕರ್ಥ. ಆತ್ಮತ್ರಯಂಗಳ ಮಧ್ಯದಲ್ಲಿ ಪರಬ್ರಹ್ಮ ವಡಗಿದ ಭೇದವ ಸುಜ್ಞಾನದಿಂದ ಎಚ್ಚತ್ತುನೋಡಿ ದೃಢಕಂಠದಿಂದ ಶಿವೋಹಂ-ಶಿವೋಹಂ ಎನುತಿರ್ದನೆಂಬುದೀಗ, ಹಿಂದಿನ ಕುರಿನುಂಗಿದನೆಂದು ಒಂದೇ ಕೊರಳಲ್ಲಿ ಅಳುತ್ತಿರ್ದ ಸದ್ಯೋಜಾತಲಿಂಗದ ಕೇಳಬೇಕೆಂದು ಎಂಬ ಶಬ್ದಕ್ಕರ್ಥ.

## ತುರುಗಾಹಿ ರಾಮಯ್ಯನವರ ವಚನಗಳು

೧

ಹಸುವಿಂಗೆ ಹಾಗ, ಎತ್ತಿಂಗೆಹಣ, ವಡ್ಡಕರುವಿಂಗೆ ಮೂರುಹಣ
ಎಮ್ಮೆ ಕೋಣನ ಕುಲವ ನಾಕಾಯಲಿಲ್ಲ ಅವು ಎನ್ನ
ತುರುವಿಂಗೆ ಹೊರಗು
ಹೋಗದಂತೆ ಕಾದೊಪ್ಪಿಸುವೆ ಗೋಪತಿನಾಥ ವಿಶ್ವೇಶ್ವರಲಿಂಗಕ್ಕೆ.

ಟೀಕು:— ಅಖಂಡ ಪರಿಪೂರ್ಣವಾದ ಚಿತ್ತೇ ಕಾಮಧೇನುವೆಂಬ ನಾಮದಿಂದ ಗುರುಸ್ವರೂಪವಾಗಿ ಬಂದಿಹಕಾರಣ ಆ ಶ್ರೀ ಗುರುವಿಂಗೆ ತನು ಪದಾರ್ಥವ ಸಮರ್ಪಣೆಯ ಮಾಡಿದನೆಂಬುದೀಗ, ಹಸುವಿಂಗೆ ಹಾಗವೆಂಬವೆಂಬ ಶಬ್ದಕ್ಕರ್ಥ. ತನ್ನ ಹೃದಯಕಮಲ ಕರ್ಣಿಕಾಮಧ್ಯದಲ್ಲಿ ಚಿತ್ಪ್ರಕಾಶವಾಗಿ ತೊಳಗಿಬೆಳಗುತ್ತಿಹ ಪ್ರಾಣಲಿಂಗಕ್ಕೆ ಷಡೇಂದ್ರಿಯ ದ್ವಾರದಿಂಬಹ ಷಡ್ವಿಧವಿಷಯ ಪದಾರ್ಥವ ಭಕ್ತಿಯಿಂದ ಸಮರ್ಪಣೆಯಮಾಡಿದನೆಂಬುದೀಗ, ಎತ್ತಿಂಗೆ ಹಣವಡ್ಡವೆಂಬ ಶಬ್ದಕ್ಕರ್ಥ. ತನ್ನ ಸುಜ್ಞಾನದ ಮಧ್ಯದಲ್ಲಿ ತೊಳಗಿಬೆಳಗುತ್ತಿಹ ಪರಿಪೂರ್ಣ ಜ್ಞಾನ ಜಂಗಮಕ್ಕೆ ಹೊನ್ನು, ಹೆಣ್ಣು, ಮಣ್ಣೆಂಬ ತ್ರಿವಿಧಪದಾರ್ಥವ ಭಕ್ತಿಯಿಂದ ಅರ್ಪಿಸುತ್ತಿಹನೆಂಬುದೀಗ, ಕರುವಿಂಗೆ ಮೂರು ಹಣವೆಂಬ ಶಬ್ದಕ್ಕರ್ಥ. ಮಾಯೆ

ಯನು, ಅಜ್ಞಾನಿ ಜೀವನನು, ಸಕಲಕರಣಂಗಳ ಸಮೂಹವನು ಶರಣತಾ ರಕ್ಷಿಸಲಿಲ್ಲವೆಂಬುದೀಗ, ಎಮ್ಮ ಕೋಣನ ಕುಲವ ನಾಕಾಯಲಿಲ್ಲವೆಂಬ ಶಬ್ದಕ್ಕರ್ಥ. ಆ ಮಾಯೆಯು, ಅಜ್ಞಾನಿ ಜೀವನು, ಸಕಲಕರಣಂಗಳ ಸಮೂಹವು ಶರಣನಾಚಾರಕ್ಕೆ ಹೊರಗಾಗಿಪ ಕಾರಣ ಭಿನ್ನವಾದವೆಂಬುದೀಗ, ಅವು ಎನ್ನ ತುರುವಿಂಗೆ ಹೊರಗು ಎಂಬ ಶಬ್ದಕ್ಕರ್ಥ- ಪರಧನ-ಪರಸ್ತ್ರೀ-ಅತಿಕಾಂಕ್ಷೆ-ದುರ್ವರ್ತನೆಗಳ ಬಿಟ್ಟು ಸದಾಚಾರ ಸನ್ಮಾರ್ಗದಲ್ಲಿ ಸತ್ಪಥವಿಡಿದಾಚರಿಸಿ ಸಕಲತತ್ವಂಗಳೆಲ್ಲವನು ಲಿಂಗದಲ್ಲೇಕಾರ್ಥವ ಮಾಡಬೇಕೆಂಬುದೀಗ, ತೊಂಡುಹೋಗವಂತೆ ಕಾದೊಪ್ಪಿಸಬೇಕು ಗೋಪತಿನಾಥ ವಿಶ್ವೇಶ್ವರಲಿಂಗಕ್ಕೆ ಎಂಬ ಶಬ್ದಕ್ಕರ್ಥ.

೨

ಹಸುವಿಗೊಂದುಕಚ್ಚು, ಎತ್ತಿಂಗೆರಡುಕಚ್ಚು,
ಕರುವಿಂಗೆ ಮೂರು ಕಚ್ಚು
ಇಂತಿವನೋಡಿ ಮೇಯಿಸಿಕೊಂಡು ಒಂದು ಹೋಗದಂತೆ
ಕಾಡೊಪ್ಪಿಸಬೇಕು ಗೋಪತಿನಾಥ ವಿಶ್ವೇಶ್ವರಲಿಂಗದರಕೆಯಾಗಿ

ಟೀಕು:— ದನಗಳ ಪದ್ಮದಲ್ಲಿರ್ಪ ಶಿವಲಿಂಗವೆ ಶ್ರೀಗುರು ಕರುಣದಿಂದ ಇಷ್ಟಲಿಂಗ ಸ್ವರೂಪವಾಗಿ ಕರಸ್ಥಲಕ್ಕೆ ಬಂದಲ್ಲಿ ಆ ಲಿಂಗಕ್ಕೆ ಸದ್ಭಕ್ತಿಯಿಂದ ಶರಣ ರೂಪು ಪದಾರ್ಥವ ಸಮರ್ಪಿಸುತ್ತಿಹನೆಂಬುದೀಗ, ಹಸುವಿಗೊಂದು ಕಚ್ಚು ಎಂಬ ಶಬ್ದಕ್ಕರ್ಥ. ಆಚಾರಲಿಂಗ, ಗುರುಲಿಂಗವೆಂಬುಭಯವನೊಳಕೊಂಡು ಚೈತನ್ಯ ಸ್ವರೂಪವಾಗಿರ್ದ ಪ್ರಾಣಲಿಂಗಕ್ಕೆ ಗಂಧ-ರಸವೆಂಬುಭಯ ಪದಾರ್ಥವನು ಸುಜ್ಞಾನ ಮುಖದಿಂದ ಸಮರ್ಪಿಸುತ್ತಿಹನೆಂಬುದೀಗ, ಎತ್ತಿಂಗೆ ಎರಡು ಕಚ್ಚು ಎಂಬ ಶಬ್ದಕ್ಕರ್ಥ. ಚರಲಿಂಗ-ಪ್ರಸಾದಲಿಂಗ-ಮಹಾಲಿಂಗವೆಂಬ ತ್ರಿವಿಧವನೊಳಕೊಂಡು ಆನಂದ ಸ್ವರೂಪವಾಗಿರ್ದ ಭಾವಲಿಂಗಕ್ಕೆ ಸ್ಪರ್ಶನ-ಶಬ್ದ-ಪರಿಣಾಮವೆಂಬ ತ್ರಿವಿಧ ಪದಾರ್ಥವನು ಸಮರಸ ಭಕ್ತಿಯಿಂದ ಸಮರ್ಪಿಸುತ್ತಿಹನೆಂಬುದೀಗ, ಕರುವಿಂಗೆ ಮೂರು ಕಚ್ಚು ಎಂಬ ಶಬ್ದಕ್ಕರ್ಥ. ಆ ತ್ರಿವಿಧಲಿಂಗವೆ ತನ್ನ ಪ್ರಾಣಕಳಾ ಚೈತನ್ಯವೆಂದು ಸುಜ್ಞಾನ ದೃಷ್ಟಿಯಿಂದ ನಿರೀಕ್ಷಿಸುತ್ತಿರ್ದ ಶರಣನು ರೂಪು-ರುಚಿ-ತೃಪ್ತಿಗಳೆಂಬ ತ್ರಿವಿಧ ಪದಾರ್ಥವನು ತ್ರಿವಿಧಲಿಂಗ ಮುಖಕ್ಕರ್ಪಿಸಿ ಆಲಿಂಗ ಸುಖಪ್ರಸಂಗ ಪ್ರಸಾದವ ಸ್ವೀಕರಿಸುತ್ತಿಹನೆಂಬುದೀಗ, ಇಂತಿವ ನೋಡಿ ಮೇಯಿಸಿಕೊಂಡು ಎಂಬ ಶಬ್ದಕ್ಕರ್ಥ. ಆ ಲಿಂಗ ಸುಖ ಪ್ರಸಂಗ ಪ್ರಸಾದ ಸೇವನೆಯಿಂದ ಆತ್ಮತ್ರಯ ಮುಖ್ಯವಾದ ಸಕಲ ಕರಣಂಗಳೆಲ್ಲವು ಅನ್ಯವಾದ ಮಾಯಾ ಪ್ರಪಂಚಿನತ್ತ ಹರೆಯದ ಹಾಗೆ ನಿವೃತ್ತಿಯ ಮಾಡಿ ಮಹಾಘನಲಿಂಗದಲ್ಲಿ ಒಡಗೂಡಿದನೆಂಬುದೀಗ, ಒಂದು ಹೋಗದಂತೆ ಕಾಯ್ದೊಪ್ಪಿಸಬೇಕು ಗೋಪತಿನಾಥ ವಿಶ್ವೇಶ್ವರ ಲಿಂಗದರಕೆಯಾಗಿ ಎಂಬ ಶಬ್ದಕ್ಕರ್ಥ.

೩

ಹಸುವಿಂಗೆ ಆರುಬಾಯಿ, ಎತ್ತಿಂಗೆ ಮೂರುಬಾಯಿ
ಕರುವಿಂಗೆ ಒಂದೇ ಬಾಯಲ್ಲಿ ನಾನಾ ವರ್ಣದ ಹುಲ್ಲ ಮೆದ್ದು,

ನೀರಡಿಸಿ ನೆಟ್ಟಾಲೆ ನಿಂದವು ಕಣ್ಣು ಕರು ಸತ್ತು ಮತ್ತೆ ಹಸುವಿನ
ಹಾಂಗಿಲ್ಲ
ಗೋಪತಿನಾಥ ವಿಶ್ವೇಶ್ವರಲಿಂಗಕ್ಕೆ ಕರುವಿನ ಹರಣ
ಹೋಹದಕ್ಕೆ ಮುನ್ನವೆ ಒಡಗೂಡಿ ಶುದ್ಧಿಯನೊಪ್ಪಿಸಬೇಕು

**ಟೀಕು:**— ಹಸು ಎಂದೊಡೆ ಜೀವನು. ಅಂತಪ್ಪ ಜೀವಂಗೆ ಶಿವಕೃಪೆಯಿಂದ ಸುಜ್ಞಾನೋದಯವಾದಲ್ಲಿ ಜೀವಭಾವವಳಿದು ಸಜ್ಜೀವಸ್ವರೂಪವಾಗಲು ಶ್ರೀ ಗುರು ಕಾರುಣ್ಯದಿಂದ ಷಡ್ವಿಧ ಭಕ್ತಿಸಂಬಂಧವಾದವೆಂಬುದೀಗ, ಹಸುವಿಂಗೆ ಆರು ಬಾಯಿ ಎಂಬ ಶಬ್ದಕ್ಕರ್ಥ. ಚಿತ್ಸ್ವರೂಪನಾದ ಅಂತರಾತ್ಮನಲ್ಲಿ ತ್ರಿವಿಧ ಭಕ್ತಿಸಂಬಂಧವಾಗಿಹುದೆಂಬುದೀಗ, ಎತ್ತಿಂಗೆ ಮೂರು ಬಾಯಿ ಎಂಬ ಶಬ್ದಕ್ಕರ್ಥ. ಮನೋವರ್ತನೆಯಳಿದು ಉನ್ಮನಿತತ್ವ ಸ್ವರೂಪವಾದಲ್ಲಿ ಆ ಮನಕ್ಕೆ ಅಖಂಡಭಕ್ತಿಯೆ ಬಾಯಾಗಿಹುದೆಂಬುದೀಗ, ಕರುವಿಂಗೆ ಒಂದೇ ಬಾಯಲ್ಲಿ ಎಂಬ ಶಬ್ದಕ್ಕರ್ಥ. ಷಡ್ವರ್ಣೋಪಿತವಾದ ಸಕಲ ವಿಷಯಂಗಳ ಪೂರ್ವಾಶ್ರಯವ ಕಳೆದು ಷಡಾಕ್ಷರಿಮಂತ್ರ ಸಂಸ್ಕಾರದಿಂದ ಪದಾರ್ಥಸ್ವರೂಪವನಾದಿ ಸದ್ಭಕ್ತಿಯಿಂದ ಲಿಂಗಕ್ಕರ್ಪಿಸಿ ಆ ಲಿಂಗಮುಖ ಪ್ರಸನ್ನ ಪ್ರಸಾದವ ಶಿವಾಪೇಕ್ಷೆಯಿಂದ ಸ್ವೀಕರಿಸುತ್ತಿಹುದೆಂಬುದೀಗ, ನಾನಾ ವರ್ಣದ ಹುಲ್ಲುಮೇದು ಎಂಬ ಶಬ್ದಕ್ಕರ್ಥ. ಆ ಮನಸ್ಸು ಸದ್ವಿವೇಕ ಸ್ವರೂಪವಾದ ಪರಮಾನಂದ ಜಲವ ಸಿಚ್ಛೆಯಿಸಿ ತೂರ್ಯಾವಸ್ಥೆಯ ಮುಂದುಗೊಂಡಲ್ಲಿ ಆ ಸುಜ್ಞಾನ ದೃಷ್ಟಿಯು ಅವಿರಳಪ್ಪ ಪರಬ್ರಹ್ಮದಲ್ಲಿ ಪರಮಕಾಷ್ಟಿಯಾಯಿತ್ತೆಂಬುದೀಗ, ನೀರಡಿಸಿನೆಟ್ಟಾಲೆ ನಿಂದವು ಕಣ್ಣು ಎಂಬ ಶಬ್ದಕ್ಕರ್ಥ. ತುರಿಯಾವಸ್ಥೆಯ ಮುಂದುಗೊಂಡಿರ್ದ ಮನಸ್ಸು ಪರಶಿವ ತತ್ವದಲ್ಲಿ ನಿಷ್ಪತ್ತಿಯಾಗಲು ಸಜ್ಜೀವನು ವಿಡಿದಾಚರಿಸುವ ಸತ್ಕ್ರಿಯಾಚಾರಗಳೆಲ್ಲವು ಮಹಾಘನಲಿಂಗದಲ್ಲಿ ಸಮರಸವಾದವೆಂಬುದೀಗ, ಕರುಸತ್ತು ಮತ್ತೆ ಹಸುವಿನ ಹಾಗಿಲ್ಲವೆಂಬ ಶಬ್ದಕ್ಕರ್ಥ. ಆ ಮನೋಮಧ್ಯದಲ್ಲಿಪ್ಪ ಚೈತನ್ಯ ಜ್ಞಾನ ಪ್ರಕಾಶವು ಪ್ರಕೃತಿ ಭಾವದಿಂದ ಭಿನ್ನವಾಗುವದಕ್ಕೆ ಮೊದಲೇ ನಿವೃತ್ತಿಮುಖದಿಂದ ಮಹಾಘನಲಿಂಗದಲ್ಲೊಡಗೂಡಿ ಏಕಾರ್ಥವಮಾಡಿಕೊಂಡನೆಂಬುದೀಗ, ಗೋಪತಿನಾಥ ವಿಶ್ವೇಶ್ವರಲಿಂಗಕ್ಕೆ ಕರುವಿನ ಹರಣ ಹೋಹುದಕ್ಕೆ ಮುನ್ನವೆ ಒಡಗೂಡಿ ಶುದ್ಧಿಯನೊಪ್ಪಿಸಬೇಕು ಎಂಬ ಶಬ್ದಕ್ಕರ್ಥ.

೪

ಹಸುವಿಂಗೆ ಹರವರಿ, ಎತ್ತಿಂಗೆ ಕಟ್ಟುಗೊತ್ತು
ಕರುವಿಂಗೆ ವಿಶ್ವತೋ ಮುಖವಾಗಿ ಹರಿವುತ್ತಿಪ್ಪ
ಕರುವಿನ ಅರುವ ಗೋಪತಿನಾಥ ವಿಶ್ವೇಶ್ವರ ಲಿಂಗದಲ್ಲಿ
ಕಟ್ಟಿ ಒಡೆಯಬೇಕು.

**ಟೀಕು:**— ಸುಜ್ಞಾನೋದಯವಾಗಿ ಶ್ರೀಗುರು ಕಾರುಣ್ಯದಿಂದ ಸರ್ವಾಂಗಲಿಂಗ ಸಂಬಂಧಿಯಾಗಿರ್ಪ ಸಜ್ಜೀವನು ಸರ್ವಾಚಾರ ಸಂಪತ್ತು ವಿಡಿದಾಚರಿಸು

ತ್ತಿಹನೆಂಬುದೀಗ, ಹಸುವಿಂಗೆ ಹರವರಿ ಎಂಬ ಶಬ್ದಕ್ಕರ್ಥ. ಅಂತರಾತ್ಮನು ಚೈತನ್ಯ ಸ್ವರೂಪವಾದ ಪ್ರಾಣಲಿಂಗದ ಧ್ಯಾನದಲ್ಲಿ ತತ್ಪರನಾಗಿರ್ದನೆಂಬುದೀಗ, ಎತ್ತಿಂಗೆ ಕಟ್ಟು ಗೊತ್ತು ಎಂಬ ಶಬ್ದಕ್ಕರ್ಥ. ಉನ್ಮನಿ ತತ್ವ ಸ್ವರೂಪವಾದ ಮನಸ್ಸು ಪಿಂಡಾದಿ ಜ್ಞಾನ ಶೂನ್ಯಾಂತ್ಯವಾದ ನೂರೊಂದು ಸ್ಥಲ ಕುಳಂಗಳಲ್ಲಿ ಆಚರಿಸುತ್ತಿಹುದೆಂಬುದೀಗ, ಕರುವಿಂಗೆ ವಿಶ್ವತೋ ಮುಖವಾಗಿ ಪರಿವೃತ್ತಿರ್ಪ ಎಂಬ ಶಬ್ದಕ್ಕರ್ಥ. ಆ ಮನೋಮಧ್ಯದಲ್ಲಿ ತೊಳಗಿ ಬೆಳಗುತ್ತಿರ್ದ ಚಿದ್ಬಿಂದು ಪ್ರಕಾಶವು ಅಖಂಡ ಪರಿಪೂರ್ಣವಾದ ಪರಬ್ರಹ್ಮದಲ್ಲಿ ಅವಿರಳ ಸಂಬಂಧವಾಯಿತ್ತೆಂಬುದೀಗ, ಕರುವಿನ ಅರಿವ ಗೋಪತಿನಾಥ ವಿಶ್ವೇಶ್ವರ ಲಿಂಗದಲ್ಲಿ ಕಟ್ಟು ಒಡೆಯಬೇಕು ಎಂಬ ಶಬ್ದಕ್ಕರ್ಥ.

೫

ಕರವ ಹಸುವ ಪುಳುವ ಬೆನ್ನೆತ್ತ ಮೊಲೆಯುಂಬ ಕರುವ
ಕುರುಹ ನರಿಯದೆ ಕಾಯಬಹುದೆ?
ಈ ವಿಧವಿಲ್ಲದೆ ಗುರುವಿನ ಇರವ ಲಿಂಗಮೂರ್ತಿಯ ಧ್ಯಾನವ
ಅರವಿನ ಮರದೊರಗುವ ಕರೆಯಚ್ಚಲನೆ ನಿಂದಲ್ಲಿ
ಆತ್ಮಲಿಂಗ ಭೇದ ಪ್ರಾಣಲಿಂಗ ಸಂಬಂಧ ವಪ್ಪುದು
ಗೋಪತಿನಾಥ ವಿಶ್ವೇಶ್ವರ ಲಿಂಗವ ನರಿವುದಕ್ಕೆ ಇದೇ ಪ್ರಮಾಣು.

**ಟೀಕು:—** ಸಜ್ಜೀವ ಸ್ವರೂಪವಾದ ಜ್ಞಾನ ಕಲಾತ್ಮದಲ್ಲಿ ಪರಮಾಮೃತ ರಸವೆ ಘಟಿಸುತ್ತಿಹುದೆಂಬುದೀಗ, ಕರವ ಹಸುವ ಎಂಬ ಶಬ್ದಕ್ಕರ್ಥ. ಸತ್ಕ್ರಿಯಾಜ್ಞಾನದಿಂದಾಚರಿಸುತ್ತಿರ್ದ ಅಂತರಾತ್ಮನು ಚೈತನ್ಯ ಸ್ವರೂಪವಾದ ಪ್ರಾಣಲಿಂಗವ ಧರಿಸಿಕೊಂಡಿಹುದೆಂಬುದೀಗ, ಉಳುವ ಬೆನ್ನೆತ್ತ ಎಂಬ ಶಬ್ದಕ್ಕರ್ಥ. ಅಮೃತ-ಕುಂಭ ಸ್ವರೂಪಿನಿಂದೊಪ್ಪುತ್ತಿರ್ದ ಚಿದ್‌ಘನಲಿಂಗವ ಸದ್ವಿವೇಕ ಮುಖದಿಂ ಸ್ವೀಕರಿಸುತ್ತಿಹುದು ಉನ್ಮನಿ ತತ್ವ ಸ್ವರೂಪವಾದ ಮನಸ್ಸೆಂಬುದೀಗ, ಮೊಲೆಯುಂಬ ಕರುವ ಎಂಬ ಶಬ್ದಕ್ಕರ್ಥ. ಆ ಸಚ್ಚಿದಾನಂದ ಸ್ವರೂಪವಾದ ಪರಬ್ರಹ್ಮವೇ ನನಗೆ ಪ್ರಾಣ. ಆ ಪರಬ್ರಹ್ಮಕ್ಕೆ ನಾನು ಚಿತ್‌ಪ್ರಭಾಂಗ ಸ್ವರೂಪನೆಂದರಿದ ಶರಣಂಗಲ್ಲದೆ ಜೀವಾತರಾತ್ಮ ಮನಸ್ಸು ಸಕಲ ತತ್ವಂಗಳನು ಲಿಂಗದಲ್ಲಿ ಸಮರಸವನೆಯ್ದಿಸಬಾರದೆಂಬುದೀಗ, ಕುರುಹನರಿಯದೆ ಕಾಯಬಹುದೆ? ಎಂಬ ಶಬ್ದಕ್ಕರ್ಥ. ಆ ಜೀವಂತರಾತ್ಮ ಮನಸ್ಸು ಈ ತ್ರಿವಿಧವ ನಿವೃತ್ತಿಯ ಮಾಡಿ ಪರಬ್ರಹ್ಮವೆ ಗುರು, ಗುರುವೇ ಪರಬ್ರಹ್ಮವೆಂದರಿದು ಆ ಶ್ರೀಗುರು ತತ್ವದಲ್ಲಿ ತನ್ನಂಗವ ಬೆರಸಬೇಕೆಂಬುದೀಗ, ಈ ತ್ರಿವಿಧವಿಲ್ಲದೆ ಗುರುವಿನ ಇರುವ ಎಂಬ ಶಬ್ದಕ್ಕರ್ಥ. ಚೈತನ್ಯಸ್ವರೂಪವಾದ ಪ್ರಾಣಲಿಂಗದಲ್ಲಿ ತನ್ನ ಮನಸ್ಸು ಧ್ಯಾನಾರೂಢತ್ವದಿಂ ನಿಷ್ಪತಿಯ ನೆಯ್ದಿತ್ತೆಂಬುದೀಗ, ಲಿಂಗ ಮೂರ್ತಿಯ ಧ್ಯಾನವ ಎಂಬ ಶಬ್ದಕ್ಕರ್ಥ. ಆ ಚೈತನ್ಯ ಸ್ವರೂಪವಾದ ಪ್ರಾಣಲಿಂಗವು ಚಿತ್ಪ್ರಾಣಲಿಂಗಿಯನೊಳಕೊಂಡು ಪ್ರಕಾಶಿಸುತ್ತಿಹುದೆಂಬುದೀಗ, ಪ್ರಾಣಲಿಂಗ ಸಂಬಂಧವಪ್ಪುದು ಗೋಪತಿನಾಥ ವಿಶ್ವೇಶ್ವರ ಲಿಂಗವ ನರಿವುದಕ್ಕೆ ಇದೇ ಪ್ರಮಾಣು ಎಂಬ ಶಬ್ದಕ್ಕರ್ಥ.

೬

ಹಸುವಿಂಗೆ ಸಂಜ್ಞೆ, ಎತ್ತಿಂಗೆ ಮುಟ್ಟು ಕರುವಿಂಗೆ ಲಲ್ಲೆ
ಇಂತಿ ತ್ರಿಗುಣದ ಇರವ, ತ್ರಿಗುಣಾತ್ಮಕ ಭೇದವ, ತ್ರಿಗುಣ ಭಕ್ತಿಯ
ತ್ರಿಗುಣ ಘಟ-ಪಟಾದಿಗಳ, ತ್ರಿಗುಣಮಲ-ನಿರ್ಮಲಂಗಳ
ತ್ರಿಗುಣ ಸ್ವಯ ಚರ ಪರಂಗಳಲ್ಲಿ ತ್ರಿವಿಧ ಶಕ್ತಿ, ತ್ರಿವಿಧ ಮುಕ್ತಿ
ಇಂತಿ ತ್ರಿವಿಧಂಗಳೊಳಗಾಗಿ ಉತ್ಪತ್ಯ, ಸ್ಥಿತಿ, ಲಯ ತ್ರಿವಿಧದ
ಹೆಚ್ಚು ಕುಂದನರಿತು, ಎತ್ತು ಹಸುವಿನ ಸಂಗದಿಂದ
ಕರುವಾದ ತೆರನರಿತು
ಇಂತಿ ಒಂದರಲ್ಲಿ ಒಂದುಗೂಡಲಿಕ್ಕೆ ಬಿಂದುನಿಂದು
ಕುರುಹಾದುದ ಕಂಡು
ನೆನದು ನೆನಹಿಸಿಕೊಂಬುದದೇನೆಂದು ತಿಳಿದು
ಇಂತಿ ಅಂಡ-ಪಿಂಡಂಗಳಲ್ಲಿ ನಿರಾತ್ಮನು ಆತ್ಮನಾಗಿ
ನಾನಾರೆಂಬುದ ತಾನರಿದು ತಿಳಿದಲ್ಲಿ ತುರುಮಂದೆಯೊಳಗಾಯಿತ್ತು
ಇದು ಗೋಪತಿನಾಥನ ಕೂಟ ವಿಶ್ವನಾಥ ಲಿಂಗದ
ಲೀಲಾಭಾವದಾಟ.

ಟೀಕು:— ಸುಜ್ಞಾನೋದಯವಾಗಿ ಗುರೋಪಾವಸ್ಥೆಯ ಮಾಡುವ ಸಜ್ಜೀವರಿಗೆ ಶ್ರೀ ಗುರು ಕರುಣಿಸಿ ಕ್ರಿಯಾದೀಕ್ಷೆಯಿಂದ ಅಂಗಕ್ಕೆ ಆಚಾರ ಸಂಬಂಧವ ಮಾಡಿದನೆಂಬುದೀಗ, ಹಸುವಿಂಗೆ ಸಂಜ್ಞೆ ಎಂಬ ಶಬ್ದಕ್ಕರ್ಥ. ಅಂತರಾತ್ಮಂಗೆ ಜ್ಞಾನ ಗುರು ಕರುಣಿಸಿ ಮಂತ್ರದೀಕ್ಷೆಯ ಮಾಡಿ ಸುಜ್ಞಾನವ ನೆಲೆಗೊಳಿಸಿದನೆಂಬುದೀಗ, ಎತ್ತಿಂಗೆ ಮುಟ್ಟು ಎಂಬ ಶಬ್ದಕ್ಕರ್ಥ. ಮನಸ್ಸಿಂಗೆ ಮಹಾಜ್ಞಾನ ಗುರು ಹಸ್ತ ಮಸ್ತಕ ಸಂಯೋಗದಿಂದ ವೇದದೀಕ್ಷೆಯ ಮಾಡಿ ನಿನ್ನ ನಿಜವೆ ಪರಬ್ರಹ್ಮವೆಂದರುಹಿದನೆಂಬುದೀಗ, ಕರುವಿಂಗೆ ಲಲ್ಲೆಯೆಂಬ ಶಬ್ದಕ್ಕರ್ಥ. ದೀಕ್ಷತ್ರಯಂಗಳ ಸ್ವರೂಪವೆಂಬುದೀಗ, ಇಂತಿ ತ್ರಿಗುಣದಿರವನೆಂಬ ಶಬ್ದಕ್ಕರ್ಥ, ಗುಣತ್ರಯಂಗಳಲ್ಲಿ ಕೂಡಿದಾತ್ಮನ ಸುಜ್ಞಾನ ಮುಖದಿಂದ ನಿವೃತ್ತಿಮಾಡಿ ಎಂಬುದೀಗ, ತ್ರಿಗುಣಾತ್ಮಕ ಭೇದವ ಎಂಬ ಶಬ್ದಕ್ಕರ್ಥ. ವೃತ್ತಿಮಾರ್ಗವ ನೆಯ್ದಿದ ಜ್ಞಾನಕಲಾತ್ಮನಲ್ಲಿ ಶ್ರೀ ಗುರು ಕಾರುಣ್ಯದಿಂದ ತ್ರಿವಿಧಭಕ್ತಿ ಸಂಬಂಧ ವಹದೆಂಬುದೀಗ, ತ್ರಿಗುಣಭಕ್ತಿಯ ಎಂಬ ಶಬ್ದಕ್ಕರ್ಥ. ಘಟದೊಳಗಿನ ಬಯಲಿನಂತೆ ಪಟದೊಳಗಿನ ಸೂತ್ರದಂತೆ ಹರುಕಿಲ್ಲದೆ ಶರಣನ ಅಂಗತ್ರಯಂಗಳನೊಳಕೊಂಡು ತ್ರಿವಿಧಭಕ್ತಿಕ್ರಿಯೆ ತೋರುತ್ತಿಹುದೆಂಬುದೀಗ, ತ್ರಿಗುಣ ಘಟಪಟಾದಿಗಳ ಎಂಬ ಶಬ್ದಕ್ಕರ್ಥ. ಆಣವಾದಿ ಮಲತ್ರಯಂಗಳು ನಿವೃತ್ತಿಯಾದವೆಂಬುದೀಗ, ತ್ರಿಗುಣಮಲ-ನಿರ್ಮಲಂಗಳ ಎಂಬ ಶಬ್ಧಕ್ಕರ್ಥ. ಚರಲಿಂಗತ್ರಯದ ನಿಜಸ್ವರೂಪವ ನರಿವುತ್ತಿಹನೆಂಬುದೀಗ, ತ್ರಿಗುಣ ಸ್ವಯ-ಚರ-ಪರಂಗಳಲ್ಲಿ ಎಂಬ

ಶಬ್ದಕ್ಕರ್ಥ. ಇಚ್ಛಾ ಜ್ಞಾನ ಕ್ರೀಯೆಂಬ ತ್ರಿವಿಧಶಕ್ತಿಗಳ ಭೇದವನರಿದನೆಂಬುದೀಗ, ತ್ರಿವಿಧಶಕ್ತಿಯೆಂಬ ಶಬ್ದಕ್ಕರ್ಥ. ಲಿಂಗಪ್ರಾಣತ್ವ, ಪ್ರಾಣಲಿಂಗತ್ವ, ಪ್ರಸಾದ ಮುಕ್ತತ್ವವೆಂಬ ಮುಕ್ತಿತ್ರಯದ ಭೇದವನರಿದನೆಂಬುದೀಗ, ತ್ರಿವಿಧ ಮುಕ್ತಿಯು ಎಂಬ ಶಬ್ದಕ್ಕರ್ಥ. ಇಂತಿವೆಲ್ಲವ ಸಂಗವ ಮಾಡಿಕೊಂಡಿರ್ಪ ಶರಣನು ಉತ್ಪತ್ತ್ಯದ ಹೆಚ್ಚುಗೆಯನು ಮರಣದ ಕಡಿಮೆಯನು ಸ್ಥಿತಿಮುಖ್ಯವಾದ ತ್ರಿವಿಧವ ನಿವೃತ್ತಿಮಾಡಿ ಪರಶಿವ ತತ್ವದಲ್ಲಿ ಬೆರಸಬೇಕೆಂಬ ಮುಕ್ತಿ-ಭಕ್ತಿಭಾವವ ಮುಂದುಗೊಂಡು ಗುರೋಪಾವಸ್ಥೆಯಮಾಡಲು ಅಂತರಂಗದ ಅವಿರಳಜ್ಞಾನ ಚಿತ್ತೇ ಗುರುಸ್ವರೂಪವಾಗಿಬಂದು ಸಜ್ಜೀವಸ್ವರೂಪನಾದ ಶಿಷ್ಯನಲ್ಲಿ, ಅವಿರಳ ಸಂಗಯೋಗವ ಮಾಡಲು ಅಲ್ಲಿ ಅಂತರ್ಗತವಾಗಿರ್ಪ ಚಿತ್ ಪ್ರಭಾಲಿಂಗವೇ ಬಹಿಷ್ಕರಿಸಿ ಕರಸ್ಥಲಕ್ಕೆ ಇಷ್ಟಲಿಂಗ ಸ್ವರೂಪವಾಗಿ ಬಂದಿತ್ತೆಂಬುದೀಗ, ಇಂತಿ ತ್ರಿವಿಧಂಗಳೊಳಗಾಗಿ ಉತ್ಪತ್ತ್ಯ-ಸ್ಥಿತಿ-ಲಯತ್ರಿವಿಧದ ಹೆಚ್ಚುಕುಂದವನರಿತು ಎತ್ತು ಹಸುವಿನ ಸಂಗದಿಂದ ಕರುವಾದ ತೆರನಅರಿತು ಎಂಬ ಶಬ್ದಕ್ಕರ್ಥ. ಆ ಗುರು ತತ್ವವು ಶಿಷ್ಯನಲ್ಲಡಗಿ ಆ ಶಿಷ್ಯನೇ ಗುರುತತ್ವದಲ್ಲಡಗಿ ಇಬ್ಬರ ಸಂಗಯೋಗದಿಂದ ಚಿದ್ಬಿಂದು ಘಟ್ಟಿಗೊಂಡು ಸಾಕಾರವಾದ ಭೇದವ ನರಿಪನೆಂಬುದೀಗ, ಇಂತಿ ಒಂದರಲ್ಲಿ ಒಂದು ಕೂಡಲಿಕ್ಕೆ ಬಂದು ಕುರುಹಾದುದಕಂಡು ಎಂಬ ಶಬ್ದಕ್ಕರ್ಥ. ತನ್ನ ಪ್ರಾಣ ಸ್ವರೂಪವಾದ ಪರಬ್ರಹ್ಮವ ಅನನ್ಯಭಾವದಿಂದ ಭಾವಿಸುವ ಶರಣನು ಭಾವಿಸಿಕೊಂಬ ವಸ್ತುವು ಎರಡಾದುದು ಒಂದೇ ಪರಬ್ರಹ್ಮವೆಂದರಿದನೆಂಬುದೀಗ, ನೆನಮುನೆನಹಿಸಿಕೊಂಬುದಕೇನೆಂದು ತಿಳಿದು ಎಂಬ ಶಬ್ದಕ್ಕರ್ಥ. ಶಿವಾಂಶೀಕನಾದಾತ್ಮನು ದೇಹ ಸಂಬಂಧಿಯಾಗಿ ಉತ್ಪತ್ತ್ಯಕ್ಕೆ ಬಂದೆನಲ್ಲಾ ಎಂದು ತನ್ನ ಶಿವಜ್ಞಾನದಿಂದ ಎಚ್ಚತ್ತು ನೋಡಲು ಸಕಲತತ್ವ ಕರಣಂಗಳೆಲ್ಲವು ತನ್ನಾಚಾರದಲ್ಲಿ ಸಮರಸವಾದವೆಂಬುದೀಗ, ಇಂತಿ ಅಂಡ ಪಿಂಡಂಗಳಲ್ಲಿ ನಿರಾತ್ಮನು ಆತ್ಮನಾಗಿ ನಾನಾರೆಂಬುದ ತಾನರಿದು ತಿಳಿದಲ್ಲಿ ತುರುಮುಂದೆಯೊಳಗಾಯಿತ್ತು ಗೋಪತಿನಾಥನಕೂಟ ವಿಶ್ವನಾಥಲಿಂಗದ ಲೀಲಾಭಾವದಾಟವೆಂಬ ಶಬ್ದಕ್ಕರ್ಥ.

೭

ಉತ್ಪತ್ತ್ಯವೆಂಬ ಪಶುವಿನ ಮೇಲೆ ಸ್ಥಿತಿಯೆಂಬ ವೃಷಭ ಏರಿತಲ್ಲ !
ಸ್ವಸ್ಥಾನವಾಗಿ ಸುಖದ ಸುಗ್ಗಿಯಿಂದ ಬಿಂದು ನಿಂದು
ಕರು ಹುಟ್ಟಿತಲ್ಲ !
ಕರು ಉದಯವಾಗಿ ಕರಿಗೊಂಡಡೆ ಲಲ್ಲೆಯಿಂದ
ಕ್ಷೀರ ಆವು ನಿಲ್ಲದಿದ್ದೊಡೆ ಓರೆಯಾಯಿತ್ತಲ್ಲ
ಇಂತಿ ಅರವು ಕರಿಗೊಂಡ ಭೇದ ಇಂತಿ ಅರಿದು
ಬರುದೊರೆ ಹೋದ ಭೇದ
ಇಂತಿ ಜ್ಞಾನ ನೇತ್ರ ಗೋಪತಿನಾಥ ವಿಶ್ವೇಶ್ವರ ಲಿಂಗದಲ್ಲಿ
ತುರುಗಾಹಿ ರಾಮನ ಮಾತು.

**ಟೀಕು:**— ಸುಜ್ಞಾನೋದಯುವಾದ ಶಿಷ್ಯನೆಂಬುದೀಗ, ಉತ್ಪತ್ಯವೆಂಬ ಪಶುವಿನ ಮೇಲೆ ಎಂಬ ಶಬ್ದಕ್ಕರ್ಥ. ಚಿತ್ ಸ್ವರೂಪನಾದ ಶ್ರೀಗುರು ಆ ಶಿಷ್ಯನಲ್ಲಿ ಅವಿರಳ ಸಂಗವ ಮಾಡಿದನೆಂಬುದೀಗ, ಸ್ಥಿತಿಯೆಂಬ ವೃಷಭ ಏರಿತಲ್ಲ! ಎಂಬ ಶಬ್ದಕ್ಕರ್ಥ. ಆ ಶಿಷ್ಯನ ಸರ್ವಾಂಗವೆಲ್ಲ ಶಿವಭಾವದಲ್ಲಿ ಸ್ವಸ್ಥಿರವಾಗಿ ಸುಖದ, ಪರಮ ಹರುಷದ, ಸಂತೋಷದ ಹೆಚ್ಚುಗೆಯಿಂದ ಚಿದ್ಬಿಂದು ಘಟ್ಟಿಗೊಂಡು ಶ್ರೀಗುರುವಿನ ಭಾವ, ಮನ, ದೃಕ್ಕನೊಳಗೊಂಡು ಕರಸ್ಥಲಕ್ಕೆ ಇಷ್ಟವಾಗಿ ಉದಯಿಸಿತ್ತೆಂಬುದೀಗ, ಸ್ವಸ್ಥಾನವಾಗಿ ಸುಖದ ಸುಗ್ಗಿಯಿಂದ ಬಿಂದು ನಿಂದು ಕರು ಹುಟ್ಟಿತಲ್ಲ ಎಂಬ ಶಬ್ದಕ್ಕರ್ಥ. ಶರಣ ಸತಿ, ಲಿಂಗಪತಿ ಭಾವದಿಂದ ಸುಜ್ಞಾನವಿಡಿದಾಚರಿಸಿ ಅಂಗ-ಮನ-ಭಾವಂಗಳ ಲಿಂಗದಲ್ಲಿ ಏಕಾರ್ಥವ ಮಾಡಿ ಅತಿರತಿ ಪ್ರೀತಿಯಿಂದಿರಲು ಶರಣಂಗೆ ಪರಮಾಮೃತ ರಸ ಫಲಿಸುತ್ತಿರಲು ಎಂಬುದೀಗ, ಕರು ಉದಯವಾಗಿ ಕರಿಗೊಂಡಡೆ ಲಲ್ಲೆಯಿಂದ ಕ್ಷೀರವೆಂಬ ಶಬ್ದಕ್ಕರ್ಥ. ಲಿಂಗದಲ್ಲಿ ವಿಶ್ವಾಸ ಘಟಿಸಿ ಸರ್ವಕ್ರಿಯೋಪಚಾರಂಗಳ ಮಾಡಿ ಆ ಲಿಂಗದ ಕೃಪೆಯನು ಪಡೆಯಲರಿಯದೆ ಅರಿವಿನಿಂದಹಂ ಮೊನಲಲ್ಲಿ ಲಿಂಗದ ಕೃಪೆ ತಪ್ಪಿ ಭಿನ್ನವಾಯಿತ್ತೆಂಬುದೀಗ, ಅವು ಒಲ್ಲದಿರ್ದಡೆ ಓರೆಯಾಯಿತ್ತಲ್ಲ ಎಂಬ ಶಬ್ದಕ್ಕರ್ಥ. ಸತ್ಕ್ರೀ ವಿಡಿದಾಚರಿಸಿ ಅರಿವು ಚಿದ್ಘನಲಿಂಗದಲ್ಲಿ ನಿಷ್ಪತ್ತಿಯಾದುದೆ ಭಕ್ತಿಕಾಂಡವೆಂಬುದೀಗ, ಇಂತಿ ಅರಿವು ಕರಿಗೊಂಡ ಭೇದವೆಂಬ ಶಬ್ದಕ್ಕರ್ಥ. ತಮ್ಮ ಕರಸ್ಥಲದಲ್ಲಿ ಲಿಂಗ ಸಂಬಂಧವಾಗಿರ್ದ ಆ ಲಿಂಗದಲ್ಲಿ ವಿಶ್ವಾಸ ಘಟಿಸದೆ ಅಹಂಮೆಂದು ಭವ ಸಮುದ್ರಕ್ಕೀಡಾಗಿ ಹೋದರು ಅದ್ವೈತಿಗಳೆಂಬುದೀಗ, ಇಂತಿ ಅಂದು ಬರುದೊರೆ ಹೋದ ಭೇದವೆಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣನ ಸ್ವಾನುಭಾವ ದೃಷ್ಟಿಯು ಚಿದ್ಘನ ಲಿಂಗದಲ್ಲಿ ಹರುಕಿಲ್ಲದೆ ಏಕಾರ್ಥವಾಗಿಹುದೆಂಬುದೀಗ, ಇಂತಿ ಜ್ಞಾನ ನೇತ್ರ ಸೂತ್ರ ಗೋಪತಿನಾಥ ವಿಶ್ವೇಶ್ವರ ಲಿಂಗದಲ್ಲಿ ತುರುಗಾಹಿರಾಮನ ಮಾತು ಎಂಬ ಶಬ್ದಕ್ಕರ್ಥ.

೮

ಉದಯದಲ್ಲಿ ಬ್ರಹ್ಮನ ಕಾವೆ, ಮಧ್ಯಾಹ್ನಕ್ಕೆ ವಿಷ್ಣುವಿನ ಕಾವೆ,
ಅಸ್ತಮಾನದಲ್ಲಿ ರುದ್ರನ ಕಾವೆ, ಕತ್ತಲೆಯಾದ ಮತ್ತೆ
ತಮ್ಮ ತಮ್ಮ ಮಂದಿಗೆ ಹೊಡೆದು ಈ ಕಾವ ಕಟ್ಟಿಗೆಯ
ನಿನ್ನೊಂದಿಗೆ ಬಿಡುವೆ
ಗೋಪತಿನಾಥ ವಿಶ್ವೇಶ್ವರ ಲಿಂಗವು ನಷ್ಟವಾಹನ್ನಕ್ಕ
ಎನ್ನ ಕೈ ಕಟ್ಟಿಗೆ ಬಿಡದು

**ಟೀಕು:**— ದೇಹ ಸಂಬಂಧಿಯಾಗಿರ್ದಾತ್ಮಂಗೆ ಶ್ರೀಗುರುಕಾರುಣ್ಯದಿಂದ ಶಿವಜ್ಞಾನೋದಯವಾಗಲು ಸಕಲ ಪ್ರಪಂಚ ನಿವೃತ್ತಿಮಾಡಿ ಶ್ರೀಗುರೋಪಾವಸ್ಥೆಯ ಮಾಡಿದಲ್ಲಿ ಆ ಗುರು ಕರುಣಿಸಿ ತನ್ನ ಆಚಾರಂಗದಲ್ಲಿ ಇಷ್ಟಲಿಂಗ ಸಂಬಂಧವ ಮಾಡಲು ಆ ಲಿಂಗಕ್ಕೆ ಅಷ್ಟ ವಿಧಾರ್ಚನೆ ಷೋಡಶೋಪಚಾರವ

ಮಾಡುತ್ತಿಹನೆಂಬುದೀಗ, ಉದಯದಲ್ಲಿ ಬ್ರಹ್ಮನ ಕಾವೆ ಎಂಬ ಶಬ್ದಕ್ಕರ್ಥ. ತನ್ನ ನಿಜಾಂತರಂಗದ ಸುಜ್ಞಾನದಲ್ಲಿ ಪ್ರಾಣಲಿಂಗ ಸಂಬಂಧವ ಮಾಡಿಕೊಂಡು ನಿರ್ಗುಣ ಪೂಜೆಯ ಮಾಡುತ್ತಿರ್ದನೆಂಬುದೀಗ, ಮಧ್ಯಾಹ್ನಕ್ಕೆ ವಿಷ್ಣುವಿನ ಕಾವು ಎಂಬ ಶಬ್ದಕ್ಕರ್ಥ. ತನ್ನ ನಿಜ ಸುಷುಪ್ತಿಯ ಭಾವದಲ್ಲಿ ತೃಪ್ತಿ ಲಿಂಗವ ಸಂಬಂಧವ ಮಾಡಿ ಮನೋಲಯ ನಿರಂಜನ ಪೂಜೆಗಳ ಮಾಡುತ್ತಿರ್ದನೆಂಬುದೀಗ, ಅಸ್ತಮಾನದಲ್ಲಿ ರುದ್ರನ ಕಾವೆಂಬ ಶಬ್ದಕ್ಕರ್ಥ. ಚಿದ್ರೂಪನಾದ ಶರಣನ ತ್ಯಾಗಾಂಗ–ಭೋಗಾಂಗ–ಯೋಗಾಂಗವೆಂಬ ತ್ರಯಾಂಗ ಸ್ಥಲವು ಇಷ್ಟ-ಪ್ರಾಣ-ಭಾವವೆಂಬ ಲಿಂಗತ್ರಯದಲ್ಲಿ ಸಮರಸವಾಗಿ ಆ ಲಿಂಗತ್ರಯವು ಅಂಗತ್ರಯವನೊಳಕೊಂಡು ಲಿಂಗಾಂಗವೆರಡೂ ಸಮರಸವಾದ ಪರಿಪೂರ್ಣ ಜ್ಞಾನದ ಪರಮಕಾಷ್ಠೆಯ ಪರವಶದಲ್ಲಿ ಎಂಬುದೀಗ, ಕತ್ತಲೆಯಾದ ಮತ್ತೆ ತಮ್ಮ ತಮ್ಮ ಮಂದಿಗೆ ಹೋದವು ಎಂಬ ಶಬ್ದಕ್ಕರ್ಥ. ಶರಣ ತನ್ನ ಆಚಾರದಲ್ಲಿ ಸಕಲ ಕರಣಂಗಳ ಸಮರಸವ ಮಾಡಿ ತನ್ನ ಶಿವಭಾವವನು ಚಿತ್ ಪ್ರಕಾಶವಾದ ಮಹಾ ಘನಲಿಂಗದಲ್ಲಿ ನಿಷ್ಪತ್ತಿಯನೆಯ್ದಿ ನಚೀಕೆಂಬ ತೂರ್ಯಾವಸ್ಥೆಯಲ್ಲಿರ್ದನೆಂಬುದೀಗ, ಈ ಕಾವ ಕಟ್ಟಿಗೆಯ ನಿನ್ನೊಂದಿಗೆ ಬಿಡುವೆ ಗೋಪತಿನಾಥ ವಿಶ್ವೇಶ್ವರಲಿಂಗವು ನಷ್ಟವಪ್ಪನ್ನಕ್ಕ ಎನ್ನ ಕೈಯ ಕಟ್ಟಿಗೆಯ ಬಿಡದು ಎಂಬ ಶಬ್ದಕ್ಕರ್ಥ.

೯

ಹಸುವ ಕಾವಲ್ಲಿ ದೆಸೆಯ ನರಿತು, ಎತ್ತ ಕಾವಲ್ಲಿ ಪೃಥ್ವಿಯನರಿತು
ಕರುವ ಕಟ್ಟುವಲ್ಲಿ ಗೊತ್ತ ಕಂಡು ದನವ ಕಾವಲ್ಲಿ ಸಜ್ಜನನಾಗಿ
ಜೀವದನವ ಕಂಡಲ್ಲಿ ಮನ ಮುಟ್ಟದೆ ಇಂತಿ ಭೇದೇಂದ್ರಿಯಂಗಳ
ತುರು ಮಂದೆಯಲ್ಲಿ ಕರು ಕಡಸು ಎತ್ತು ಹಸುವಿನಲ್ಲಿ ಚಿತ್ರವರ್ಣವ
ಅರಿಯಬೇಕು, ಗೋಪತಿನಾಥ ವಿಶ್ವೇಶ್ವರ ಲಿಂಗವ ನರಿವುದಕ್ಕೆ

ಟೀಕು:— ಸುಜ್ಞಾನೋದಯವಾದ ಶರಣನು ಅನ್ಯವಾದ ಮಾಯಾ ಪ್ರಪಂಚದತ್ತ ಹೋಗದ ಹಾಗೆ ಆ ಸಜ್ಜೀವನ ಇಷ್ಟಲಿಂಗದ ಸತ್ಕ್ರಿಯಾಚಾರದಲ್ಲಿ ಇರಿಸಿ ಆ ಲಿಂಗವೇ ತನ್ನ ಪ್ರಾಣಚೈತನ್ಯಸ್ವರೂಪವೆಂದೆಂಬುದೀಗ, ಪರಿಯುತ್ತಿರ್ದ ಹಸುವ ಕಾವಲ್ಲಿ ದೆಸೆಯನರಿತು ಎಂಬ ಶಬ್ದಕ್ಕರ್ಥ. ಅಂತು ಇಷ್ಟಲಿಂಗದ ಸತ್ಕ್ರಿಯಾಚಾರದಲ್ಲಿ ತತ್ಪರನಾದ ಶರಣನು ಅಂತರಾತ್ಮನ ವರ್ತನೆಯ ಮಹಾನುಭಾವ ಬೋಧೆಯಿಂದ ಬೋಧಿಸಿ ನಿವೃತ್ತಿಯ ಮಾಡಿ ಆ ಜ್ಞಾನ ಕಲಾತ್ಮನಲ್ಲಿ ಪ್ರಾಣಲಿಂಗ ಸಂಬಂಧವ ಮಾಡಿ ಆ ಚಿದ್ ಘನಲಿಂಗಕ್ಕೆ ಚಿತ್ಪ್ರಭಾಂಗ ಸ್ವರೂಪನೆಂದರಿದನೆಂಬುದೀಗ, ಎತ್ತ ಕಾವಲ್ಲಿ ಪೃಥ್ವಿಯನರಿತು ಎಂಬ ಶಬ್ದಕ್ಕರ್ಥ. ಆ ಪ್ರಾಣಲಿಂಗಕ್ಕೆ ಚಿದಂಗ ಸ್ವರೂಪನೆಂದರಿದ ಶರಣನು ಕರುವೆಂದೊಡೆ ಮನಸ್ಸು, ಆ ಮನೋವರ್ತನೆಯ ಸುಜ್ಞಾನ ಬೋಧೆಯಿಂ ಕೆಡಿಸಿ ಉನ್ಮನಿತತ್ವ ಸ್ವರೂಪವ ಮಾಡಿ ಶಿವಧ್ಯಾನದಲ್ಲಿ ಸ್ಥಿರಗೊಳಿಸಿದನೆಂಬುದೀಗ, ಕರು ಕಟ್ಟುವಲ್ಲಿ ಗೊತ್ತ ಕಂಡು ಎಂಬ ಶಬ್ದಕ್ಕರ್ಥ. ಅಂತು ಜೀವ–ಅಂತರಾತ್ಮ–ಮನಸ್ಸು ಇವರ ವರ್ತ

ನೆಯು ನಷ್ಟವ ಮಾಡುವಲ್ಲಿ ಗುರುಲಿಂಗ ಜಂಗಮವಲ್ಲದೆ ಅಂತಃ ಪರವಿಲ್ಲವೆಂದ ರಿಯಲಿಕ್ಕಾಗಿ ಎಂಬುದೀಗ, ದನ ಕಾವಲ್ಲಿ ಸಜ್ಜನನಾಗಿ ಎಂಬ ಶಬ್ದಕ್ಕರ್ಥ. ಅಂತು ಗುರು-ಲಿಂಗ-ಜಂಗಮದಲ್ಲಿ ವಿಶ್ವಾಸ ಘಟಿಸಿದ ಶರಣನು ಆತ್ಮ ಜ್ಞಾನಿಗಳ ಕಂಡಲ್ಲಿ ಅವರವರಾನೊಂದು ಅಹಂಬ್ರಹ್ಮನೆಂಬ ಅದ್ವೈತ ಜ್ಞಾನ ಬೋಧೆಯ ಕೇಳಬೇಕೆಂದು ಇಚ್ಛಿಸದೆ ಎಂಬುದೀಗ, ಜೀವ ದನವ ಕಂಡಲ್ಲಿ ಮನ ಮುಟ್ಟದೆ ಎಂಬ ಶಬ್ದಕ್ಕರ್ಥ. ಅಂತು ಅದ್ವೈತ ಜ್ಞಾನನ ನಿವೃತ್ತಿ ಮಾಡಿದ ಪರಿಪೂರ್ಣ ಜ್ಞಾನಿಯಾದ ಶರಣನ ಜ್ಞಾನ ಕರ್ಮೇಂದ್ರಿಯಂಗಳ ಭೇದವ ತಿಳಿದು ಲಿಂಗ ಸಂಬಂಧವ ಮಾಡಿ ಸಕಲ ಕರಣಂಗಳ ಜ್ಞಾನ ಕರಣಂಗಳ ಮಾಡಿ ಜ್ಞಾನ ಕ್ರಿಯಾಚಾರದಲ್ಲಿ ಬೆರೆಸಿ ಏಕಾರ್ಥವಾಯಿತ್ತೆಂಬುದೀಗ, ಇಂತಿ ಭೇದೇಂದ್ರಿಯಂಗಳ ತುರುವುಂಡೆಯಲ್ಲಿ ಎಂಬ ಶಬ್ದಕ್ಕರ್ಥ. ಆ ಸಕಲ ಕರಣಂಗಳ ತನ್ನ ಆಚಾರದಲ್ಲಿ ಸಂಬಂಧಿಸಿದ ಶರಣನ ಮನಸ್ಸು ಶಿವಭಾವ ಜ್ಞಾನ ಕಲಾತ್ಮನು ಸಜ್ಜೀವನು ಇವೆಲ್ಲವು ಪ್ರಣವ ಮಂತ್ರ ಸ್ವರೂಪಿನಿಂದ ಅರಿಯಬೇಕೆಂಬುದೀಗ, ಕರು ಕಡಸು ಎತ್ತು ಪಸುವಿನಲ್ಲಿ ಚಿತ್ರವರ್ಣವ ನರಿಯಬೇಕು ಗೋಪತಿನಾಥ ವಿಶ್ವೇಶ್ವರ ಲಿಂಗವನರಿವುದಕ್ಕೆ ಎಂಬ ಶಬ್ದಕ್ಕರ್ಥ.

೧೦

ಶ್ವೇತ, ಪೀತ, ಕಪೋತ, ಕೃಷ್ಣ, ಗೌರ, ವರಮಾಂಜಿಷ್ಣ,
ಕಪಿಲ, ಕರ್ಬುರ, ಅಳಗ, ಬೊಟ್ಟಳಗ,
ಇಂತಿ ದಶವರ್ಣದ ಪಶುನಾಮದ ಅಸುವ ನರಿತು
ಸಂಜ್ಞೆ, ಗರ್ಜನೆ, ತ್ರಾಡನೆ ತ್ರಿವಿಧ ಭೇದಂಗಳಿಂದ
ಕಾಯಿದೊಪ್ಪಿಸಬೇಕು ಗೋಪತಿನಾಥ ವಿಶ್ವೇಶ್ವರ ಲಿಂಗಕ್ಕೆ

ಟೀಕು:— ದಶವರ್ಣದ ದಶವಾಯು ವಿಕಾರದಲ್ಲಿ ಪಶುಭಾವಿಯಾಗಿರ್ದ ಜೀವಂಗೆ ಸುಜ್ಞಾನೋದಯವಾಗಿ ಶಿವಭಾವಘಟಿಸಲು ದಶವಾಯು ವಿಕಾರ ವಳಿವ ಗುರೋಪಾವಸ್ಥೆಯ ಮಾಡಲು ಶ್ರೀ ಗುರುಕರುಣಿಸಿ ದೀಕ್ಷತ್ರಯಂಗಳಿಂದ ಲಿಂಗತ್ರಯ ಸಂಬಂಧವ ಮಾಡಲು ಶರಣನ ಸರ್ವಾಂಗವು ಆ ಲಿಂಗದಲ್ಲಿ ಏಕಾರ್ಥವಾಯಿತೆಂಬುದೇ ಈ ವಚನದ ತಾತ್ಪರ್ಯವು.

೧೧

ಕೊಬಾ ಎಂಬಲ್ಲಿ ಆತ್ಮನ ಭೇದ, ಅಂಭೆ ಎಂದಲ್ಲಿ
ಅರುವಿನ ಹೊಲಧಾ ಎಂದು ನಕ್ಕಿರಿದಲ್ಲಿ ಚಿದಾತ್ಮನ ಭೇದ
ಇಂತಿ ಗುಣದ ಪಶು ಅಸುವಿನ ಬಲೆಯ
ಕಾಯಿದೊಪ್ಪಿಸಬೇಕು ಗೋಪತಿನಾಥ ವಿಶ್ವೇಶ್ವರ ಲಿಂಗಕ್ಕೆ

ಟೀಕು:— ಪಂಚಭೂತಾಶ್ರಯವಾದ ದೇಹದಲ್ಲಿ ದೇಹಿಯಾಗಿರ್ದ ಆತ್ಮಂಗೆ ಸುಜ್ಞಾನೋದಯವಾಗಲು ಸಂಸಾರ ಪ್ರಪಂಚು ನಿವೃತ್ತಿಯಮಾಡಿ ಶ್ರೀ ಗುರು

ವಿಂಗೆ ಭಕ್ತಿಯಿಂದ ಬಿನ್ನಹವ ಮಾಡುತ್ತಿರಲು ಆ ಶ್ರೀ ಗುರು ಸಚ್ಚಿದಾನಂದ ಸ್ವರೂಪವಾದ ಪರಬ್ರಹ್ಮವು ನಿನ್ನ ಸ್ವರೂಪಿನಿಂದ ಅರುಹಿ ತನ್ನತ್ತ ಅಭಿಮುಖವ ಮಾಡಿಕೊಂಡನೆಂಬುದೀಗ, ಕೊಬಾ ಎಂಬಲ್ಲಿ ಆತ್ಮನ ಭೇದವೆಂಬ ಶಬ್ದಕ್ಕರ್ಥ. ಅಂತು ಶ್ರೀ ಗುರು ಕಾರುಣ್ಯದಿಂದ ತನ್ನ ನಿಜವನರಿದ ಶಿಷ್ಯನು ಶಿವೋಹಂ-ಶಿವೋಹಂವೆಂದು ಉಪಾವಸ್ಥೆಯ ಮಾಡಲು ಆ ಶ್ರೀ ಗುರು ಕರುಣಿಸಿ ಅಂತರಂಗ ಬಹಿರಂಗದಲ್ಲಿ ಭಕ್ತಿಜ್ಞಾನವ ನೆಲೆಗೊಳಿಸಿದನೆಂಬುದೀಗ, ಅಂಭಿಎಂದಲ್ಲಿ ಅರಿವಿನ ಹೊಲನೆಂಬ ಶಬ್ದಕ್ಕರ್ಥ. ಅಂತು ಭಕ್ತಿಜ್ಞಾನ ಒಳವಟ್ಟ ದೇಹೇಂದ್ರಿಯ ವಿಷಯ ಕರಣಂಗಳು ಮುಖ್ಯವಾದ ಸಕಲ ಪ್ರಪಂಚದ ಎಂಬ ಶಬ್ದದಿಂದ ನಿವೃತ್ತಿಮಾಡಿದನೆಂಬುದೀಗ, ಥಾ ಎಂದು ಎಂಬ ಶಬ್ದಕ್ಕರ್ಥ. ಅಂತು ಸಕಲ ಪ್ರಪಂಚು ನಿವೃತ್ತಿಮಾಡಿದ ಶರಣನು ಶ್ರೀ ಗುರುಕಾರುಣ್ಯದಿಂದ ಸರ್ವಾಂಗಲಿಂಗ ಸಂಬಂಧಿಯಾಗಿ ಸೋಹಂಭಾವದಿಂದ ಪ್ರಣವ ಪಂಚಾಕ್ಷರಿಯ ಮಂತ್ರವನುಚ್ಚರಿಸುತ್ತಿರ್ದ ಜ್ಞಾನಕಲಾತ್ಮ ಭೇದವೆಂಬುದೀಗ, ನಕ್ಕಿರಿದಲ್ಲಿ ಚಿದಾತ್ಮ ಭೇದವೆಂಬ ಶಬ್ದಕ್ಕರ್ಥ. ಅಂತು ಮಾರ್ಗಕ್ರಿಯಮೀರಿದ ಕ್ರಿವಿಡಿದಾಚರಿಸುತ್ತಿರ್ದ ಸಜ್ಜೀವನ ಶಿವಾದ್ವೈತ ಭಕ್ತಿಯು ಚಿದ್ಘನಲಿಂಗದಲ್ಲಿ ಏಕಾರ್ಥವಾಯಿತ್ತೆಂಬುದೀಗ, ಇಂತಿಗುಣವ ಪಶು ಅಸುವಿನ ಬಲೆಯ ಕಾಯಿದೊಪ್ಪಿಸಬೇಕು ಗೋಪತಿನಾಥ ವಿಶ್ವೇಶ್ವರಲಿಂಗಕ್ಕೆ ಎಂಬ ಶಬ್ದಕ್ಕರ್ಥ.

೧೨

ಮೂರು ಬೆಟ್ಟದ ತಪ್ಪಲಿನ ಮಧ್ಯದಲ್ಲಿ ಆಡುವ ಹಿಡಿದು
ಮೇಯಿಸುತ್ತಿರಲಾಗಿ
ಅಡ್ಡ ಬೆಟ್ಟದಲ್ಲಿ ದೊಡ್ಡ ಹುಲಿ ಹುಟ್ಟಿ ಹಾಯಿತ್ತು ಹಸುವ
ಉದ್ದಿಯ ಬೆಟ್ಟದಲ್ಲಿ ಭದ್ರಗಜ ಬಂದು ಹೋಯಿತ್ತು
ಎತ್ತ ಮಧ್ಯದ ಬೆಟ್ಟದಲ್ಲಿ ಹುಟ್ಟಿದ ತೋಳ ಹಿಡಿಯಿತ್ತು
ಕರುವಿನ ಕೊರಳ ಹುಲಿ, ಗಜ, ತೋಳನ ಉಡು ನುಂಗಿದ್ದ ಕಂಡೆ
ಗೋಪತಿನಾಥ ವಿಶ್ವೇಶ್ವರ ಲಿಂಗವ ನರಿಯಲಾಗಿ

**ಟೀಕು:**— ರಾಜಸಹಂಕಾರ, ಸಾತ್ವಿಕಹಂಕಾರವೆಂಬ ಅಹಂಕಾರತ್ರಯ ದೊಡನೆ ಕೂಡಿದ ತನುತ್ರಯ ಯುಕ್ತವಾದ ದೇಹ, ಅಂತಪ್ಪ ದೇಹದಲ್ಲಿರ್ದ ಆತ್ಮನು ಪ್ರಾರಾಬ್ಧ ಭೋಗಸ್ಥಿತಿಯನುಂಟುಮಾಡಿಕೊಂಡು ಭೋಗಿಸುತ್ತಿರ್ದನೆಂಬುದೀಗ, ಮೂರು ಬೆಟ್ಟದ ತಪ್ಪಲಿನ ಮಧ್ಯದಲ್ಲಿ ಆಡುವ ಹಿಡಿದು ಮೇಯಿಸುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಅಂತು ಆತ್ಮನು ತನುಕರಣೇಂದ್ರಿಯಂಗಳ ಮುಂದುಗೊಂಡು ಪ್ರಾರಬ್ಧ ಭೋಗ ಸ್ಥಿತಿಯ ಭೋಗಿಸುತ್ತಿರಲು, ಅಡ್ಡಬೆಟ್ಟವೆಂದೊಡೆ ಸ್ಥೂಲತನು. ಅಂತಪ್ಪ ಸ್ಥೂಲ ದೇಹದಲ್ಲಿ ವ್ಯಾಘ್ರನು ಉದಯವಾಗಿ ಜೀವನ ಮುರಿದು ಭಕ್ಷಿಸುತ್ತಿಹನೆಂಬುದೀಗ, ಅಡ್ಡ ಬೆಟ್ಟದಲ್ಲಿ ದೊಡ್ಡ ಹುಲಿ ಹುಟ್ಟಿ ಹಾಯಿತ್ತು ಹಸುವನೆಂಬ ಶಬ್ದಕ್ಕರ್ಥ. ಉದ್ದಿಯ ಬೆಟ್ಟವೆಂದೊಡೆ, ತಾಮಸ

ಹಂಕಾರಯುಕ್ತವಾದ ಕಾರಣದೇಹ. ಅಂತಪ್ಪ ಕಾರಣದೇಹದಲ್ಲಿ ಅಹಂಕಾರವೆಂಬ ಗಜ ಹುಟ್ಟಿ ಅಂತರಾತ್ಮನ ನವಗ್ರಹಿಸಿತ್ತೆಂಬುದೀಗ, ಉದ್ವೆಯ ಬೆಟ್ಟದಲ್ಲಿ ಭದ್ರಗಜ ಬಂದು ಹೋಯಿತ್ತು ಎತ್ತನೆಂಬ ಶಬ್ದಕ್ಕರ್ಥ. ಮಧ್ಯ ಬೆಟ್ಟವೆಂದೊಡೆ, ಸಾತ್ವಿಕಹಂಕಾರದೊಡನೆ ಕೂಡಿದ ಸೂಕ್ಷ್ಮದೇಹ. ಅಂತಪ್ಪ ದೇಹದಲ್ಲಿ ಸಮಸ್ತ ವ್ಯಾಧಿಗಳಿಂ ತ್ರಾಡಿಸಲ್ಪಟ್ಟ ತೋಳ ಹುಟ್ಟಿ ಮನಸ್ಸಿನ ವ್ಯಥ ಕಂಠವನವಗ್ರಹಿಸಿತ್ತೆಂಬುದೀಗ, ಮಧ್ಯದ ಬೆಟ್ಟದಲ್ಲಿ ಹುಟ್ಟಿದ ತೋಳ ಹಿಡಿಯಿತ್ತು ಕರುವಿನ ಕೊರಳನೆಂಬ ಶಬ್ದಕ್ಕರ್ಥ. ಆ ಕಾಲವ್ಯಾಘ್ರನ ಸಮಸ್ತವ್ಯಾಧಿಯ ಅಹಂಕಾರವ ಈ ತ್ರಿವಿಧವನು ಪರಿಪೂರ್ಣ ಜ್ಞಾನವವಗ್ರಹಿಸಿ ನಿವೃತ್ತಿಮಾಡಿತ್ತೆಂಬುದೀಗ, ಹುಲಿ-ಗಜ-ತೋಳನ ಉಡು ನುಂಗಿದ್ದ ಕಂಡೆ ಗೋಪತಿನಾಥ ವಿಶ್ವೇಶ್ವರ ಲಿಂಗವ ನರಿಯಲಾಗಿ ಎಂಬ ಶಬ್ದಕ್ಕರ್ಥ.

೧೩

ಶಾಸ್ತ್ರಪ್ರಮಾಣವೆಂಬ ಬೆಟ್ಟದಲ್ಲಿ,
ವಾಚಾ ರಚನೆಯೆಂಬ ಹುಲಿ ಹುಟ್ಟಿ, ಅರಿದೆನೆಂಬ
ಹಿರಿದಪ್ಪ ಬೆಟ್ಟದಲ್ಲಿ
ಗೆಲ್ಲ ಸೋಲವೆಂಬ ಮತ್ತಗಜ ಹುಟ್ಟಿ
ಮೊನೆ ಮುಂಬರಿದು ಹರಿವ ಬೆಟ್ಟದಲ್ಲಿ ಪರಿಭ್ರಮಣವ
ತೋಳ ಹುಟ್ಟಿ
ಹುಲಿ ಹುಲ್ಲೆಯ ಕೊಂಬಿನಲ್ಲಿ ಸತ್ತು ಗಜ ಅಜವ
ಮೊಲೆಕಿನಲ್ಲಿ ಸಿಕ್ಕಿ
ತೋಳ ಉಡುವಿನ ಕಣ್ಣೊಳಡಗಿ ತುರುಹಿನ ಮುಂದೆ
ಬರಿಕೆಯುವ್ವುತ್ತಿದೆ ಗೋಪತಿನಾಥ ವಿಶ್ವೇಶ್ವರ ಲಿಂಗವ ನರಿದಿಹೆನೆಂದು

**ಟೀಕು:**— ಅನೇಕ ಶಾಸ್ತ್ರಂಗಳ ನೋಡಿಸಾಧಿಸಬೇಕೆಂಬ ಅಹಂಕಾರವ ಮುಂದುಗೊಂಡಿರ್ದನೆಂಬುದೀಗ, ಶಾಸ್ತ್ರಪ್ರಮಾಣವೆಂಬ ಬೆಟ್ಟದಲ್ಲಿ ಎಂಬ ಶಬ್ದಕ್ಕರ್ಥ. ಆ ಶಾಸ್ತ್ರಜ್ಞಾನದ ಅಹಂಕಾರವಿಡಿದು ವಾಚಾಳಕತ್ವದ ರಚನೆಯಿಂದ ನುಡಿವ ವಾಗಾದ್ವೈತವೆಲ್ಲವು ಕಾಲವ್ಯಾಘ್ರ ಸಂಬಂಧವಾಗಿರುತ್ತಿಹುದೆಂಬುದೀಗ, ವಾಚಾರಚನೆಯೆಂಬ ಹುಲಿಹುಟ್ಟಿ ಎಂಬ ಶಬ್ದಕ್ಕರ್ಥ. ಅಂತು ತತ್ವ ಮಸ್ಯಾದಿ ವಾಕ್ಯಾರ್ಥಗಳಿಂದ ಪರಬ್ರಹ್ಮವ ಅರಿದೆನೆಂಬ ಆತ್ಮಜ್ಞಾನಿಯು ಅತ್ಯುನ್ನತವಾದ ಅಹಂಕಾರದಲ್ಲಿ ಎಂಬುದೀಗ, ಅರಿದೆನೆಂಬ ಹಿರಿದಪ್ಪ ಬೆಟ್ಟದಲ್ಲಿ ಎಂಬ ಶಬ್ದಕ್ಕರ್ಥ. ಅಂತು ಆತ್ಮ ಜ್ಞಾನಿಯ ಅತ್ಯುನ್ನತವಾದ ಅಹಂಕಾರದಿಂದ ಇಹುದಲ್ಲವೆಂಬ ಮಥನವೆ ಮತ್ತಗಜವಾಗಿಹುದೆಂಬುದೀಗ, ಗೆಲ್ಲಸೋಲವೆಂಬ ಮತ್ತ ಗಜ ಹುಟ್ಟಿ ಎಂಬ ಶಬ್ದಕ್ಕರ್ಥ. ಅಂತಪ್ಪ ಅತ್ಯುನ್ನತವಾದ ತಾಮಸಹಂಕಾರದಲ್ಲಿ ಭವಾಶ್ರಯಕ್ಕೆ ಕಾರಣವಾದ ವ್ಯಾಧಿ ಹುಟ್ಟಿತ್ತೆಂಬುದೀಗ, ಮೊನೆಮುಂಬರಿದುಹರಿವ ಬೆಟ್ಟದಲ್ಲಿ ಪರಿಭ್ರಮಣವ ತೋಳಹುಟ್ಟಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹ

ಸಂಬಂಧಿಯಾಗಿರ್ದ ಜೀವಂಗೆ ಸುಜ್ಞಾನೋದಯವಾಗಲು ಅಹಂಕಾರವಳಿದು ಚಿದಹಂಕಾರಸ್ವರೂಪವಾದಲ್ಲಿ ಆ ಚಿದಹಂಕಾರದಿಂದ ಕಾಲವ್ಯಾಘ್ರನ ಬಾಧೆ ನಷ್ಟವಾಯಿತ್ತೆಂಬುದೀಗ, ಹುಲಿ ಹುಲ್ಲೆಯ ಕೊಂಬಿನಲ್ಲಿ ಸತ್ತು ಎಂಬ ಶಬ್ದಕ್ಕರ್ಥ. ಅಂತು ಚಿದಹಂಕಾರದಿಂದ ಕಾಲವ್ಯಾಘ್ರನ ಬಾಧೆ ನಷ್ಟವಾದಲ್ಲಿ ಅಹಂಕಾರವೆಂಬ ಗಜವು ಸೋಹಂವೆಂಬ ಪಂಚಾಕ್ಷರಿ ಮಂತ್ರಸ್ಮರಣೆಯಿಂದ ನಷ್ಟವಾಯಿತ್ತೆಂಬುದೀಗ, ಗಜ ಅಜದ ಮೆಲುಕಿನಲ್ಲಿ ಸಿಕ್ಕಿ ಎಂಬ ಶಬ್ದಕ್ಕರ್ಥ. ಆ ಪಂಚಾಕ್ಷರಿ ಮಂತ್ರ ಸ್ಮರಣೆಯಿಂದ ಅಹಂಕಾರ ನಿವೃತ್ತಿಯಾಗಲು ಸಮಸ್ತವ್ಯಾಧಿಗಳೆಲ್ಲವು ಸೂಕ್ಷ್ಮವಾದ ಜ್ಞಾನ ಪ್ರಕಾಶದಲ್ಲಡಗಿದವೆಂಬುದೀಗ, ತೋಳ ಉಡುವಿನ ಕಣ್ಣೊಳಡಗಿ ಎಂಬ ಶಬ್ದಕ್ಕರ್ಥ. ಅಂತು ಸಮಸ್ತವ್ಯಾಧಿಗಳೆಲ್ಲವು ಸೂಕ್ಷ್ಮವಾದ ಶಿವಜ್ಞಾನ ಪ್ರಕಾಶದಲ್ಲಡಗಿ ಶರಣನ ಸಾಕಾರ ಸಂಬಂಧವಾದ ಸತ್ಕ್ರಿಯಾಚಾರವು ಸಕಲ ತತ್ವಂಗಳನೊಳಕೊಂಡು ಮಹಾಘಲಿಂಗದಲ್ಲಿ ನಿಷ್ಪತ್ತಿಯಾಯಿತ್ತೆಂಬುದೀಗ, ತುರುಹಿನ ಮುಂದೆ ಬರೆಕೆಯ್ಯುತ್ತಿದೆ ಗೋಪತಿನಾಥ ವಿಶ್ವೇಶ್ವರ ಲಿಂಗವ ನರಿದಿಹೆನೆಂದು ಎಂಬ ಶಬ್ದಕ್ಕರ್ಥ.

೧೪

ಕಾವುದು ಕಟ್ಟುದು ಮೀರಿದ ದೇಹೊಡವುದು
ಗಣ್ಣಿನ ಕೋಲ ಹಿಡಿದು
ಗೋವ ಕಾವುತ್ತಿರಲಾಗಿ, ಕಾವಗಣ್ಣಿನಲ್ಲಿ ಕರ್ಮವಡಗಿ,
ಕಟ್ಟುವ ಕಣ್ಣಿನಲ್ಲಿ ಧರ್ಮವಡಗಿ, ಮೀರುವಗಣ್ಣಿನಲ್ಲಿ ಮರ್ಮವಡಗಿ
ಈ ತ್ರಿವಿಧವನೊಳಕೊಂಡು
ಕೋಲು ಗೋವಿನ ಬೆನ್ನಿನಲ್ಲಿ ಲಯವಾಯಿತ್ತು
ಗೋಪತಿನಾಥ ವಿಶ್ವೇಶ್ವರ ಲಿಂಗವ ನರಿಯಲಾಗಿ

**ಟೀಕು:**— ಸುಜ್ಞಾನೋದಯವಾದ ಶರಣನು ಶ್ರೀಗುರು ಕಾರುಣ್ಯದಿಂದ ಪ್ರತ್ಯಕ್ಷವಾದ ಇಷ್ಟಲಿಂಗವನು ತನ್ನಾಚಾರಾಂಗದಲ್ಲಿ ಸಾಹಿತ್ಯವ ಮಾಡಿಕೊಂಡು ಶಿವಾದ್ವೈತ ಭಕ್ತಿವಿಡಿದು ಆಚರಿಸುತ್ತಿರ್ದನೆಂಬುದೀಗ, ಕಾವುದು ಎಂಬ ಶಬ್ದಕ್ಕರ್ಥ. ಆ ಇಷ್ಟಲಿಂಗದ ಕಳಾಚೈತನ್ಯವನು ತನ್ನ ಹೃದಯ ಕಮಲಕ್ಕೆ ವೇದಿಸಿ ಪ್ರಾಣಲಿಂಗ ಸಂಬಂಧವ ಮಾಡಿದನೆಂಬುದೀಗ, ಕಟ್ಟುದು ಎಂಬ ಶಬ್ದಕ್ಕರ್ಥ. ಈ ಉಭಯಲಿಂಗದಲ್ಲಿ ಸತ್ಕ್ರಿಯಾಜ್ಞಾನ ವಿಡಿದು ಆಚರಿಸುವದ ಬಿಟ್ಟು ಅಹಂ ಬ್ರಹ್ಮವೆಂಬದ್ವೈತ ಜ್ಞಾನವ ಶರಣ ವೇದಿಸಿದನೆಂಬುದೀಗ, ಮೀರಿದ ದೇಹೊಡವುದು ಎಂಬ ಶಬ್ದಕ್ಕರ್ಥ. ಇಷ್ಟಲಿಂಗ ಸಂಬಂಧವಾದ ಶಿವಭಾವವಿಡಿದು ಆಚರಿಸುತ್ತಿರಲಾಗಿ ಎಂಬುದೀಗ, ಗಣ್ಣಿನ ಕೋಲ ಹಿಡಿದು ಗೋವ ಕಾವುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಆ ಸಜ್ಜೀವನ ಸಕಲ ಪ್ರಪಂಚದತ್ತ ಹೋಗದ ಹಾಗೆ ತನ್ನ ಸತ್ಕ್ರಿಯಾಚಾರದಲ್ಲಿ ಅಡಗಿಸಿಕೊಂಡಿಪ್ಪ ಶರಣನ ಕರಸ್ಥಲದ ಇಷ್ಟಲಿಂಗದಲ್ಲಿ ಸರ್ವತ್ರೀಗಳೆಲ್ಲವೂ ಸಂಬಂಧವಾದವೆಂಬುದೀಗ, ಕಾವಗಣ್ಣಿನಲ್ಲಿ ಕರ್ಮವಡಗಿ ಎಂಬ ಶಬ್ದ

ಕ್ಕರ್ಥ. ಚೈತನ್ಯ ಸ್ವರೂಪವಾದ ಪ್ರಾಣಲಿಂಗ ವಿಡಿದಾಚರಿಸುವ ಜ್ಞಾನಾ ಚರಣೆಯು
ಅಲ್ಲಿಯೆ ನಿಷ್ಪತಿಯಾಯಿತ್ತೆಂಬುದೀಗ, ಕಟ್ಟುವ ಗಣ್ಣಿನಲ್ಲಿ ಧರ್ಮವಡಗಿ ಎಂಬ
ಶಬ್ದಕ್ಕರ್ಥ. ಈ ಉಭಯಲಿಂಗವನೊಳಕೊಂಡು ಪರಿಪೂರ್ಣವಾಗಿರ್ಪ ತೃಪ್ತಿ
ಲಿಂಗದಲ್ಲಿ ತನ್ನ ಭಾವಾಚರಣೆಯು ನಿಷ್ಪತಿಯಾಯಿತ್ತೆಂಬುದೀಗ, ಮೀರುವ ಗಣ್ಣಿ
ನಲ್ಲಿ ಮರ್ಮವಡಗಿ ಎಂಬ ಶಬ್ದಕ್ಕರ್ಥ. ಈ ತ್ರಿವಿಧಲಿಂಗವಗ್ರಹಿಸಿಕೊಂಡಿರ್ಪ
ಶರಣನ ಶಿವಭಾವವು ಆ ಸಜ್ಜೀವನ ಅಪರಬಾಗೆ ಎನಿಸಿಕೊಂಬ ಸುಜ್ಞಾನದಲ್ಲಿ
ಏಕಾರ್ಥವಾಯಿತ್ತೆಂಬುದೀಗ, ಈ ತ್ರಿವಿಧವನೊಳಕೊಂಡ ಕೋಲು ಗೋವಿನ
ಬೆನ್ನಲ್ಲಿ ಲಯವಾಯಿತ್ತು ಗೋಪತಿನಾಥ ವಿಶ್ವೇಶ್ವರ ಲಿಂಗವನರಿಯಲಾಗಿ ಎಂಬ
ಶಬ್ದಕ್ಕರ್ಥ.

೧೫

ನೆವದಿಂದ ಶರಣನ ಬಾಗಿಲಿಗೆ ಹೋಗಿ,
ಕಟ್ಟಿದ ಹಸುವ ಕೂಡಿದ ಎತ್ತ ಬಿಡಿರೋ ಎಂದು ಕೂಗುತ್ತಿದೇನೆ
ಎನ್ನ ಕೂಗಿನ ಧನಿಯಿಂದ ಮಹಾ ಶರಣರ ಸತಿ ಬಂದು
ಕಟ್ಟಿದ ಹಸುವ ಬಿಟ್ಟು ಕೂಡಿದ ಎತ್ತ ಕಡಹಿ ನಾಳೆ ಕೊಡಿಯೆಂದು
ಹೊಡವುತ್ತಿದೇನೆ, ಗೋಪತಿನಾಥ ವಿಶ್ವೇಶ್ವರ ಲಿಂಗದ ಅಡಿಗಾಗಿ.

**ಟೀಕು:**— ಸುಜ್ಞಾನೋದಯವಾದ ಶರಣನು ಪರಶಿವ ತತ್ವದಲ್ಲಿ ಬೆರಸ
ಬೇಕೆಂದು ಶಿವಾದ್ವೈತ ಭಕ್ತಿವಿಡಿದು ಇರುತ್ತಿಹನೆಂಬುದೀಗ, ನೆವದಿಂದಲೆಂಬ
ಶಬ್ದಕ್ಕರ್ಥ. ಷಟ್‌ಸ್ಥಲ ಲಿಂಗಾಂಗ ಸಂಬಂಧಿಗಳಾದ ತ್ರಿವಿಧಲಿಂಗಾನು
ಭಾವಿಗಳ ಗೃಹಕ್ಕೆಹೋಗಿ ಗುರುಸ್ವರೂಪನಾದ ಶರಣನು ಮಹಾನುಭಾವಬೋಧೆ
ಯನು ಭಕ್ತಿಮಾರ್ಗದಲ್ಲಿ ನಿಂದು ನಿರೂಪಿಸುತ್ತಿರ್ದನೆಂಬುದೀಗ, ಶರಣರ ಬಾಗಿ
ಲಿಗೆಹೋಗಿ ಎಂಬ ಶಬ್ದಕ್ಕರ್ಥ. ಭಕ್ತಿಪಾಶದಲ್ಲಿ ಸಂಬಂಧವಾಗಿರ್ಪ ಸಜ್ಜೀವ
ನನು ಸುಜ್ಞಾನದಲ್ಲಿ ಒಡಗೂಡಿರ್ಪ ಅಂತರಾತ್ಮನನು ಮಹಾಘನಲಿಂಗದಲ್ಲಿ
ಏಕಾರ್ಥವಮಾಡಿ ಎಂದು ಭೋಧಿಸುತ್ತಿರ್ದನೆಂಬುದೀಗ, ಕಟ್ಟಿದ ಹಸುವ
ಬಿಡಿರೋ ಎಂದು ಕೂಗುತ್ತಿದ್ದೇನೆ ಎಂಬ ಶಬ್ದಕ್ಕರ್ಥ. ಶಿವೋಹಂಮೆಂಬ
ಸುಜ್ಞಾನಬೋಧೆಯಕೇಳಿ ಆ ನಿಷ್ಕಲ ಚಿಚ್ಛಕ್ತಿಬಂದು ಪ್ರತ್ಯಕ್ಷವಾಗಿ ಭಕ್ತಿಪಾಶ
ದಲ್ಲಿ ಸಂಬಂಧವಾಗಿರ್ಪ ಸಜ್ಜೀವನನು ಸುಜ್ಞಾನದಲ್ಲಿ ಸಮರಸವಾಗಿರ್ಪ ಅಂತ
ರಾತ್ಮನನು ಈ ಎರಡನು ಮಹಾಘನಲಿಂಗದಲ್ಲಿ ನಿಷ್ಪತಿಯಮಾಡುವ ಭೇದವ
ಪರಿಪೂರ್ಣ ಜ್ಞಾನಚಿತ್ತುವಿನಿಂದ ಅಂದನೆಂಬುದೀಗ, ಎನ್ನಕೂಗಿನ ಧನಿಯಿಂದ
ಮಹಾಶರಣರ ಸತಿ ಬಂದು ಕಟ್ಟಿದ ಹಸುವ ಬಿಟ್ಟು ಕೂಡಿದ ಎತ್ತ ಕಡಹಿ ಎಂಬ
ಶಬ್ದಕ್ಕರ್ಥ. ಮೀರಿದ ಕ್ರಿಯಾಚರಣೆಯಲ್ಲಿ ಲಿಂಗಾಂಗ ಸಮರಸೈಕ್ಯವ ತೋರಿ
ಎಂದು ಈ ಉಭಯವನು ಶಿವತತ್ವದತ್ತ ಲಭಿಮುಖವ ಸಮರಸವನೆಯ್ದಿಸುತ್ತಿ
ರ್ದನೆಂಬುದೀಗ, ನಾಳೆ ಕೊಡೆಯೆಂದು ಹೊಡವುತ್ತಿದೇನೆ ಗೋಪತಿನಾಥ
ವಿಶ್ವೇಶ್ವರಲಿಂಗದ ಅಡಿಗಾಗಿ ಎಂಬ ಶಬ್ದಕ್ಕರ್ಥ.

# ದಾಸೋಹದ ಸಂಗಣ್ಣನವರ ವಚನಗಳು

೧

ಕಣ್ಣಿನಿಂದ ನಡದು ಕಾಲಲ್ಲಿ ಮುಟ್ಟಿ ಕಂಡು
ನಾಶಿಕದ ಪೊಹರಿಯಲ್ಲಿ ದೇಶಿಕನಾಗಿ ಕರ್ನದ ನಾದದಲ್ಲಿ
ಗರ್ಭ ಉದಯಿಸಿ
ನಾಲಗೆಯ ತೊಟ್ಟಿನಲ್ಲಿ ಮರದೊರಗಿ ಅರಿವುತ್ತ
ಕರದ ಕಮ್ಮಟದಲ್ಲಿ ಬೆಳವುತ್ತ ನಲಿವುತ್ತ ಶಂಭುವಿನಿಂದತ್ತ,
ಸ್ವಯಂಭುನಿಂದತ್ತ ಅತಿ ಬಳ ನೋಡಾ ಮಾತಳಂಗ
ಮಧುಕೇಶ್ವರನು.

**ಟೀಕು:**—ಶಿವಜ್ಞಾನಪ್ರಕಾಶವೀಗ, ಕಂಣು. ಅಂತಪ್ಪ ಜ್ಞಾನವಿಡಿದಾಚರಿಸಿ ಎಂಬುದೀಗ, ಕಣ್ಣಿನಿಂದ ನಡದು ಎಂಬ ಶಬ್ದಕ್ಕರ್ಥ. ಶರಣ ಅಭಿನ್ನ ಕ್ರಿಯಾಚಾರವನು ಸುಜ್ಞಾನದಲ್ಲಿ ಸಮರಸವಮಾಡಿ ಎಂಬುದೀಗ, ಕಾಲಲ್ಲಿ ಮುಟ್ಟಿ ಎಂಬ ಶಬ್ದಕ್ಕರ್ಥ. ಈ ಸತ್ಕ್ರಿಯಾ ಜ್ಞಾನಸಂಬಂಧವಾದ ಭೇದವನು ಸುಜ್ಞಾನ ದೃಷ್ಟಿಯಿಂದ ನೋಡಿಎಂಬುದೀಗ, ಕಂಡು ಎಂಬ ಶಬ್ದಕ್ಕರ್ಥ. ಈ ಸತ್ಕ್ರಿಯಾ ಜ್ಞಾನಸಂಬಂಧವಾದ ಶರಣನ ಇಡಪಿಂಗಳ ಮಾರ್ಗದಲ್ಲಿ ಚರಿಸುವ ಪ್ರಾಣವಾಯು ವಿಕಾರವಳಿದು ಪ್ರಣವ ಮಂತ್ರ ಸ್ವರೂಪವಾಗಲು ಆ ಪ್ರಣವ ಮಂತ್ರವೇ ಜ್ಞಾನಗುರುಸ್ವರೂಪವಾಯಿತ್ತೆಂಬುದೀಗ, ನಾಶಿಕದ ಒಹರಿಯಲ್ಲಿ ದೇಶಿಕನಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನಗುರುತತ್ವವೆ ಕ್ರಿಯಾಘನ ಗುರುಸ್ವರೂಪವಾಗಿ ಬಂದಲ್ಲಿ ಆ ಶ್ರೀ ಗುರುವಿಂಗಡಿಗೆರಗಿ ಉಪಾವಸ್ಥೆಯ ಮಾಡುವ ಶಿಷ್ಯನ ಅನಹತ ಕರ್ನದ್ವಾರದಲ್ಲಿ ನಾದಚೈತನ್ಯ ಸ್ವರೂಪವಾದ ಮಂತ್ರೋಪದೇಶವ ಮಾಡಲು; ಆ ಪ್ರಣವುಮಂತ್ರ ಅಂತರಂಗದಲ್ಲಿ ಸ್ವಸ್ಥಿರವಾಗಿ ಮಹಾಘನಲಿಂಗದ ನಿಜವನೊಳಕೊಂಡು ಚಿದ್‍ಗರ್ಭ ತಲೆದೋರಲು ಆ ಲಿಂಗವ ಶ್ರೀ ಗುರುಭಾವ, ಮನ, ದೃಕ್ಕಿಂ ಬಹಿಷ್ಕರಿಸಲು ಕರಸ್ಥಲಕ್ಕೆ ಇಷ್ಟಲಿಂಗವಾಗಿ ಉದಯಿಸಿತ್ತೆಂಬುದೀಗ, ಕರ್ನದನಾದದಲ್ಲಿ ಗರ್ಭಉದಯಿಸಿ ಎಂಬ ಶಬ್ದಕ್ಕರ್ಥ. ಆ ಇಷ್ಟಲಿಂಗದಲ್ಲಿ ಸತ್ಕ್ರಿಯಾ ಜ್ಞಾನವಿಡಿದು ಆಚರಿಸುತ್ತಿರ್ಪ ಶರಣನ ಪರಮಾಮೃತ ಜಿಹ್ವೆಯನೊಳಕೊಂಡಿರ್ಪ ಅಖಂಡಜ್ಞಾನ ಚಿತ್ತುವಿನ ಮಧ್ಯದಲ್ಲಿ ಆ ಇಷ್ಟಲಿಂಗದ ಕಳಾಚೈತನ್ಯಸ್ವರೂಪವಾದ ಪ್ರಾಣಲಿಂಗವು ಪರವಶವಾಯಿತ್ತೆಂಬುದೀಗ, ನಾಲಗೆಯ ತೊಟ್ಟಿನಲ್ಲಿ ಮರದೊರಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಚಿತ್ ಪ್ರಕಾಶವಾದ ಸುಜ್ಞಾನದಲ್ಲಿ ಸಮರಸವಾದ ಪ್ರಾಣಲಿಂಗವು ಶರಣನ ಕ್ರಿಯಾಹಸ್ತದಲ್ಲಿ ತೊಳಗಿ ಬೆಳಗುತ್ತಿಹುದನು ಅರಿದನೆಂಬುದೀಗ, ಅರಿವುತ್ತ ಕರದ ಕಮ್ಮಟದಲ್ಲಿ ಬೆಳವುತ್ತ ಎಂಬ ಶಬ್ದಕ್ಕರ್ಥ. ಶಂಭುವೆಂದೊಡೆ ಸದಾಶಿವತತ್ವ. ಇತ್ತಲೆಂದೊಡೆ ಮಹೇಶ್ವರ ತತ್ವ. ಸ್ವಯಂಭುವೆಂದೊಡೆ ಮಹಾಲಿಂಗ ತತ್ವ. ಅತ್ತಲೆಂದೊಡೆ ನಿಷ್ಕಲತತ್ವ ಈ

ಚತುರ್ವಿಧವನೊಳಕೊಂಡು ಚಿದಾನಂದ ಸ್ವರೂಪವಾದ ಶರಣನ ಕರಸ್ಥಲದಲ್ಲಿ ತೊಳಗಿ ಬೆಳಗುತ್ತಿಹುದು ಇಷ್ಟ ಬ್ರಹ್ಮಬ್ರಹ್ಮವೆಂಬುದೀಗ, ನಲಿವುತ್ತ ಶಂಭುವಿನಿಂದತ್ತ, ಸ್ವಯಂಭುವಿನಿಂದತ್ತ ಅತಿಬಳನೋಡಾ ಮಾತುಗಳು ಮಧುಕೇಶ್ವರನೂ ಎಂಬ ಶಬ್ದಕ್ಕರ್ಥ.

೨

ಭಕ್ತಂಗೆ ಮೂರು ಗುಣ, ಮಾಹೇಶ್ವರಂಗೆ ಆರು ಗುಣ,
ಪ್ರಸಾದಿಗೆಂಟು ಗುಣ, ಪ್ರಾಣಲಿಂಗಿಗೆ ಹತ್ತು ಗುಣ,
ಶರಣಂಗೆ ಹದಿನಾರು ಗುಣ, ಐಕ್ಯಂಗೆ ಐವತ್ತೆರಡು
ಸರನಾಮ ನಿಂದಲ್ಲಿ ಒಂದೇ ಗುಣ ಸಂದಿತ್ತು
ಇದು ಕ್ರಿಯಾಸ್ಥಲ ನಿರ್ವಹ ಸಂಗನ ಬಸವಣ್ಣನ
ಆದಿ ಚನ್ನಬಸವಣ್ಣನ ಅನಾದಿ ಶಂಭುವಿನಿಂದಿತ್ತ
ಸ್ವಯಂಭುವಿನಿಂದತ್ತ ಅತಿಬಳ ನೋಡಾ ಮಾತುಳಂಗ
ಮಧುಕೇಶ್ವರನು

ಟೀಕು:— ಸುಜ್ಞಾನೋದಯವಾಗಲು ಗುಣತ್ರಯಂಗಳಳಿದು ಶ್ರೀಗುರು ಕಾರುಣ್ಯದಿಂದ ತ್ರಿವಿಧಲಿಂಗ ಸಂಬಂಧವಾದಲ್ಲಿ ತ್ರಿವಿಧ ಭಕ್ತಿಯ ಪರವಾಗಿಹುದು ಭಕ್ತಂಗೆಂಬುದೀಗ, ಭಕ್ತಂಗೆ ಮೂರು ಗುಣವೆಂಬ ಶಬ್ದಕ್ಕರ್ಥ. ಅರಿಷಡ್ವರ್ಗಂಗಳಳಿದು ಷಡ್ವಿಧ ಭಕ್ತಿಯ ಪರವಾಗಿಹುದು ಮಾಹೇಶ್ವರಂಗೆಂಬುದೀಗ, ಮಾಹೇಶ್ವರಂಗೆ ಆರು ಗುಣವೆಂಬ ಶಬ್ದಕ್ಕರ್ಥ. ಅಷ್ಟತನುಗಳಳಿದು ಅಷ್ಟವಿಧ ಭಕ್ತಿ ಸ್ವರೂಪವಾಗಿಹುದು ಪ್ರಸಾದಿಗೆಂಬುದೀಗ, ಪ್ರಸಾದಿಗೆ ಎಂಟು ಗುಣವೆಂಬ ಶಬ್ದಕ್ಕರ್ಥ. ದಶವಾಯು ವಿಕಾರವಳಿದು ಪ್ರಣವ ಮಂತ್ರ ಸ್ವರೂಪವಾಯಿತ್ತು ಪ್ರಾಣಲಿಂಗಿಗೆಂಬುದೀಗ, ಪ್ರಾಣಲಿಂಗಿಗೆ ಹತ್ತು ಗುಣವೆಂಬ ಶಬ್ದಕ್ಕರ್ಥ. ಅಂತರಂಗದಷ್ಟಮದ, ಬಹಿರಂಗದಷ್ಟಮದವಳಿದು ಷೋಡಶ ಶಕ್ತಿ ಸ್ವರೂಪವಾಯಿತ್ತು ಶರಣಂಗೆಂಬುದೀಗ, ಶರಣಂಗೆ ಹದಿನಾರು ಗುಣವೆಂಬ ಶಬ್ದಕ್ಕರ್ಥ. ಷಡಾಧಾರ ಚಕ್ರದಲ್ಲಿಹ ಐವತ್ತೆರಡು ಜೀವನಾಕ್ಷರಂಗಳಳಿದು ಮಂತ್ರ ಲಿಂಗ ಸ್ವರೂಪವಾಯಿತ್ತು ಐಕ್ಯಂಗೆಂಬುದೀಗ, ಐಕ್ಯಂಗೆ ಐವತ್ತೆರಡು ಸರನಾಮ ಭೇದವೆಂಬ ಶಬ್ದಕ್ಕರ್ಥ. ಸಕಲಸ್ಥಲ ಕುಳಾದಿಗಳೆಲ್ಲ ಏಕವಾಗಿ ಒಂದೆಯಾಯಿತ್ತು ನಿಜದಲ್ಲಿ ಎಂಬುದೀಗ, ನಿಂದಲ್ಲಿ ಒಂದೆ ಗುಣ ಸಂದಿತ್ತೆಂಬ ಶಬ್ದಕ್ಕರ್ಥ. ಸಧೂಪವಾದ ಸಂಗನ ಬಸವೇಶ್ವರನೇ ಶರಣನ ಆಚಾರಾಂಗದಲ್ಲಿ ಗುರು ಸ್ವರೂಪವಾಗಿ ಮೂರ್ತಿಗೊಂಡು ಚಿದ್ರೂಪವಾದ ಚನ್ನಬಸವೇಶ್ವರನೆ ಆತ್ಮಾಂಗದಲ್ಲಿ ಪ್ರಾಣಲಿಂಗ ಸ್ವರೂಪವಾಯಿತ್ತೆಂಬುದೀಗ, ಇದು ಕ್ರಿಯಾಸ್ಥಲ ನಿರ್ವಾಹ ಸಂಗನ ಬಸವಣ್ಣನ, ಆದಿ ಚನ್ನಬಸವಣ್ಣ ಅನಾದಿ ಶಂಭುವಿನಿಂದಿತ್ತ ಸ್ವಯಂಭುವಿನಿಂದತ್ತ ಅತಿಬಳ ನೋಡಾ ಮಾತುಳಂಗ, ಮಧುಕೇಶ್ವರನು ಎಂಬ ಶಬ್ದಕ್ಕರ್ಥ. ..

೩

ಪ್ರಥಮ ಮೂರು, ಆಶ್ರಯ ನಾಲ್ಕು, ಸ್ಥಲವಾರು, ಯೋಗ ಎಂಟು,
ಸಂಯೋಗವೆರಡು, ವಿಯೋಗ ಒಂದು, ವಿಭೇದವೆರಡು,
ಭೇದ ಒಂದು
ಅರಿಕೆ ಎರಡು, ಅರಿದು ಒಂದು, ಆಕಾಶ ಮೂರು, ಅವಕಾಶವೆರಡು
ಮಹದಾಕಾಶ ನಾಲ್ಕು, ಇಂತಿವೆಲ್ಲವು ಮಹಾಪ್ರಕಾಶದ ಪ್ರಭೆ
ಪ್ರಜ್ವಲವಾಗಿ
ಉಭಯನಾಮ ರೂಪು ತಾಳ್ದು ವಂಶ ಮೂರರಲ್ಲಿ ಒಳವಟ್ಟು
ಸ್ಥಲವಾರರಲ್ಲಿ ಬೆಳದು, ಕುಳವೆಂಟರಲ್ಲಿ ಪಲ್ಲವಿಸಿ
ಕಳನಾಲ್ಕರಲ್ಲೊಕ್ಕಿ, ಫಲ ಮೂರರಲ್ಲಿಳದು ಹಗಹ ಒಂದರಲ್ಲಿ
ತುಂಬಿತ್ತು
ಇಂತಿ ವಿವರ ಸ್ಥಲಂಗಳ ಹೊಲಬನರಿತು
ವರ್ತನಕ್ಕೆ ಕ್ರೀ ಶುದ್ಧ ಅರವಿಂಗೆ ಬಿಡುಗಡೆ ಶುದ್ಧ
ಬಿಡುಗಡೆ ಎರಡಕ್ಕೆ ಏಕವಾದಲ್ಲಿ ಸ್ಥಲನಿರ್ವಾಹ
ಶಂಭುವಿನಿಂದಿತ್ತ ಸ್ವಯಂಭುವಿನಿಂದತ್ತ
ಅತಿ ಬಳ ನೋಡಾ, ಮಾತುಳಂಗ ಮಧುಕೇಶ್ವರನು

**ಟೀಕು:**— ಸುಜ್ಞಾನೋದಯವಾಗಿ ಶ್ರೀ ಗುರುಕಾರುಣ್ಯದಿಂದ ಸರ್ವಾಂಗ ಲಿಂಗ ಸಂಬಂಧವಾದಸದ್ಭಕ್ತನು ತನು-ಮನ-ಧನವೆಂಬ ತ್ರಿವಿಧ ಪದಾರ್ಥವ ಗುರು ಲಿಂಗ-ಜಂಗಮಕ್ಕೆ ಅರ್ಪಿಸಿ ಆ ಪ್ರಸಾದವ ಸ್ವೀಕರಿಸುವದೇ ಭಕ್ತಿ. ಅಂತಪ್ಪ ಸದ್ಭಕ್ತಿ ತ್ರಿವಿಧವಾಗಿಹುದೆಂಬುದೀಗ, ಪ್ರಥಮ ಮೂರೆಂಬ ಶಬ್ದಕ್ಕರ್ಥ. ಅಂತಪ್ಪ ಸದ್ಭಕ್ತಂಗೆ ಮನನಿರೀಕ್ಷಣ ಇಳನ-ಯಜನವೆಂಬ ಚತುರ್ವಿಧ ಭಕ್ತಿಯನೊಳ ಕೊಂಡಿಹನೆಂಬುದೀಗ, ಆಶ್ರಯ ನಾಲ್ಕೆಂಬ ಶಬ್ದಕ್ಕರ್ಥ. ಅಂತು ಷಡ್ವಿಧಾಂಗದಲ್ಲಿ ಷಡ್ವಿಧಲಿಂಗ ಸಂಬಂಧವಾಗಿ ಷಡ್ವಿಧಭಕ್ತಿಗಳಿಂದ ಆಚರಿಸುವದೆ ಷಟ್‌ಸ್ಥಲ ಅಂತಪ್ಪ ಷಟ್‌ಸ್ಥಲವೇ ಸದ್ಭಕ್ತನ ಅಂಗವಾಯಿತ್ತೆಂಬುದೀಗ, ಸ್ಥಲವಾರೆಂಬ ಶಬ್ದಕ್ಕರ್ಥ. ಅಂತಪ್ಪ ಸದ್ಭಕ್ತಂಗೆ ಅಷ್ಟವಿಧ ಸಕೀಲವೆಂಬುವೆ ಶಿವಯೋಗದ ಕೂಟವಾದ ಕಾರಣ, ಯೋಗವೆಂಟೆಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ದೇಹ-ಪ್ರಾಣಂಗಳಲ್ಲಿ ಇಷ್ಟ-ಪ್ರಾಣಲಿಂಗ ಸಂಬಂಧವಾಯಿತ್ತೆಂಬುದೀಗ, ಸಂಯೋಗವೆರಡು ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹ-ಪ್ರಾಣಂಗಳ ಹೊದ್ದದೆ ಇವೆರಡಕ್ಕೂ ಉಪರಿಯಾದ ಆತ್ಮನಲ್ಲಿ ಸಂಬಂಧವಾದ ಭಾವಲಿಂಗ ಒಂದೇ ಎಂಬುದೀಗ, ವಿಯೋಗಒಂದೆಂಬ ಶಬ್ದಕ್ಕರ್ಥ ಶರಣಲಿಂಗ ಒಂದೆರಡಾಗಿ ತೋರಿತ್ತು ಪರಬ್ರಹ್ಮವೆಂಬುದೀಗ, ವಿಭೇದ ವೆರಡೆಂಬ ಶಬ್ದಕ್ಕರ್ಥ. ಸತ್ತು-ಚಿತ್ತು ಚಿತ್ತುಗಳಳಿದು ಸಮರಸದಿಂದ ಎರಡು ಒಂದೆಯಾದುದೀಗ, ಭೇದ ಒಂದೆಂಬ ಶಬ್ದಕ್ಕರ್ಥ. ಜ್ಞಾನ-ಸುಜ್ಞಾನವೆರಡಾಗಿ

ಹುದು ಎಂಬುದೀಗ, ಅರಿಕೆ ಎರಡೆಂಬ ಶಬ್ದಕ್ಕರ್ಥ. ಇಂತಪ್ಪ ಜ್ಞಾನ ಸುಜ್ಞಾನವನು ಮೀರಿ ತೋರುವ ಮಹಾಜ್ಞಾನ ಒಂದೇ ಎಂಬುದೀಗ, ಅರಿವು ಒಂದೆಂಬ ಶಬ್ದಕ್ಕರ್ಥ. ಪಿಂಡಾಕಾಶ, ಬಿಂದಾಕಾಶ, ಮಹದಾಕಾಶವೆಂಬ ಆಕಾಶ ತ್ರಯಂಗಳೆಂಬುದೀಗ, ಆಕಾಶಮೂರೆಂಬ ಶಬ್ದಕ್ಕರ್ಥ. ಅಂತರಂಗ-ಬಹಿರಂಗವನು ಆವರಿಸಿಕೊಂಡಿರ್ಪ ಗ್ನಾನ ಕ್ರಿಯಾಚಾರವು ಎರಡೆಂಬುದೀಗ, ಅವಕಾಶವೆರಡೆಂಬ ಶಬ್ಬಕ್ಕರ್ಥ. ನಾದ-ಬಿಂದು-ಕಲೆಆದರೊಡನೆ ಕೂಡಲ್ಪಟ್ಟ ಚಿತ್ತು ನಾಲ್ಕಾಗಿ ಹುದುಎಂಬುದೀಗ, ಮಹದಾಕಾಶ ನಾಲ್ಕೆಂಬ ಶಬ್ಬಕ್ಕರ್ಥ. ಇವೆಲ್ಲವು ಅಖಂಡ ಪರಿಪೂರ್ಣವಾದ ಪರಬ್ರಹ್ಮದ ಪರಮಪ್ರಕಾಶದ ಚಿಹ್ನಂಗಳಿಂದ ತೋರಿದವೆಂಬುದೀಗ, ಇವೆಲ್ಲವು ಮಹಾಪ್ರಕಾಶದ ಪ್ರಭೆ ಪ್ರಜ್ವಲವಾಗಿ ಉಭಯನಾಮರೂಪುತಾಳ್ದು ಎಂಬ ಶಬ್ದಕ್ಕರ್ಥ. ತ್ರಿವಿಧ ಭಕ್ತಿಗಳಲ್ಲಿ ಗುರು—ಲಿಂಗ—ಜಂಗಮ ಸಂಬಂಧವಾಗಿ ಎಂಬುದೀಗ, ವಂಶಮೂರರಲ್ಲಿ ಒಳವಟ್ಟೆಂಬ ಶಬ್ಬಕ್ಕರ್ಥ. ಷಟ್ಸ್ಥಲ ಮಾರ್ಗವಿಡಿದು, ಷಡ್ವಿಧ ಭಕ್ತಿಗಳಿಂದ ಆಚರಿಸುತ್ತ ಎಂಬುದೀಗ, ಸ್ಥಲವಾರರಲ್ಲಿ ಬೆಳದು ಎಂಬ ಶಬ್ಬಕ್ಕರ್ಥ. ಅಷ್ಟವಿಧ ಸಕೀಲವೆಂದು ಆಚರಿಸಿ ಎಂಬುದೀಗ, ಕುಳವೆಂಟರಲ್ಲಿ ಪಲ್ಲವಿಸಿ ಎಂಬ ಶಬ್ಬಕ್ಕರ್ಥ. ಗುರುಭಕ್ತಿ, ಲಿಂಗಭಕ್ತಿ, ಜಂಗಮಭಕ್ತಿ, ಪ್ರಸಾದಭಕ್ತಿ ಎಂಬ ಚತುರ್ವಿಧ ಭಕ್ತಿಗಳಿಂದ ಆಧರಿಸಿಎಂಬುದೀಗ, ಕಳನಾಲ್ಕರಲ್ಲೊಕ್ಕಿ ಎಂಬ ಶಬ್ಬಕ್ಕರ್ಥ. ಮುಕ್ತಿ ಫಳ ಸ್ವರೂಪವಾದ ಪರಶಿವ ತತ್ವದ ಕ್ರಿಯಾಜ್ಞಾನ ಭಾವಂಗಳಿಂದ ಪ್ರಮಾಣಿಸಿ ಎಂಬುದೀಗ, ಫಲ ಮೂರರಲ್ಲಿಳದು ಎಂಬ ಶಬ್ಬಕ್ಕರ್ಥ. ಮುಕ್ತಿಫಳ ಸ್ವರೂಪವಾದ ಅಖಂಡ ಪರಿಪೂರ್ಣವಾದ ಪರಶಿವಲಿಂಗವ ತನ್ನ ನಿಜಾಂತರಂಗದಲ್ಲಿ ಬಿಟ್ಟುಕೊಂಡನೆಂಬುದೀಗ, ಹಗಹವೊಂದರಲ್ಲಿ ತುಂಬಿತ್ತೆಂಬ ಶಬ್ಬಕ್ಕರ್ಥ. ಆ ಶರಣನು ಸದ್ವಿವೇಕಮುಖದಿಂದ ಅನೇಕ ಸ್ಥಲಂಗಳನು ಅರಿವುತ್ತ ಸದ್ವರ್ತನೆಯಿಂದ ಆಚರಿಸುವ ಕ್ರೀಯಲ್ಲಿ ಕಾಮ್ಯಾರ್ಥವಿಲ್ಲದೆ ನಿರ್ಮಲವಾಗಿ ತನ್ನ ಸುಜ್ಞಾನದಿಂದ ಸಕಲ ಪ್ರಪಂಚ ನೆಲಿ ಮಾಡಿ ಶರಣ-ಲಿಂಗವೆರಡೂ ಸಮರಸವಾಗಲು, ಅನೇಕ ಸ್ಥಲಂಗಳು ನಿಶ್ಚಯಾರ್ಥದಿಂದ ನಿಷ್ಪತ್ತಿಯಾದವೆಂಬುದೀಗ, ಇಂತಿ ವಿವರ ಸ್ಥಲಂಗಳ ಹೊಲಬನರಿತು ವರ್ತನಕ್ಕೆ ಕ್ರೀಶುದ್ಧ ಅರವಿಂಗೆ ಬಿಡುಗಡೆ ಶುದ್ಧ ಬಿಡುಗಡೆ ಎರಡಕ್ಕೆ ಏಕವಾದಲ್ಲಿ ಸ್ಥಲನಿರ್ವಹ ಶಂಭುವಿನಿಂದಿತ್ತ ಸ್ವಯಂಭುವಿನಿಂದತ್ತ ಅತಿಬಳ ನೋಡಾ ಮಾತುಳಂಗ ಮಧುಕೇಶ್ವರನು ಎಂಬ ಶಬ್ಬಕ್ಕರ್ಥ.

೪

ಭಕ್ತಿಸ್ಥಲ ಮೂರು, ಮಾಹೇಶ್ವರ ಸ್ಥಲನಾಲ್ಕು, ಪ್ರಸಾದಿಸ್ಥಲ ಐದು
ಪ್ರಾಣಲಿಂಗಿ ಸ್ಥಲವಾರು, ಶರಣಸ್ಥಲವೆರಡು, ಐಕ್ಯಸ್ಥಲಒಂದು,
ಭಕ್ತಂಗೆ ಮೂರುಗೊತ್ತು, ಮಾಹೇಶ್ವರಂಗೆ ನಾಲ್ಕುಗೊತ್ತು,
ಪ್ರಸಾದಿಗೆ ಐದುಗೊತ್ತು
ಪ್ರಾಣಲಿಂಗಿಗಾರುಗೊತ್ತು, ಶರಣಂಗೆರಡುಗೊತ್ತು,
ಐಕ್ಯಂಗೆ ಒಂದು ಗೊತ್ತಾಗಿ

ಸಂಬಂಧಿಸಿ ಷಟ್‌ಸ್ಥಲ ರೂಪಾವಲ್ಲಿ
ಒಂದೊಂದು ಸ್ಥಲಕ್ಕೆ ಆರುಸ್ಥಲ ಹೊರೆ-ಹೊರೆಯಾಗಿ, ಮಿಶ್ರವಾಗಿ-
ಸ್ಥಲಂಗಳು ಚರಿಸುವಲ್ಲಿ, ನೂರೊಂದು ಸ್ಥಲಗಳಲ್ಲಿ
ಆರೋಪಿಸಿ ನಿಂದುದು, ಮೂರೇ ಭಕ್ತಿಸ್ಥಲಕ್ಕೆ ಸಂದುದು,
ನಾಲ್ಕೆಮಾಹೇಶ್ವರಸ್ಥಲ ಒಳಕೊಂಡು,
ಐದೇ ಪ್ರಸಾದಿಸ್ಥಲ ಗಮನವಿಲ್ಲದೆ ನಿಜದಲ್ಲಿ ನಿಂದುದು,
ಆರೇ ಪ್ರಾಣಲಿಂಗಿಸ್ಥಲ ಸ್ತುತಿ-ನಿಂದೆಗೆಡೆಯಿಲ್ಲದೆ ನಿಂದುದು
ಎರಡೆ ಶರಣಸ್ಥಲ ನಿರ್ನಾಮವಾಗಿ ಭಾವಕ್ಕೆ ಭ್ರಮೆ ಇಲ್ಲದುದು
ಒಂದೇ ಐಕ್ಯಸ್ಥಲಕ್ಕೆ ಸಂದುದು;
ಇಂತಿ ಭಿನ್ನವರ್ಣಂಗಳಲ್ಲಿ ವರ್ಣಸ್ವರೂಪವಾದೆಯಲ್ಲ
ಶಂಭುವಿನಿಂದಿತ್ತ ಸ್ವಯಂಭುವಿನಿಂದತ್ತ
ಅತಿಬಳನೋಡಾ ಮಾತುಳಂಗ ಮಧುಕೇಶ್ವರನು.

ಟೀಕು:— ಶ್ರೀಗುರು ಕಾರುಣ್ಯದಿಂದ ಸರ್ವಾಂಗಲಿಂಗ ಸಂಬಂಧವಾದ ಸದ್ಭಕ್ತನು ತನು-ಮನ-ಧನವೆಂಬ ತ್ರಿವಿಧ ಪದಾರ್ಥವ ತ್ರಿವಿಧ ಭಕ್ತಿಗಳಿಂದ ಗುರು-ಲಿಂಗ-ಜಂಗಮಕ್ಕೆ ಸಮರ್ಪಿಸಿ ನಿರ್ವಂಚಕ ಭಾವದಲ್ಲಿಪ್ಪುದು ಭಕ್ತಿಸ್ಥಲವೆಂಬುದೀಗ, ಭಕ್ತಿಸ್ಥಲ ಮೂರೆಂಬ ಶಬ್ದಕ್ಕರ್ಥ. ಚತುಃಕರಣಂಗಳಳಿದು ಮನ ನಿರೀಕ್ಷಣ ಇಳನ-ಯಜನವೆಂಬ ಚತುರ್ವಿಧ ಭಕ್ತಿಯನೊಳಕೊಂಡಿಹುದೆ ಮಾಹೇಶ್ವರ ಸ್ಥಲವೆಂಬುದೀಗ, ಮಾಹೇಶ್ವರ ಸ್ಥಲ ನಾಲ್ಕೆಂಬ ಶಬ್ದಕ್ಕರ್ಥ. ಪಂಚೇಂದ್ರಿಯಂಗಳಳಿದು ಶಿವಲಿಂಗವನು ಪಂಚವಿಧವಾಗಿ ಒಳಕೊಂಡು ಪ್ರಕಾಶಿಸುತ್ತಿಹುದ ಪ್ರಸಾದಿಸ್ಥಲವೆಂಬುದೀಗ, ಪ್ರಸಾದಿಸ್ಥಲ ಐದೆಂಬ ಶಬ್ದಕ್ಕರ್ಥ. ಷಟ್ ಚಕ್ರಂಗಳ ಕುಳ ಅಕ್ಷರ ಅಧಿದೇವತೆಗಳಳಿದು ಪ್ರಾಣಲಿಂಗವೊಂದೇ ಷಡಾಧಾರ ಚಕ್ರಂಗಳನೊಳಕೊಂಡು ಪ್ರಕಾಶಿಸುತ್ತಿಹುದೆ ಪ್ರಾಣಲಿಂಗಿ ಸ್ಥಳವಾದ ಕಾರಣ ಪ್ರಾಣಲಿಂಗಿ ಸ್ಥಳವಾರೆಂಬ ಶಬ್ದಕ್ಕರ್ಥ. ಅಹಂಕಾರ-ಮಮಕಾರಂಗಳಳಿದು ಶರಣ ಸತಿ-ಲಿಂಗ ಪತಿ ಭಾವದಿಂದ ಆಚರಿಸುವದೆ ಶರಣ ಸ್ಥಲವಾದಕಾರಣ ಶರಣ ಸ್ಥಲವೆರಡೆಂಬ ಶಬ್ದಕ್ಕರ್ಥ. ಶರಣ-ಲಿಂಗವೆರಡು-ಶಿಖಿ, ಕರ್ಪುರ ಸಂಯೋಗದ ಹಾಗೆ ನಿಜೈಕ್ಯವಾಗಿ ತೋರುತ್ತಿಹ ಕಾರಣ, ಐಕ್ಯಸ್ಥಲ ಒಂದೆಂಬ ಶಬ್ದಕ್ಕರ್ಥ. ಆ ಸದ್ಭಕ್ತಂಗೆ ತ್ರಿವಿಧ ಭಕ್ತಿಕ್ರಿಯೆ ಪರವಾಗಿಹುದೆಂಬುದೀಗ, ಭಕ್ತಂಗೆ ಮೂರು ಗೊತ್ತೆಂಬ ಶಬ್ದಕ್ಕರ್ಥ. ಆ ಮಾಹೇಶ್ವರಂಗೆ ಚತುರ್ವಿಧ ಭಕ್ತಿಕ್ರಿಯೆ ಪರವೆಂಬುದೀಗ, ಮಾಹೇಶ್ವರಂಗೆ ನಾಲ್ಕು ಗೊತ್ತೆಂಬ ಶಬ್ದಕ್ಕರ್ಥ. ಆ ಪ್ರಸಾದಿಗೆ ಪಂಚವಿಧ ಭಕ್ತಿಯ ಪರವೆಂಬುದೀಗ, ಪ್ರಸಾದಿಗೆ ಐದು ಗೊತ್ತೆಂಬ ಶಬ್ದಕ್ಕರ್ಥ. ಆ ಪ್ರಾಣಲಿಂಗಿಗೆ ಷಡ್ವಿಧ ಭಕ್ತಿಯೆ ಪರವೆಂಬುದೀಗ, ಪ್ರಾಣಲಿಂಗಿಗಾರು ಗೊತ್ತೆಂಬ ಶಬ್ದಕ್ಕರ್ಥ. ಆ ಶರಣಂಗೆ ಶರಣ ಸತಿ-ಲಿಂಗ ಪತಿ ಭಾವದಿಂದ ಆಚರಿಸುವದೆ ಪರ

ವೆಂಬುದೀಗ, ಶರಣಂಗೆರಡು ಗೊತ್ತೆಂಬ ಶಬ್ದಕ್ಕರ್ಥ. ಐಕ್ಯಂಗೆ ದೀಪ-ದೀಪದ ಪ್ರಕಾಶದಂತೆ, ರತ್ನ-ರತ್ನದ ಕಾಂತಿಯಂತೆ ಚಿತ್ ಪ್ರಕಾಶವಾದ ಚಿದ್ ಘನ ಲಿಂಗದಲ್ಲಿ ಐಕ್ಯವಾಗಿಹುದೆ ಪರವೆಂಬುದೀಗ, ಐಕ್ಯಂಗೊಂದು ಗೊತ್ತಾಗಿ ಎಂಬ ಶಬ್ದಕ್ಕರ್ಥ. ಭಕ್ತ-ಮಾಹೇಶ್ವರ-ಪ್ರಸಾದಿ-ಪ್ರಾಣಲಿಂಗಿ-ಶರಣೈಕ್ಯರೆಂದು ಷಟುಸ್ಥಲ ರೂಪವಾಯಿತ್ತೆಂಬುದೀಗ, ಸಂಬಂಧಿಸಿ ಷಟುಸ್ಥಲ ರೂಪದಲ್ಲಿ ಎಂಬ ಶಬ್ದಕ್ಕರ್ಥ. ಭಕ್ತಿ ಸ್ಥಲವಾರು, ಮಾಹೇಶ್ವರ ಸ್ಥಲವಾರು, ಪ್ರಸಾದಿ ಸ್ಥಲವಾರು, ಪ್ರಾಣಲಿಂಗಿ ಸ್ಥಲವಾರು, ಶರಣ ಸ್ಥಲವಾರು, ಐಕ್ಯ ಸ್ಥಲವಾರು ಇಂತು ಮೂವತ್ತಾರು ತತ್ವ ಸ್ವರೂಪವನೆಯ್ದಿತ್ತೆಂಬುದೀಗ, ಒಂದೊಂದು ಸ್ಥಲಕ್ಕೆ ಆರು ಸ್ಥಲ ಹೊರೆ-ಹೊರೆಯಾಗಿ ಎಂಬ ಶಬ್ದಕ್ಕರ್ಥ. ಆ ಮೂವತ್ತಾರು ಸ್ಥಲಂಗಳು ಮಿಶ್ರಿಸಿ ಅಂಗಸ್ಥಲ ನಲವತ್ತುನಾಲ್ಕು, ಲಿಂಗ ಸ್ಥಲ ಐವತ್ತೇಳು, ಅಂತು ಪಿಂಡಾದಿಗ್ನಾನ ಶೂನ್ಯಾಂತ್ಯವಾದ ನೂರೊಂದು ಸ್ಥಲವಾಯಿತ್ತು ವಸ್ತುವೆಂಬುದೀಗ, ಮಿಶ್ರವಾಗಿ ಸ್ಥಲಂಗಳು ಚರಿಸುವಲ್ಲಿ ನೂರೊಂದು ಸ್ಥಲಂಗಳಲ್ಲಿ ಆರೋಪಿಸಿ ನಿಂದು ಎಂಬ ಶಬ್ದಕ್ಕರ್ಥ. ಭಕ್ತನ ತ್ರಿವಿಧ ಭಕ್ತಿಗಳು ಆಚಾರ ಲಿಂಗದಲ್ಲಿ ಸಮರಸೈಕ್ಯವಾಯಿತ್ತೆಂಬುದೀಗ, ಮೂರೆ ಭಕ್ತಿಸ್ಥಲಕೆ ಸಂದುದು ಎಂಬ ಶಬ್ದಕ್ಕರ್ಥ. ಆ ಮಾಹೇಶ್ವರನ ಚತುರ್ವಿಧ ಭಕ್ತಿಗಳು ಗುರು-ಲಿಂಗದಲ್ಲಿ ಸಮರಸೈಕ್ಯವಾಯಿತ್ತೆಂಬುದೀಗ, ನಾಲ್ಕೆ ಮಾಹೇಶ್ವರ ಸ್ಥಲ ಒಳಕೊಂಡುದು ಎಂಬ ಶಬ್ದಕ್ಕರ್ಥ. ಪ್ರಸಾದಿಯ ಪಂಚವಿಧ ಭಕ್ತಿಗಳು ಶಿವಲಿಂಗದಲ್ಲಿ ಸಮರಸೈಕ್ಯವಾಯಿತ್ತೆಂಬುದೀಗ, ಐದೆ ಪ್ರಸಾದಿಂದ ಸ್ಥಲ ಗಮನವಿಲ್ಲದೆ ನಿಜದಲ್ಲಿ ನಿಂದುದು ಎಂಬ ಶಬ್ದಕ್ಕರ್ಥ. ಪ್ರಾಣಲಿಂಗಿಯ ಷಡ್ವಿಧ ಭಕ್ತಿಗಳು ಜಂಗಮ-ಲಿಂಗದಲ್ಲಿ ಏಕಾರ್ಥವಾದಲ್ಲಿ ಸ್ತುತಿ-ನಿಂದೆಯಿಲ್ಲದೆ ಹೋಯಿತ್ತೆಂಬುದೀಗ, ಆರೆ ಪ್ರಾಣಲಿಂಗಿಯ ಸ್ಥಲ ಸ್ತುತಿ-ನಿಂದೆಗೆಡೆಯಿಲ್ಲದೆ ನಿಂದುದು ಎಂಬ ಶಬ್ದಕ್ಕರ್ಥ. ಶರಣ ಸತಿ-ಲಿಂಗ ಪತಿಯೆಂಬ ಉಭಯವಳಿದು ನಿರ್ನಾಮವಾಗಿ ಜೀವಭಾವ ಭ್ರಾಂತಿಯಿಲ್ಲದೆ ಮಾಂಗಲ್ಯ ಸ್ವರೂಪವಾದ ಪ್ರಸಾದಲಿಂಗದಲ್ಲಿ ಏಕಾರ್ಥವಾಯಿತ್ತೆಂಬುದೀಗ, ಎರಡೇ ಶರಣ ಸ್ಥಲ ನಿರ್ನಾಮವಾಗಿ ಭಾವ ಭ್ರಮೆಯಿಲ್ಲದುದು ಎಂಬ ಶಬ್ದಕ್ಕರ್ಥ. ಸತ್ತು-ಚಿತ್ತುಗಳೆಂಬ ಉಭಯವಳಿದು ಶಿಖಿ-ಕರ್ಪುರದ ಸಂಯೋಗದಂತೆ ಮಹಾಘನಲಿಂಗದಲ್ಲಿ ಸಮರಸೈಕ್ಯವಾಯಿತ್ತೆಂಬುದೀಗ, ಒಂದೆ ಐಕ್ಯ ಸ್ಥಲಕೆಂದುದು ಎಂಬ ಶಬ್ದಕ್ಕರ್ಥ. ಭಕ್ತಾದ್ಯೈಕ್ಯಾಂತ ಮಾದ ಅಂಗವಾರು ಪ್ರಣವ ಮಂತ್ರ ಸ್ವರೂಪು. ಅಂತಪ್ಪ ಚಿತ್ ಪ್ರಕಾಶವಾದ ಪ್ರಣವಮಾಂಗದಲ್ಲಿ ಮಂತ್ರ ಸ್ವರೂಪವಾದ ಮಹಾಘನ ಲಿಂಗವು ಷಡ್ವಿಧ ಲಿಂಗರೂಪವಾಗಿ ಒಳಕೊಂಡ ಭೇದವನರಿಯೆಂಬುದೀಗ, ಇಂತಿ ಭಿನ್ನ ವರ್ಣಂಗಳಲ್ಲಿ ವರ್ಣಸ್ವರೂಪವಾದೆಯಲ್ಲ ಶಂಭುವಿನಿಂದಿತ್ತ ಸ್ವಯಂಭುವಿನಿಂದತ್ತ ಅತಿಬಳ ನೋಡಾ ಮಾತುಳಂಗ ಮಧುಕೇಶ್ವರನು ಎಂಬ ಶಬ್ದಕ್ಕರ್ಥ.

೫

ಜಗ ಭಗದ ಊರ್ಧ್ವದಲ್ಲಿ ಮೋಹನದಗೊಟ್ಟಿ ಹುಟ್ಟಿತ್ತು
ಗೊಟ್ಟಿಯ ಪೂರ್ವದಲ್ಲಿ ಕಮಲವರಳಿತ್ತು

ಕಮಲ ಹೃತ್ಕಮಲದಲ್ಲಿ ಬಿಂದು ವೆಂಜನದಿಂದ
ಗುರು-ಲಿಂಗರೂಪಾಗಿ ಪುಲ್ಲಿಂಗ ಚರಿಸಿತ್ತು
ನಪುಸಕಲಿಂಗ ವಡಗಿಸಿತ್ತು
ಬಿಂದುವಿನಿಂದನಾದ, ಆ ಸುನಾದದಿಂದಕಳೆ
ಆ ಕಳೆಯಕಾಂತಿಯಿಂದ ಜಗ, ಇಂತಿ ಜಗದ—
ಉತ್ಪತ್ಯದಲ್ಲಿ ಹುಟ್ಟದೆ ಸ್ಥಿತಿಗೊಳಗಲ್ಲದೆ
ಲಯಕ್ಕೆ ಹೊರಗಾಗಿ ಅರಿಯದು ಸ್ವಾನುಭಾವ ಸಂಬಂಧ
ಇದು ಪಿಂಡ, ಪಿಂಡಜ್ಞಾನ ಶಂಭುವಿನಿಂದಿತ್ತ ಸ್ವಯಂಭುವಿನಿಂದತ್ತ
ಅತಿಬಳ ನೋಡಾ ಮಾತುಳಂಗ ಮಧುಕೇಶ್ವರನು.

ಟೀಕು:— ಸಮಸ್ತ ವಿಶ್ವೋತ್ಪತ್ತಿಗೆ ಕಾರಣವಾದ ನಿಷ್ಕಲ ಚಿಚ್ಛಕ್ತಿ ಸಮೇತವಾದ ಚಿದ್ಘನಲಿಂಗದಿಂ ಜಗದ್ವೈಶವದ ಲೀಲಾವಿನೋದದ ನೆನಹುಳ್ಳ ಸಕಲ ತತ್ವಂಗಳಿಗೆ ಆಶ್ರಯವಾದ ಮಹಾಲಿಂಗ ಜನಿಸಿತ್ತೆಂಬುದೀಗ, ಜಗ–ಭಗದ ಊರ್ಧ್ವದಲ್ಲಿ ಮೋಹನದ ಗೊಟ್ಟಿ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಆ ಮಹಾ ಘನ ಲಿಂಗದ ಚಿತ್ ಪ್ರಭಾಂಗ ಸ್ವರೂಪವಾದ ಚಿಚ್ಛಕ್ತಿಯ ಅಂತರಂಗವೆಂಬ ಕಮಲ ನಿಜವಿಕಸಿತವಾಗಿ ಲೀಲಾಸದ್ವಾಸನೆ ದೊರಲಲ್ಲಿ ಬಿಂದು ನಾದಂಗಳು ಉದಯಿಸಿದವು ಅದರಿಂದ ಉಕಾರ–ಅಕಾರಗಳು ಜನಿಸಿದವೆಂಬುದೀಗ, ಗೊಟ್ಟಿಯ ಪೂರ್ವದಲ್ಲಿ ಕಮಲವರಳಿತ್ತು ಕಮಲ ಹೃತ್ಕಮಲದಲ್ಲಿ ಬಿಂದುವೆಂಜನದಿಂದ ಗುರುಲಿಂಗ ರೂಪಾಗಿ ಪುಲ್ಲಿಂಗ ಚರಿಸಿತ್ತೆಂಬ ಶಬ್ದಕ್ಕರ್ಥ. ಎರಡರ ಮಧ್ಯದಲ್ಲಿ ಮಕಾರವು ಅಡಪುರ್ದು ಎಂಬುದೀಗ, ನಪುಂಸಕಲಿಂಗವಡಗಿತ್ತೆಂಬ ಶಬ್ದಕ್ಕರ್ಥ. ಆ ನಾದಬಿಂದು ಕಲೆಗಳು ಒಂದರಿಂದೊಂದು ಜನಿಸಿ ಚೈತನ್ಯ ಪ್ರಕಾಶವನುಳ್ಳ ಸಾಕಲ್ಯ ಪ್ರಣವ ಸ್ವರೂಪವಾದ ಸದಾಶಿವ ತತ್ವದಿಂ ಸಮಸ್ತ ಜಗದುತ್ಪತ್ಯವಾಯಿತ್ತೆಂಬುದೀಗ, ಬಿಂದುವಿನಿಂದ ನಾದ ಆ ಸುನಾದದಿಂದ ಕಳೆ, ಆ ಕಳೆಯಕಾಂತಿಯಿಂದ ಜಗವೆಂಬ ಶಬ್ದಕ್ಕರ್ಥ.. ಸುಜ್ಞಾನೋದಯವಾದ ಶರಣನು ಜಗದ ಕರ್ಮತ್ರಯವ ಹೊದ್ದದೆ ಲಿಂಗತ್ರಯದಲ್ಲಿ ಆದಿ–ಮಧ್ಯ–ಅವಸಾನವ ನರಿದೊಡೆ ಎಂಬುದೀಗ, ಇಂತಿ ಜಗದುತ್ಪತ್ಯದಲ್ಲಿ ಹುಟ್ಟದೆ ಸ್ಥಿತಿಗೊಳಗಲ್ಲದೆ ಲಯಕ್ಕೆ ಹೊರಗಾಗಿ ಅರಿದುದೆಂಬ ಶಬ್ದಕ್ಕರ್ಥ, ಅದು ತಾನೆ ಅಂಗಲಿಂಗ ಸಮರಸಾನುಭಾವ ಸಂಯೋಗ ಪಿಂಡಜ್ಞಾನ ಶಂಭುವಿನಿಂದಿತ್ತ ಸ್ವಯಂಭುವಿನಿಂದತ್ತ ಅತಿಬಳನೋಡಾ ಮಾತುಳಂಗ ಮಧುಕೇಶ್ವರನು ಎಂಬ ಶಬ್ದಕ್ಕರ್ಥ.

ಕಾಲಿಗೆ ಕಣ್ಣು ಹುಟ್ಟಿ ಬಾಯಿ ಬಸುರಾಗಿ ಕಿವಿಯಲಿ ಹುಟ್ಟಿ
ಕೈಯಲ್ಲಿ ಬೆಳವುತ್ತದೆ ನೋಡಾ, ಆ ಶಿಶುವು ಎಂದಲ್ಲಿ

ಉಪಮೆಗೆ ಬಾರದು, ಉಗ್ಗಿಂದಲ್ಲಿ ಹೊದ್ದದು ಜಗವ
ಅಂಬಳಿ ಇಕ್ಕುವದಕ್ಕೆ ಮೊದಲೆ ಕಂಬಳಿ ಮುಸುಕಿಟ್ಟು
ಈ ತ್ರಯದ ಬೆಂಬಳಿಯಲ್ಲಿಯೆಲಿಯ್ಯ
ಇದು ಗ್ನಾನ ಪಿಂಡೈಕ್ಯ ಶಂಭುವಿನಿಂದಿತ್ತ ಸ್ವಯಂಭುವಿನಿಂದತ್ತ
ಅತಿಬಳ ನೋಡಾ ಮಾತುಳಂಗ ಮಧುಕೇಶ್ವರಾ !

ಟೀಕು:— ಶಿವಜ್ಞಾನೋದಯವಾದ ಶರಣನ ಅಭಿನ್ನಕ್ರಿಯಾಚಾರದಲ್ಲಿ ಸುಜ್ಞಾನ ದೃಷ್ಟಿಪ್ರಭಾವಿಸಿತ್ತೆಂಬುದೀಗ, ಕಾಲಿಗೆ ಕಣ್ಣುದುಟ್ಟಿ ಎಂಬ ಶಬ್ದಕ್ಕರ್ಥ. ಅಂತು ಕ್ರಿಯಾಜ್ಞಾನ ಸಂಬಂಧವಾದ ಶರಣನು ತತ್ವದಲ್ಲಿ ಬೆರಸಬೇಕೆಂದು ಶಿವಾಪೇಕ್ಷೆಯ ಮುಂದುಗೊಂಡಿರ್ದಲ್ಲಿ ಮಹಾಘನಲಿಂಗದ ನಿಜಸ್ವರೂಪವನೊಳಕೊಂಡು ಚಿದ್ಗರ್ಭ ತಲೆದೋರಿತ್ತೆಂಬುದೀಗ, ಬಾಯಿ ಬಸುರಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಶಿವಾಪೇಕ್ಷೆಯ ಮುಂದುಗೊಂಡಿರ್ದ ಶರಣ ತನ್ನ ಸುಜ್ಞಾನ ದೃಷ್ಟಿಗೆ ಗೋಚರವಾಗಿ ತೋರುತ್ತಿರ್ದ ಪರಬ್ರಹ್ಮವೇ ತನ್ನ ನಿಜವೆಂದರಿದು ಶ್ರೀ ಗುರೂಪಾವಸ್ಥೆಯ ಮಾಡಲಾಗಿ ಆ ಶ್ರೀ ಗುರು ಕರುಣಿಸಿ “ಓಂ ನಮಃ ಶಿವಾಯ” ಎಂಬ ಷಡಾಕ್ಷರಿಯ ಮಂತ್ರವನು ಶಿಷ್ಯನ ಅನಾಹತ ಕರ್ಣದ್ವಾರದಲ್ಲಿ ಉಪಜೀವಿಸಿ ಅಂತರಂಗದಲ್ಲಿ ಚೈತನ್ಯಸ್ವರೂಪವಾಗಿ ತೊಳಗಿ ಬೆಳಗುತ್ತಿರ್ದ ಪರಮ ಚಿತ್ಕಲಾಸ್ವರೂಪವಾದ ಪ್ರಾಣಲಿಂಗವ ಭಾವ-ಮನ-ದೃಕ್ಕಿಂಬಹಿಷ್ಕ ಇಷ್ಟಲಿಂಗ ಸ್ವರೂಪವಾಗಿ ಶರಣನ ಕರಸ್ಥಲಕ್ಕೆ ತಂದುಕೊಟ್ಟನೆಂಬುದೀಗ, ದಿಯಲ್ಲಿದುಟ್ಟ ಕೈಯಲ್ಲಿ ಬೆಳವುತ್ತದೆನೋಡಾ ಎಂಬ ಶಬ್ದಕ್ಕರ್ಥ. “ಉ” ಎಂದೊಡೆ ಚಿದ್ಬಿಂದು ಪ್ರಕಾಶ. ಅಂತಪ್ಪ ಚಿದ್ಬಿಂದು ಪ್ರಕಾಶವನೊಳಕೊಂಡಿರ್ದ ಪ್ರಾಣಲಿಂಗವು ಸಂಕಲ್ಪವಾದ ಶೃತಜ್ಞಾನಕ್ಕೆ ಅಸಾಧ್ಯವೆಂಬುದೀಗ, ಆ ಶಿಶುವು ಎಂದಲ್ಲಿ ಉಪಮೆಗೆ ಬಾರದು ಎಂಬ ಶಬ್ದಕ್ಕರ್ಥ. ಅಂತಪ್ಪ ಇಷ್ಟಪ್ರಾಣ ಏಕಾದ್ವೈತವಾದ ಪರಮಾಮೃತ ರಸಸ್ವರೂಪವಾದ ಭಾವಲಿಂಗವನು ಅವಿರಳಜ್ಞಾನ ಮುಖದಿಂದೇ ಸ್ವೀಕರಿಸಿ ಜಗತ್ ಪ್ರಪಂಚ ಹೊದ್ದದೆ ವಿಲಕ್ಷಣನಾಗಿಹನು ಶರಣನು ಎಂಬುದೀಗ, ಉಗ್ಗಿಂದಲ್ಲಿ ಹೊದ್ದದು ಜಗವನೆಂಬ ಶಬ್ದಕ್ಕರ್ಥ. ಅಂಗಾಂಗಕ್ಕೆ ಭಿನ್ನವಿಟ್ಟು ತ್ರಿಕಾಲಂಗಳಲ್ಲಿ ಭಿನ್ನಕ್ರೀಯಿಂದಾಚರಿಸುವ ಪೂರ್ವಕ್ರಿಯಾಚರಿತ್ರವ ನಿವೃತ್ತಿಮಾಡಿ ಪರಿಪೂರ್ಣಜ್ಞಾನವ ಸರ್ವಾಂಗಕ್ಕೆ ಆವರಣವ ಮಾಡಿಕೊಂಡನು ಎಂಬುದೀಗ, ಅಂಬಳಿ ಇಕ್ಕುವದಕ್ಕೆ ಮೊದಲೆ ಕಂಬಳಿಯ ಮುಸುಕಿಟ್ಟು ಎಂಬ ಶಬ್ದಕ್ಕರ್ಥ. ಅಂತು ದ್ವೈತಕ್ರಿಯ ನಿವೃತ್ತಿಮಾಡಿ ಪರಿಪೂರ್ಣ ಜ್ಞಾನವ ಸರ್ವಾಂಗಕ್ಕೆ ಚಿದಾವರಣವ ಮಾಡಿದ ಶರಣನು ಇಷ್ಟ-ಪ್ರಾಣ-ಭಾವಲಿಂಗದಲ್ಲಿ ಕ್ರಿಯಾಜ್ಞಾನ ಭಾವವಿಡಿದಾಚರಿಸಿ ತನ್ನಂಗ ತ್ರಯಂಗಳಲ್ಲಿ ಲಿಂಗತ್ರಯಂಗಳ ಏಕಾರ್ಥವ ಮಾಡಿದನೆಂಬುದೀಗ, ಈ ತ್ರಯದ ಬೆಂಬಳಿಯಲ್ಲಿಯೆ ಲಿಯ್ಯ, ಇದು ಜ್ಞಾನ ಪಿಂಡೈಕ್ಯ ಶಂಭುವಿನಿಂದಿತ್ತ ಸ್ವಯಂಭುವಿನಿಂದತ್ತ ಅತಿಬಳನೋಡಾ ಮಾತುಳಂಗ ಮಧುಕೇಶ್ವರನು ಎಂಬ ಶಬ್ದಕ್ಕರ್ಥ.

೭

ಕಾಲು ಮೂರು, ಬಸುರು ನಾಲ್ಕು, ಕೈ ಐಯ್ದು, ತಲೆ ಎಂಟು,
ಬಾಯೊಂಭತ್ತು, ಕಿವಿ ಆರು, ಕಣ್ಣು ಮೂವತ್ತೆರಡು
ಇಂತಿ ಪಿಂಡಕ್ಕೆ ಐವತ್ತೆರಡು ಜೀವ, ಆ ಜೀವಕ್ಕೆ
ಪರಮನೊಂದೆ ಕಳೆ
ಈ ಗುಣಜ್ಞಾನ ಪಿಂಡದ ಭೇದ ಶಂಭುವಿನಿಂದಿತ್ತ
ಸ್ವಯಂಭುವಿನಿಂದತ್ತ
ಅತಿಬಳ ನೋಡಾ ಮಾತುಳಂಗ ಮಧುಕೇಶ್ವರನು.

**ಟೀಕು:—** ಚಿತ್‌ಪಿಂಡ ಸ್ವರೂಪವಾದ ಶರಣನ ಅಂಗಕ್ಕೆ ಕರ್ಮಭಕ್ತಿ ಜ್ಞಾನವೇ ಚರಣವಾಗಿಹವೆಂಬುದೀಗ, ಕಾಲು ಮೂರೆಂಬ ಶಬ್ದಕ್ಕರ್ಥ. ಆ ಕರ್ಮಭಕ್ತಿಜ್ಞಾನವೇ ಚರಣವಾಗಿಹ ಶರಣಂಗೆ ಚತುರ್ವಿಧ ಭಕ್ತಿಯೆ ಚಿದ್‌ಗರ್ಭವಾಗಿಹವೆಂಬುದೀಗ, ಬಸುರು ನಾಲ್ಕೆಂಬ ಶಬ್ದಕ್ಕರ್ಥ. ಅಂತು ಚತುರ್ವಿಧ ಭಕ್ತಿಯೆ ಚಿದ್‌ಗರ್ಭವಾಗಿಹ ಶರಣಸತಿಗೆ ಪಂಚಕರಣಂಗಳ ಪ್ರಕೃತಿ ಭಾವ ವಳಿದು ಸುಜ್ಞಾನ ಹಸ್ತಂಗಳಾಗಿ ಒಪ್ಪುತ್ತಿಹವೆಂಬುದೀಗ, ಕೈ ಐಯ್ದೆಂಬ ಶಬ್ದಕ್ಕರ್ಥ. ಅಂತು ಕರಣಂಗಳೆ ಸುಜ್ಞಾನ ಹಸ್ತವಾಗಿಹ ಚಿದ್ರೂಪನಾದ ಶರಣಂಗೆ ಅಷ್ಟವಿಧ ಭಕ್ತಿಗಳೆ ಸುಜ್ಞಾನ ಶಿರಸ್ಸಾಗಿಹವೆಂಬುದೀಗ, ತಲೆ ಎಂಟೆಂಬ ಶಬ್ದಕ್ಕರ್ಥ. ಅಂತು ಅಷ್ಟ ವಿಧಭಕ್ತಿಗಳೆ ಸುಜ್ಞಾನ ಶಿರಸ್ಸಾಗಿಹ ಶರಣ ಸತಿಗೆ ನವವಿಧ ಭಕ್ತಿಗಳೆ ಬಾಯಾಗಿಹವೆಂಬುದೀಗ, ಬಾಯೊಂಭತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ನವವಿಧಭಕ್ತಿಗಳೆ ಶಿವಾನುಭಾವವ ಕೇಳುವದಕ್ಕೆ ಅನಹತ ಕರ್ನದ್ವಾರವಾಗಿಹವೆಂಬುದೀಗ, ಕಿವಿ ಆರೆಂಬ ಶಬ್ದಕ್ಕರ್ಥ. ಅಂತು ಷಡ್ವಿಧ ಭಕ್ತಿಗಳೆ ಕರ್ನವಾಗಿಹ ಶರಣಸತಿಗೆ ಇಪ್ಪತ್ತೈದು ತತ್ವಂಗಳು, ಆ ತತ್ವಂಗಳಿಗೆ ಅಧಿಕಾರಿಗಳಾವ ಷಡ್ವಿಧ ಶಕ್ತಿಗಳು ಇಂತಿ ಮೂವ್ವತ್ತೊಂದು ತತ್ವಗಳ ನರಿವ ಜ್ಞಾನಸಹ ಮುವ್ವತ್ತೆರಡು ಚಕ್ಷುಗಳಾಗಿಹವೆಂಬುದೀಗ. ಕಣ್ಣು ಮೂವ್ವತ್ತೆರಡು ಎಂಬ ಶಬ್ದಕ್ಕರ್ಥ. ಅಂತು ಮೂವ್ವತ್ತೆರಡು ತತ್ವಂಗಳು ಚಕ್ಷುಗಳಾಗಿಹ ಚಿತ್ಪಿಂಡ ಸ್ವರೂಪನಾದ ಶರಣನ ಷಡಾಧಾರ ಚಕ್ರದಲ್ಲಿರ್ಪ ಐವತ್ತೆರಡಕ್ಷರಂಗಳೆಲ್ಲವು ಪ್ರಣವಮಂತ್ರ ಸ್ವರೂಪವನೆಯ್ದಿ ಚೈತನ್ಯ ಸ್ವರೂಪವಾಗಿಹವೆಂಬುದೀಗ, ಇಂತಿ ಪಿಂಡಕ್ಕೆ ಐವತ್ತೆರಡು ಜೀವವೆಂಬ ಶಬ್ದಕ್ಕರ್ಥ. ಆ ಐವತ್ತೆರಡಕ್ಷರಗಳೆಲ್ಲವೂ ಪ್ರಣವ ಮಂತ್ರಸ್ವರೂಪವನೆಯ್ದಿದ ಶರಣಂಗೆ ಅಖಂಡ ಪರಿಪೂರ್ಣವಾದ ಪರಬ್ರಹ್ಮ ಒಂದೆ ತನು-ಮನ-ಪ್ರಾಣೇಂದ್ರಿಯಂಗಳ ಒಳಹೊರಗೆ ಚೈತನ್ಯ ಸ್ವರೂಪವಾಗಿ ತೊಳಗಿಬೆಳಗುತ್ತಿಹುದು ಸಕಲ ತತ್ವಂಗಳನೊಳಕೊಂಡು ಚಿತ್ಕಲಾ ಸ್ವರೂಪಿನಿಂದಲೆಂಬುದೀಗ, ಆ ಜೀವಕ್ಕೆ ಪರಮನೊಂದೆ ಕಳೆ ಈ ಗುಣಗ್ನಾನ ಪಿಂಡದ ಭೇವ ಶಂಭುವಿನಿಂದಿತ್ತ ಸ್ವಯಂಭುವಿನಿಂದತ್ತ ಅತಿಬಳನೋಡಾ ಮಾತುಳಂಗ ಮಧುಕೇಶ್ವರನು ಎಂಬ ಶಬ್ದಕ್ಕರ್ಥ.

೮

ಉರಿಯ ಗಿರಿಯಲ್ಲಿ ಕರ್ಪುರದ ತರು ಹುಟ್ಟಿ ಉರಿ ನಷ್ಟವಾಗಿ
ಆ ತರುವಿನಲ್ಲಿ ಬೆಂಕಿಯ ಹಣ್ಣು ಹುಟ್ಟಿ
ಅಪ್ಪುವಿನ ಪಕ್ಷಿ ಬಂದು ಮುಟ್ಟಿ ಕುಡುಕಲಾಗಿ
ಹಣ್ಣಿನ ತೊಟ್ಟಿನೊಳಡಗಿತ್ತು
ಹಕ್ಕಿ ಮಧುಕೇಶ್ವರಲಿಂಗ ಎತ್ತ ಹೋದನೆಂದರಿಯೆ.

**ಟೀಕು:—** ಜ್ಞಾನಾಗ್ನಿ ಸ್ವರೂಪವಾದ ಚಿದಹಂಕಾರದಲ್ಲಿ ಎಂಬುದೀಗ, ಉರಿಯ ಗಿರಿಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಚಿದಹಂಕಾರದಗ್ರದಲ್ಲಿ ಸದ್ವಾಸನಾ ಸ್ವರೂಪವಾದ ಸದ್ವಿವೇಕ ವೃಕ್ಷ ಹುಟ್ಟಿತ್ತೆಂಬುದೀಗ, ಆ ಜ್ಞಾನಾಗ್ನಿ ಪ್ರಕಾಶವು ತನ್ನಲ್ಲಡಗಿತ್ತೆಂಬುದೀಗ, ಉರಿನಷ್ಟವಾಗಿ ಎಂಬ ಶಬ್ದಕ್ಕರ್ಥ. ಆ ಸದ್ವಿವೇಕ ವೃಕ್ಷದಲ್ಲಿ ಚಿತ್‌ಪ್ರಕಾಶವಾಗಿ ತೊಳಗಿ ಬೆಳಗುತ್ತಿರ್ದ ಚಿದಾಗ್ನಿ ಸ್ವರೂಪವಾದ ಮುಕ್ತಾಫಳ ಗುರುಮುಖದಿಂ ಪ್ರತ್ಯಕ್ಷವಾಯಿತ್ತೆಂಬುದೀಗ, ಆ ತರುವಿನಲ್ಲಿ ಬೆಂಕಿಯ ಹಣ್ಣು ಹುಟ್ಟಿ ಎಂಬ ಶಬ್ದಕ್ಕರ್ಥ. ತನ್ನ ಸರ್ವಾಂಗದಲ್ಲಿ ಪರಮಶಾಂತಿಯ ಜಲವನೊಳಕೊಂಡ ಚಿತ್ ಸ್ವರೂಪನಾದ ಶರಣ ಕ್ರಿಯಾಜ್ಞಾನ ಸಂಬಂಧವಾಗಿ ಇಷ್ಟ-ಪ್ರಾಣಲಿಂಗದಲ್ಲಿ ಆಚರಿಸುತ್ತಿರ್ದನೆಂಬುದೀಗ, ಅಪ್ಪುವಿನ ಪಕ್ಷಿ ಬಂದು ಮುಟ್ಟಿ ಎಂಬ ಶಬ್ದಕ್ಕರ್ಥ. ಆ ಇಷ್ಟ ಪ್ರಾಣಲಿಂಗಕ್ಕೆ ರೂಪು-ರುಚಿಗಳ ನರ್ಪಿಸಿ ಲಿಂಗ ಸುಖ ಪ್ರಸನ್ನ ಪ್ರಸಾದವನು ಸ್ವೀಕರಿಸುತ್ತಿರ್ದನೆಂಬುದೀಗ, ಕುಡುಕಲಾಗಿ ಎಂಬ ಶಬ್ದಕ್ಕರ್ಥ. ಹಣ್ಣೆಂದೊಡೆ ಮುಕ್ತಿಫಳ ತೊಟ್ಟೆಂದೊಡೆ ಮೂಲಜ್ಞಾನ ಚಿತ್ತು. ಆ ಚಿತ್‌ಸ್ವರೂಪನಾದ ಶರಣನು ಆ ಮೂಲಜ್ಞಾನ ಚಿತ್ತುವಿನಲ್ಲಿ ಸಮರಸವಾದನೆಂಬುದೀಗ, ಹಣ್ಣಿನ ತೊಟ್ಟಿನೊಳಗಡಗಿತ್ತು ಹಕ್ಕಿ ಮಧುಕೇಶ್ವರಲಿಂಗ ಎತ್ತ ಹೋದನೆಂದರಿಯೆ ಎಂಬ ಶಬ್ದಕ್ಕರ್ಥ.

೯

ಅತ್ತಳಿಂದ ಬಂದವನ ಇತ್ತಳವ ಕಂಡು
ಇತ್ತಳಿಂದ ಹೋದವನ ಅತ್ತಳವ ಕಂಡು
ಇದೆತ್ತಳ ಸುದ್ದಿಯೆಂದು ಕೇಳಲಾಗಿ ಕತ್ತಿ ಸತ್ತಿತ್ತು
ಕುಮರಿ ಹರಿಯಿತ್ತು ಬೆವಹಾರ ನಷ್ಟವಾಯಿತ್ತು
ಮಧುಕೇಶ್ವರ ಲಿಂಗವೇ ಎಂದು ಬಾಯಾರುವ ಚಿತ್ತು
ಬಟ್ಟ ಬಯಲಾಯಿತ್ತು.

**ಟೀಕು:—** ಅಖಂಡ ಪರಿಪೂರ್ಣವಾದ ಪರಬ್ರಹ್ಮವೆ ಶಿಷ್ಯ ದೀಕ್ಷಾದಿಕಾರಣ ಎಂದುದಾಗಿ, ಆ ಪರಬ್ರಹ್ಮವೆ ಗುರು ಸ್ವರೂಪವಾಗಿ ಶಿಷ್ಯಂಗೆ ಅನುಗ್ರಹವ ಮಾಡಲೋಸುಗವಾಗಿ ಬಂದಿತ್ತೆಂಬುದೀಗ, ಅತ್ತಳಿಂದ ಬಂದವನ ಇತ್ತಳವ ಕಂಡು ಎಂಬ ಶಬ್ದಕ್ಕರ್ಥ. ದೇಹಸಂಬಂಧವಾಗಿರ್ದ ಆತ್ಮಂಗೆ ಸುಜ್ಞಾನೋದಯವಾಗಿ

ಸಂಸಾರ ಪ್ರಪಂಚು ನಿವೃತ್ತಿಯ ಮಾಡಿ ಮೋಕ್ಷಾಪೇಕ್ಷನಾಗಿ ಬಂದ ಶಿಷ್ಯನ ಶ್ರೀಗುರು ಕಂಡನೆಂಬುದೀಗ, ಇತ್ತಳಿಂದ ಹೋದವನ ಅತ್ತಳವ ಕಂಡು ಎಂಬ ಶಬ್ದಕ್ಕರ್ಥ. ಎಲೆ ಶ್ರೀಗುರುವೆ, ನಾನಾರು? ನನ್ನ ನಿಜ ಸ್ವರೂಪವಾವುದೆಂದು ಬಿನ್ನಹವ ಮಾಡಲು "ಸೋಽಹಂ ಪರಬ್ರಹ್ಮಾಸ್ಮಿನ್" ನೀನೇ ಪರಬ್ರಹ್ಮನೆಂದು ನಿಜ ಸ್ವರೂಪನೆಚ್ಚರಿಸಿ ದೀಕ್ಷತ್ರಯಂಗಳ ಮಾಡಿ ಅಂಗತ್ರಯವ ಲಿಂಗತ್ರಯ ಸಂಬಂಧವ ಮಾಡಿದನೆಂಬುದೀಗ, ಇತ್ತಳ ಸುದ್ದಿಯೆಂದು ಕೇಳಲಾಗಿ ಎಂಬ ಶಬ್ದಕ್ಕರ್ಥ. ಅಂತು ಲಿಂಗತ್ರಯ ಸಂಬಂಧವಾದ ಶರಣನ ಜಡರೂಪುವಾದ ತನು ಇಷ್ಟಲಿಂಗದಲ್ಲಿ ನಿಷ್ಪತ್ತಿಯಾಗಿ ಆ ಪ್ರಾಣನ ಗುಣವಳಿದ ಚಿತ್‌ಪ್ರಾಣನು ಪ್ರಾಣಲಿಂಗದಲ್ಲಿ ಸಮರಸವಾಯಿತ್ತೆಂಬುದೀಗ, ಕತ್ತೆ ಸತ್ತಿತ್ತು, ಕುದುರೆ ಹರಿಯಿತ್ತು ಎಂಬ ಶಬ್ದಕ್ಕರ್ಥ. ಅಂತು ದೇಹ-ಪ್ರಾಣಂಗಳು ಲಿಂಗದಲ್ಲಿ ಸಮರಸವಾದ ಶರಣನ ಜ್ಞಾನ ಕ್ರಿಯಾಚಾರವು ಲಿಂಗದಲ್ಲಿ ಸಮರಸವ ನೆಯ್ದುದಲ್ಲಿ ಮುಕ್ತಿಫಳ ಸ್ವರೂಪವಾದ ಲಿಂಗದಲ್ಲಿ ಬೆರಸಬೇಕು, ಕೂಡಬೇಕು ಸಮರಸವ ನೆಯ್ದಬೇಕೆಂಬ ಶರಣನ ಮಹಾಜ್ಞಾನ ಪ್ರಕಾಶವು ಚಿದ್‌ಘನಲಿಂಗದಲ್ಲಿ ನಿಷ್ಪತ್ತಿಯಾಯಿತ್ತೆಂಬುದೀಗ, ಬೆವಹಾರ ನಷ್ಟವಾಯಿತ್ತು ಮಧುಕೇಶ್ವರ ಲಿಂಗವೆ ಎಂದು ಬಾಯಾರುವ ಚಿತ್ತ ಬಟ್ಟಬಯಲಾಯಿತ್ತು ಎಂಬ ಶಬ್ದಕ್ಕರ್ಥ.

## ನಗೆಮಾರಿಯ ತಂದೆಯವರ ವಚನಗಳು

೧

ಇವರೆಲ್ಲರ ಕಂಡು ನಾನವಳಿಗೆ ಹೋಗಲಾಗಿ
ಕುಳ್ಳಿರುವದಕ್ಕೆ ಮೊದಲೆ ಒದ್ದಳೆನ್ನ.
ಬಾಯ ಹಲ್ಲು ಮುರಿಯಿತ್ತು, ಗಲ್ಲ ಬಡಯಿತ್ತು
ನಾಲಗೆ ಉಡುಗಿತ್ತು
ಇನ್ನವಳ ಗೊಡವೆ ಬೇಡ ಆತುರ ವೈರಿ ಮಾರೇಶ್ವರಾ.

**ಟೀಕು:—** ಶಿವಾಂಶೀಕನಾದ ಜ್ಞಾನ ಕಲಾತ್ಮನು ಶಿವಾಜ್ಞೆಯಿಂದ ದೇಹ ಸಂಬಂಧವಾಗಿ ಅಜ್ಞಾನ ಜಡ, ದುಷ್ಕರ್ಮ ಜೀವರುಗಳಪ್ಪ ಹರಿ–ಬ್ರಹ್ಮ–ದೇವ ದಾನವ-ಮಾನವ ಯತಿ ಪ್ರತಿಯೋಗಿಗಳೆಲ್ಲರು ಮಾಯಾ ಸಂಸಾರ ಸುಖಕ್ಕೆ ಮೆಚ್ಚಿ ಮರುಳಾಗಿ ಸಂಭ್ರಮಿಸುವವ ಕಂಡು ತಮ್ಮ ನಿಜವ ಮರದು ಅಲ್ಪ ಸಂಸಾರ ಸುಖಕ್ಕೆ ಆಸೆಮಾಡಿ ಪ್ರಕೃತಿ ಸಂಪರ್ಕಕ್ಕೆ ಉದ್ಯೋಗಿಸಲು ತನ್ನ ದುಶ್ಚರಿತ್ರವೆಂಬ ಚರಣದಲ್ಲಿ ಶಿವಾಪೇಕ್ಷೆಯ ಘಾತಿಸಿದಳೆಂಬುದೀಗ, ಇವರೆಲ್ಲರ ಕಂಡು ನಾನವಳಿಗೆ ಹೋಗಲಾಗಿ ಕುಳ್ಳಿರುವದಕ್ಕೆ ಮೊದಲೆ ಒದ್ದಳೆನ್ನ ಬಾಯ ಎಂಬ ಶಬ್ದಕ್ಕರ್ಥ. ಇಂತು ಮಾಯಾ ದುಶ್ಚರಿತ್ರವೆಂಬ ಚರಣ ತ್ರಾಣದಿಂದ ಶಿವಾಪೇಕ್ಷೆಯಳಿಯಲು ಚಿದಹಂಕಾರ, ನಿರಹಂಕಾರ ಎಂಬ ದಂತಂಗಳು ಭಗ್ನವಾಗಿ, ಶಿವಾದ್ವೈತ ಭಕ್ತಿ

ಯೆಂಬ ಗಲ್ಲ ಒಡೆದು ಲಿಂಗಾಂಗ ಸಮರಸಾನಂದವನರಿವ ಜಿಜ್ಞಿಹ್ವೆ ಉಡುಗಿ ಭವದುಃಖಕ್ಕೊಳಗಾದ ಆತ್ಮನೆಂಬುದೀಗ, ಹಲ್ಲು ಮುರಿಯಿತ್ತು, ಗಲ್ಲ ಒಡೆಯಿತ್ತು, ನಾಲಗೆ ಉಡುಗಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ಆತ್ಮಂಗೆ ಶಿವಕೃಪೆಯಿಂದ ಸುಜ್ಞಾನೋದಯವಾಗಿ ಭವದುಃಖ ಹೇತುವಪ್ಪ ಮಾಯಾ ಸಂಪರ್ಕದಾಸೆಯಳಿದು ಚಿಚ್ಛಕ್ತಿ ಸಂಪರ್ಕವ ಮಾಡಿ ಪರಮಾನಂದ ಸುಖದಲ್ಲಿರ್ದನೆಂಬುದೀಗ, ಇನ್ನಿವಳ ಗೊಡವೆ ಬೇಡ ಆತುರ ವೈರಿ ಮಾರೇಶ್ವರ ಎಂಬ ಶಬ್ದಕ್ಕರ್ಥ.

೨

ಅವರಪ್ಪನ ಮಗಳ ಗಂಡನ ತಂದೆಯು ತಾಯತಂದವರ
ಗಂಡನ ಹೆಂಡತಿಯು ಹೆತ್ತವಳ ಮಕ್ಕಳ ಮೂರು ತಲೆಗಡವರ
ಅಂದಿನನಾಟ ಬಂದೆ ನಾನು ನಿಂಪಂದಿಯೊಳಗಿರ್ದ—
ಅಂದವ ತೋರಾ ಆತುರ ವೈರಿ ಮಾರೇಶ್ವರಾ.

**ಟೀಕು:**— ಸಕಲ ತತ್ವವೆಂಬ ಶಿಶುಗಳ ಪೆತ್ತ ನಿಷ್ಕಲ ಶಕ್ತಿ ಎಂಬುದೀಗ, ಹೆತ್ತವಳ ಮಕ್ಕಳೆಂಬ ಶಬ್ದಕ್ಕರ್ಥ. ಆ ತತ್ವಂಗಳಿಗೆ ಜನಕನಪ್ಪ ನಿಷ್ಕಲ ಬ್ರಹ್ಮವೆಂಬುದೀಗ, ಅವರಪ್ಪನೆಂಬ ಶಬ್ದಕ್ಕರ್ಥ. ಆ ಪರಶಿವ ಶಕ್ತಿ ಸಂಪರ್ಕದಿಂದ ಉದಯವಾದ ಚಿಚ್ಛಕ್ತಿವಲ್ಲಭನಾದ ಮಹಾಲಿಂಗವು ಪರಮಾನಂದ ಸುಖದಲ್ಲಿರ್ದನೆಂಬುದೀಗ, ಮಗಳಗಂಡನೆಂಬ ಶಬ್ದಕ್ಕರ್ಥ. ಪರಶಕ್ತಿ ಸದಾಶಿವ ತತ್ವ ತಮಗುತ್ಪತ್ತ್ಯ ಕಾರಣವಪ್ಪ ಶಿವಭಕ್ತಿಗಳ ತಮ್ಮೊಳಡಗಿಸಿಕೊಂಡು ಸತಿ-ಪತಿ ಭಾವದಿಂದ ಲೀಲಾಕ್ರೀಡೆಯಲ್ಲಿರ್ದರಾದ ಕಾರಣ, ತಂದೆಯು ತಾಯತಂದವರ ಗಂಡನ ಹೆಂಡತಿಯೆಂಬ ಶಬ್ದಕ್ಕರ್ಥ. ನಿಷ್ಕಲವನೊಳಕೊಂಡ ನಿರವಯ; ಆ ನಿರವಯುವ ನೊಳಕೊಂಡ ಸಾವಯ: ಆ ಸಾವಯ ಲೀಲೆಯನೊಳಕೊಂಡ ಶ್ರೀಗುರುದೇವರೆಂಬುದೀಗ, ಮೂರು ತಲೆಯ ಗಡವರೆಂಬ ಶಬ್ದಕ್ಕರ್ಥ. ಅನಾದಿ ಶಿವ ಸಾಂಪ್ರದಾಯ ಹಿಡಿದು ಬಂದೆನೆಂದು ಶರಣ ಸ್ವಾನುಭಾವದಿಂದರಿದು ಗುರೋಪಾವಸ್ಥೆಯ ಮಾಡುತ್ತಿರ್ದನೆಂಬುದೀಗ, ಅಂದಿನ ನಂಟಬಂದೆ ನಾನು ಎಂಬ ಶಬ್ದಕ್ಕರ್ಥ. ಅಂತುಪಾವಸ್ಥೆಯ ಮಾಡುತ್ತಿರ್ದ ಜ್ಞಾನ ಕಲಾತ್ಮನು, ಎಲೆ ಶ್ರೀಗುರುವೆ! ಉಪದೇಶವನನುಕರಿಸಿ ತ್ರಿವಿಧಲಿಂಗಾಂಗ ಸಮರಸಾನುಭಾವವನರುಹಿ ಕೊಡೆಂದು ಬಿನ್ನೈಸುತ್ತಿರ್ದನೆಂಬುದೀಗ, ನಿಂಪಂದಿ ಯೊಳಗಿರ್ದ ಅಂದವ ತೋರಾ, ಆತುರ ವೈರಿ ಮಾರೇಶ್ವರಾ ಎಂಬ ಶಬ್ದಕ್ಕರ್ಥ.

೩

ಬ್ರಹ್ಮ ಮಡಕೆಯಾಗಿ, ವಿಷ್ಣು ಮುಂತಾಗಿ
ಯುಗ-ಯುಗಂಗಳ ಮೊಸರಾಗಿ ಅಹುದಲ್ಲವೆಂಬ—
ಎರಡು ಕಡಗುಣಿಯ ನೇಣುನೆಟ್ಟ ಸ್ಥಾಣು
ರುದ್ರಮೂರ್ತಿ ಹಿಡಿದು ಕಡವ ಕಣೆಕಂಗಳನೋಟ
ಇದು ಅತಿಮಥನವಾಗಿದೆ ಆತುರ ವೈರಿ ಮಾರೇಶ್ವರಾ.

**ಟೀಕು:**— ರಜೋಗುಣ ಸಂಬಂಧವಾದ ಸ್ಥೂಲತನುವನೆ ಭಾಂಡವಮಾಡಿ ಸಾತ್ವಿಕ ಗುಣಸಂಬಂಧವಾದ ಸ್ಥೂಲತನುವನೆ ಕಡಗೋಲಮಾಡಿ ಸಕಲ ಕರಣಂಗಳೆಂಬ ದಧಿಯ ತುಂಬಿದನೆಂಬುದೀಗ, ಬ್ರಹ್ಮ ಮಡಕೆಯಾಗಿ ವಿಷ್ಣು ಮುಂತಾಗಿ ಯುಗ-ಜುಗಂಗಳು ಮೊಸರಾಗಿ ಎಂಬ ಶಬ್ಬಕ್ಕರ್ಥ. ಸಂಕಲ್ಪ ವಿಕಲ್ಪಂಗಳನೆ ಕಡುಗುಣಿಯ ಸೂತ್ರವಮಾಡಿ ತಮೋಗುಣ ಸಂಬಂಧವಾದ ಕಾರಣ ತನುವನೆ ಇಂತಿವೆಲ್ಲಕ್ಕೆಯು ಆಧಾರ ಸ್ಥಾಯಿಯಾಗಿ ಅಳವಡಯಿಸಿದನೆಂಬುದೀಗ, ಅಹುದಲ್ಲವೆಂಬೆರಡು ಕಡಗುಣಿಯ ನೇಣುನೆಟ್ಟ ಸ್ಥಾಣು ರುದ್ರಮೂರ್ತಿಯೆಂಬ ಶಬ್ದಕ್ಕರ್ಥ. ಇಂತಪ್ಪ ಜೀವನು ಅಜ್ಞಾನವೆಂಬ ಸೂತ್ರವ ಕುಚಿತ್ತ-ಕುಭಾವ ಹಸ್ತಗಳಿಂ ಹಿಡಿದು ಮಥಿಸಿಸಲಲ್ಲಿ ಕರಣ ಮಥನ ಕರ್ಕಶ ಘನತರ ವಾಯಿತ್ತೆಂಬುದೀಗ, ಹಿಡಿದು ಕಡವ ಕಣ್ಣಿಕಂಗಳನೋಟ ಇದು ಅತಿ ಮಥನವಾಗಿದೆ ಆತುರವೈರಿ ಮಾರೇಶ್ವರಾ ಎಂಬ ಶಬ್ಬಕ್ಕರ್ಥ.

ಬಂದ-ಬಂದವರೆಲ್ಲರು ನೀರಕಾಸುವರಲ್ಲದೆ—
ಮಿಂದುಂಡು ಹೋಹವರನಾರನು ಕಾಣೆ;
ಕಾಗಲೆತ್ತಿತ್ತು ಮೇಲು ಮಡಕೆಯಿಲ್ಲ;
ಸೌದೆ ಬೆಂದಿತ್ತು ಬೆಂಕಿಯ ಕಾಣೆ
ಮೀವಾತಬಂದು ಉದಕವನೆರವವನಾರನು ಕಾಣೆ
ಕಂಡವರ ಹೇಳಿದಾತ ಬಂದ,
ಕಾಣಿಸಿಕೊಂಡವನಿಲ್ಲ ಆತುರವೈರಿ ಮಾರೇಶ್ವರಾ !

**ಟೀಕು:**— ತಮ್ಮ ನಿಜವ ಮರೆದು ಅನಂತಭವಂಗಳಲ್ಲಿ ಬರ್ಪವೇದಾಂತ ಜ್ಞಾನಿಗಳೆಲ್ಲರು ಸದ್ವಿವೇಕ ಜಲಸ್ವರೂಪವಾದ ಪರಬ್ರಹ್ಮವನು ಆತ್ಮಜ್ಞಾನವೆಂಬು ವಹಿಯಿಂದ ಮಥನಿಸುತ್ತಿರ್ಪರಲ್ಲದೆ ಅದನಾಧರಿಸುವದಕ್ಕೆ ಆಚಾರವೆಂಬ ಭಾಂಡವಿಲ್ಲ ವೆಂಬುದೀಗ, ಕಾಗಲೆತ್ತಿತ್ತು ಮೇಲು ಮಡಕೆಯಿಲ್ಲವೆಂಬ ಶಬ್ಬಕ್ಕರ್ಥ. ಸಕಲಕರಣಂಗಳ ನಿಗ್ರಹಿಸಿದ ಜ್ಞಾನಾಗ್ನಿ ಅಲ್ಲಿಯೆ ಸ್ಥಮಿಸಿತ್ತಲ್ಲದೆ ನಿರ್ಧರವಾಗಿ ನಿಲ್ಲದೆಂಬುದೀಗ, ಸೌದೆಬೆಂದಿತ್ತು ಬೆಂಕಿಯ ಕಾಣೆನೆಂಬ ಶಬ್ದಕ್ಕರ್ಥ. ಆ ಸುಖ ಜಲವ ತ್ರಿಪುಟಿ ಜ್ಞಾನದಿಂವ ಧರಿಸುವ ವೇದಾಂತಿ ಕರ್ಮಯೋಗದಲ್ಲಿ ವರ್ತಿಸುತ್ತಿರ್ಪಕಾರಣ ಆ ಚಿಜ್ಜಲವ ಸರ್ವಾಂಗದಲ್ಲಿ ಧರಿಸುವ ಚಿಚ್ಛಕ್ತಿ ಸ್ವರೂಪವಾದ ಜ್ಞಾನಗುರೋಪದೇಶವಿಲ್ಲದೆ ಹೋಯಿತ್ತೆಂಬುದೀಗ, ಮೀವಾತ ಬಂದ ಉವಕವ ನೆರವವರರನಾರನು ಕಾಣೆನೆಂಬ ಶಬ್ದಕ್ಕರ್ಥ. ತನ್ನಭಿನ್ನ ಜ್ಞಾನಕ್ಕೆ ಗೋಚರಿಸುವ ಪರಬ್ರಹ್ಮವಕಂಡು ಕೂಡಿದೆನೆಂಬ ವೇದಾಂತಿಗೆ ಬ್ರಹ್ಮನು ಸಂಧಾನ ಘಟಿಸದೆ ತನು ಕರಣೇಂದ್ರಿಯ ವಿಷಯ ಪ್ರಪಂಚಿನಲ್ಲಿ ವರ್ತಿಸಲು ಆ ನಿಜವಸ್ತು ಧ್ಯಾನಾ

ನಂದಕ್ಕೆ ಗೋಚರಿಸಿ ಧ್ಯಾನನಿಂದಲ್ಲಿ ಅಡಗಿತ್ತೆಂಬುದೀಗ, ಕಂಡವರ ಹೇಳಿದಾತ ಬಂದ ಕಾಣಿಸಿಕೊಂಡವನಿಲ್ಲ ಆತುರ ವೈರಿ ಮಾರೇಶ್ವರಾ ಎಂಬ ಶಬ್ದಕ್ಕರ್ಥ.

೫

ಭೂಮಿಯ ಮಧ್ಯದಲ್ಲಿ ಒಬ್ಬ ಗಾಣಿಗ ಸ್ಥಾಣುವ ನೆಟ್ಟು
ಮೊದಲೊಂದು ಬಾಯಿ ಮೂರು ಕೊಂತವರು
ಎಂಟೆತ್ತು, ನೊಗ ಹದಿನಾರು, ಕೊರಳ ಕಣ್ಣಿ ನೂರೊಂದು,
ಇಂತಿವ ಕೂಡಿ ಹೊಡೆಯಲಾಗಿ ನಿರಳ ಬಾಯಿಗೆ ಏರುವ ಹಲಗೆಗೆ
ಮೇಲಣ ಏತದ ಸೂತ್ರಕ್ಕೆ ಒಂದೆ
ಇದ ಹೇಳು, ಆತುರ ವೈರಿ ಮಾರೇಶ್ವರಾ!

**ಟೀಕು:**— ಪರಮಾನು ಭಾವಿಯಾದ ಶರಣನು ಚಿದೋಪದೇಶದಿಂದ ತನ್ನ ಕಾಯವೆಂಬ ಚಿದ್ ಭೂಮಿಯಲ್ಲಿ ಸರ್ವಾಧಾರವಪ್ಪ ಸದ್ರೂಪಲಿಂಗವ ಸ್ಥಾಪಿಸಿದನೆಂಬುದೀಗ, ಭೂಮಿಯ ಮಧ್ಯದಲ್ಲಿ ಒಬ್ಬ ಗಾಣಿಗ ಸ್ಥಾಣುವ ನೆಟ್ಟು ಎಂಬ ಶಬ್ದಕ್ಕರ್ಥ. ಆ ಲಿಂಗಕ್ಕೆ ಆಚಾರಾಂಗ ಒಂದೆ ಮೊದಲಾಗಿ ತ್ರಿವಿಧ ಭಕ್ತಿಗಳೆಲಾಯಾಗಿ, ಷಡ್ವಿಧ ಭಕ್ತಿಗಳೆ ಕೊಂತವಾಗಿ, ಅಷ್ಟವಿಧ ಸಕೀಲಂಗಳೆ ಎತ್ತಾಗಿ, ಷೋಡಶ ಭಕ್ತಿಗಳೆ ನೊಗವಾಗಿ, ಆ ಸಕೀಲಂಗಳ ನೈಷ್ಠಿಕಾಭಾವದಲ್ಲಿ ಸಂಬಂಧವಪ್ಪ ಏಕೋತ್ತರ ಶತ ಸ್ಥಲಂಗಳೆ ಕೊರಳ ಕಣ್ಣಿಯಾಗಿ ಎಂಬ ಶಬ್ದಕ್ಕರ್ಥ. ಇಂತಪ್ಪ ಸರ್ವಾಚಾರ ಸಂಪತ್ತು ವಿಡಿದಾಚರಿಸುತ್ತಿರ್ದ ಶರಣನೆಂಬುದೀಗ, ಇಂತಿವ ಕೂಡಿ ಹೊಡೆಯಲಾಗಿ ಎಂಬ ಶಬ್ದಕ್ಕರ್ಥ. ಬಹಿರಂಗದ ಇಷ್ಟಲಿಂಗದ ಭಕ್ತಿಯಲ್ಲಿ ಸಂಬಂಧವಾದ ಸತ್ಕ್ರಿಯಾಚಾರಕ್ಕೆ ಅಂತರಂಗದ ಪ್ರಾಣಲಿಂಗ ಸಂಬಂಧವಾದ ಸ್ವಾನುಭಾವ ಸೂತ್ರಕ್ಕೆ ಕಾರಣವಾದ ಶಿವಾದ್ವೈತ ಭಕ್ತಿ ಭಾವವೆಂಬುದೀಗ, ನಿರಳ ಬಾಯಿಗೆ ಏರುವ ಹಲಗೆಗೆ ಮೇಲಣ ಏತದ ಸೂತ್ರಕ್ಕೆ ಒಂದೆ ಎಂಬ ಶಬ್ದಕ್ಕರ್ಥ. ಈ ಭೇದವ ನಿರೂಪಿಸೆಂದು ಜ್ಞಾನ ಗುರುವಿಂಗೆ ಬಿನ್ನೈಸುತ್ತಿರ್ದ ಶರಣನೆಂಬುದೀಗ, ಇದ ಹೇಳು ಆತುರ ವೈರಿ ಮಾರೇಶ್ವರಾ ಎಂಬ ಶಬ್ದಕ್ಕರ್ಥ,

೬

ತೃಣ ಮುನಿದು ತ್ರಿಣೆಯನ ಹೆಡಗೈಯ್ಯ ಕಟ್ಟುವಾಗ
ಹಣೆಯ ಬೆಂಕಿಯಲ್ಲಿ ಅಡಗಿತ್ತೆಂದರಿಯೆ
ಕಡುಗಲಿಗಳೆಲ್ಲರು ಉಡುವಿನ ಕೈಯಲ್ಲಿ ಸಾವಾಗ
ಉಡಿಯ ಕೈದುಯಲ್ಲಿ ಉಡುಗಿದವೆಂದರಿಯೆ
ಒಕ್ಕುಡುತೆಯಲ್ಲಿ ಅಡಗಿತ್ತು ಸಮುದ್ರ ಕೆರೆ ತುಂಬಿ
ತೊರೆ ಒಡಯಿತ್ತು ಆತುರ ವೈರಿ ಮಾರೇಶ್ವರಾ,

**ಟೀಕು:**— ತ್ರಿಪುಟಿ ಜ್ಞಾನ ಸಂಬಂಧಿಯಾದ ವೇದಾಂತಿಯ ಅಭ್ಯಾಸ ಯೋಗಕ್ಕೆ ತೃಣ ಪ್ರತಿ ಪತ್ತಾದ ಸಕಲ ಕರಣಂಗಳಳಿಯದೆ ಪ್ರಪಂಚು ಕ್ರೀಡೆಯಿಂ

ಮಸಕಿ ಭಾವವ ಭ್ರಾಂತಿಯನೆಯ್ದಿಸಿ ಭವ ಬಂಧನಕ್ಕೊಳಗು ಮಾಡಲು ಆ ಆತ್ಮ ಜ್ಞಾನ ಅಲ್ಲಿಯೇ ಸ್ಥಿಮಿಸಿತ್ತೆಂಬುದೀಗ, ತೃಣ ಮುನಿದು ತ್ರಿಣೆಯನ ಹೆಡಗಯ್ಯ ಕಟ್ಟುವಾಗ ಹಣಿಯ ಬೆಂಕಿಯಲ್ಲಿ ಅಡಗಿತ್ತೆಂದರಿಯೆನೆಂಬ ಶಬ್ದಕ್ಕರ್ಥ. ಆ ನಂಗ ಸಂಗವೆಮಗಿಲ್ಲ ನಾವೆ ಬಲ್ಲಿದರೆಂಬ ಪಂಥ ಪರಾಕ್ರಮವ ನುಡಿದವಾಗ್ಬ್ರಹ್ಮವಾದಿ ಗಳೆಲ್ಲರು ಜಡರೂಪವಪ್ಪ ಮಾಯಾ ಸಂಸಾರಕ್ಕೊಳಗಾಗಲಲ್ಲಿಯೆ ಮತಿಜ್ಞಾನ ವಡಗಿತ್ತೆಂಬುದೀಗ, ಕಡುಗಲಿಗಳೆಲ್ಲರುವು ಉಡುವಿನ ಕೈಯಲ್ಲಿ ಸಾವಾಗ ಉಡಿಯ ಕಾಯ್ದ 'ಎಲ್ಲಿ ಉಡುಗಿತ್ತೆಂದರಿಯೆನೆಂಬ ಶಬ್ದಕ್ಕರ್ಥ. ಇಂತಪ್ಪವರ ಸೂಕ್ಷ್ಮಾಂತ ರಂಗದಲ್ಲಿ ಸಂಸಾರ ವಿಷಯ ರಸೋದಕ ಪರಿಪೂರಿತವಾಗಿರ್ಪ ಭವಾರ್ಣವಡಗಿ ಸರ್ವಾಂಗದಲ್ಲಿ ಭರಿತವಾಗಿ ಮನೋ ಪ್ರಕೃತಿವಿಡಿದು ಚರಿಸುತ್ತಿಹುದೆಂಬುದೀಗ, ಒಕ್ಕುಡಿತೆಯಲ್ಲಿ ಅಡಗಿತ್ತು ಸಮುದ್ರ ಕೆರೆ ತುಂಬಿ ತೊರೆ ಒಡೆಯಿತ್ತು ಆತುರ ವೈರಿ ಮಾರೇಶ್ವರಾ ಎಂಬ ಶಬ್ದಕ್ಕರ್ಥ.

೭

ಹಳ್ಳಿಯ ಹೊಲೆಯನ ಕೈಯಲ್ಲಿ ಡಿಳ್ಳ್ಯಾಧಿಪತಿ ಸತ್ತ
ಆಳುವ ಗಂಡ ಹೆಂಡತಿಗೆ ಕೀಳಾಳಾದ
ಒಡೆಯ ಬಂಟನಿಗೆ ಬಡಿ ಹೊರೆಯಾದ
ಹೊಡೆಯ ಹುಲ್ಲು ಕರವಾಳ ಹಿಡಿಯ ಕೊಯ್ಯಿತು
ಆತುರ ವೈರಿ ಮಾರೇಶ್ವರಾ !

**ಟೀಕು:—** ಪಂಚಭೂತ ಗ್ರಾಮದಲ್ಲಿ ಸರ್ವಸೂತಕ ಸನ್ನಿಹಿತವಾಗಿರ್ಪ ಜೀವನ ಪ್ರಪಂಚು ವರ್ತನೆಯಿಂದ ಸಮಸ್ತ ಜಗಜ್ಜನದಾಧಾ ರಾಧೆಯ ಕರ್ತೃ ವಪ್ಪ ಪರಶಿವ ತತ್ವ ಗೋಚರಿಸದೆ ಅಡಗಿತ್ತೆಂಬುದೀಗ, ಹಳ್ಳಿಯ ಹೊಲೆಯನ ಕೈಯಲ್ಲಿ ಡಿಳ್ಳ್ಯಾಧಿಪತಿ ಸತ್ತನೆಂಬ ಶಬ್ದಕ್ಕರ್ಥ. ಇಂತು ಶಿವತತ್ವ ಗೋಚರಿಸದೆ ಅಡಗಲು ಮಾಯಾಶಕ್ತಿ ವಲ್ಲಭನಾಗಿರ್ಪ ಜೀವನು ಅಲ್ಪ ಸುಖಕ್ಕೆ ಮೆಚ್ಚಿ ಪ್ರಕೃತಿ ವಶನಾಗಿ ಬಹು ವಿಧ ಕರ್ಮವ ನಡಸುತ್ತಿಹನೆಂಬುದೀಗ, ಆಳುವ ಗಂಡ ಹೆಂಡತಿಗೆ ಕೀಳಾಳಾದನೆಂಬ ಶಬ್ದಕ್ಕರ್ಥ. ಇಂತು ಮಾಯಾ ವಶಗತನಾಗಿರ್ಪ ಭೃತ್ಯನಪ್ಪ ಜೀವನ ಜ್ಞಾನ ಅಹಂ ಮಮತೆಗಳಿಂ ಕರ್ತೃವಪ್ಪ ಪರಮಾತ್ಮನು ಮರವೆಗೀಡಾಗಿ ಕಾಲ-ಕಾಮರ ಸೀಕ್ಷೆಗೊಳಗಾದನೆಂಬುದೀಗ, ಒಡೆಯ ಬಂಟ ನಿಗೆ ಬಡಿಹೊರೆಯಾದನೆಂಬ ಶಬ್ದಕ್ಕರ್ಥ. ಇಂತಪ್ಪ ಜೀವನು ಇದಿರಿಟ್ಟಿರಿವ ಭಿನ್ನ ಜ್ಞಾನ ಸಂಬಂಧವಾದ ಕರ್ಮಕ್ರಿಯಾಚಾರವನು ಪ್ರಪಂಚು ವರ್ಧನವನುಳ್ಳ ಸಕಲ ಕರಣಂಗಳು ನಿಜವನೆಯ್ದಲಿಸದೆ ಭವದುಷ್ಟಕೊಳಗು ಮಾಡಿದನೆಂಬುದೀಗ, ಹೊಡೆಯ ಹುಲ್ಲು ಕರವಾಳ ಹಿಡಿಯ ಕೊಯ್ಯಿತ್ತು ಆತುರ ವೈರಿ ಮಾರೇಶ್ವರಾ ಎಂಬ ಶಬ್ದಕ್ಕರ್ಥ.

೮

ಕೂರಲಗು ಕೊಯ್ಯಿತ್ತು ಜಾಜಿಯ ಬಿರಿ ಮೊಗ್ಗೆಯ
ಆರವೆ ನುಂಗಿತ್ತು ಸೇರಿದ ಪಕ್ಷಿಯ
ಮಾದಿಗನ ಮನೆಯ ಮಡಕೆಯ ಕೂಳ ಹಾರುವನುಂಡ
ಸಹೋದರದ ಒಳಕೂಡಿದ ಹಿರಿಯಣ್ಣ
ಅಣ್ಣನ ಹೆಂಡರ ತಮ್ಮ ಹಾಕಿಕೊಂಡು ಕೊಡದಿರಲಾಗಿ
ಇದು ಅನ್ಯಾಯವೆಂದು ಅವನ ಕಿರಿಯ ತಮ್ಮ ತಾ ತಕ್ಕೊಂಡ
ಇದು ಚನ್ನಾಯಿತ್ತು ಇದರ ಗನ್ನವ ಹೇಳು ಆತುರ ವೈರಿ
ಮಾರೇಶ್ವರಾ !

ಟೀಕು:— ಸತ್ಕ್ರಿಯಾನುಭಾವಿಯಾದ ಶರಣನ ಸಮ್ಯಜ್ಞಾನವೆಂಬ ಶಸ್ತ್ರ, ಮನಸ್ಸಿನ ಆಧೀನದಲ್ಲಿರ್ಪ ಸಕಲೇಂದ್ರಿಯಂಗಳ ನಿವೃತ್ತಿಯ ಮಾಡಿತ್ತೆಂಬುದೀಗ, ಕೂರಲಗು ಕೊಯ್ಯಿತ್ತು ಜಾಜಿಯ ಬಿರಿ ಮೊಗ್ಗೆಯನೆಂಬ ಶಬ್ದಕ್ಕರ್ಥ. ಇಂತು ಇಂದ್ರಿಯಂಗಳು ಸುಜ್ಞಾನದಿಂದಳಿಯಲು ಸದಾಚಾರ ಸಂಪತ್ತಿನ ಶಾಖೋಪ ಶಾಖೆಯನುಳ್ಳ ಸದ್ವಿವೇಕ ವೃಕ್ಷವನು ಆಶ್ರಯಿಸಿದ ಪರಮಹಂಸನ ತಲ್ಲಿಂಗವ ವಗ್ರಹಿಸಿತ್ತೆಂಬುದೀಗ, ಆರವೆ ನುಂಗಿತ್ತು ಸೇರಿದ ಪಕ್ಷಿಯನೆಂಬ ಶಬ್ದಕ್ಕರ್ಥ. ಆ ಲಿಂಗದಲ್ಲಿ ಅಡಗಿದ ಸರ್ವಸೂತಕ ರಹಿತನಾದ ಶರಣನ ಆಕಾಯ ಸಂಬಂಧ ವಾದ ಇಂದ್ರಿಯಂಗಳ ವಿಷಯ ಪದಾರ್ಥವ ಸುಜ್ಞಾನ ಮಾರ್ಗದಲ್ಲಿ ಗಮಿಸುವ ಚಿಲ್ಲಿಂಗ ಸ್ವೀಕರಿಸಿ ಪ್ರಸನ್ನ ಪ್ರಸಾದವ ಕರುಣಿಸುತ್ತಿಹುದು ಶರಣಂಗೆಂಬುದೀಗ, ಮಾದಿಗನ ಮನೆಯ ಮಡಿಕೆಯ ಕೂಳ ಹಾರುವನು ಉಂಡನೆಂಬ ಶಬ್ದಕ್ಕರ್ಥ. ಇಂತಪ್ಪಶರಣನ ತ್ರಿವಿಧ ಲಿಂಗ-ತ್ರಿವಿಧ ಶಕ್ತಿ ಸಂಪರ್ಕ ಯೋಗವು ಎಂತೆಂದೊಡೆ- ಶ್ರೀಗುರುವಿನ ಸದ್ಭಾವದಲ್ಲಿ ಸಹವಾಗಿ ಜನಿಸಿದ ಕ್ರಿಯಾ ಶಕ್ತಿಯ ಅಂಗವ ಮಾಡಿ ಕೊಂಡಿರ್ಪ ಲಿಂಗದ್ವಯಂಗಳಿಗಗ್ರಜನಾದ ಇಷ್ಟಲಿಂಗವೆಂಬುದೀಗ, ಸಹೋದರ ದವಳ ಕೂಡಿದ ಹಿರಿಯಣ್ಣನೆಂಬ ಶಬ್ದಕ್ಕರ್ಥ. ಆ ಇಷ್ಟಲಿಂಗಕ್ಕೆ ಅಂಗವಾದ ಕ್ರಿಯಾ ಶಕ್ತಿಯನೆ ಜ್ಞಾನಶಕ್ತಿ ಸ್ವರೂಪಿನಿಂದ ಅಂಗವ ಮಾಡಿಕೊಂಡಿರ್ಪ ಆ ಲಿಂಗಕ್ಕೆ ತಮ್ಮನಾದ ಪ್ರಾಣಲಿಂಗ ಸತ್ಕ್ರಿಯಾಚಾರಕ್ಕೆ ತೆರಪುಗೊಡದಿರ್ದವೆಂಬು ದೀಗ, ಅಣ್ಣನ ಹೆಂಡರ ತಮ್ಮ ಹಾಕಿಕೊಂಡು ಕೊಡದಿರಲಾಗಿ ಎಂಬ ಶಬ್ದ ಕ್ಕರ್ಥ. ಮಾರ್ಗಕ್ರಿಯಾಚಾರವಳಿದು ಮೀರಿದ ಕ್ರಿಯಾಚಾರದಲ್ಲಿ ನಿಂದಿತ್ತೆಂದ ರಿದು ಪ್ರಾಣಲಿಂಗಕ್ಕೆ ಅಂಗವಾದ ಜ್ಞಾನಶಕ್ತಿಯನೆ ಇಚ್ಛಾಶಕ್ತಿ ಸ್ವರೂಪಿನಿಂದ ಅಂಗವ ಮಾಡಿಕೊಂಡಿರ್ಪ ಆ ಇಷ್ಟ ಲಿಂಗಕ್ಕೆ ಕಿರಿಯ ತಮ್ಮನಾದ ಭಾವಲಿಂಗ ವೆಂಬುದೀಗ, ಇದು ಅನ್ಯಾಯವೆಂದು ಅವನ ಕಿರಿಯ ತಮ್ಮ ತಾ ತಕ್ಕೊಂಡ ನೆಂಬ ಶಬ್ದಕ್ಕರ್ಥ. ಈ ಲಿಂಗತ್ರಯ ಶಕ್ತಿ ಸಂಪರ್ಕಯೋಗ ವೈಕ್ಯಾನುಭಾವ ಸುಖವಾದ ಕಾರಣ ಈ ನಿರ್ಣಯವ ನಿರೂಪಿಸೆಂದು ಜ್ಞಾನ ಗುರುವಿಂಗೆ ಬಿನ್ನೈ

ಸುತ್ತಿರ್ದ ಶರಣನೆಂಬುದೀಗ, ಇದು ಚನ್ನಾಯಿತ್ತು ಇದರ ಗನ್ನವ ಹೇಳು ಆತುರ ವೈರಿ ಮಾರೇಶ್ವರಾ ಎಂಬ ಶಬ್ದಕ್ಕರ್ಥ.

೯

ಕಾಗೆ ಕುಟುಕ ಕೊಂಬಾಗ, ಗೂಗೆ ಕಣ್ಣ ತೆಗಯಿತ್ತು
ಗೂಗೆ ಕಣ್ಣ ತೆಗವಾಗ ಅದೆಯ ಹಕ್ಕಿ ಬಾಯ ಬಿಟ್ಟಿತ್ತು
ಅದೆಯ ಹಕ್ಕಿ ಬಾಯ ಬಿಡುವಾಗ ಮಾದೇವರೊಡೆಯ
ಮಾದೇವನಾದ ಮಾದೇವಗೆ ಮುಂದೆ
ಒಲೆಯ ತೆಗೆವಾಗ ಕೊಡಗ ಏಡಿಸುತ್ತಿದ್ದಿತ್ತು
ಕೊಡಗ ಏಡಿಸುವಾಗ ಬಳ್ಳು ತಲೆತೂಗುತ್ತಿದ್ದಿತ್ತು
ಬಳ್ಳು ತಲೆದೂಗುವಾಗ ಬಳ್ಳಿಗೆದಳ್ಳುರಿಯು ಹೆಡೆಬಂದು
ಜಗವೆಲ್ಲ ಕೊಂದಿತ್ತು ಆತುರವೈರಿ ಮಾರೇಶ್ವರಾ.

ಟೀಕು:— ಸ್ಥೂಲತನು ಸಂಬಂಧವಾದ ಅಜ್ಞಾನ ಸ್ವರೂಪ ನಪ್ಪ ಜೀವಾತ್ಮನು ಪ್ರಾರಾಬ್ಧ ಭೋಕ್ತೃ ಕರ್ಮವನನುಭವಿಸುತ್ತಿರಲು ಅರಿವನೆ ಮರದು ಮರವೆಯುನೆ ಅರಿವುತ್ತಿರ್ಪ ಸೂಕ್ಷ್ಮ ತನು ಸಂಬಂಧವಾದ ಅಂತರಾತ್ಮನಲ್ಲಿ ಸುಜ್ಞಾನ ಪ್ರಕಾಶವಾಯಿತ್ತೆಂಬುದೀಗ, ಕಾಗೆ ಕುಟುಕ ಕೊಂಬಾಗ ಗೂಗೆ ಕಣ್ಣ ತೆಗಯಿತ್ತೆಂಬ ಶಬ್ದಕ್ಕರ್ಥ. ಇಂತು ಅಂತರಾತ್ಮನಲ್ಲಿ ಸುಜ್ಞಾನ ಪ್ರಕಾಶವಾಗಲು ಸಕಲ ಪ್ರಪಂಚಿನ ತೋರಿಕೆ ಯಿಲ್ಲದ ಕಾರಣ ತನು ಸಂಬಂಧವಾದ ಪರಮಾತ್ಮನು ಶಿವಾಪೇಕ್ಷೆ ಚಿಂತನೆಯಿಂ ಶ್ರೀಗುರೋಪಾವಸ್ಥೆಯ ಮಾಡುತ್ತಿರ್ದನೆಂಬುದೀಗ, ಗೂಗೆ ಕಣ್ಣ ತೆಗವಾಗ ಅದೆಯ ಹಕ್ಕಿಬಾಯ ಬಿಟ್ಟಿತ್ತೆಂಬ ಶಬ್ದಕ್ಕರ್ಥ. ಇಂತು ಪರಮಾತ್ಮನು ಉಪಾವಸ್ಥೆಯ ಮಾಡುತ್ತಿರಲು ಶ್ರೀಗುರೋಪದೇಶದಿಂ ತತ್ವತ್ರಯಂಗಳಿಗಧಿಕಾರಿಯಪ್ಪ ಚಿತ್ ಪ್ರಭಾ ಚೈತನ್ಯ ವಸ್ತು ಭಕ್ತಿ ಕಾರಣವಾಗಿ ಆತ್ಮ ತ್ರಯದಲ್ಲಿ ಲಿಂಗತ್ರಯ ಸ್ವರೂಪಿನಿಂ ನೆಲೆಗೊಂಡು ತ್ರಿವಿಧಾಚಾರದಲ್ಲಿ ಗಮಿಸುತ್ತಿರ್ಪನೆಂಬುದೀಗ, ಗೂಗೆ ಕಣ್ಣ ತೆಗೆವಾಗ ಮಾದೇವರೊಡೆಯ ಮಾದೇವನಾದನೆಂಬ ಶಬ್ದಕ್ಕರ್ಥ. ಆತ್ಮ ತ್ರಯದಲ್ಲಿ ವಿಶ್ರಮಿಸಿದ ಲಿಂಗತ್ರಯದಲ್ಲಿ ಪತಿ ಲಿಂಗ ಸತಿಶ್ಯೋಽಹ" ವೆಂಬ ಭಯ ಭಾವವಳಿದು ಶರಣ ಸತಿ ತ್ರಿವಿಧಾಚರಣೆ ಏಕಾರ್ಥವ ಮಾಡುವಲ್ಲಿ ಉನ್ಮನೀ ತತ್ವ ಸ್ವರೂಪವಾದ ಮನಸ್ಸು ಸಂದೇಹ ಭಾವಮಂ ಜರದು ಬಿಡಿಸುತ್ತಿಹುದೆಂಬುದೀಗ, ಕೊಡಗ ಏಡಿಸುವಾಗ ಬಳ್ಳು ತಲೆದೂಗುತ್ತಿದ್ದಿತ್ತು ಎಂಬ ಶಬ್ದಕ್ಕರ್ಥ. ಇಂತು ಪ್ರಣಮೋಹಂ ಭಾವನರಿದೊಲವುತ್ತಿರ್ದಲ್ಲಿ ಭಕ್ತ್ಯಾನಂದ ಜಲದಲ್ಲಿ ಸುಳಿವ ಸಜ್ಜೀವಾತ್ಮಕಂಗೆ ಸಮ್ಯಜ್ಞಾನ ಪ್ರಭಾವಿಸಲು ಆ ಕಾಯ ಸಂಬಂಧವಾದ ಸುಜ್ಞಾನ ಕರಣಂಗಳ ಚಿದ್ಘನ ಲಿಂಗದಲ್ಲಿ ಲಯವ ನೆಯ್ದಿಸಿತ್ತೆಂಬುದೀಗ, ಬಳ್ಳು ತಲೆದೂಗುವಾಗ ಒಳ್ಳಿಗೆ ದಳ್ಳುರಿಯು ಹೆಡೆಬಂದು ಜಗವೆಲ್ಲರ ಕೊಂದಿತ್ತು ಆತುರವೈರಿ ಮಾರೇಶ್ವರಾ ಎಂಬ ಶಬ್ದಕ್ಕರ್ಥ.

# ಆದಯ್ಯನವರ ವಚನಗಳು

೧

ಹದಿನಾರಂಗುಲದುದ್ದ ಸರ್ಪನ ವಿಷಕೆಟ್ಟು-
ಎರಡು ಕಾಲನಾಕಾಶದಲೂರಿ ನಿಂದಿತ್ತು, ಬಹು ಮುಖದ ಪಕ್ಷಿ
ಏಕ ಮುಖವಾಗಿ ಚಂಚು ಪುಟದಲ್ಲಿರ್ದ
ರತ್ನ ಪಕ್ಷಿಯ ನುಂಗಿ ರತ್ನ ಕೆಟ್ಟಿತ್ತು
ಸೌರಾಷ್ಟ್ರ ಸೋಮೇಶ್ವರನಲ್ಲಿ ಅರಸುವ ಬನ್ನಿರೆ ಸುಜ್ಞಾನಭರಿತರು.

**ಟೀಕು**:— ಷೋಡಶಾಂಗುಲ ಪ್ರಮಾಣಿನಿಂ ಚರಿಸುವ ಪ್ರಾಣವಾಯು ಚೇತನ ವಿಡಿದಿರ್ಪ ಮನೋ ಕುಂಡಲಿಯ ಶಂಕಾ ವಿಷವಳಿದು ಜ್ಞಾನ ಕ್ರಿಯಾ ಚಾರವ ಚಿದಾಕಾಶದಲ್ಲಿ ಸಂಬಂಧಿಸಲೆಂಬುದೀಗ, ಹದಿನಾರಂಗುಲದುದ್ದ ಸರ್ಪನ ವಿಷ ಕೆಟ್ಟು ಎರಡು ಕಾಲನಾಕಾಶದಲೂರಿ ನಿಂದಿತ್ತೆಂಬ ಶಬ್ದಕ್ಕರ್ಥ. ಇಂತಾಗಲು ಸರ್ವತೋ ಮುಖವಾಗಿ ಚರಿಸುವ ಜೀವ ಹಂಸನ ಚರಿತ್ರವಳಿದು ಸುಜ್ಞಾನ ಕ್ರಿಯಲ್ಲೇಕ ಮುಖವಾಗಲಾಗಿ ಸದ್ಭಾವದಲ್ಲಿರ್ದ ವಿರಳ ಶಿವತತ್ವವಾ ಜೀವ ಹಂಸನ ನವಗ್ರಹಿಸಿ ಅಲ್ಲಿಯೆ ತಲ್ಲಿಯ್ಯವಾಯಿತ್ತೆಂಬುದೀಗ, ಬಹು ಮುಖದ ಪಕ್ಷಿ ಏಕ ಮುಖವಾಗಿ ಚಂಚುಪುಟದಲ್ಲಿದ್ದ ರತ್ನ ಪಕ್ಷಿಯ ನುಂಗಿ ರತ್ನ ಕೆಟ್ಟತ್ತೆಂಬ ಶಬ್ದಕ್ಕರ್ಥ. ಈ ಭೇದವ ಜ್ಞಾನ ಗುರು ಮುಖದಿಂ ಪರಾಮರಿಸಿಕೊಂಬ ಬನ್ನಿ ಸುಜ್ಞಾನ ಭರಿತರೆಂಬದ ನ್ಯೋಪದೇಶವಾಗಿ ನಿರೂಪಿಸುತ್ತಿರ್ದ ಶರಣನೆಂಬುದೀಗ, ಸೌರಾಷ್ಟ್ರ ಸೋಮೇಶ್ವರನಲ್ಲಿ ಅರಸುವ ಬನ್ನಿರೆ ಸುಜ್ಞಾನಭರಿತರೆಂಬ ಶಬ್ದಕ್ಕರ್ಥ.

೨

ಆಕಾಶದಲಾಡುವ ಹದ್ದನೊಂದು ಸರ್ಪನುಂಗಿದ್ದ ಕಂಡೆ
ಆ ಸರ್ಪ ಕಿಚ್ಚಿನೊಳಬಿದ್ದು ನಿಂದುರಿವುದ ಕಂಡೆ
ಷಣ್ಮುಖನ ಶಿರಹರಿದು ಬಯಲಾದುದ ಕಂಡೆ
ಉರಿ ಕೆಟ್ಟಲ್ಲಿ ಕರಿ ಇಲ್ಲ, ಭಸಿತವಿಲ್ಲ—
ಈ ಪರಿಯ ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣರೆಲ್ಲರೂ ಬಲ್ಲರು.

**ಟೀಕು**:— ಆತ್ಮ ತತ್ವವೆಂಬುದೀಗ, ಆಕಾಶವೆಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮ ತತ್ವದಲ್ಲಿ ಸ್ವಲೀಲಾ ಪರನಾಗಿರ್ಪ ಪರಮ ಹಂಸನೆಂಬುದೀಗ, ಆಕಾಶದಲಾಡುವ ಹದ್ದನೆಂಬ ಶಬ್ದಕ್ಕರ್ಥ. ಆ ಪರಮ ಹಂಸನ ಶಂಕಾ ವಿಷ ಸಂಬಂಧಿಯಪ್ಪ ಮನೋಸರ್ಪನವ ಗ್ರಹಿಸಿತ್ತೆಂಬುದೀಗ, ಒಂದು ಸರ್ಪ ನುಂಗಿದ್ದ ಕಂಡೆನೆಂಬ ಶಬ್ದಕ್ಕರ್ಥ. ಅಂತಪ್ಪ ಮನೋಮಧ್ಯದಲ್ಲಿ ಸಮ್ಯ ಜ್ಞಾನೋದಯವಾಗಲು ಆ ಜ್ಞಾನಾಗ್ನಿ ಪ್ರಕಾಶದಲ್ಲಿ ಮನೋಪ್ರಕೃತಿಯುಳಿಯಿತ್ತೆಂಬುದೀಗ, ಆ ಸರ್ಪ ಕಿಚ್ಚಿನೊಳಗೆ ಬಿದ್ದು ಎಂಬ ಶಬ್ದಕ್ಕರ್ಥ. ಆ ಮನೋ ಪ್ರಕೃತಿಯುಳಿಯಲು ಉನ್ಮನಿ ತತ್ವದಲ್ಲಿ ಸ್ವಸ್ಥಿರವಾಗಿ ಪ್ರಕಾಶಿಸುತ್ತಿಹುದೆಂಬುದೀಗ, ನಿಂದುರಿವುದ ಕಂಡೆನೆಂಬ

ಶಬ್ದಕ್ಕರ್ಥ. ಅಂತು ಮನವಳಿದು ಉನ್ಮನಿ ತತ್ವ ಸ್ವರೂಪವಾಗಿ ಪ್ರಕಾಶಿಸುತ್ತಿರಲು, ಷಡೇಂದ್ರಿಯಂಗಳೆ ಮುಖವಾಗುಳ್ಳ ಜೀವನ ಅಜ್ಞಾನವೆಂಬ ಶಿರಸ್ಸು ಸುಜ್ಞಾನ ಪ್ರಕಾಶದಿಂದ ಛೇದನವಾಯಿತ್ತೆಂಬುದೀಗ, ಷಣ್ಮುಖನ ಶಿರಹರಿದು ಎಂಬ ಶಬ್ದಕ್ಕರ್ಥ. ಅಂತು ಸುಜ್ಞಾನ ಪ್ರಕಾಶದಿಂದ ಜೀವ ಭಾವವಳಿದು ಸಜ್ಜೀವನು ಶ್ರೀಗುರು ಕಾರುಣ್ಯದಿಂದ ಸರ್ವಾಂಗಲಿಂಗ ಸಂಬಂಧವಾಗಿಹುದ ಶರಣ ಕಂಡನೆಂಬುದೀಗ, ಬಯಲಾದುದ ಕಂಡೆನೆಂಬ ಶಬ್ದಕ್ಕರ್ಥ. ಇಂತು ಸರ್ವಾಂಗ ಲಿಂಗ ಸಂಬಂಧಿಯಾದ ಶರಣನ ಜ್ಞಾನಾಗ್ನಿ ಪ್ರಕಾಶವು ಚಿದ್‌ಘನ ಲಿಂಗದಲ್ಲಿ ನಿಷ್ಪತಿಯಾಯಿತ್ತೆಂಬುದೀಗ, ಉರಿಕೆಟ್ಟಲ್ಲಿ ಎಂಬ ಶಬ್ದಕ್ಕರ್ಥ. ಆ ಶಿವಜ್ಞಾನ ಪ್ರಕಾಶ ನಿಷ್ಪತಿಯಾದ ಶರಣನ ವೃತ್ತಿಜ್ಞಾನವಳಿದು ಲಿಂಗಾಂಗವೆರಡು ನಿರ್ವಯವಾಯಿತ್ತೆಂಬುದೀಗ, ಕರಿಯಿಲ್ಲ-ಭಸಿತವಿಲ್ಲವೆಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗದ ಸಮರಸೈಕ್ಯವನು ಶಿವಾನುಭಾವಿಗಳೇ ಬಲ್ಲರೆಂಬುದೀಗ, ಈ ಪರಿಯ ಸೌರಾಷ್ಟ್ರ ಸೋಮೇಶ್ವರಾ, ನಿಮ್ಮ ಶರಣರೆಲ್ಲರು ಬಲ್ಲರು ಎಂಬ ಶಬ್ದಕ್ಕರ್ಥ.

೩

ಜಗದಗಲದ ಬಲೆಯ ನಗಲ ಬಲ್ಲವರ ಕಾಣೆ
ಮುಗಿಲುದ್ದಂಬರವ ನುಗಿಯ ಬಲ್ಲವರ ಕಾಣೆ
ಹಗಲಿರುಳು ಸೀಮೆಯ ಮಿಗೆ ಮೀರುವರ ಕಾಣೆ,
ತಗದಿಪ್ಪ ಶುನುಕನ ಬಗೆಯ ಬಲ್ಲವರ ಕಾಣೆ
ಅಗಡಾನೆ ಬಿಗಿದು ಬಲ್ಪಿಡಿಯಿತ್ತಲ್ಲಾ ಜಗವೆಲ್ಲ
ಸೌರಾಷ್ಟ್ರ ಸೋಮೇಶ್ವರನ ನಿಜವನರಿಯನೆ ಮುಳುಗಿದರಲ್ಲ,
ಮುಪ್ಪುರದಲ್ಲಿ.

**ಟೀಕು:—** ಚತುರ್ದಶ ಭುವನವನೊಳಕೊಂಡಿಪ್ಪ ಮಾಯಾಪಾಶವೆಂಬುದೀಗ, ಜಗದಗಲದ ಬಲೆಯೆಂಬ ಶಬ್ದಕ್ಕರ್ಥ. ಅಂತಪ್ಪ ಮಾಯಾ ಪಾಶವ ನಿವೃತ್ತಿಯ ಮಾಡಲರಿಯದೆಂಬುದೀಗ, ಬಲೆಯ ನಗಲ ಬಲ್ಲವರ ಕಾಣೆನೆಂಬ ಶಬ್ದಕ್ಕರ್ಥ. ಮುಗಿಲೆಂದೊಡೆ ಮಾಯಾಡಂಬರ. ಮಾಯಾಡಂಬರವನವ ಗ್ರಹಿಸಿ ಕೊಂಡಿರ್ಪುದು ಅಜ್ಞಾನ. ಅಂತಪ್ಪ ಅಜ್ಞಾನಾಂಬರವ ನಷ್ಟವ ಮಾಡಬಾರದಾರಿಗೆಯು ಎಂಬುದೀಗ, ಮುಗಿಲುದ್ದಂಬರವ ನುಗಿಯ ಬಲ್ಲವರ ಕಾಣೆನೆಂಬ ಶಬ್ದಕ್ಕರ್ಥ. ಜ್ಞಾನಾಜ್ಞಾನ ಭಿನ್ನಕ್ರಿಯಾಚಾರವ ನಷ್ಟವ ಮಾಡುವದಿಲ್ಲವೆಂಬುದೀಗ, ಹಗಲಿರುಳು ಸೀಮೆಯ ಮಿಗೆ ಮೀರುವರ ಕಾಣೆನೆಂಬ ಶಬ್ದಕ್ಕರ್ಥ. ವಾಯು ಪಾಶದಿಂ ಬದ್ಧವಾದ ಪಂಚೇಂದ್ರಿಯಂಗಳ ನಿವೃತ್ತಿ ಮಾರ್ಗವ ನರಿಯರೆಂಬುದೀಗ, ತಗದಿಪ್ಪ ಶುನುಕನ ಬಗೆಯ ಬಲ್ಲವರ ಕಾಣೆನೆಂಬ ಶಬ್ದಕ್ಕರ್ಥ. ಮದೋನ್ಮತ್ತವಾದ ಅಹಂಕಾರವೆಂಬ ಗಜವು ತ್ರಿಜಗದಲುಳ್ಳ ದೇವ-ದಾನವ-ಮಾನವರ ನವಗ್ರಹಿಸಿತ್ತೆಂಬುದೀಗ, ಅಗಡಾನೆ ಬಿಗಿದು ಬಲ್ಪಿಡಿಯಿತ್ತಲ್ಲಾ ಜಗವೆಲ್ಲವನೆಂಬ ಶಬ್ದಕ್ಕರ್ಥ. ಅಂತು ಅಹಂಕಾರದಲ್ಲಿ ವಶಗತರಾದ ದೇವ-ದಾನವ-ಮಾನವರು,

ಲಿಂಗದ ನಿಜವನರಿಯದೆ ತನುತ್ರಯಂಗಳಲ್ಲಿ ಸಿಲ್ಕಿ ಕೆಟ್ಟರೆಂಬುದೀಗ, ಸೌರಾಷ್ಟ್ರ ಸೋಮೇಶ್ವರನ ನಿಜವನರಿಯದೆ ಮುಳುಗಿದರಲ್ಲಾ ಮುಪ್ಪುರದಲ್ಲಿ ಎಂಬ ಶಬ್ದಕ್ಕರ್ಥ.

೪

ಕೊಡಗೂಸಿಂಗೆ ಕಡುಬೇನೆಯಾದುದ ಕಂಡೆ
ಹಡದಿರ್ದ ಶಿಸುವ ಕೊಡಗೂಸು ನುಂಗಿದ ಕಂಡೆ
ಹಿಡಿದಿರ್ದ ಕೋಳಿ ಒಡನುಂಬದ ಕಂಡೆ
ಒಡನಿದ್ದ ನಿಲ ಬಿಡು ಮುತ್ತಾದುದ ಕಂಡೆ
ಕೊಡನೊಳಗೊಂದು ಕಡೆಯಿಲ್ಲದ ರತ್ನವ ಕಂಡೆ
ಸೌರಾಷ್ಟ್ರ ಸೋಮೇಶ್ವರನ ನೆಡೆವಿಡವಿಲ್ಲದಿಪ್ಪ ಬೆಡಗ ಕಂಡೆ.

**ಟೀಕು:—** ಸುಜ್ಞಾನೋದಯವಾದ ಶರಣ ಸತಿ ಎಂಬುದೀಗ, ಕೊಡಗೂಸೆಂಬ ಶಬ್ದಕ್ಕರ್ಥ. ಅಂತಪ್ಪ ಶರಣ ಸತಿಗೆ ಪರಶಿವ ತತ್ವದಲ್ಲಿ ಬೆರಸಬೇಕೆಂಬ ತೂರ್ಯಾವಸ್ಥೆ ತೋರಿತ್ತೆಂಬುದೀಗ, ಕೊಡಗೂಸಿಂಗೆ ಕಡುಬೇಗೆಯಾದುದ ಕಂಡೆನೆಂಬ ಶಬ್ದಕ್ಕರ್ಥ. ಅಂತು ತೂರ್ಯಾವಸ್ಥೆಯ ಮುಂದುಗೊಂಡು ಭಕ್ತಿಯಿಂದ ಉಪಾವಸ್ಥೆಯ ಮಾಡುತ್ತಿರ್ದ ಶರಣ ಸತಿಯ ಆತ್ಮಾಂತರ್ಗತವಾಗಿರ್ದ ಚಿತ್ಪ್ರಭಾ ಲಿಂಗವೆ ಗುರು ಮುಖದಿಂ ಬಹಿಷ್ಕರಿಸಿ ಇಷ್ಟಲಿಂಗ ಸ್ವರೂಪವಾಗಿ ಮೂರ್ತಿಗೊಂಡಿತ್ತೆಂಬುದೀಗ, ಹಡದಿರ್ದ ಶಿಶುವನೆಂಬ ಶಬ್ದಕ್ಕರ್ಥ. ಅಂತು ಗುರು ಮುಖದಿಂ ಪ್ರತ್ಯಕ್ಷವಾದಲ್ಲಿ ಸತ್ಕ್ರಿಯಾಲಿಂಗವನು ಚಿತ್ಸ್ವರೂಪನಾದ ಶರಣ ತನ್ನ ಸುಜ್ಞಾನ ಪ್ರಕಾಶದಲ್ಲಿ ಅವಗ್ರಹಿಸಿದನೆಂಬುದೀಗ, ಕೊಡಗೂಸು ನುಂಗಿದ್ದ ಕಂಡೆನೆಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣನ ಸುಜ್ಞಾನ ಪ್ರಕಾಶದಲ್ಲಿ ಸಂಬಂಧವಾದ ಸತ್ಪ್ರಣವು ಲಿಂಗವು ಷಡೇಂದ್ರಿಯಂಗಳಲ್ಲಿ ಷಡ್ವಿಧಲಿಂಗವಾಗಿ ಷಡ್ವಿಧ ಪದಾರ್ಥವ ಕೈಕೊಳ್ಳುತ್ತಿಹುದೆಂಬುದೀಗ, ಹಿಡಿದಿರ್ದ ಕೋಳಿ ಒಡನುಂಬುದ ಕಂಡೆನೆಂಬ ಶಬ್ದಕ್ಕರ್ಥ. ತನ್ನಂತರಂಗದೊಳಗಿರ್ದ ಅಜ್ಞಾನವೆಂಬುದೀಗ, ಒಡನಿರ್ದ ನಿಲನೆಂಬ ಶಬ್ದಕ್ಕರ್ಥ. ಅಂತಪ್ಪ ಅಜ್ಞಾನವು ಸುಜ್ಞಾನ ಪ್ರಕಾಶದಿಂದ ನಿವೃತ್ತಿಯಾಗಲು ಮುಕ್ತಿಸ್ವರೂಪನಾದ ಶರಣನೆಂಬುದೀಗ, ಬಿಡು ಮುತ್ತಾದುದ ಕಂಡೆನೆಂಬ ಶಬ್ದಕ್ಕರ್ಥ. ಆ ಮುಕ್ತಿ ಸ್ವರೂಪನಾದ ಶರಣನ ಚಿದ್ಭಾಂಡದಲ್ಲಿ ವೇದಾಗಮಂಗಳಿಗೆ ಅತೀತವಾದ ಚಿತ್ಪ್ರಭಾಲಿಂಗವು ಮೂರ್ತಿಗೊಂಡಿಹುದು ಸುಜ್ಞಾನ ದೃಷ್ಟಿಯಿಂದ ಕಂಡೆನೆಂಬುದೀಗ, ಕೊಡನೊಳಗೊಂದು ಕಡೆಯಿಲ್ಲದ ರತ್ನವ ಕಂಡೆನೆಂಬ ಶಬ್ದಕ್ಕರ್ಥ. ಇಂತು ಸರ್ವಾಂಗದ ಲಿಂಗದಲ್ಲಿ ಸಮರಸವಾದ ಶರಣಂಗೆ, ಶರಣ-ಲಿಂಗವೆಂಬ ಭಿನ್ನ ಭಾವವಿಲ್ಲದ ಪರಿ ಚೋದ್ಯವೆಂಬುದೀಗ, ಸೌರಾಷ್ಟ್ರ ಸೋಮೇಶ್ವರನ ನೆಡೆವಿಡವಿಲ್ಲದಿರ್ಪ ಬೆಡಗ ಕಂಡೆನೆಂಬ ಶಬ್ದಕ್ಕರ್ಥ.

ಗೊತ್ತ ಮೆಟ್ಟಿದಾಂಟಿ ಹುಟ್ಟದೆ ಹೋದ ಪರಿಯ ನೋಡಾ,
ಕತ್ತಲೆ ಬೆಳಗನೊತ್ತರಿಸಿ ಹತ್ತೆ ಸಾರಿನಿಂದ ಪರಿಯ ನೋಡಾ,
ಒತ್ತಿ ಪಿಡಿದು ಅಸುರನ ನೆತ್ತಿಯನೊಡದು ಮುತ್ತಸರಗೆಯ್ದ
ಪರಿಯ ನೋಡಾ
ಸೌರಾಷ್ಟ್ರ ಸೋಮೇಶ್ವರಾ, ಲಿಂಗದೊಡನಾಡಿ ಹೊಡೆಯಕೊಯ್ದ
ಪರಿಯ ನೋಡಾ.

**ಟೀಕು:**— ಸುಜ್ಞಾನೋದಯವಾದ ಶರಣನು ಶ್ರೀಗುರು ಕಾರುಣ್ಯದಿಂದ ಇಷ್ಟಲಿಂಗ ಸಂಬಂಧಿಯಾಗಿ ಸತ್ಕ್ರಿಯಾಚಾರವನು ಆಕ್ರಮಿಸಿ ನಿಂದನೆಂಬುದೀಗ, ಗೊತ್ತಮೆಟ್ಟಿ ಎಂಬ ಶಬ್ದಕ್ಕರ್ಥ. ಆ ಸತ್ಕ್ರಿಯಾಚಾರದಲ್ಲಿ ನಿರ್ಧರವಾಗಿ ನಿಂದು ಆಚರಿಸುತ್ತಿರ್ದ ಶರಣಂಗೆ ಸಕಲ ಪ್ರಪಂಚು ನಾಸ್ತಿಯಾಯಿತ್ತೆಂಬುದೀಗ, ದಾಂಟಿ ಎಂಬ ಶಬ್ದಕ್ಕರ್ಥ. (ಂತು ಪ್ರಪಂಚು ನಾಸ್ತಿಯಾದ ಶರಣಂಗೆ ಜನನಾಂಕುರ ನಷ್ಟವಾದ ಪರಿಚೆ..ಕ್ಯವೆಂಬುದೀಗ, ಹುಟ್ಟದೆ ಹೋದ ಪರಿಯ ನೋಡಾ ಎಂಬ ಶಬ್ದಕ್ಕರ್ಥ. ಅಂತು ಜನನಾಂಕುರ ನಷ್ಟವಾಗಲು ಜ್ಞಾನಾಜ್ಞಾನಂಗಳೆರಡು ತೊಲಗಿ ಹೋದವೆಂಬುದೀಗ, ಕತ್ತಲೆ ಬೆಳಗನೊತ್ತರಿಸಿ ಎಂಬ ಶಬ್ದಕ್ಕರ್ಥ. ಆ ಜ್ಞಾನಾಜ್ಞಾನಂಗಳೆರಡು ನಷ್ಟವಾದ ಸುಜ್ಞಾನ ಸ್ವರೂಪನಾದ ಶರಣನು ಪರಶಿವ ತತ್ವವನು ಆಶ್ರಯಿಸಿ ನಿಂದುದು ಚೋದ್ಯವೆಂಬುದೀಗ, ಹತ್ತೆ ಸಾರಿನಿಂದ ಪರಿಯ ನೋಡಾ ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣವಾದ ಪರಶಿವ ತತ್ವವನು ಆಶ್ರಯಿಸಿನಿಂದ ಶರಣನು ಸಕಲ ಕರಣಂಗಳನು ಧ್ವಂಸವಮಾಡಿ ಪರವಸ್ತುವ ಕೃತನಿಶ್ಚಯ ಹಸ್ತದಲ್ಲಿ ದೃಢವಿಡಿದನೆಂಬುದೀಗ, ಒತ್ತಿ ಪಿಡಿದು ಎಂಬ ಶಬ್ದಕ್ಕರ್ಥ. ಅಂತು ಕೃತನಿಶ್ಚಯ ಹಸ್ತದಲ್ಲಿ ಶಿವತತ್ವವ ದೃಢವಿಡಿದು ಶರಣನು ಅಸುರಕರ್ಮ ಸಂಬಂಧಿಯಪ್ಪ ಜೀವನ ಅಜ್ಞಾನವೆಂಬ ಶಿರಸ್ಸನು ಸುಜ್ಞಾನ ಪ್ರಕಾಶದಿಂದ ಛೇದಿಸಿದನೆಂಬುದೀಗ, ಅಸುರನ ನೆತ್ತಿಯನೊಡದು ಎಂಬ ಶಬ್ದಕ್ಕರ್ಥ. ಆ ಜೀವನ ಅಜ್ಞಾನವೆಂಬ ಶಿರಸ್ಸು ಸುಜ್ಞಾನ ಪ್ರಕಾಶದಿಂ ಭಿನ್ನವಾಗಲು ಶರಣ ತನ್ನ ಸ್ವಾನುಭಾವ ಸೂತ್ರದಿಂ ಮುಕ್ತಿ ಸ್ವರೂಪವಾದ ಪರಮ ಚಿತ್ಕಲಾ ಲಿಂಗವ ಪವಣಿಸಿದುದು ಚೋದ್ಯವೆಂಬುದೀಗ, ಮುತ್ತ ಸರಗೆಯ್ದಪರಿಯನೋಡಾ ಎಂಬ ಶಬ್ದಕ್ಕರ್ಥ. ಆ ಪರಮ ಚಿತ್ಕಲಾ ಲಿಂಗದಲ್ಲಿ ಅಭಿನ್ನಜ್ಞಾನ ಕ್ರಿಯವಿಡಿದಾಚರಿಸಿದ ಶರಣನು ಇದಿರಿಟ್ಟು ತೋರುವ ಭಿನ್ನ ಫಲ ಪದಂಗಳ ಛೇದಿಸಿದನೆಂಬುದೀಗ, ಸೌರಾಷ್ಟ್ರ ಸೋಮೇಶ್ವರ ಲಿಂಗದೊಡನಾಡಿ ಹೊಡೆಯ ಕೊಯ್ದ ಪರಿಯ ನೋಡಾ ಎಂಬ ಶಬ್ದಕ್ಕರ್ಥ.

೬

ಕತ್ತೆಯ ಗರ್ಭದಿಂದ ಪ್ರಸೂತವಾದ ಎತ್ತು
ಹುಲ್ಲ ತಿನ್ನದು, ನೀರ ಕುಡಿಯದು,

ಇರ್ದಲ್ಲಿ ಇರದು, ಹೋದತ್ತ ಹೋಗದು—
ಇದೇನು ಸೋಜಿಗ ಬಲ್ಲರೆ ಹೇಳಿರಣ್ಣಾ !
ಎತ್ತ ಬಿಟ್ಟಿತ್ತು, ಸತ್ತನೊಳಕೊಂಡಿತ್ತು ಮುತ್ತನುಗುಳಿಹೋಯಿತ್ತು
ಇದೇನು ವಿಪರೀತ ಬಲ್ಲರೆ ಹೇಳಿರಣ್ಣಾ!
ಎತ್ತು ಕೆಟ್ಟಿತ್ತು, ಅರಸುವರ ಕಾಣೆನಣ್ಣಾ,
ಸೌರಾಷ್ಟ್ರ ಸೋಮೇಶ್ವರ ಲಿಂಗದೊಡಗೂಡಿ
ಎತ್ತೆತ್ತ ಹೋಯಿತ್ತೆಂದರಿಯೆನಣ್ಣಾ

ಟೀಕು:— ಜಡಸ್ವರೂಪವಪ್ಪ ಮಾಯಾ ಸಂಭೂತವಾದ ಜೀವನೆಂಬುದೀಗ, ಕತ್ತೆಯ ಗರ್ಭದಿಂದ ಪ್ರಸೂತವಾದ ಎತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಸುಜ್ಞಾನೋದಯವಾಗಲು, ತೃಣಪ್ರತಿ ಪತ್ನಾದ ಸಂಸಾರ ಸುಖವನು ಅನುಭವಿಸದು, ವಿಷಯರಸೋದಕವ ಕೊಳ್ಳದು, ತನುಕರಣೇಂದ್ರಿಯಗಳಲ್ಲಿರ್ದು ಅವ ಹೊದ್ದದು, ಮುನ್ನ ವರ್ತಿಸುವ ಕುಲಾಶ್ರಮ ಧರ್ಮಾಚಾರದಲ್ಲಿ ವರ್ತಿಸದಿರ್ಪುದು ಇದು ಆಶ್ಚರ್ಯವಾದುದನಾರೂ ಅರಿಯರೆಂಬುದೀಗ, ಹುಲ್ಲ ತಿನ್ನದು, ನೀರ ಕುಡಿಯದು, ಇರ್ದಲ್ಲಿ ಇರದು, ಹೋದತ್ತ ಹೋಗದು, ಇದೇನು ಸೋಜಿಗ ಬಲ್ಲರೆ ಹೇಳಿರಣ್ಣಾ ಎಂಬ ಶಬ್ದಕ್ಕರ್ಥ. ಇಂತು ಸುಜ್ಞಾನೋದಯದಿಂ ಸಕಲ ಪ್ರಪಂಚುವ ನತಿಗಳೆದ ಜೀವನು ಚಿದೋಪದೇಶದಿಂ ಜೀವಭಾವವಳಿದು ಸಧೂಪವಾದ ಸಗುಣಬ್ರಹ್ಮವ ಸರ್ವಾಂಗದಲ್ಲಿ ಧರಿಸಿ ಮುತ್ತೆಂಬ ನಾಮುವನುಳ್ಳ ಖಂಡಿತ ಮುಕ್ತಿಯನುದ್ಗಾರಿಸಿ ಶಿವತತ್ವದಲೆಯ್ದಿದ ಭೇದವ ಚೋದ್ಯವಾದುದನಾರೂ ಅರಿಯರೆಂಬುದೀಗ, ಎತ್ತ ಬಿಟ್ಟಿತ್ತು ಸತ್ತನೊಳಕೊಂಡಿತ್ತು ಮುತ್ತನುಗುಳಿ ಹೋಯಿತ್ತು ಇದೇನು ವಿಪರೀತ ಬಲ್ಲರೆ ಹೇಳಿರಣ್ಣಾ ಎಂಬ ಶಬ್ದಕ್ಕರ್ಥ. ಇಂತು ಜೀವನು ಪ್ರಕೃತಿ ಭಾವವಳಿದು ಲಿಂಗದಲ್ಲಿ ಏಕಾರ್ಥವಾಗಲು ಆ ಜೀವನ ಬಳಿವಿಡಿದರಸುವ ಸಕಲ ಕರಣಂಗಳು ತಲ್ಲೀಯ್ಯವಾದವೆಂಬುದೀಗ, ಎತ್ತು ಕೆಟ್ಟಿತ್ತು ಅರಸುವರ ಕಾಣೆನಣ್ಣಾ ಎಂಬ ಶಬ್ದಕ್ಕರ್ಥ. ಇಂತು ಜೀವನು ಲಿಂಗದಲ್ಲಿ ಸಮರಸ ಸಂಯೋಗವಾಗಿ ನಿರ್ವಯಲಾದ ಭೇದವನು ಉಪಮಿಸಬಾರದೆಂಬುದೀಗ, ಸೌರಾಷ್ಟ್ರ ಸೋಮೇಶ್ವರಲಿಂಗದೊಡಗೂಡಿ ಎತ್ತೆತ್ತ ಹೋಯಿತ್ತೆಂದರಿಯೆನಣ್ಣಾ ಎಂಬ ಶಬ್ದಕ್ಕರ್ಥ.

೭

ಕೋಣನೊಂದು ಕುದುರೆಯ ನುಂಗಿತ್ತು
ಇರುವೆ ಒಂದಾನೆಯ ನುಂಗಿತ್ತು
ಭಲ್ಲೂಕನ ಅಲ್ಲವೆನಿಸಿತ್ತು
ಕಟ್ಟಿದ ಪಕ್ಷಿ ನೆರೆ ಹಾರಿತ್ತು—
ಗಗನಕ್ಕೆ ಚಿದಾಕಾಶವೆ ತಾನಾಗಿ ಬಿಂದಾಕಾಶವ ನೊಡಯಿತ್ತು

ದೃಷ್ಟಾಕಾಶವ ನಷ್ಟಂಗೆಯ್ಯಿತ್ತು
ಭಿನ್ನಾಕಾಶವ ನೊಡಗೂಡಿತ್ತು, ಮಹದಾಕಾಶವನೊಳಕೊಂಡಿತ್ತು
ಸೌರಾಷ್ಟ್ರ ಸೋಮೇಶ್ವರನೆಂಬ ನಿಜದಾಕಾಶದಲ್ಲಿ ನಿಂದು
ನಾಮರೂಪ ನಷ್ಟವಾಯಿತ್ತು

**ಟೀಕು:—** ಜೀವನೆಂಬ ಪಶುವೀಗಕೋಣನೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಶಿವಕೃಪೆಯಿಂದ ಸಮ್ಯಜ್ಞಾನೋದಯವಾಗಲು ತನ್ನಾತ್ಮ ಚೈತನ್ಯ ಸ್ವರೂಪವಪ್ಪ ಸತ್ತೃಣಮವ ನವಗ್ರಹಿಸಿತ್ತೆಂಬುದೀಗ, ಕೋಣನೊಂದು ಕುದುರೆಯ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತು ಸತ್ತೃಣವು ಗ್ರಹಕನಾದ ಶರಣನ ನಿಜಾಂತರಂಗದಲ್ಲಿ ಸೂಕ್ಷ್ಮವಾಗಿರ್ಪ ಪರಿಪೂರ್ಣ ಜ್ಞಾನ ಅಹಂಕಾರವ ನಷ್ಟವ ಮಾಡಿತ್ತೆಂಬುದೀಗ, ಭಲ್ಲುಕವೆಸಿಸಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಮತ್ಸರ ವಳಿಯಲು ಭವದಲ್ಲಿ ಬಿಗಿವಡದಿರ್ಪ ಜೀವಂಗೆ ಸದ್ವಿವೇಕ ಜ್ಞಾನ ತಲೆದೋರಿ ತನ್ನಾತ್ಮ ಚೈತನ್ಯ ಸ್ವರೂಪವಪ್ಪ ಪರಬ್ರಹ್ಮದತ್ತಲೆಯ್ದಿತ್ತೆಂಬುದೀಗ, ಕಟ್ಟಿದ ಪಕ್ಷಿ ನೆರೆಪಾರಿತ್ತು ಗಗನಕ್ಕೆ ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮದತ್ತಲೆಯ್ದಿದ ಶರಣನು ಜ್ಞಾನಾಕಾಶವೆ ತಾನಾಗಿ ಬಿಂದು ಸ್ವರೂಪವಾದ ಮನೋ ಪ್ರಕೃತಿಯ ನಷ್ಟವ ಮಾಡಿದನೆಂಬುದೀಗ, ಚಿದಾಕಾಶವೆ ತಾನಾಗಿ ಬಿಂದಾಕಾಶವ ನೊಡಯಿತ್ತೆಂಬ ಶಬ್ದಕ್ಕರ್ಥ. ಅಂತು ಮನೋಪ್ರಕೃತಿಯಳಿದು ಉನ್ಮನಿ ತತ್ವ ಸ್ವರೂಪವಾದ ಶರಣ ಅನಿತ್ಯವಾದ ದೇಹಭಾವ ನಷ್ಟವಾಯಿತ್ತೆಂಬುದೀಗ, ದೃಷ್ಟಾಕಾಶವ ನಷ್ಟಂಗೆಯ್ಯಿತ್ತೆಂಬ ಶಬ್ದಕ್ಕರ್ಥ. ಅಂತು ತನು-ಮನೋ ಪ್ರಕೃತಿ ನಷ್ಟವಾದ ಶರಣನು ಸಕಲ ಪ್ರಪಂಚಿಗೆ ಬೇರಾದ ಪರಿಪೂರ್ಣ ಪರಬ್ರಹ್ಮನು ತನು-ಮನ-ಪ್ರಾಣಂಗಳಲ್ಲಿ ಅವಗ್ರಹಿಸಿದನೆಂಬುದೀಗ, ಭಿನ್ನಾಕಾಶವ ನೊಡಗೂಡಿತ್ತೆಂಬ ಶಬ್ದಕ್ಕರ್ಥ. ಅಂತು ತನು-ಮನ-ಪ್ರಾಣಂಗಳಲ್ಲಿ ಲಿಂಗ ಗ್ರಹಕನಾದ ಶರಣನ ಪರಿಪೂರ್ಣ ಜ್ಞಾನದರಿವು ನಿಷ್ಕಲವಾದ ನಿರವಯ ಪರಬ್ರಹ್ಮದಲ್ಲಿ ಸಮರಸವಾಯಿತ್ತೆಂಬುದೀಗ, ಸೌರಾಷ್ಟ್ರ ಸೋಮೇಶ್ವರನೆಂಬ ನಿಜದಾಕಾಶವಲ್ಲಿ ನಿಂದು ನಾಮ ರೂಪು ನಷ್ಟವಾಯಿತ್ತೆಂಬ ಶಬ್ದಕ್ಕರ್ಥ.

೮

ತಲೆಯಿಲ್ಲದ ಕಾಗೆ ನೆಲದಲ್ಲಿ ನಡಯಿತ್ತು
ಹುಲಿ ನಲಿದು ಗಿಲಿಗಿಸಿ ಗೆಜ್ಜೆಗಟ್ಟಿ ಒಲದಾಡಿತ್ತು
ಬಲು ಹಸಿದ ಕರಡಿ ಹಾಡಿ ಹರಸಿ ಬೆಳಯಿತ್ತು
ಕಾಳ ರಕ್ಕಸಿಯ ಮಗುವು ಚಂದ್ರ-ಸೂರ್ಯ ರಾಟಾಳದ—
ಹುರಿಯೊಳಗೆ ತಿರಿಗಿತ್ತು
ಕಳವಳಿಸುವ ಕಪಿಯ ಭೂತ ಹೊಡದು
ಚೇಳೂರೆ ಗಾಳಿಯೊಳು ಸಿಕ್ಕಿ ಸೌರಾಷ್ಟ್ರ ಸೋಮೇಶ್ವರನ
ಕಾಣವೆ ಕಣ್ಣಡಕವ ಕಣ್ಣಿನಂತೆ ಕಣ್ಣೆನಿಸಿ ಕಣ್ಣುಗೆಟ್ಟಿತ್ತು.

**ಟೀಕು:—** ಜ್ಞಾನವೆಂಬ ಶಿರಸ್ಸಿಲ್ಲದ ಅಜ್ಞಾನ ಸ್ವರೂಪವಾದ ಪ್ರಕೃತಿಯೆಂಬ ವಾಯಸ ದೇಹಭಾವದಲ್ಲಿ ಗಮಿಸುತ್ತಿಹುದೆಂಬುದೀಗ, ತಲೆಯಿಲ್ಲದ ಕಾಗೆ ನೆಲದಲ್ಲಿ ನಡೆಯಿತ್ತೆಂಬ ಶಬ್ದಕ್ಕರ್ಥ. ಇಂತು ಅಜ್ಞಾನ ಪ್ರಕೃತಿ ದೇಹಭಾವ ವಿಡಿದು ಗಮಿಸಲು ಕ್ರೋಧವೆಂಬ ವ್ಯಾಘ್ರ ಮನೋನುರಾಗದಿಂದ ಹಮ್ಮೆಂಬಪ್ಪ ಕುಶಬ್ದಂಗಳಿಂದುಲಿ ದೋಲಾಡುತ್ತಿಹುದೆಂಬುದೀಗ, ಹುಲಿ ನಲಿದು ಗಿಲಿಗಿಸಿ ಗೆಜ್ಜೆಗಟ್ಟಿ ಒಲದಾಡಿತ್ತೆಂಬ ಶಬ್ದಕ್ಕರ್ಥ. ಹೀಗೆ ಕ್ರೋಧ ಉಲಿವುತ್ತಿರಲು ಸಕಲರ ಹಿಡಿದು ಬಿಡದ ಸಾಮರ್ಥ್ಯವನುಳ್ಳ ದ್ವೇಷವೆಂಬ ಭಲ್ಲೂಕ ದೂಷಣ-ಭೂಷಣಗಳಿಂ ಹಾಡಿ ಗದುಕುಗಳಿಂ ಹರಸಿ ಸರ್ವಾಂಗ ದೊಶ್ವರ್ಧನವಾಯಿತ್ತೆಂಬುದೀಗ, ಬಲು ಹೆನಿಸಿದ ಕರಡಿ ಹಾಡಿ ಹರಸಿ ಬೆಳಯಿತ್ತೆಂಬ ಶಬ್ದಕ್ಕರ್ಥ. ಈ ಪ್ರಕಾರದಿಂ ಸರ್ವಾಂಗದೋಳ್ ವರ್ಧನವಾಗಲು ಅಜ್ಞಾನ ತಮೋವರ್ಣವನುಳ್ಳ ಸಂಹಾರ ಕಾರಣಮಪ್ಪ ಮಾಯೆಯೆಂಬ ದೈತ್ಯಿಯು ಗರ್ಭದೋಳ್ ಜನಿಸಿದ ಜೀವನೆಂಬ ಶಿಸು ಇಡಪಿಂಗಳ ದ್ವಾರದ ಪ್ರಾಣವಾಯು ವಿಕಾರವಿಡಿದು ಭ್ರಮಿಸುತ್ತಿಹುದೆಂಬುದೀಗ, ಕಾಳರಕ್ಕಸಿಯ ಮಗುವು ಚಂದ್ರ-ಸೂರ್ಯರ ರಾಟಳದ ಹುರಿಯೊಳಗೆ ತಿರಿಗಿತ್ತೆಂಬ ಶಬ್ದಕ್ಕರ್ಥ. ಈ ಕ್ರಮದಿಂ ಜೀವನು ಚರಿಸುತ್ತಿರಲು ಸಂಕಲ್ಪ-ವಿಕಲ್ಪಂಗಳಿಂ ಭ್ರಮಿಸುವ ಮನೋ ಮರ್ಕಟವ ಕಾಮವೆಂಬ ಗ್ರಹಾವರಣವಾಗಿ ಭವದುಃಖವೆಂಬ ವೃಶ್ಚಿಕದಷ್ಟದಿಂ ವಿಷಮಗತಿಯಾಗಿ ಚರಿಸುವ ದಶವಾಯು ವಿಕಾರದೊಳು ಸಿಲುಕಿ ಶಿವತತ್ವದ ನಿಜವನರಿಯದೆ ಶೃತಜ್ಞಾನವೆಂಬ ಉಪಚಕ್ಷುವಿದ್ದು ತನ್ನ ತಾ ತಿಳಿಯದೆ ಅಜ್ಞಾನಿಯೆನಿಸಿತ್ತೆಂಬುದೀಗ, ಕಳವಳಿಸುವ ಕಪಿಯು ಭೂತ ಹೊಡದು ಚೇಳೂರೆ ಗಾಳಿಯೊಳು ಸಿಕ್ಕಿ ಸೌರಾಷ್ಟ್ರ ಸೋಮೇಶ್ವರನ ಕಾಣದೆ ಕಣ್ಣಡಕದ ಕಣ್ಣನಂತೆ ಕಣ್ಣೆನಿಸಿ ಕಣ್ಣುಗೆಟ್ಟಿತ್ತೆಂಬ ಶಬ್ದಕ್ಕರ್ಥ.

೯

ಅಂಗೈಯೊಳಗಣ ಹಂಸೆ ಹಾಲನೊಲ್ಲದೆ ನೀರ ಕುಡಿಯಿತ್ತು
ನೀರು ಬಾಯಾರಿ ನೀರಡಿಸಿ ಅರಕೆಗೊಂಡಿತ್ತು
ಅರಗಿನ ಮಡವು ಉರಿಯುಂಡು ಗರಿಗತವಾಯಿತ್ತು
ಕರ್ಪೂರದ ಮಾಡ ಅಗ್ನಿಯನೊಳಕೊಂಡು—
ಉರಿಯದು ನೋಡಾ ಸೌರಾಷ್ಟ್ರ ಸೋಮೇಶ್ವರಾ !

**ಟೀಕು:—** ಚಿಚ್ಛಕ್ತಿಯ ಕೃಪಾಹಸ್ತದೊಳಿರ್ಪ ಜೀವ ಹಂಸನು ಜ್ಞಾನೋದಯದಿಂ ಸಂಸಾರ ವಿಷಯ ರಸವನೊಲ್ಲದೆ ಸದ್ವಿವೇಕ ಜಲವ ಸ್ವೀಕರಿಸುತ್ತಿಹುದೆಂಬುದೀಗ, ಅಂಗೈಯೊಳಗಣ ಹಂಸೆ ಹಾಲನೊಲ್ಲದೆ ನೀರ ಕುಡಿಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ ಜಲ ಸ್ವರೂಪವಾದ ಉನ್ಮನಿ ಮನಶಿವ ತತ್ವದಲ್ಲಿ ಕೂಡಬೇಕೆಂಬ ತೃಷ್ಣಾತುರದಿಂ ಪರಮಾನಂದ ಜಲವ ನಿಶ್ಚಯಿಸಿ ಮೋಕ್ಷಾಪೇಕ್ಷೆಯ ಮುಂದುಗೊಂಡಿರ್ಪುದೆಂಬುದೀಗ, ನೀರು ಬಾಯಾರಿ ನೀರಡಿಸಿ ಅರಿಕೆಗೊಂಡಿತ್ತೆಂಬ ಶಬ್ದಕ್ಕರ್ಥ. ಇಂತಾಗಲಾ ಚಿದೋಪದೇಶದಿಂ ಮಹಾಜ್ಞಾನಾ

ಗ್ನಿಯು ಪ್ರಭಾಪುಂಜವೆನಿಸುವ ದಿವ್ಯ ತೇಜೋಲಿಂಗವಂಗವ ಸವಗ್ರಹಿಸಲು ಜೀವನ ಪ್ರಪಂಚು ರಕ್ಕಿಗಳಳಿದವೆಂಬುದೀಗ, ಅರಗಿನ ಮಾಡ ಉರಿಯುಂಡು ಗರಿಗತವಾಯಿತ್ತೆಂಬ ಶಬ್ದಕ್ಕರ್ಥ. ಆ ದಿವ್ಯ ತೇಜೋಲಿಂಗಕ್ಕೆ ಆಧಾರ ಚೈತನ್ಯ ವಾದ ಮಹಾಜ್ಞಾನಾಗ್ನಿಯು ಶರಣನ ಸದ್ವಾಸನಾ ಸಂಬಂಧವಪ್ಪ ನಿಜಾನುಭಾ ವಾಂತರಂಗ ಒಳಕೊಂಡು ತಾಪತ್ರಯಾಗ್ನಿಯಲ್ಲಿ ಉರಿಯುದೆಂಬುದೀಗ, ಕರ್ಪು ರದ ಮಾಡ ಅಗ್ನಿಯನೊಳಕೊಂಡು ಉರಿಯದು ನೋಡಾ ಸೌರಾಷ್ಟ್ರ ಸೋಮೇ ಶ್ವರಾ ಎಂಬ ಶಬ್ದಕ್ಕರ್ಥ.

## ೧೦

ಏಳು ನೆಲೆಯ ಕರು ಮಾಡದುಪ್ಪರಿಗೆಯೊಳಗೆ
ಒಂದೆ ಮುತ್ತಿನ ನೆಲಗಟ್ಟಿನ ಮೇಲೆ
ಭಿತ್ತಿಯಿಲ್ಲದ ರತ್ನದ ಹೊದಕೆಯ ಮೇಲಿಪ್ಪ
ಕಳಶವ ಕಂಡವರನಾರನು ಕಾಣೆ ಸೌರಾಷ್ಟ್ರ ಸೋಮೇಶ್ವರಾ,
ಲಿಂಗವ ಹಿಡಿದು ನಿಲ ಲರಿಯುವವರು ಜಾರಿ ಬಿದ್ದು ಸೂರೆ
ಹೋದರು ಕಾಲಂಗೆ.

ಟೀಕು:— ಸಪ್ತ ಚಕ್ರಂಗಳೆಂಬುದೀಗ, ಏಳು ನೆಲೆಯೆಂಬ ಶಬ್ದಕ್ಕರ್ಥ. ಅಂತಪ್ಪ ಸಪ್ತ ಚಕ್ರಂಗಳ ಮೇಲಿಪ್ಪ ಸಹಸ್ರದಳ ಪದ್ಮದಿಂದೊಪ್ಪುವ ಬ್ರಹ್ಮರಂಧ್ರ ಸ್ಥಾನವೆಂಬುದೀಗ, ಏಳು ನೆಲೆಯ ಕರು ಮಾಡದುಪ್ಪರಿಗೆಯೊಳಗೆಂಬ ಶಬ್ದಕ್ಕರ್ಥ. ಅಂತಪ್ಪ ಬ್ರಹ್ಮರಂಧ್ರದೊಳಗೆ ಎರಡಿಲ್ಲದಿರ್ಪ ಮುಕ್ತಿ ಸ್ವರೂಪವಾದ ಸುಚಿತ್ತ ವೆಂಬ ನೆಲಗಟ್ಟಿನ ಮೇಲೆ ಎಂಬುದೀಗ, ಒಂದೆ ಮುತ್ತಿನ ನೆಲಗಟ್ಟಿನ ಮೇಲೆ ಎಂಬ ಶಬ್ದಕ್ಕರ್ಥ. ಅಂತಪ್ಪ ಸುಚಿತ್ತವೆಂಬ ನೆಲಗಟ್ಟಿನಲ್ಲಿ ತಾನೆಂಬ ಅಹಂಕಾರವಳಿದ ಪರಿಪೂರ್ಣ ಜ್ಞಾನಾಂಬರವೆ ಆವರಣವಾಗಿಹುದೆಂಬು ದೀಗ, ಭಿತ್ತಿಯಿಲ್ಲದ ರತ್ನದ ಹೊದಕೆ ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣ ಜ್ಞಾನಾಂಬರದಲ್ಲಿ ಪ್ರಕಾಶಿಸುತ್ತಿರ್ಪ ಜ್ಞಾನ ಸ್ವರೂಪನಾದ ನಿಷ್ಕಲ ಶಿವತತ್ವವಿಹು ದೆಂಬುದೀಗ, ಮೇಲಿಪ್ಪ ಕಳಶವೆಂಬ ಶಬ್ದಕ್ಕರ್ಥ. ಅಂತಪ್ಪ ನಿಷ್ಕಲ ವಸ್ತುವ ಭಿನ್ನಜ್ಞಾನ ದೃಷ್ಟಿಯಿಂ ಕಂಡಿಹೆನೆಂಬವರಿಗೆ ಅಸಾಧ್ಯವೆಂಬುದೀಗ, ಕಂಡವರ ನಾರನು ಕಾಣೆನೆಂಬ ಶಬ್ದಕ್ಕರ್ಥ. ಅಂತಪ್ಪ ನಿರಾಕಾರವಾದ ಪರಬ್ರಹ್ಮವ ಶ್ರೀ ಗುರು ಕಾರುಣ್ಯದಿಂ ಪ್ರತ್ಯಕ್ಷವ ಮಾಡಿಕೊಂಡು ಕರಸ್ಥಲದಲ್ಲಿ ದೃಢವಿಡಿದು ಸುಜ್ಞಾನ ಕ್ರಿಯೆಯಿಂದಲಾಚರಿಸಿ ಅಂಗ-ಮನ-ಪ್ರಾಣಂಗಳ ಲಿಂಗದಲ್ಲಿ ಸ್ವಸ್ಥಿರವ ಮಾಡಲರಿಯದ ಭಿನ್ನ ಜ್ಞಾನಿಗಳು ಲಕ್ಷವಿಟ್ಟು ಪರಬ್ರಹ್ಮವ ಸಾಧಿಸಿಹೆನೆಂದೊಡೆ ಸಾಧ್ಯವಲ್ಲದೆ ಶಿವ ತತ್ವಕ್ಕೆ ಭಿನ್ನವಾಗಿ ಭವಕ್ಕೀಡಾಗಿ ಯಮನ ಬಾಧೆಗೊಳಗಾದ ರೆಂಬುದೀಗ, ಸೌರಾಷ್ಟ್ರ ಸೋಮೇಶ್ವರ ಲಿಂಗವ ಹಿಡಿದು ನಿಲಲರಿಯದವರು ಜಾರಿಬಿದ್ದು ಸೂರೆ ಹೋದರು ಕಾಲಂಗೆ ಎಂಬ ಶಬ್ದಕ್ಕರ್ಥ.

೧೧

ನಟ್ಟಡವಿಯಲ್ಲಿ ಕೆಂಡದ ಮಳೆ ಕರದು
ಊರಡಿಯು ನೊಂದಾಗಿ ಹುಟ್ಟಿತ್ತು ನೋಡಾ
ಊರ್ರೈವರ ನಾರ್ರೈವರ ಮೂಗು ಹೋಯಿತ್ತು ನೋಡಾ
ಹೋಗದ ಊರಿನ ಬಾರದ ದಾರಿಯು ಕಂಡು
ಸುಖಿಯಾದೆನಯ್ಯ ಸೌರಾಷ್ಟ್ರ ಸೋಮೇಶ್ವರಾ !

**ಟೀಕು:**— ಶರಣನ ಮನೋಮಧ್ಯದಲ್ಲಿ ಸುಜ್ಞಾನಾಗ್ನಿ ಪ್ರಭಾವಿಸಿ ಸಕಲೇಂದ್ರಿಯವೆಂಬ ಅರಣ್ಯದಲ್ಲಿ ಕರವುತ್ತಿಹುದೆಂಬುದೀಗ, ನಟ್ಟಡವಿಯಲ್ಲಿ ಕೆಂಡದ ಮಳೆ ಕರದು ಎಂಬ ಶಬ್ದಕ್ಕರ್ಥ. ಅಜ್ಞಾನಾಗ್ನಿ ದೇಹೇಂದ್ರಿಯಂಗಳ ಸುಟ್ಟುರುಹಿತ್ತೆಂಬುದೀಗ, ಊರಡವಿಯುನೊಂದಾಗಿ ಸುಟ್ಟಿತ್ತು ನೋಡಾ ಎಂಬ ಶಬ್ದಕ್ಕರ್ಥ. ಇಂತಾಗಲಾ ದೇಹ ಸಂಬಂಧವಾದ ಪಂಚಭೂತಂಗಳ ತತ್ ಸಂಬಂಧವಾದ ಸುಖವನಾರ್ರೈದನನುಭವಿಸುವ ಕರಣಂಗಳ ಸರ್ವಾಭಿಮಾನ-ಅಹಂಕಾರ ವಳಿಯಿತ್ತೆಂಬುದೀಗ, ಊರ್ರೈವರ ನಾರ್ರೈವರ ಮೂಗು ಹೋಯಿತ್ತು ನೋಡಾ ಎಂಬ ಶಬ್ದಕ್ಕರ್ಥ. ಇಂತಾಗಲಾ ಶರಣನು ಆರೂಯೆಯ್ದ ಬಾರದ ಮೋಕ್ಷಗ್ರಾಮದ ಭವಕ್ಕೆ ಬಾರದ ಸತ್ಪಥ ಮಾರ್ಗದ ಸದ್ವಿವೇಕದಿಂ ಕಂಡು ಪರಮ ಪರಿಣಾಮಿಯಾಗಿರ್ದ ಶರಣನೆಂಬುದೀಗ, ಹೋಗದ ಊರಿನ ಬಾರದ ದಾರಿಯು ಕಂಡು ಸುಖಿಯಾದೆನಯ್ಯಾ ಸೌರಾಷ್ಟ್ರ ಸೋಮೇಶ್ವರಾ ಎಂಬ ಶಬ್ದಕ್ಕರ್ಥ.

೧೨

ಆಡಿನ ತತ್ತಿಯೊಳಗೊಂದು ಹೇರಡವಿ ಇದ್ದಿತ್ತು
ಆ ಹೇರಡವಿಯೊಳಗೆ ಮೇರುವೆ ಇದ್ದಿತ್ತು
ಆ ಮೇರುವಿನ ಒಡಲಲ್ಲಿ ಚತುರ್ದಶ ಭುವನ—
ಚರಾಚರಂಗಳೆಲ್ಲ ಇದ್ದಿತ್ತು.
ತತ್ತಿ ವಡಯಿತ್ತು, ಅಡವಿ ಅಡಗಿತ್ತು
ಸೌರಾಷ್ಟ್ರ ಸೋಮೇಶ್ವರ ಲಿಂಗ ಇಲ್ಲದಂತೆ ಇದ್ದಿತ್ತು.

**ಟೀಕು:**— ರಜೋಗುಣ ಸಂಬಂಧವಾದ ಜೀವನ ಪ್ರಕೃತಿ ರೂಪವಾದ ತನುವಿನ ಮಧ್ಯದಲ್ಲಿ ಭವಾರಣ್ಯ ತನ್ಮಯವಾಗಿದ್ದಿತ್ತೆಂಬುದೀಗ, ಆಡಿನ ತತ್ತಿಯೊಳಗೊಂದು ಹೇರಡವಿ ಇದ್ದಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಭವಾರಣ್ಯದ ಮಧ್ಯದಲ್ಲಿ ಅಹಂಕಾರವೆಂಬ ಮೇರುವೆ ಹುಟ್ಟಿತ್ತೆಂಬುದೀಗ, ಆ ಹೇರಡವಿಯೊಳಗೆ ಮೇರುವೆ ಇದ್ದಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾರದ ಮಧ್ಯದಲ್ಲಿ ಹದಿನಾಲ್ಕು ಲೋಕ ಸಚರಾಚರ ಪ್ರಾಣಿಗಳೆಲ್ಲ ಆ ಅಹಂಕಾರ ಯುಕ್ತವಾಗಿಹ ವೆಂಬುದೀಗ, ಆ ಮೇರುವಿನ ಒಡಲಲ್ಲಿ ಚತುರ್ದಶ ಭುವನ ಸಚರಾಚರಂಗಳೆಲ್ಲ ಇದ್ದಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ದೇಹಿಗಳೊಳಗೆ ಒಬ್ಬ ಜೀವಂಗೆ ಸುಜ್ಞಾನೋದಯವಾಗಲು, ಸಕಲ ಪ್ರಪಂಚು ನಿವೃತ್ತಿಯ ಮಾಡಿ ಗುರೋಪಾವಸ್ಥೆಯ ಮಾಡಲು ಆ ಶ್ರೀಗುರು

ಕರುಣಿಸಿ ಸರ್ವಾಂಗ ಲಿಂಗ ಸಂಬಂಧವ ಮಾಡಲು ತನು ಭಾವ ನಷ್ಟವಾಯಿತ್ತೆಂಬುದೀಗ, ತತ್ತಿ ಒಡಯಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗ ಸಂಬಂಧದಿಂ ತನು ಭಾವ ನಷ್ಟವಾದ ಶರಣಂಗೆ ಭವಾರಣ್ಯವಳಿಯಿತ್ತೆಂಬುದೀಗ, ಅಡವಿ ಅಡಗಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಭವಾರಣ್ಯ ನಷ್ಟವಾದ ಶರಣನ ಸರ್ವಾಂಗವು ಚಿದ್ಘನಲಿಂಗದಲ್ಲಿ ಸಮರಸವಾಗಲು ಶರಣ ಲಿಂಗವೆಂಬು ಭಯ ಭಾವವಿಲ್ಲದೆ ಹೋಯಿತ್ತೆಂಬುದೀಗ, ಸೌರಾಷ್ಟ್ರ ಸೋಮೇಶ್ವರ ಲಿಂಗ ಇಲ್ಲದಂತೆ ಇದ್ದಿತ್ತೆಂಬ ಶಬ್ದಕ್ಕರ್ಥ.

## ವೈದ್ಯ ಸಂಗಣ್ಣನವರ ವಚನಗಳು

೧

ಆರು ವರ್ಣದ ಬೇರು ಮೂರು ವರ್ಣದ ಉದಕ,
ರವೆ ತೋರಬಾರದ ಕಲ್ಲು, ವಿಶ್ವಾಸವ ಮೀರಬಾರದ ಗುಂಡು
ಇಂತಿವ ಭೇದಿಸಿ ಅರೆಯಲಾಗಿ
ನವಯಿತ್ತು ಮದ್ದು ವಿಶ್ವಾಸವೆಂಬ ತಟ್ಟೆಯಲ್ಲಿ
ಭಕ್ತಂಗೆ ಮೂರು, ಮಾಹೇಶ್ವರಂಗೆ ನಾಲ್ಕು, ಪ್ರಸಾದಿಗೆ ಐದು,
ಪ್ರಾಣಲಿಂಗಿಗೆ ಆರು, ಶರಣಂಗೆ ಎಂಟು, ಐಕ್ಯಂಗೆ ಹತ್ತು,
ಇಂತೀ ಕ್ರಮದಲ್ಲಿ ಕೊಂಡ ಮತ್ತೆ,
ಮೂರು-ನಾಲ್ಕು ಕೂಡಿ, ನಾಲ್ಕು-ಐದು ಕೂಡಿ, ಐದು-ಆರು ಕೂಡಿ,
ಆರು-ಎಂಟು ಕೂಡಿ, ಎಂಟು-ಹತ್ತು ಕೂಡಿ, ನಷ್ಟವಾದ
ಮತ್ತೆ ರೋಗದ ಕಟ್ಟು ತೊಟ್ಟು ಬಿಟ್ಟಿತ್ತು
ಮರುಳ ಶಂಕರಪ್ರಿಯ್ಯ ಸಿದ್ಧರಾಮೇಶ್ವರ ಲಿಂಗವನರಿಯಲಾಗಿ.

**ಟೀಕು**:— ಷಡಕ್ಷರ ಸಂಬಂಧವಾದ ಮೂಲ ಜ್ಞಾನವೆಂಬುದೀಗ, ಆರು ವರ್ಣದ ಬೇರು ಎಂಬ ಶಬ್ದಕ್ಕರ್ಥ. ಅಕ್ಷರತ್ರಯ ಸಂಬಂಧವಾದ ಪರಮಾನಂದ ಜಲವೆಂಬುದೀಗ, ಮೂರು ವರ್ಣದ ಉದಕವೆಂಬ ಶಬ್ದಕ್ಕರ್ಥ. ಭಿನ್ನಜ್ಞಾನ ಪ್ರಕಾಶಕ್ಕೆ ಬಾರದ ಸಾಕಾರ ಸಂಬಂಧವಾದ ಇಷ್ಟಲಿಂಗವೆಂಬುದೀಗ, ರವೆ-ತೋರಬಾರದ ಕಲ್ಲು ಎಂಬ ಶಬ್ದಕ್ಕರ್ಥ. ಶಿವಾದ್ವೈತ ಭಕ್ತಿಯಲ್ಲಿ ಸಂಬಂಧವಾದ ಚಿತ್ತಶುದ್ಧವೆಂಬ ಗುಂಡೆಂಬುದೀಗ, ವಿಶ್ವಾಸವ ಮೀರಬಾರದ ಗುಂಡು ಎಂಬ ಶಬ್ದಕ್ಕರ್ಥ. ಇಂತಪ್ಪ ಭಕ್ತಿಮಾರ್ಗವ ಶಿವಜ್ಞಾನ ಪ್ರಕಾಶದಿಂ ಭೇದಿಸಿ ಶ್ರೀಗುರು ಕಾರುಣ್ಯ.. ...ಲಿಂಗ ಸಂಬಂಧವಾಗಿ ಅಭಿನ್ನಜ್ಞಾನ ಕ್ರೀಯಿಂದಾಚರಿಸುತ್ತಿರ್ದನೆಂಬುದೀಗ, ಇಂತಿವ ಭೇದಿಸಿ ಅರೆಯಲಾಗಿ ಎಂಬ ಶಬ್ದಕ್ಕರ್ಥ. ಈ ಲಿಂಗಾಂಗ

ಸಂಬಂಧದಲ್ಲಿ ಶಿವಜ್ಞಾನ ಸಮರಸವಾಯಿತ್ತೆಂಬುದೀಗ, ಸವಯಿತ್ತು ಮದ್ದೆಂಬ ಶಬ್ದಕ್ಕರ್ಥ. ಆ ಲಿಂಗಾಂಗದಲ್ಲಿ ಸಮರಸವಾದ ಶಿವಜ್ಞಾನ ಪ್ರ§...... ..

## ಗಾಣದ ಕನ್ನಪ್ಪಯ್ಯನವರ ವಚನಗಳು

೧

ಒಂದು ಧನುವಿಗೆ ಮೂರಂಬ ಹಿಡಿದೆ,
ಒಂದು ಬಾಣವ ಬಿಡಲಾಗಿ—
ಪದ್ಮೋದ್ಭವನ ದೃಷ್ಟಿಕಟ್ಟಿತ್ತು
ಬಾಣ ಪದ್ಮನಾಭನ ಎಡಗೈಯ್ಯಕಟ್ಟಿತ್ತು
ಕಡೆಯ ಬಾಣ ರುದ್ರನ ಹಣೆಯನೊಡದು ಅಲಗು ಮುರಿಯಿತ್ತು
ಗರಿ ಜಾರಿತ್ತು; ನಾರಿಯು ಹೂಣುವ ಹಿಳಕು ಹೋಳಾಯಿತ್ತು
ಗುಹೇಶ್ವರನ ಶರಣ ಅಲ್ಲಮ ಹಿಡಿದ ಬಿಲ್ಲ ಮುರಿಯಿತ್ತು.

**ಟೀಕು:**— ಶ್ರೀಗುರು ಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧವಾದ ಶರಣಂಗೆ, ಸೃಷ್ಟಿಯೆಂಬ ಬಿಲ್ಲಿಗೆ ಸುಮನವೆಂಬ ನಾರಿಯ ಹೂಡಿ, ಸುಜ್ಞಾನವೆಂಬ ಸರಳನೇರಿಸಿ ಅವಕ್ಕೆ ಕರ್ಮಜ್ಞಾನ ಭಾವವೆಂಬವ ಅಂಬಾಗಿ ಹಿಡಿದು ಎಂಬುದೀಗ, ಒಂದು ಧನುವಿಂಗೆ ಮೂರಂಬ ಹಿಡಿದೆನೆಂಬ ಶಬ್ದಕ್ಕರ್ಥ. ಒಂದು ಬಾಣವೆಂದೊಡೆ ಕ್ರಿಯಾಚಾರ. ಅಂತಪ್ಪ ಸತ್ಕ್ರಿಯಾಚಾರವನು ಸ್ಥೂಲಾಂಗದಲ್ಲಿ ಸಂಬಂಧವ ಮಾಡಿ ಆ ಸತ್ಕ್ರೀಯಲ್ಲಿ ಇಷ್ಟಲಿಂಗ ಸಂಬಂಧವಾಗಲು ರಜೋಗುಣ ಸಂಬಂಧವಾದ ಬ್ರಹ್ಮನ ಉತ್ಪತ್ತ್ಯ ನಷ್ಟವಾಯಿತ್ತೆಂಬುದೀಗ, ಒಂದು ಬಾಣವ ಬಿಡಲಾಗಿ ಪದ್ಮೋದ್ಭವನ ದೃಷ್ಟಿಯು ಕಟ್ಟಿತ್ತೆಂಬ ಶಬ್ದಕ್ಕರ್ಥ. ಮತ್ತೊಂದು ಬಾಣವೆಂದೊಡೆ ಸುಜ್ಞಾನ ಪ್ರಕಾಶ. ಅಂತಪ್ಪ ಸುಜ್ಞಾನ ಅಂತರಂಗದಲ್ಲಿ ನೆಲಸಲು ಆ ಸುಜ್ಞಾನ ಪ್ರಕಾಶದಲ್ಲಿ ಪ್ರಾಣಲಿಂಗ ಸಂಬಂಧವಾಗಲು ಸಾತ್ವೀಕ ಗುಣ ಸಂಬಂಧವಾದ ವಿಷ್ಣುವಿನ ಸ್ಥಿತಿ, ಭೋಗಕೆಟ್ಟು ಲಿಂಗಭೋಗೋಪಭೋಗಿಯಾಗಿರ್ದನೆಂಬುದೀಗ, ಮತ್ತೊಂದು ಬಾಣ ಪದ್ಮನಾಭನ ಎಡಗೈಯ್ಯ ಕಟ್ಟಿತ್ತೆಂಬ ಶಬ್ದಕ್ಕರ್ಥ. ಕಡೆಯ ಬಾಣವೆಂದೊಡೆ ಶಿವಭಾವ. ಅಂತಪ್ಪ ಶಿವಭಾವ ಕಾರಣಾಂಗದಲ್ಲಿ ಸನ್ನಿಹಿತವಾಗಲು ಆನಂದ ಸ್ವರೂಪವಾದ ತೃಪ್ತಿಲಿಂಗ ಸಂಬಂಧವಾಗಿ ತಮೋಗುಣ ಯುಕ್ತವಾದ ರುದ್ರನ ಭಿನ್ನಜ್ಞಾನ ಮೊದಲಾದ ಲಯೋಧರ್ಮ ನಷ್ಟವಾಗಿ ಆ ಭಾವವು ಲಿಂಗದಲ್ಲಿ ನಿರ್ಭಾವವನೆಯ್ದಿತ್ತೆಂಬುದೀಗ, ಕಡೆಯ ಬಾಣ ರುದ್ರನ ಹಣೆಯನೊಡದು ಅಲಗು ಮುರಿಯಿತ್ತೆಂಬ ಶಬ್ದಕ್ಕರ್ಥ. ಆ ಶರಣಂಗೆ ಭಿನ್ನಜ್ಞಾನ–ಭಿನ್ನಕ್ರೀಯುಗಳೆರಡು ನಾಸ್ತಿಯಾದವೆಂಬುದೀಗ, ಗರಿ ಜಾರಿತ್ತೆಂಬ ಶಬ್ದಕ್ಕರ್ಥ.

§ ಮೂಲದಲ್ಲಿ ವಚನದ ತಾತ್ಪರ್ಯವು ಇಷ್ಟಕ್ಕೇ ನಿಂತು ಹೋಗಿದ್ದು ವೈದ್ಯ ಸಂಗಣ್ಣನ ವಚನಗಳೂ ಮುಕ್ತಾಯಗೊಂಡಿವೆ. —ಸಂ.

ನಾರಿಯೆಂದೊಡೆ ಸುಮನ. ಅಂತಪ್ಪ ಸುಮನವ ಲಿಂಗದಲ್ಲಿ ಅಡಗಿಸಲ್ಪಟ್ಟ ನಿಷ್ಠೆಯು ಮಹಾಘನ ಲಿಂಗದಲ್ಲಿ ನಿಸ್ತರಂಗವಾಯಿತ್ತೆಂಬುದೀಗ, ನಾರಿಯು ಹೊಣುವ ಹಿಳುಕು ಹೋಳಾಯಿತ್ತು ಗುಹೇಶ್ವರನ ಶರಣ ಅಲ್ಲಮ ಹಿಡಿದ ಬಿಲ್ಲು ಮುರಿಯಿತ್ತು ಎಂಬ ಶಬ್ದಕ್ಕರ್ಥ.

೨

ಒಂದು ಕೋಲಿನಲ್ಲಿ ಮೂರು ಲೋಕ ಮಡಿಯಿತ್ತು
ಬಿಲ್ಲಿನ ಕೊಪ್ಪು ಹಾರಿ ನಾರಿ ಸಿಡಿದು ನಾರಾಯಣನ ತಾಗಿತ್ತು
ನಾರಾಯಣನ ಹಲ್ಲು ಮುರಿದು ಬ್ರಹ್ಮನ ಹಣೆಯು ವಡಯಿತ್ತು
ಹಣೆ ಮುರಿದು ರುದ್ರನ ಹಣೆಗಿಚ್ಚಿನ ಕಣ್ಣಿನಲ್ಲಿ ಬಿದ್ದಿತ್ತು—
ನಷ್ಟವಾಯಿತ್ತು; ಗುಹೇಶ್ವರನ ಶರಣ—
ಅಲ್ಲಮ ಬದುಕಿದ ಬದುಕು ನಾಮ ನಷ್ಟವಾಯಿತ್ತು.

ಟೀಕು:— ಪೂರ್ಣಜ್ಞಾನವೆಂಬುದೀಗ, ಒಂದು ಕೋಲೆಂಬ ಶಬ್ದಕ್ಕರ್ಥ. ಅಂತಪ್ಪ ಪರಿಪೂರ್ಣಜ್ಞಾನ ತನು ತ್ರಯಂಗಳನವಗ್ರಹಿಸಿದಲ್ಲಿ ಆ ತನುತ್ರಯಂಗಳ ಅನಿತ್ಯವಾದ ಭಾವ ನಷ್ಟವಾಗಿ ಸರ್ವಾಂಗವು ಜ್ಞಾನಕಾಯ ಸ್ವರೂಪವಾಯಿತ್ತೆಂಬುದೀಗ, ಒಂದು ಕೋಲಿನಲ್ಲಿ ಮೂರು ಲೋಕ ಮಡಿಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನಕಾಯದಲ್ಲಿ ಶ್ರೀಗುರು ಕಾರುಣ್ಯದಿಂದ ಇಷ್ಟ-ಪ್ರಾಣ-ಭಾವಲಿಂಗ ಸಂಬಂಧವಾಗಲು ಸದ್ಭಾವವೆಂಬ ಬಿಲ್ಲಿಗೆ ಸುಮನವೆಂಬ ನಾರಿಯು ಹೂಡಿ ಸುಜ್ಞಾನವೆಂಬ ಸರಳ ತೊಟ್ಟು ಪ್ರಯೋಗಿಸುತ್ತಿರುವಲ್ಲಿ ಆಭಾವ ಸಂಬಂಧವಾದ ನಿಷ್ಠೆಯು ಇಷ್ಟಲಿಂಗದಲ್ಲಿ ನಿಷ್ಪತಿಯಾಗಿ ಆ ಸುಮನವು ಪ್ರಾಣಲಿಂಗದಲ್ಲಿ ವಿಶ್ರಾಂತಿಯ ನೆಯ್ದಲು ಶರಣ ಸುಜ್ಞಾನ ಪ್ರಕಾಶವು ಅಂತರ್ದೇಹದಲ್ಲಿ ಪ್ರಯೋಗಿಸುತ್ತಿರಲು ಆ ಸಂಕಲ್ಪ-ವಿಕಲ್ಪಂಗಳೆಂಬ ದಂತಂಗಳು ಭಗ್ನವಾದವೆಂಬುದೀಗ, ಬಿಲ್ಲಿನ ಕೊಪ್ಪುಹಾರಿ ನಾರಿ ಸಿಡಿದು ನಾರಾಯಣನ ತಾಗಿತ್ತು ನಾರಾಯಣನ ಹಲ್ಲು ಮುರಿದು ಎಂಬ ಶಬ್ದಕ್ಕರ್ಥ. ಅಂತು ಸಂಕಲ್ಪ-ವಿಕಲ್ಪ ನಷ್ಟವಾಗಲು ಜಗ ದೃಷ್ಟಿಯ ಮಾಡುವ ಬ್ರಹ್ಮನ ಅಹಂಕಾರವು ನಾಸ್ತಿಯಾಯಿತ್ತೆಂಬುದೀಗ, ಬ್ರಹ್ಮನ ಹಣೆ ಒಡಯಿತ್ತು ಎಂಬ ಶಬ್ದಕ್ಕರ್ಥ. ಅಂತು ಬ್ರಹ್ಮನ ಉತ್ಪತ್ಯಕ್ಕೆ ಕಾರಣವಾದ ಅಹಂಕಾರ ನಷ್ಟವಾದಲ್ಲಿ ಆ ಸುಜ್ಞಾನ ಪ್ರಕಾಶವು ಶರಣನ ಮಹಾಜ್ಞಾನಾಗ್ನಿ ಪ್ರಕಾಶದ ಮಧ್ಯದಲ್ಲಿ ಲಿಯ್ಯವಾಯಿತ್ತೆಂಬುದೀಗ, ಹಣೆ ಮುರಿದು ರುದ್ರನ ಹಣೆಗಿಚ್ಚಿನ ಕಣ್ಣಿನಲ್ಲಿ ಬಿದ್ದಿತ್ತು, ನಷ್ಟವಾಯಿತ್ತು ಗುಹೇಶ್ವರನ ಶರಣ ಅಲ್ಲಮ ಬದುಕಿದ ಬದುಕುನಾಮ ನಷ್ಟವಾಯಿತ್ತು ಎಂಬ ಶಬ್ದಕ್ಕರ್ಥ.

೩

ಹೋಗುತ್ತಿದ್ದ ಎರಳೆಯು ನೆಚ್ಚದೆ
ಮೂರು ಕಾಲು ಹರಿದು ಕೊಂದರಲ್ಲಿ ಆಧರಿಸಿ ನಿಂದಿತ್ತು

ನಿಂದ ಹೆಜ್ಜೆಯ ಕೀಳಲಾರದೆ ಲಿಂಗ ಬಿದ್ದಿತ್ತು ಎರಳೆ ಅಳಿಯಿತ್ತು
ಗುಹೇಶ್ವರನ ಶರಣ ಅಲ್ಲಮನಲ್ಲಿ ಬೇಂಟೆಯ ಹಪ್ಪು ಕೆಟ್ಟಿತ್ತು.

**ಟೀಕು:—** ಸುಜ್ಞಾನೋದಯವಾದ ಜ್ಞಾನ ಕಲಾತ್ಮನು ಸಕಲ ಪ್ರಪಂಚು ನಿವೃತ್ತಿಯ ಮಾಡಿ ಶ್ರೀಗುರುಪಾವಸ್ಥೆಯ ಮಾಡಲು ಆ ಶ್ರೀಗುರು ಕರುಣಿಸಿ ಲಿಂಗಾಂಗ ಸಂಬಂಧವ ಮಾಡಲು ಸುಜ್ಞಾನ ಕ್ರೀಯಿಂದಾಚರಿಸಿಯೆಯ್ದುತ್ತಿರ್ದ ಶಿವಾಂಶೀಕನಾದ ಆತ್ಮನೆಂಬುದೀಗ, ಹೋಗುತ್ತಿರ್ದ್ದ ಎರಳೆಯನೆಂಬ ಶಬ್ದಕ್ಕರ್ಥ. ಸದ್ಭಾವವೆಂಬ ಬಿಲ್ಲಿಗೆ ಸುಮನವೆಂಬ ನಾರಿಯ ಮಾಡಿ ಸುಜ್ಞಾನವೆಂಬ ಸರಳ ತೊಟ್ಟು ಆ ಆತ್ಮಂಗೆ ಪ್ರಯೋಗಿಸಲು ಕ್ರಿಯಾ-ಜ್ಞಾನ-ಭಾವವೆಂಬ ತ್ರಿವಿಧ ಚರಣವು ಬಿಗಿ ಶಿವಾದ್ವೈತ ಭಕ್ತಿವೊಂದರಲ್ಲಿ ನಿರ್ಭರವಾಯಿತ್ತೆಂಬುದೀಗ, ನೆಚ್ಚದೆ ಮೂರು ಕಾಲು ಹರಿದು ಕೊಂಡರಲ್ಲಿ ಆಧರಿಸಿ ನಿಂದಿತ್ತೆಂಬ ಶಬ್ದಕ್ಕರ್ಥ. ಆ ಜ್ಞಾನ ಕಲಾತ್ಮನು ಶಿವದ್ವೈತ ಭಕ್ತಿಯಲ್ಲಿ ನಿರ್ಭರವಾಗಿ ಕಡೆಗೆ ತೊಲಗದೆ ತನ್ನಾಚಾರಾಂಗವು ಮಹಾಘನ ಲಿಂಗದಲ್ಲಿ ನಿಷ್ಪತಿಯಾಯಿತ್ತೆಂಬುದೀಗ, ನಿಂದ ಹೆಜ್ಜೆಯ ಕೀಳಲಾರದೆ ಅಂಗ ಬಿದ್ದಿತ್ತೆಂಬ ಶಬ್ದಕ್ಕರ್ಥ. ಆ ಜ್ಞಾನ ಕಲಾತ್ಮನು ಮಹಾಘನಲಿಂಗದಲ್ಲಿ ಸಮರಸೈಕ್ಯವಾಗಲು ಫಲಪದವಿ ವಾಂಛೆಯಳಿಯಿತ್ತೆಂಬುದೀಗ, ಎರಳೆ ಅಳಿಯಿತ್ತು ಗುಹೇಶ್ವರನ ಶರಣ ಅಲ್ಲಮನಲ್ಲಿ ಬೇಂಟೆಯ ಹಪ್ಪು ಕೆಟ್ಟಿತ್ತೆಂಬ ಶಬ್ದಕ್ಕರ್ಥ.

೪

ಮದ ಕರಿ ಮದವೇರಿ ಬೀದಿಯಲ್ಲಿ ಬರಲಾಗಿ
ಎಂಟು ಕೇರಿಯ ಕಂಭವ ಮುರಿದು, ಒಂಭತ್ತುಬಾಗಿಲ ಕದವ ಕಿತ್ತು
ಮತ್ತೆ ಎನ್ನ ಮೇಲೊತ್ತಿ ಬರಲಾಗಿ ನಿಶ್ಚಯವಾಗಿ ನಿಂದೆ
ಮತ್ತಗಜದ ಸೊಂಡಿಲ ಮುರಿದೊತ್ತಿಟ್ಟೆ
ಆ ಗಜವ ಗುಹೇಶ್ವರನ ಶರಣ ಅಲ್ಲಮನೊತ್ತಿಗಾಗಿ.

**ಟೀಕು:—** ಸುಜ್ಞಾನೋದಯವಾದ ಶರಣನ ಭಕ್ತಿಗಜದಲ್ಲಿ ಚಿದಹಂಕಾರ ತಲೆದೋರಿತ್ತೆಂಬುದೀಗ, ಮದಕರಿ ಮದವೇರಿ ಎಂಬ ಶಬ್ದಕ್ಕರ್ಥ. ಅಂತಪ್ಪ ಚಿದಹಂಕಾರ ಸಂಬಂಧವಾದ ಭಕ್ತಿಗಜವು ಅಂತರಂಗದ ಸುಜ್ಞಾನ ಮಾರ್ಗ ವಿಡಿದು ಬರಲು ಅಷ್ಟತನುಗಳ ದುರ್ಭಾವ ಸ್ತಂಭಭಗ್ನವಾಯಿತ್ತೆಂಬುದೀಗ, ಬೀದಿಯಲ್ಲಿ ಬರಲಾಗಿ ಎಂಟು ಕೇರಿಯ ಕುಂಭ ಮುರಿದು ಎಂಬ ಶಬ್ದಕ್ಕರ್ಥ. ಅಂತು ಅಷ್ಟತನುಗಳ ಭಾವಸ್ತಂಭ ಭಗ್ನವಾಗಲು ನವದ್ವಾರಂಗಳಲ್ಲಿ ಬಂಧಿಸಿರ್ದ ಪ್ರಾಣವಾಯು ವಿಕಾರವನೆತಿ ಮಾಡಿತೆಂಬುದೀಗ, ಒಂಬತ್ತು ಬಾಗಿಲ ಕದವ ಕಿತ್ತು ಎಂಬ ಶಬ್ದಕ್ಕರ್ಥ. ಚಿತ್‌ಸ್ವರೂಪನಾದ ಶರಣನ ಆ ಭಕ್ತಿಗಜವು ಅವ ಗ್ರಹಿಸಿಹೆನೆಂದು ಬರಲಾಗಿ ಶಿವಾಪೇಕ್ಷೆ ಮುಂದುಗೊಂಡಲ್ಲಿ ಶ್ರೀಗುರು ಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧವಾಗಲು ಸತ್ಪಥ ಮಾರ್ಗವಿಡಿದು ಸ್ಥಿರ ವಾಗಿರ್ದನೆಂಬುದೀಗ, ಮತ್ತೆ ಎನ್ನ ಮೇಲೊತ್ತಿ ಬರಲಾಗಿ ನಿಶ್ಚಯವಾಗಿ ನಿಂದೆ

ನೆಂಬ ಶಬ್ದಕ್ಕರ್ಥ. ಅಂತಪ್ಪ ಚಿದಹಂಕಾರ ಸಂಬಂಧವಾದ ಭಕ್ತಿಗಜದ ಸದ್ಭಾವ ಹಸ್ತದ ಚಿದ್ಘನ ಲಿಂಗದಲ್ಲಿ ಏಕಾರ್ಥವ ಮಾಡಿ ಆ ಭಕ್ತಿ ಗಜವ ಮಹಾಘನ ಲಿಂಗದಲ್ಲಿ ಸಮರಸೈಕ್ಯವ ಮಾಡಿದನೆಂಬುದೀಗ, ಮತ್ತ ಗಜದ ಸೊಂಡಿಲ ಮುರಿ ದೊತ್ತಿಟ್ಟ ಆ ಗಜವನು ಗುಹೇಶ್ವರನ ಶರಣ ಅಲ್ಲಮನೊತ್ತಿಗಾಗಿ ಎಂಬ ಶಬ್ದಕ್ಕರ್ಥ

೫

ನಾ ಹಡದೆ ಮೂವರು ಸೂಳೆಯರ,
ಒಬ್ಬಳಿಗೂಹೆಯ ನಿಕ್ಕುವೆ, ಒಬ್ಬಳಿಗೆ ವೆಳೆ ಗೊತ್ತೆಯ ಕೊಡುವೆ
ಒಬ್ಬಳ ಮನೆಯೊಳಗೆ ಹಾಕಿಕೊಂಡೆ
ಎನ್ನ ವಂಚಿಸಿ ಮೂವರೋಡಿದರು, ಲೇಸಾಯಿತ್ತೆಂದೆ—
ಗುಹೇಶ್ವರನ ಶರಣ ಅಲ್ಲಮನ ವೆಶೆಯಿಂದ.

**ಟೀಕು:**— ಶಿವಾಂಶೀಕನಾದ ಆತ್ಮನು ದೇಹ ಸಂಬಂಧವಾದಲ್ಲಿ ಇಚ್ಛಾ-ಜ್ಞಾನ-ಕ್ರೀಯೆಂಬ ತ್ರಿವಿಧ ಶಕ್ತಿಯನೆ ಪ್ರಕೃತಿ ಭಾವದಿಂದ ಆತ್ಮಂಗೆವೇಶ್ಯಾಂಗನೆ ಯರಾಗಿಹರೆಂಬುದೀಗ, ನಾ ಹಡದೆ ಮೂವರು ಸೂಳೆಯರ ಎಂಬ ಶಬ್ದಕ್ಕರ್ಥ. ಒಬ್ಬಳೆಂದೊಡೆ ಆತ್ಮನಲ್ಲಿ ಸಂಬಂಧವಾದ ಇಚ್ಛಾಶಕ್ತಿ. ಅಂತಪ್ಪ ಇಚ್ಛಾಶಕ್ತಿ ಯಲ್ಲಿ ಆತ್ಮನು ಕೂಡಿ ಪ್ರಾರಬ್ಧ ಭೋಗವ ಭೋಗಿಸುತ್ತಿಹನೆಂಬುದೀಗ, ಒಬ್ಬಳಿ ಗೂಹೆಯ ನಿಕ್ಕುವೆನೆಂಬ ಶಬ್ದಕ್ಕರ್ಥ. ಮತ್ತೊಬ್ಬಳೆಂದೊಡೆ ಕ್ರಿಯಾಶಕ್ತಿ. ಅಂತಪ್ಪ ಕ್ರಿಯಾಶಕ್ತಿ ಸಂಬಂಧವಾದ ಸ್ಥೂಲ ದೇಹಕ್ಕೆ ಸ್ಥಿತಿಯಿಂ ರೂಪು-ರುಚಿ ಸಕಲ ಪದಾರ್ಥವ ನಿತ್ತು ರಕ್ಷಿಸುತ್ತಿಹನೆಂಬುದೀಗ, ಒಬ್ಬಳಿಗೆ ವೆಳೆಗೊತ್ತೆಯ ಕೊಡುವೆನೆಂಬ ಶಬ್ದಕ್ಕರ್ಥ. ಮತ್ತೊಬ್ಬಳೆಂದೊಡೆ ಜ್ಞಾನ ಶಕ್ತಿ. ಅಂತಪ್ಪ ಜ್ಞಾನ ಶಕ್ತಿ ಸೂಕ್ಷ್ಮ ದೇಹ ಸಂಬಂಧವಾಗಿಹಳೆಂಬುದೀಗ, ಒಬ್ಬಳ ಮನೆಯೊಳಗೆ ಹಾಕಿಕೊಂಡೆನೆಂಬ ಶಬ್ದಕ್ಕರ್ಥ. ಇಂತಪ್ಪ ತನುತ್ರಯ ಸಂಬಂಧವಾದ ತ್ರಿವಿಧ ಶಕ್ತಿಗಳೊಡನೆ ಕೂಡಿ ಜೀವನು ಪ್ರಾರಬ್ಧ ಭೋಗವ ಭೋಗಿಸುತ್ತಿರಲು ಶಿವ ಕೃಪೆಯಿಂ ಅಲ್ಲಿ ಸುಜ್ಞಾನೋದಯವಾಗಲು ತನುತ್ರಯಂಗಳಳಿದು ತ್ರಿವಿಧ ಶಕ್ತಿ ಗಳು ನಿವೃತ್ತಿಯಾಗಿ ಶ್ರೀಗುರು ಕಾರುಣ್ಯದಿಂ ಸರ್ವಾಂಗ ಲಿಂಗ ಸಂಬಂಧಿಯಾ ಗಿರ್ದನೆಂಬುದೀಗ, ಎನ್ನ ವಂಚಿಸಿ ಮೂವರೋಡಿದರು ಲೇಸಾಯಿತ್ತೆಂದೆ ಗುಹೇ ಶ್ವರನ ಶರಣ ಅಲ್ಲಮನ ವೆಶೆಯಿಂದ ಎಂಬ ಶಬ್ದಕ್ಕರ್ಥ.

೬

ನಾ ಬಂದ, ಬಂದ ಹಾದಿಯಲ್ಲಿ ಎಂಭತ್ತು ನಾಲ್ಕು ಲಕ್ಷ ಕಳ್ಳರು
ಕಟ್ಟಲಂಜಿದರು ಮೂರು ಠಾವಿನ ಅನುಪಮೀರದೆ
ಆರು ಠಾವಿನ ಅರಸುಗಳ ಜಾರಿ ಬಂದೆ
ಬಂದು ನಿಂದಿರಲಾಗಿ ಈ ದೇಹದ ಅಂದವೇನೋ ಎಂದು—
ಕೇಳಿದ, ಗುಹೇಶ್ವರನ ಶರಣ ಅಲ್ಲಮನು.

**ಟೀಕು:**— ಶಿವಾಂಶೀಕನಾದ ಆತ್ಮನು ಶಿವಾಜ್ಞೆಯಿಂದ ದೇಹಸಂಬಂಧಿಯಾಗಿ ಎಂಭತ್ತುನಾಲ್ಕು ಲಕ್ಷ ಯೋನಿದ್ವಾರದಲ್ಲಿ ಹುಟ್ಟಿ-ಹುಟ್ಟಿ ಬರುತ್ತಿರಲು ಅಲ್ಲಿ ಶಿವಸಂಸ್ಕಾರ ಒದಗಿ ಶಿವಜ್ಞಾನೋದಯವಾಗೆ ಶಿವಾಪೇಕ್ಷೆ ಮುಂದುಗೊಳಲು ಪರಮಾರ್ಥ ವಂಚಕರಾಗಿಹ ಕಾರಣ ಅವರ ವ್ಯವಹಾರ ನಾಸ್ತಿಯಾಯಿತ್ತೆಂಬುದೀಗ, ನಾ ಬಂದ, ಬಂದ ಹಾದಿಯಲ್ಲಿ ಎಂಭತ್ತು ನಾಲ್ಕು ಲಕ್ಷ ಕಳ್ಳರು ಕಟ್ಟಿಲಂಜಿದರು ಎಂಬ ಶಬ್ದಕ್ಕರ್ಥ. ತನುತ್ರಯಂಗಳಲ್ಲಿ ಸಂಬಂಧವಾದ ಅವಸ್ಥಾತ್ರಯಂಗಳ ದಾಂಟಿದೆನೆಂಬುದೀಗ, ಮೂರು ಠಾವಿನ ಆನುಪ ಮೀರದೆ ಎಂಬ ಶಬ್ದಕ್ಕರ್ಥ. ಷಡ್ವಿಧ ತತ್ವಂಗಳಿಗೆ ಅಧಿಕಾರಿಗಳಾದ ಬ್ರಹ್ಮ-ವಿಷ್ಣು-ರುದ್ರ-ಈಶ್ವರ-ಸದಾಶಿವ-ಶ್ರೀಗುರುವೆಂಬ ಈ ಷಡ್ವಿಧ ಅಧಿದೇವತೆಗಳ ವರ್ತನೆಯ ನಿವೃತ್ತಿಯ ಮಾಡಿದನೆಂಬುದೀಗ, ಆರು ಠಾವಿನ ಅರಸುಗಳ ಮೀರಿ ಬಂದಿಹೆನೆಂಬ ಶಬ್ದಕ್ಕರ್ಥ. ಇಂತು ಶಿವಜ್ಞಾನೋದಯದಿಂ ಸಕಲ ತತ್ವಂಗಳ ನಿವೃತ್ತಿಯ ಶ್ರೀಗುರೋಪಾವಸ್ಥೆಯ ಮಾಡುತ್ತಿರಲು ಆ ಶ್ರೀಗುರು ಅವಿರಳ ಜ್ಞಾನದೃಕ್ಕಿಂ ನಿರೀಕ್ಷಿಸಿ ನೋಡಿ "ಸೋಹಂ ಪರಬ್ರಹ್ಮಾಸ್ಮಿ" ಎಂಬ ಅರಿವನೆಚ್ಚರಿಸಿಕೊಟ್ಟು ಆ ಶಿಷ್ಯನ ತನು-ಮನ-ಪ್ರಾಣೇಂದ್ರಿಯಂಗಳಲ್ಲಿ ಚಿದ್ಘನ ಲಿಂಗವ ಸಮರಸವ ಮಾಡಿದನೆಂಬುದೀಗ, ಬಂದು ನಿಂದಿರಲಾಗಿ ಈ ದೇಹದ ಅಂದವೇನೋ ಎಂದು ಕೇಳಿದ ಗುಹೇಶ್ವರನ ಶರಣ ಅಲ್ಲಮನು ಎಂಬ ಶಬ್ದಕ್ಕರ್ಥ.

## ಬಹುರೂಪಿ ಚೌಡಯ್ಯನವರ ವಚನಗಳು

೧

ಎಂಟು ತಟ್ಟೆಯ ನಿಟ್ಟು ಒಂಭತ್ತು ನೇಣ ಕಟ್ಟಿ
ಎಂಟ ಬಿಟ್ಟು ಒಂದೇ ನೇಣಿನಲ್ಲಿ ಆಡುತ್ತಿರಲಾಗಿ
ತಟ್ಟೆ ಮುರಿದು ಮೆಟ್ಟಿನಿಂದ ದಾರ ಕಿತ್ತು
ನೋಡುವರ ದೃಷ್ಟಿ ಬಟ್ಟೆ ಬಯಲಾಯಿತ್ತು
ರೇಕಣ್ಣ ಪ್ರಿಯ ನಾಗಿನಾಥನಲ್ಲಿ ಆಟವನಾಡಿದೆ ನರಿದಾಗಿ.

**ಟೀಕು:**— ಅಷ್ಟ ತನು ಯುಕ್ತವಾದ ದೇಹವೆಂಬುದೀಗ, ಎಂಟು ತಟ್ಟೆಯ ನೆಟ್ಟು ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹ ನವವಿಧ ವಾಯುಗಳಿಂ ಬಂಧಿಸಿಹುದೆಂಬುದೀಗ, ಒಂಭತ್ತು ನೇಣಕಟ್ಟಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹ ಸಂಬಂಧಿಯಾಗಿರ್ದ ಆತ್ಮಂಗೆ ಸಮ್ಯಜ್ಞಾನೋದಯವಾಗಲು ಪ್ರಾಣವಾಯು ವಿಕಾರವಳಿದು ಸ್ವಾನುಭಾವ ಸೂತ್ರ ಸಂಬಂಧವಾಗಲು ಅಷ್ಟವಾಯುಗಳು ನಷ್ಟವಾಗಿ ಮಹಾಘನ ಲಿಂಗವನು ಶ್ರೀಗುರು ಮುಖದಿಂ ಪ್ರತ್ಯಕ್ಷವ ಮಾಡಿಕೊಂಡಲ್ಲಿ ಆ ಮಹಾಘನ ಲಿಂಗವೇ ತ್ರಿವಿಧ ಲಿಂಗ ಸ್ವರೂಪವನೆಯ್ದು ಸ್ವಾನುಭಾವ ಸೂತ್ರ

ದಿಂದ ಅಂಗತ್ರಯಂಗಳಲ್ಲಿ ಸಂಬಂಧವಾಗಲು ಶಿವಾದ್ವೈತ ಭಕ್ತಿಯೊಂದರಿಂದ ಆಚರಿಸುತ್ತಿಹನೆಂಬುದೀಗ, ಎಂಟು ಬಿಟ್ಟು ಒಂದೆ ನೇಣಿನಲ್ಲಿ ಆಡುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಆ ಅಷ್ಟ ತನುಗಳು ಅಷ್ಟ ವಿಧ ಭಕ್ತಿಯಿಂ ಚಿದ್ಘನ ಲಿಂಗ ದಲ್ಲಿ ಸಮರಸವಾಗಿ ಎಂಬುದೀಗ, ಕಟ್ಟಿ ಮುರಿದು ಎಂಬ ಶಬ್ದಕ್ಕರ್ಥ. ಮೆಟ್ಟೆಂದೊಡೆ ಸತ್ಕ್ರಿಯಾಚಾರ. ಧಾರವೆಂದೊಡೆ ಸ್ವಾನುಭಾವ ಸೂತ್ರ. ಇಂತಪ್ಪ ಸುಜ್ಞಾನ ಕ್ರೀಗಳೆರಡು ಇಷ್ಟ-ಪ್ರಾಣ ಲಿಂಗದಲ್ಲಿ ಏಕಾರ್ಥವಾದ ಎಂಬುದೀಗ, ಮೆಟ್ಟನಿಂದ ದಾರ ಕಿತ್ತು ಎಂಬ ಶಬ್ದಕ್ಕರ್ಥ. ಸಕಲ ಕರಣಂಗಳೆಲ್ಲ ಜ್ಞಾನ ಕರಣಂಗಳಾಗಿ, ಪರಬ್ರಹ್ಮವ ನಿರೀಕ್ಷಿಸುತ್ತಿರ್ದಲ್ಲಿ ಆ ನಿರೀಕ್ಷಣೆಯಿಂದ ಅಮರ ಗಣ ತತ್ವವ ನೆಯ್ದಿ ನಿರ್ವಯಲ ಸ್ಥಾನದಲ್ಲಿ ಸಮರಸವಾದನೆಂಬುದೀಗ, ನೋಡು ವರ ದೃಷ್ಟಿ ಬಟ್ಟಬಯಲಾಯಿತ್ತು ರೇಕಣ್ಣ ಪ್ರಿಯ ನಾಗಿನಾಥನಲ್ಲಿ ಆಟವನಾಡಿವೆ ನರಿದಾಗಿ ಎಂಬ ಶಬ್ದಕ್ಕರ್ಥ.

೨

ಹುಟ್ಟುವಾತ ಮದ್ದಳೆಯ ಕಟ್ಟಿದ, ನಡೆವಾತ ತಾಳವನೊತ್ತಿದ;
ಬಿಡುವಾತ ಶೃತಿಯ ನೆತ್ತಿದ, ತತ್ತಾಲೆತ್ತಿಯೆಂಟಾಟ-
ಇತ್ತಲೆ ಉಳಿಯಿತ್ತು
ರೇಕಣ್ಣ ಪ್ರಿಯ ನಾಗಿನಾಥ.

**ಟೀಕು:**— ಶಿವಾಂಶೀಕನಾದ ಆತ್ಮನು ತನ್ನ ನಿಜದರಿವ ನಷ್ಟವ ಮಾಡಿದಲ್ಲಿ ಅಜ್ಞಾನದಿಂ ಜನಿಸಿ ಸಂಭವಿಸಿ ಪಂಚ ಭೂತಾಶ್ರಯವಾದ ದೇಹವ ಧರಿಸಿದ ನೆಂಬುದೀಗ, ಹುಟ್ಟುವಾತ ಮದ್ದಳೆಯ ಕಟ್ಟಿದನೆಂಬ ಶಬ್ದಕ್ಕರ್ಥ. ಹೃದಯ ಕಮಲದ ಅಷ್ಟ ದಳದಲ್ಲಿ ಚರಿಸುತ್ತಿಹ ಅಂತರಾತ್ಮನು ಇಡಪಿಂಗಳ ಮಾರ್ಗದಲ್ಲಿ ಪ್ರಾಣವಾಯು ವಿಕಾರ ಸ್ಪಂದದಿಂ "ಸೋಹಂ"ಮೆಂದು ಧ್ವನಿಗೆಯ್ಯುತ್ತಿಹನೆಂಬು ದೀಗ, ನಡವಾತ ತಾಳವನೊತ್ತಿದನೆಂಬ ಶಬ್ದಕ್ಕರ್ಥ. ಇಂತಪ್ಪ ದೇಹವು ಮಾಯಾ ಸಂಬಂಧವಾದುದೆಂದು, ಅಂತಪ್ಪ ದೇಹ ಭಾವವ ನಿವೃತ್ತಿಯ ಮಾಡಿ ಪರಮಾತ್ಮ ತತ್ವಜ್ಞಾನದಿಂದರಿಯಬೇಕೆಂಬ ವೇದಾಂತಿ ಅಹಂಬ್ರಹ್ಮವೆಂಬ ವಾಗ್ಜಾಲದಲ್ಲಿರು ತ್ತಿಹನೆಂಬುದೀಗ, ಬಿಡುವಾತ ಶೃತಿಯನೆತ್ತಿದನೆಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮ ತ್ರಯಂಗಳಲ್ಲಿ ಕೂಡಿ ಪ್ರವರ್ತಿಸುತ್ತಿರ್ಪವ ರೆಲ್ಲರು ಶಬ್ದ ಜಾಲದಲ್ಲಿ ಸಿಲ್ಕಿ ಮಾಯಾ ಪ್ರಪಂಚಿಗೀಡಾದರೆಂಬುದೀಗ, ತತ್ತಾ ಲೆತ್ತಿ ಎಂಜಾಟ ಇತ್ತಲೆ ಉಳಿ ಯಿತ್ತು ರೇಕಣ್ಣಪ್ರಿಯ ನಾಗಿನಾಥಾ ಎಂಬ ಶಬ್ದಕ್ಕರ್ಥ.

೩

ಒಂಭತ್ತು ಇಟ್ಟೆಯ ನಡುವೆ ಒಂದು ಕತ್ತೆಯ ನಟ್ಟು
ತುಟ್ಟ ತುದಿಯ ಮೆಟ್ಟಿ ಆಡಲಾಗಿ
ಆ ಕತ್ತಿ ಇಟ್ಟೆಯ ತಾಗಲಾಗಿ, ಆ ಇಟ್ಟೆ ನಿಷ್ಟೆವಂತರ ತಾಗಿ
ಸತ್ತರೆಲ್ಲರು ಆಟಕೆ ಮೊದಲೆ ರೇಕಣ್ಣಪ್ರಿಯ ನಾಗಿನಾಥನಲ್ಲಿ !

ಟೀಕು:— ತ್ಯಾಗಾಂಗ-ಭೋಗಾಂಗ-ಯೋಗಾಂಗವೆಂಬ ತ್ರಯಾಂಗ ಸ್ಥಲದಲ್ಲಿ ಇಷ್ಟ-ಪ್ರಾಣ-ಭಾವಲಿಂಗ ಸಂಬಂಧ ಷಡ್ವಿಧಾಂಗದಲ್ಲಿ ಷಡ್ವಿಧ ಲಿಂಗ ಸಂಬಂಧ. ಅಂತು ನವವಿಧ ಲಿಂಗಂಗಳೆ ಚಿಸ್ವರೂಪನಾದ ಶರಣಂಗೆ ಇಟ್ಟಿಗಳಾಗೊಪ್ಪುತಿಹವೆಂಬುದೀಗ, ಒಂಭತ್ತು ಇಟ್ಟಿಯ ನಡುವೆ ಎಂಬ ಶಬ್ದಕ್ಕರ್ಥ. ಪರಿಪೂರ್ಣ ಜ್ಞಾನವೆ ಕತ್ತಿ. ಅಂತಪ್ಪ ಪರಿಪೂರ್ಣ ಜ್ಞಾನವನು ನವವಿಧ ಲಿಂಗಂಗಳಲ್ಲಿ ಸಾಹಿತ್ಯವ ಮಾಡಿಕೊಂಡನೆಂಬುದೀಗ, ಇಟ್ಟಿಯ ನಡುವೆ ಒಂದು ಕತ್ತಿಯ ನಟ್ಟು ಎಂಬ ಶಬ್ದಕ್ಕರ್ಥ. ತುರಿಯಾವಸ್ಥೆಯ ಲಿಂದಾಚರಿಸುತ್ತಿರಲಾಗಿ ಎಂಬುದೀಗ, ತುಟ್ಟ ತುದಿಯ ಮೆಟ್ಟಿಯಾಡಲಾಗಿ ಎಂಬ ಶಬ್ದಕ್ಕರ್ಥ. ಅಂತು ಪರಿಪೂರ್ಣ ಜ್ಞಾನ ನವವಿಧ ಲಿಂಗಂಗಳ ನವಗ್ರಹಿಸಿದಲ್ಲಿ ಎಂಬುದೀಗ, ಆ ಕತ್ತಿ ಇಟ್ಟಿಯ ತಾಗಲಾಗಿ ಎಂಬ ಶಬ್ದಕ್ಕರ್ಥ. ಆ ನವವಿಧ ಲಿಂಗಂಗಳು ಪಂಚಾಚಾರದಲ್ಲಿ ತತ್ಪರನಾಗಿರ್ದ ಏಕಲಿಂಗ ನಿಷ್ಠಪರರಾದ ವೀರ ಮಾಹೇಶ್ವರರ ತನು-ಮನ-ಪ್ರಾಣೇಂದ್ರಿಯಂಗಳನೊಳಕೊಂಡಲ್ಲಿ ಆ ಸಧೂಪವಾದ ಬ್ರಹ್ಮವೆ ಆದರೆಂಬುದೀಗ, ಆ ಇಟ್ಟಿ ನಿಷ್ಟೆವಂತರತಾಗಿ ಸತ್ತರೆಲ್ಲರು ಅಟಕ್ಕೆ ಮೊದಲೆ ರೇಕಣಪ್ರಿಯ ನಾಗಿನಾಥನಲ್ಲಿ ಎಂಬ ಶಬ್ದಕ್ಕರ್ಥ.

೪

ಒಂದರಲ್ಲಿ ಬಂದು, ನಾಲ್ಕರಲ್ಲಿ ಆಡಿ
ಒಂದರಲ್ಲಿ ನಡದು, ಮೂರರಲ್ಲಿ ಕೂಡಿ
ಎಂಟರಲ್ಲಿ ಕಂಠಕವಾಯಿತ್ತು ರೇಕಣ್ಣ ಪ್ರಿಯ ನಾಗಿನಾಥನಲ್ಲಿ.

ಟೀಕು:— ಅನಾದಿ ಪರಶಿವ ತತ್ವದಿಂ ಚಿತ್ ಸ್ವರೂಪನಾದ ಶರಣನು ಉದಯಿಸಿದನೆಂಬುದೀಗ, ಒಂದರಲ್ಲಿ ಒಂದು ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನು ಶ್ರೀಗುರು ಕಾರುಣ್ಯದಿಂ ಸರ್ವಾಂಗ ಲಿಂಗ ಸಂಬಂಧಿಯಾಗಿ ಚತುರ್ವಿಧ ಭಕ್ತಿಗಳಿಂದ ಆಚರಿಸುತ್ತಿರ್ದನೆಂಬುದೀಗ, ನಾಲ್ಕರಲ್ಲಿ ಆಡಿ ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನು ಶಿವಾದ್ವೈತ ಭಕ್ತಿವಿಡಿದು ಆಚರಿಸಿ ಲಿಂಗತ್ರಯದಲ್ಲಿ ಬೆರಸಿದನೆಂಬುದೀಗ, ಒಂದರಲ್ಲಿ ನಡದು ಮೂರರಲ್ಲಿ ಕೂಡಿ ಎಂಬ ಶಬ್ದಕ್ಕರ್ಥ. ಅಂತು ಶರಣ ಅಷ್ಟವಿಧ ಭಕ್ತಿಗಳಿಂದ ಆಚರಿಸುತ್ತಿರಲು ತಾನೆಂಬ ಭಾವವಡಗಿ ಮಹಾಘನಲಿಂಗದಲ್ಲಿ ಸಮರಸೈಕ್ಯವಾದನೆಂಬುದೀಗ, ಎಂಟರಲ್ಲಿ ಕಂಠವಾಯಿತ್ತು ರೇಕಣ್ಣ ಪ್ರಿಯ ನಾಗಿನಾಥನಲ್ಲಿ ಎಂಬ ಶಬ್ದಕ್ಕರ್ಥ.

೫

ಹೆಸರಿಲ್ಲದ ಜವನಿಕೆಯ ಮರೆಯಲ್ಲಿ ಬಂದು
ಅಸುವಿನ ಬಹುರೂಪವ ತೊಟ್ಟು—
ಪಶುಪತಿಯವತಾರವ ನಾಡುತ್ತಿರಲಾಗಿ
ಹಸುಬೆಯ ತೆರೆಹರಿದು ಅಸು ದೆಸೆಯಲಿಲ್ಲ ಎಂದೆ—
ರೇಕಣ್ಣ ಪ್ರಿಯ ನಾಗಿನಾಥನಲ್ಲಿ ಪೂರೆ ಪೂರೆಯೆನಿಸುತ್ತಿರ್ದನು.

**ಟೀಕು:**— ನಾಮುಕ್ಕೆಬಾರದ ನಿರ್ನಾಮ ಸ್ವರೂಪವಾದ ಮಹಾಜ್ಞಾನ ಚಿತ್ತುವನೆ ಅಂಗವ ಮಾಡಿಕೊಂಡು ಶರಣನು ಉದಯಿಸಿದನೆಂಬುದೀಗ, ಹೆಸರಿಲ್ಲದ ಜವನಿಕೆಯು ಮರೆಯಲ್ಲಿ ಬಂದು ಎಂಬ ಶಬ್ದಕ್ಕರ್ಥ. ಅಂತು ಚಿತ್ತೆ ಅಂಗವಾಗಿರ್ಪ ಶರಣನು ತನ್ನಂತರಂಗದಲ್ಲಿ ಚೈತನ್ಯವಾಗಿರ್ಪ ಮಹಾಘನ ಲಿಂಗವ ಗುರು ಮುಖದಿಂ ಪ್ರತ್ಯಕ್ಷವ ಮಾಡಿಕೊಂಡು ಷಡ್ವಿಧಾಂಗದಲ್ಲಿ ಷಡ್ವಿಧಲಿಂಗ ಸ್ವರೂಪವಾಗಿ ಧರಿಸಿ ಸುಜ್ಞಾನ ಕ್ರೀವಿಡಿದಾಚರಿಸುತ್ತಿಹನೆಂಬುದೀಗ, ಅಸುವಿನ ಬಹುರೂಪವ ತೊಟ್ಟು ಎಂಬ ಶಬ್ದಕ್ಕರ್ಥ. ಅಂತು ಷಟ್‌ಸ್ಥಲಮಾರ್ಗ ವಿಡಿದು ಆಚರಿಸುತ್ತಿರ್ಪ ಶರಣನು ಪಂಚಾಚಾರ ಸಂಬಂಧವಾಗಿ ಶಿವಲಾಂಛನವಿಡಿದು ಜಗತ್ಪಾವನ ಮೂರ್ತಿಯಾಗಿ ಚರಿಸುತ್ತಿರ್ದನೆಂಬುದೀಗ, ಪಶುಪತಿಯುವತಾರವ ನಾಡುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಅಂತು ಜಗಹಿತಾರ್ಥವಾಗಿ ಚರಿಸುತ್ತಿರ್ದ ಶರಣನ ಸತ್ಕ್ರಿಯಾ ಚರಣಗಳೆಲ್ಲವೂ ಬೀಗಿ ಚಿದ್ ಘನಲಿಂಗದಲ್ಲಿ ತರಹರವಾಗಲು ತನಗಂಗವಾಗಿರ್ದ ಮಹಾಜ್ಞಾನ ಚಿತ್ತುಪರಬ್ರಹ್ಮದಲ್ಲಿ ನಿಷ್ಪತಿಯಾಗಲು ಚೈತನ್ಯ ಸ್ವರೂಪವಾದ ಮಹಾಘನಲಿಂಗವು ಆ ಚಿತ್ ಸ್ವರೂಪನಾದ ಶರಣನ ಸರ್ವಾಂಗವ ನವಗ್ರಹಿಸಿ ಪರಮಕಾಷ್ಟಿಯಾಯಿತ್ತೆಂಬುದೀಗ, ಪಸುಬೆಯಾ ತೆರೆಹರಿದು ಆ ಅಸುದೆಸೆಯುಲ್ಲಿಲ್ಲ ಎಂದ, ರೇಕಣ್ಣಪ್ರಿಯ ನಾಗಿನಾಥನಲ್ಲಿ ಪೂರೆ-ಪೂರೆ ಎನುತಿರ್ದನು ಎಂಬ ಶಬ್ದಕ್ಕರ್ಥ.

---

## ಬೊಕ್ಕಸದ ಸಂಗಣ್ಣನವರ ವಚನಗಳು

೧

ಅಂಗದ ಬೊಕ್ಕಸದ ಮಂದಿರಕ್ಕೆ ಲಿಂಗವೆಂಬುದೊಂದು ಬೀಗ.
ತ್ರಿಗುಣವೆಂಬ ಮೂರೆಸಳಿನ ಸಿಕ್ಕು
ಒಂದು ಪೂರ್ವಗತಿ, ಒಂದು ಮಧ್ಯಗತಿ,
ಒಂದು ಉತ್ತರ ಗತಿಯಾಗಿ ಸಿಕ್ಕಿದವು ಮೂರೆಸಳು
ಆ ಎಸಳಿಗೆ ಪುಟ ಒಂದೆ.
ಒಡಲು ಎಸಳು ತೆಗವುದಕ್ಕೆ ಕೈಯ್ಯ ಕಾಣೆ
ಪ್ರತಿ ಕೈಗೆ ಆ ಎಸಳು ಅಸಾಧ್ಯ ನೋಡಾ !
ಇಂತಿ ಬಿಗಿವ ಗುಣ ಬಸವಣ್ಣ ಪ್ರಿಯ ನಾಗೇಶ್ವರನಲ್ಲಿ
ನಿಶ್ಚಯವಾದ ಶರಣಂಗೆ

**ಟೀಕು:**— ಸುಜ್ಞಾನೋದಯವಾದ ಶರಣನ ಜ್ಞಾನ ಕಾಯವೆಂಬುದೀಗ, ಅಂಗದ ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನ ಕಾಯದಲ್ಲಿ ಸರ್ವಾಚಾರ ಸಂಪತ್ತನೊಳಕೊಂಡು ಶರಣನಾಚಾರಾಂಗ ತೋರುತ್ತಿಹುದೆಂಬುದೀಗ, ಅಂಗದ

ಬೊಕ್ಕಸವ ಮಂದಿರಕ್ಕೆ ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನ ಸ್ವರೂಪವಾದ ಆಚಾರಂಗಕ್ಕೆ ಸಚ್ಚಿದಾನಂದ ಸ್ವರೂಪವಾದ ಪರಬ್ರಹ್ಮವೆ ಚೈತನ್ಯ ಸ್ವರೂಪವಾಗೊಪ್ಪುತ್ತಿಹುದೆಂಬುದೀಗ, ಚಿದ್ ಘನ ಲಿಂಗವೆಂಬುದೊಂದು ಬೀಗವೆಂಬ ಶಬ್ದಕ್ಕರ್ಥ. ಅಂತಪ್ಪ ನಿರವಯ ಪರಬ್ರಹ್ಮದಿಂದೊದಗಿದ ಕ್ರಿಯಾ ಜ್ಞಾನ ಭಾವಂಗಳೆಂಬ ಎಸಳುಗಳಿಗೆ ಆ ಪರಬ್ರಹ್ಮವೆ ಚೈತನ್ಯ ಸ್ವರೂಪವಾಗಿ ಬಂಧಿಸಿಕೊಂಡಿಹುದೆಂಬುದೀಗ, ತ್ರಿಗುಣವೆಂಬ ಮೂರೆಸಳಿನ ಸಿಕ್ಕು ಎಂಬ ಶಬ್ದಕ್ಕರ್ಥ. ಶರಣನ ಸ್ಥೂಲಾಂಗದ ಸತ್ಕ್ರಿಯಾಚಾರದಲ್ಲಿ ಇಷ್ಟಲಿಂಗ ಸಂಬಂಧವಾಗಿಹುದೆಂಬುದೀಗ, ಒಂದು ಪೂರ್ವಗತಿ ಎಂಬ ಶಬ್ದಕ್ಕರ್ಥ. ಸೂಕ್ಷ್ಮಾಂಗದ ಸುಜ್ಞಾನ ಪ್ರಕಾಶದಲ್ಲಿ ಪ್ರಾಣಲಿಂಗ ಸಂಬಂಧವಾಗಿಹುದೆಂಬುದೀಗ, ಒಂದು ಮಧ್ಯಗತಿ ಎಂಬ ಶಬ್ದಕ್ಕರ್ಥ. ಕಾರಣಾಂಗದ ಭಾವ ಪ್ರಕಾಶದಲ್ಲಿ ತೃಪ್ತಿಲಿಂಗ ಸಂಬಂಧವಾಗಿಹುದೆಂಬುದೀಗ, ಒಂದು ಉತ್ತರ ಗತಿಯಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಕ್ರಿಯಾಜ್ಞಾನ ಭಾವಂಗಳನು ಒಳಗೊಂಡಿರ್ಪ ಇಷ್ಟ-ಪ್ರಾಣ-ಭಾವ ಲಿಂಗಂಗಳಿಗೆ ಚಿತ್ ಸ್ವರೂಪನಾದ ಶರಣನ ಆಚಾರಂಗ ಒಂದೇ ಆಶ್ರಯವಾಗಿಹುದೆಂಬುದೀಗ, ಸಿಕ್ಕಿದವು ಮೂರೆಸಳು ಆ ಎಸಳಿಗೆ ಪುಟ ಒಂದು ಒಡಲು ಎಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧಲಿಂಗ ವಿಡಿದಾಚರಿಸಿದ ಶರಣನ ಶಿವ ಭಾವವು ಆ ಪರಬ್ರಹ್ಮದಲ್ಲಿ ನಿಸ್ಪತಿಯಾಗಲು ಶ್ರುತಜ್ಞಾನಕ್ಕೆ ಆ ಪರಬ್ರಹ್ಮವು ಅಸಾಧ್ಯವಾಯಿತ್ತೆಂಬುದೀಗ, ಎಸಳ ತೆಗವುದಕ್ಕೆ ಕೈಯ್ಯ ಕಾಣೆ ಪ್ರತಿ ಕೈಗೆ ಆ ಎಸಳು ಅಸಾಧ್ಯ ನೋಡಾ ಇಂತೀ ಬೀಗದ ಗುಣವ ಬಸವಣ್ಣ ಪ್ರಿಯ ನಾಗೇಶ್ವರನಲ್ಲಿ ನಿಶ್ಚಯವಾದ ಶರಣಂಗೆ ಎಂಬ ಶಬ್ದಕ್ಕರ್ಥ.

೨

ಆ ಬೊಕ್ಕಸದ ಮನೆಯುಪ್ಪ ಛೇದ ಹೊರಗಣ ಹೊದಕೆ
ನಾನಾ ಚಿತ್ರ-ವಿಚಿತ್ರ ಮಳೆಗೆ ನೆನವುದು ಬೆಂಕಿಗೆ ಬೇವದು
ಗಾಳಿಗೆ ಮುರಿವದು; ಆ ಮನೆಗೆ ವಿರೋಧವಹಲ್ಲಿ
ಪಟ್ಟೆ ಕೆಡದು ದೇವಾಂಗ ಬೇಯದು
ರತ್ನಗಾಳಿಯ ತಪ್ಪಲಿಗೊಳಗಾಗದು ಈ ಬೊಕ್ಕಸದ
ಮನೆಯ ಹೊರಗಳಕೇಡು ಒಳಗಣ ಭಾವ
ನಿರೀಕ್ಷಿಸಿ ನೋಡಬೇಕು ಬಸವಣ್ಣಪ್ರಿಯ ನಾಗೇಶ್ವರ ಲಿಂಗವ
ಕೇಳಬೇಕು.

**ಟೀಕು**:— ಸಕಲ ತತ್ವಂಗಳನೊಳಕೊಂಡಿರ್ಪುದು ಪಂಚ ಭೂತಾಶ್ರಯವಾದ ದೇಹವೆಂಬುದೀಗ, ಆ ಬೊಕ್ಕಸದ ಮನೆಯುಪ್ಪ ಛೇದವೆಂಬ ಶಬ್ದಕ್ಕರ್ಥ. ಇಪ್ಪತ್ತೈದು ತತ್ವಂಗಳೆ ಆ ದೇಹಕ್ಕೆ ಮೇಲು ಹೊದಿಕೆಯಾಗಿ ಅವಗ್ರಹಿಸಿಕೊಂಡಿಹವೆಂಬುದೀಗ, ಹೊರಗಳ ಹೊದಕೆ ನಾನಾಚಿತ್ರ-ವಿಚಿತ್ರವೆಂಬ ಶಬ್ದಕ್ಕರ್ಥ. ಅಂತಪ್ಪ ದೇಹವು ಸಂಸಾರ ವಿಷಯ ಜಲದಲ್ಲಿ ನೆನವುತ್ತಿಹುದೆಂಬುದೀಗ, ಮಳೆಗೆ

ನೆನವುದು ಎಂಬ ಶಬ್ದಕ್ಕರ್ಥ. ತಾಪತ್ರಯಾಗ್ನಿಯಲ್ಲಿ ಸರ್ವಾಂಗವು ದಗ್ಧವಾಗುತ್ತಿಹುದೆಂಬುದೀಗ, ಬೆಂಕಿಗೆ ಬೇವದು ಎಂಬ ಶಬ್ದಕ್ಕರ್ಥ. ಪ್ರಾಣವಾಯು ವಿಕಾರದಿಂ ಅತಿ ಬಡುತ್ತಿಹುದು ದೇಹವೆಂಬುದೀಗ, ಗಾಳಿಗೆ ಮುರಿವುದು ಎಂಬ ಶಬ್ದಕ್ಕರ್ಥ. ಇಂತಪ್ಪ ದೇಹ ಸಂಬಂಧಿಯಾದ ಜೀವಂಗೆ ಶಿವಕೃಪೆಯಿಂದ ಸುಜ್ಞಾನೋದಯವಾಗಲು ಸಕಲ ಪ್ರಪಂಚು ನಿವೃತ್ತಿಯ ಮಾಡಿ ಶ್ರೀಗುರು ಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧವಾಗಿ ನಿವೃತ್ತಿ ಮುಖವನೆಯ್ದಿದಲ್ಲಿ ಶರಣನ ಶಿವಾದ್ವೈತ ಭಕ್ತಿ ಭಿನ್ನವಾಗದೆ ಇದ್ದಿತ್ತೆಂಬುದೀಗ, ಆ ಮನೆಗೆ ವಿರೋಧವಾಹಲ್ಲಿ ಪಟ್ಟಿಕೆಡದು ಎಂಬ ಶಬ್ದಕ್ಕರ್ಥ. ಆ ಶರಣನ ಅಂತರಂಗವಲ್ಲಿರ್ಪ ಅಭಿನ್ನ ಪ್ರಕಾಶವು ತಾಪತ್ರಯಾಗ್ನಿಯಲ್ಲಿ ದಗ್ಧವಾಗದೆಂಬುದೀಗ, ದೇವಾಂಗ ಬೇಯದು ಎಂಬ ಶಬ್ದಕ್ಕರ್ಥ. ಅಖಂಡ ಚಿತ್ಪ್ರಭಾಲಿಂಗವು ದಶವಾಯು ವಿಕಾರದಲ್ಲಿ ಸಿಲ್ಕಿ ದೇಹಭಾವಕ್ಕೆ ಈಡಾಗದಿಹುದೆಂಬುದೀಗ, ರತ್ನಗಾಳಿಯ ತಪ್ಪಲಿಗೊಳಗಾಗದೆಂಬ ಶಬ್ದಕ್ಕರ್ಥ. ಇಂತಪ್ಪ ಶಿವಜ್ಞಾನ ಸಂಪನ್ನನಾದ ಶರಣನು ಬಹಿರಂಗದ ಸಕಲ ತತ್ವಂಗಳ ನಿವೃತ್ತಿಮಾಡಿ ತನ್ನ ತನುತ್ರಯಂಗಳಲ್ಲಿ ಸಂಬಂಧವಾದ ಇಷ್ಟ-ಪ್ರಾಣ-ಭಾವ ಲಿಂಗವನು ಸುಜ್ಞಾನ ದೃಷ್ಟಿಯಿಂ ನಿರೀಕ್ಷಿಸುತ್ತಿಹನೆಂಬುದೀಗ, ಈ ಬೊಕ್ಕಸದ ಮನೆಯ ಹೊರಗಳ ಕೇಡು ಒಳಗಣ ಭಾವ ನಿರೀಕ್ಷಿಸಿ ನೋಡಬೇಕು ಬಸವಣ್ಣ ಪ್ರಿಯ ನಾಗೇಶ್ವರ ಲಿಂಗವ ಕೇಳಬೇಕು ಎಂಬ ಶಬ್ದಕ್ಕರ್ಥ.

೩

ಎಲ್ಲರ ಪರಿಯಲ್ಲ ಎನ್ನ ಊಳಿಗ ಬಸವಣ್ಣ—
ಚನ್ನ ಬಸವಣ್ಣ ಕೊಟ್ಟ ಕಾಯಕ;
ಸತ್ಕ್ರಿಯೆ ಎಂಬ ಆರಸಿಯ ಅಪಮಾನಕ್ಕೆ
ಲೌಕಿಕಕ್ಕೆ ಬೊಕ್ಕಸದ ಭಂಡಾರಕ್ಕೆ
ಇವು ವರ್ತಕ ಶುದ್ಧವಾದ ಮತ್ತೆ ಒಳಗಣ ಮುತ್ತು-
ಬೆಳಗುವ ರತ್ನ, ಥಳಥಳಿಸುವ ವಜ್ರ,
ಈ ಕಾಯಕದ ಹೊಲಬ ಕೊಟ್ಟ, ಮತ್ತೆ-
ಕಳವಿನಿ ಕಿಲ್ಲದಿರಬೇಕು ಬಸವಣ್ಣ ಪ್ರಿಯ
ನಾಗೇಶ್ವರಲಿಂಗವ ನರಿಯಬಲ್ಲಡೆ

**ಟೀಕು:**— ದ್ವೈತ ಭಾವದಿಂ ಲಿಂಗಾಂಗಕ್ಕೆ ಭಿನ್ನವಿಟ್ಟಾಚರಿಸುವ ಆಚಾರ ಕ್ರಿಯಾ ಮಾರ್ಗವಲ್ಲ ಶರಣನ ಅಭಿನ್ನ ಕ್ರಿಯಾಚಾರವೆಂಬುದೀಗ, ಎಲ್ಲರ ಪರಿಯಲ್ಲ ಎನ್ನ ಊಳಿಗವೆಂಬ ಶಬ್ದಕ್ಕರ್ಥ. ಬಸವಣ್ಣನೆ ಗುರು ಸ್ವರೂಪವಾಗಿ ಬಂದು ಸತ್ಕ್ರಿಯಾಚಾರವ ನೆಲೆಗೊಳಿಸಿದ ಚನ್ನಬಸವಣ್ಣನೆ ಲಿಂಗ ಸ್ವರೂಪವಾಗಿ ಬಂದು ಸುಜ್ಞಾನದ ಸಂಬಂಧವ ಮಾಡಿದನೆಂಬುದೀಗ, ಬಸವಣ್ಣ-ಚನ್ನ ಬಸವಣ್ಣ ಕೊಟ್ಟ ಕಾಯಕವೆಂಬ ಶಬ್ದಕ್ಕರ್ಥ. ಇಂತಪ್ಪ ಸುಜ್ಞಾನ ಕ್ರಿಯಾಚಾರವಿಡಿದು ಆಚರಿಸುತ್ತಿರ್ದ ಶರಣ ಸತಿಯ ಭಕ್ತ್ಯಾಭಿಮಾನವು ಲೌಕಿಕಾಚಾ

ರದಲ್ಲಿ ಕೂಡಿ ಕೆಡದಂತೆ ಎಂಬುದೀಗ, ಸತ್ಕ್ರೀ ಎಂಬ ಅರಸಿಯು ಆಪಮಾನಕ್ಕೆ ಲೌಕಿಕಕ್ಕೆ ಎಂಬ ಶಬ್ದಕ್ಕರ್ಥ. ಇಂತು ಸರ್ವಾಚಾರ ಸಂಪತ್ತು ವಿಡಿದಾಚರಿಸುವ ಶರಣಂಗೆ ಅನುಸರಣೆ ಇಲ್ಲವೆ ಆಚಾರ ಶುದ್ಧವಾಗಿ ನಿರ್ಭರವಾದಲ್ಲಿ ಎಂಬುದೀಗ, ಬೊಕ್ಕಸದ ಭಂಡಾರಕ್ಕೆ ಇವು ವರ್ತಕ ಶುದ್ಧವಾದ ಮುತ್ತೆಯೆಂಬ ಶಬ್ದಕ್ಕರ್ಥ. ಶರಣಗೆ ನಿಜಾಂತರಂಗದಲ್ಲಿ ಮುಕ್ತಿ ಸ್ವರೂಪವಾಗಿರ್ದ ಮಹಾಘನಲಿಂಗವೆ, ಕರಸ್ಥಲಕ್ಕೆ ಇಷ್ಟಲಿಂಗ ಸ್ವರೂಪವಾಯಿತ್ತೆಂಬುದೀಗ, ಒಳಗಣ ಮುತ್ತು ಎಂಬ ಶಬ್ದಕ್ಕರ್ಥ. ಚಿದ್ರೂಪನಾದ ಶರಣನ ಹೃದಯ ಕಮಲದಲ್ಲಿ ಚಿತ್ ಪ್ರಕಾಶವಾಗಿ ಬೆಳೆಗುತ್ತಿರ್ದ ಪ್ರಾಣಲಿಂಗವೆಂಬುದೀಗ, ಬೆಳಗುವ ರತ್ನವೆಂಬ ಶಬ್ದಕ್ಕರ್ಥ. ಚಿತ್ ಸ್ವರೂಪನಾದ ಶರಣಾತ್ಮನಾತ್ಮಾಂಗದಲ್ಲಿ ಅತ್ಯಂತ ಪ್ರಕಾಶವಾಗಿ ಬೆಳಗುತ್ತಿರ್ದ ಅಭೇದ್ಯ ಸ್ವರೂಪವಾದ ಭಾವಲಿಂಗವೆಂಬುದೀಗ, ಥಳಥಳಿಸುವ ವಜ್ರವೆಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧ ಲಿಂಗದಲ್ಲಿ ಕ್ರಿಯಾ ಜ್ಞಾನ ಭಾರವಿಡಿದು ಆಚರಿಸುತ್ತಿರ್ದ ಶರಣನು ತನು-ಮನ ಧನಂಗಳ ಗುರು-ಲಿಂಗ-ಜಂಗಮಕ್ಕೆ ಸಮರ್ಪಣೆಯ ಮಾಡುವಲ್ಲಿ ಅಣು ಮಾತ್ರ ವಂಚನೆಯಿಲ್ಲದೆ ಇರುತ್ತಿಹನೆಂಬುದೀಗ, ಈ ಕಾಯಕದ ಹೊಲಬ ಕೊಟ್ಟು ಮತ್ತೆ ಕಳವಿಸಿಸಲ್ಲದಿರಬೇಕು ಬಸವಣ್ಣ ಪ್ರಿಯ ನಾಗೇಶ್ವರ ಲಿಂಗವನು ಅರಿಯ ಬಲ್ಲಡೆ ಎಂಬ ಶಬ್ದಕ್ಕರ್ಥ.

೪

ನಾನಾ ಬಹು ವರ್ಣದ ಬಣ್ಣದ ಬೊಕ್ಕಸದ ಹೊತ್ತು-
ಮಾಡುವಲ್ಲಿ ಭಾವದ ಬಹು ಚಿತ್ತವ ನರಿಯಬೇಕು.
ನಾನಾ ಆಭರಣದ ಹದಿನೆಂಟು ಆಶ್ರಯಂಗಳ ತೊಡುವಲ್ಲಿ
ದ್ರವ್ಯವ ಕೊಡುವಲ್ಲಿ ಇಂದ್ರಿಯ ಆತ್ಮನ ಬೆಂಬಳಿಯ ನರಿಯಬೇಕು
ಎಂಟು ರತ್ನದ ಕಾಂತಿ ಜೀವ ರತ್ನದ ಕಳೆ ಭಾವಿಸಿ
ಏಕವ ಮಾಡಿ ನಡೆವುದು; ನೀವು ಕೊಟ್ಟ ಕಾಯಕ ತನಿವಿಗೆ
ಕ್ರೀ ಆತ್ಮಂಗರಿವು ಆ ಅರಿವಿಂಗೆ ಮಹಾ ಬೆಳಗು
ಒಡಗೂಡಿ ಕರಿಗೊಂಡಲ್ಲಿ ಬೊಕ್ಕಸದ ಮಣಿಹವ ನೊಪ್ಪಿಸಬೇಕು.-
ಬಸವಣ್ಣ ಪ್ರಿಯ ನಾಗೇಶ್ವರ ಲಿಂಗಕ್ಕೆ.

ಟೀಕು:— ಪಂಚ ಭೂತಂಗಳಳಿದು ಪಂಚಾಕ್ಷರಿ ಸ್ವರೂಪವಾದಲ್ಲಿ ಇಪ್ಪತ್ತೈದು ತತ್ವಂಗಳೆಲ್ಲವು ಮಂತ್ರ ಸ್ವರೂಪವಾದವೆಂಬುದೀಗ, ನಾನಾ ಬಹುವರ್ಣದ ಬಣ್ಣದ ಎಂಬ ಶಬ್ದಕ್ಕರ್ಥ. ಸರ್ವಾಚಾರ ಸಂಪತ್ತಿನೊಡನೆ ಕೂಡಿದ ಆಚಾರವ ಧರಿಸಿದನೆಂಬುದೀಗ, ಬೊಕ್ಕಸವ ಹೊತ್ತು ಎಂಬ ಶಬ್ದಕ್ಕರ್ಥ. ಸುಜ್ಞಾನ ಕ್ರೀವಿಡಿದಾಚರಿಸುವಲ್ಲಿ ಎಂಬುದೀಗ, ಮಾಡುವಲ್ಲಿ ಎಂಬ ಶಬ್ದಕ್ಕರ್ಥ. ಮನಸ್ಸಿನ ನಾನಾಮವಿಕಾರ ಗುಣಂಗಳನೆಲ್ಲವನು ಶಿವಜ್ಞಾನದಿಂ ಛೇದಿಸಿ ಉನ್ಮನಿ ತತ್ವ ಸ್ವರೂಪವ ಮಾಡಿದನೆಂಬುದೀಗ, ಭಾವದ ಬಹುಚಿತ್ತವನರಿಯಬೇಕು ಎಂಬ

ಶಬ್ದಕ್ಕರ್ಥ. ಷಡೇಂದ್ರಿಯಂಗಳಲ್ಲಿ ಶಿವಲಿಂಗ ಷಡ್ವಿಧ ಷಟ್ಕರಣಂಗಳಲ್ಲಿ, ಗುರು ಲಿಂಗ ಷಡ್ವಿಧ ಷಡಾಧಾರ ಚಕ್ರಂಗಳಲ್ಲಿ, ಆಚಾರಲಿಂಗ ಷಡ್ವಿಧ ಇಂತಿ ಹದಿನೆಂಟು ಲಿಂಗಂಗಳ ಆಯಾ ಸ್ಥಾನದಲ್ಲಿ ಧರಿಸಿದನೆಂಬುದೀಗ, ನಾನಾ ಆಭರಣದ ಹದಿನೆಂಟು ಆಶ್ರಯಂಗಳ ತೊಡುವಲ್ಲಿ ಎಂಬ ಶಬ್ದಕ್ಕರ್ಥ. ಆಯಾ ಪದಾರ್ಥಂಗಳ ಆಯಾ ಲಿಂಗಮುಖವನರಿದು ಭಕ್ತಿಯಿಂದ ಅರ್ಪಿಸುವಲ್ಲಿ ಎಂಬುದೀಗ, ದ್ರವ್ಯವ ಕೊಡುವಲ್ಲಿ ಎಂಬ ಶಬ್ದಕ್ಕರ್ಥ. ಆತ್ಮನು ಇಂದ್ರಿಯಾದಿ ಸುಖಂಗಳಿಗೆ ಹರಿಯದಂತೆ ಲಿಂಗ ಭೋಗೋಪಭೋಗಿಯಾಗಿ ಇರಬೇಕೆಂಬುದೀಗ, ಇಂದ್ರಿಯ ಆತ್ಮನ ಬೆಂಬಳಿಯ ನರಿಯಬೇಕು ಎಂಬ ಶಬ್ದಕ್ಕರ್ಥ. ತನುತ್ರಯಂಗಳಲ್ಲಿ ತ್ರಿವಿಧಲಿಂಗ ಸಂಬಂಧ, ಪಂಚತತ್ವಂಗಳಲ್ಲಿ ಪಂಚಲಿಂಗ ಸಂಬಂಧ ಅರಿತು ಅಷ್ಟವಿಧವಾದ ಲಿಂಗ ಪ್ರಕಾಶವ ತಿಳಿಯಬೇಕೆಂಬುದೀಗ, ಎಂಟು ರತ್ನದಕಾಂತಿ ಎಂಬ ಶಬ್ದಕ್ಕರ್ಥ. ಚೈತನ್ಯ ಸ್ವರೂಪವಾದ ಮಹಾಘನಲಿಂಗವ ಅಷ್ಟವಿಧ ಲಿಂಗಂಗಳಲ್ಲಿ ಸಮರಸವ ಮಾಡಿ ಎಂಬುದೀಗ, ಜೀವ ರತ್ನದ ಕಳೆ ಭಾವಿಸಿ ಏಕವ ಮಾಡಿ ಎಂಬ ಶಬ್ದಕ್ಕರ್ಥ. ಶ್ರೀಗುರು ಸಂಬಂಧವ ಮಾಡಿದ ಸತ್ಕ್ರಿಯಾಚಾರವೆಂಬುದೀಗ, ನಡವುದು ನೀವು ಕೊಟ್ಟಕಾಯಕ ತನುವಿಗೆ ಕ್ರಿಯೆಂಬ ಶಬ್ದಕ್ಕರ್ಥ. ಆತ್ಮನಲ್ಲಿ ಅರಿವ ಸಂಬಂಧವ ಮಾಡಿದನೆಂಬುದೀಗ, ಆತ್ಮಂಗರಿವು ಎಂಬ ಶಬ್ದಕ್ಕರ್ಥ. ಇಂತಪ್ಪ ಶರಣನ ಸುಜ್ಞಾನ ಪ್ರಕಾಶದಲ್ಲಿ ಅಖಂಡ ಪರಿಪೂರ್ಣವಾದ ಮಹಾಘನ ಲಿಂಗವು ಸಮರಸವಾಯಿತ್ತೆಂಬುದೀಗ, ಅರಿವಿಂಗೆ ಮಹಾಬೆಳಗು ಒಡಗೂಡಿ ಕರಗೊಂಡಲ್ಲಿ ಬೊಕ್ಕಸದ ಮಣಿಹವನೊಪ್ಪಿಸಬೇಕು ಬಸವಣ್ಣಪ್ರಿಯ ನಾಗೇಶ್ವರ ಲಿಂಗಕ್ಕೆ ಎಂಬ ಶಬ್ದಕ್ಕರ್ಥ.

## ಗೋರಕ್ಷರ ವಚನಗಳು

೧

ಅರಗಿನ ತೇಜಿಯ ಮೇಲೆ ಉರಿಯ ಹಿರಿಯರಸು–
ಮೂರ್ತಿಗೊಂಡು ಮಂಜಿನ ಪರಿವಾರ ಸಂದಣಿಸಿ ಸಂತೈಸಿ
ಅಪರಂಗಕ್ಕೆ ಬಿಸಿಲಂಗದ ಜೋಡ ತೊಡಿಸಿ
ತಾ ತುರಂಗದ ಮೇಲೆ ಪಶುತಮುವೆಂಬ ಖಂಡೆಯವ ಪಿಡಿದು
ಚಂಡಿಕಾ ಕಿರಣದ ಮೇಲೆ ಅಂಗವಿಸಿ ಎರಗಲಾಗಿ
ಪಾಜು ಬೆರಯಿತ್ತು, ಉರಿಯರಸು ಎತ್ತಿದ
ಖಂಡೆಯ ವರುಣನ ಕಿರಣದೊಳಗೆ ಬಯಲಾಯಿತ್ತು.
ಮಂಜಿನ ಪರಿವಾರ ಆ ರಂಜನೆಯೊಳಗೆ ಅಡಗಿತ್ತು
ಉರಿಯರಸು ವಾಯುವಿನ ಸಿರಿಯೊಳಗಾದ

ಅರಸಿನ ಅಶ್ವ ಅರಸಿನ ತೊಡೆಯೊಳಗೆ ಹರಿಯಿತ್ತು.
ಇಂತಿ ಘೊರೆಗೆ ಅರಿಗಳಿದಿರಿಲ್ಲಾ ಎಂದು-
ಗೋರಕ್ಷ ಪಾಲಕ ಮಹಾ ಪ್ರಭು ಸಿದ್ಧ ಸೋಮನಾಥ
ಲಿಂಗಕ್ಕೆ ಇದಿರಿಲ್ಲ ಎನುತಿರ್ದೆ.

**ಟೀಕು:**—ಮಲತ್ರಯ ಯುಕ್ತವಾದ ಪ್ರಾಣವಾಯು ವಿಕಾರದಲ್ಲಿ ಚಿದಾಂಶೀಕನಾದ ಆತ್ಮನು ಕೂಡೆ ದೇಹ ಸಂಬಂಧಿಯಾಗಿರುತ್ತಿಹನೆಂಬುದೀಗ, ಅರಗಿನ ತೇಜಿಯ ಮೇಲೆ ಉರಿಯ ಹಿರಿಯರಸು ಮೂರ್ತಿಗೊಂಡು ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ಅಭ್ರಛಾಯ ಮಾತ್ರವಾಗಿ ತೋರಿ ಅಡಗಲ್ಪಟ್ಟ ಸಕಲ ಕರಣಂಗಳ ಪ್ರವರ್ತನೆ ಹೆಚ್ಚಿತ್ತೆಂಬುದೀಗ, ಮಂಜಿನ ಪರಿವಾರ ಸಂದಣಿಸಿ ಎಂಬ ಶಬ್ದಕ್ಕರ್ಥ. ಇಂತಪ್ಪ ಆತ್ಮಂಗೆ ಶಿವ ಕೃಪೆಯಿಂದ ಸುಜ್ಞಾನೋದಯವಾಗಲು ಆ ಸಕಲ ಕರಣಂಗಳ ಪ್ರವರ್ತನೆಯ ನಿವೃತ್ತಿ ಮಾಡಿ ಶಿವ ಭಾವದಲ್ಲಿ ತರಹರವ ಮಾಡಿದ ಶರಣನು ಶ್ರೀ ಗುರು ಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧಿಯಾಗಿ ಅಂಗಕ್ಕಾಚಾರವನು ಸಕಲ ಕರಣಂಗಳಲ್ಲಿ ಸುಜ್ಞಾನ ಪ್ರಕಾಶವನಳವಡಿಸಿಕೊಂಡಿಹನೆಂಬುದೀಗ, ಸಂತೈಸಿ ಅಂತರಂಗಕ್ಕೆ ಬಿಸಿಲಂಗದ ಜೋಡ ತೊಡಿಸಿ ಎಂಬ ಶಬ್ದಕ್ಕರ್ಥ. ಅಂತು ಅಂತರಂಗದ ಜ್ಞಾನ-ಬಹಿರಂಗದ ಸತ್ಕ್ರಿಯಿಂದಾಚರಿಸುತ್ತಿರ್ಪ ಶರಣನು ಸತ್ಪ್ರಣವಾರೂಢನಾಗಿ ನಿಂದು ಜೀವ ಭಾವವನು ಅಜ್ಞಾನ ತಮಸ್ಸನ್ನು ನಿವೃತ್ತಿ ಮಾಡುವ ಪರಿಪೂರ್ಣ ಜ್ಞಾನದ ತನ್ನ ಸುಜ್ಞಾನ ಪ್ರಕಾಶದ ಸಂಬಂಧವ ಮಾಡಲು, ಸಕಲ ಕಾರಣಂಗಳೆಲ್ಲವು ಅಮರ ಗಣತ್ವದಿಂ ಚಿದ್ಘನಲಿಂಗದಲ್ಲಿ ಸಮರಸವಾದವೆಂಬುದೀಗ, ಚಂಡಿಕಾ ಕಿರಣದ ಮೇಲೆ ಅಂಗವಿಸಿ ಎರಗಲಾಗಿ ಪಾಜು ಬೆರಯಿತ್ತೆಂಬ ಶಬ್ದಕ್ಕರ್ಥ. ಸರ್ವಾಚಾರ ಸಂಪತ್ತಿಗೆ ಕರ್ತನಾದ ಚಿತ್ ಸ್ವರೂಪನಾದ ಶರಣನ ಮಹಾಜ್ಞಾನ ಪ್ರಕಾಶವು ಚಿದಾದಿತ್ಯ ಸ್ವರೂಪವಾದ ಪರಬ್ರಹ್ಮದ ಪರಮ ಪ್ರಕಾಶದಲ್ಲಿ ನಿಷ್ಪತಿಯಾಯಿತ್ತೆಂಬುದೀಗ, ಉರಿಯರಸು ಎತ್ತಿದ ಖಂಡೆಯ ವರುಣನ ಕಿರಣದೊಳಗೆ ಬಯಲಾಯಿತ್ತೆಂಬ ಶಬ್ದಕ್ಕರ್ಥ. ಅಮರ ಗಣತ್ವದ ನೆಯ್ದಿದ ಸಕಲ ಕಾರಣಂಗಳೆಲ್ಲವು ಶರಣನ ಮೂಲ ಜ್ಞಾನ ಪ್ರಕಾಶದಲ್ಲಿ ನಿಷ್ಪತಿಯಾದವೆಂಬುದೀಗ, ಮಂಜಿನ ಪರಿವಾರ ಆರಂಜನೆಯೊಳಡಗಿತ್ತೆಂಬ ಶಬ್ದಕ್ಕರ್ಥ. ಆ ಸುಜ್ಞಾನ ಸ್ವರೂಪನಾದ ಶರಣನು ಚೈತನ್ಯ ಸ್ವರೂಪವಾದ ಮಹದೈಶ್ವರ್ಯದಲ್ಲಿ ನಿಷ್ಪತಿಯಾದನೆಂಬುದೀಗ, ಉರಿಯರಸು ವಾಯುವಿನ ಸಿರಿಯೊಳಗಾದನೆಂಬ ಶಬ್ದಕ್ಕರ್ಥ. ಮಲ ಸಂಬಂಧವಾದ ಪ್ರಾಣವಾಯು ವಿಕಾರವಳಿದು ಚಿತ್ ಪ್ರಾಣಾನಿಲ ಸ್ವರೂಪವಾಗಿ ಚಿತ್ ಸ್ವರೂಪನಾದ ಶರಣನ ಅಭಿನ್ನ ಕ್ರಿಯಾಚಾರದಲ್ಲಿ ನಿಷ್ಪತಿಯಾಗಲು ಅಂತಪ್ಪ ಶರಣಂಗೆ ದ್ವೈತಾದ್ವೈತಿಗಳು ಮೊದಲಾದ ಭಿನ್ನ ಯೋಗಿಗಳು ಸರಿಯಲ್ಲವೆಂಬುದೀಗ, ಅರಗಿನ ಅಶ್ವ ಅರಸಿನ ತೊಡೆಯೊಳಗೆ ಹರಿಯಿತ್ತು ಇಂತಿ ಘೊರೆಗೆ ಅರಿಗಳಿದಿರಲ್ಲ ಎಂದು ಗೋರಕ್ಷಪಾಲಕ ಮಹಾಪ್ರಭು ಸಿದ್ಧ ಸೋಮನಾಥ ಲಿಂಗಕ್ಕೆ ಇದಿರಿಲ್ಲ ಎನುತಿರ್ದನೆಂಬ ಶಬ್ದಕ್ಕರ್ಥ.

೨

ಬ್ರಹ್ಮಾಂಡದಲೊಂದು ಪಿಂಡ ಹುಟ್ಟಿ ಕರ್ಪುರದಿಂದ
ಬೆಳವುತ್ತಿದೆ ನೋಡಾ !
ಸುಮನ-ಸುಮಾನವೆಂಬ ರತಿವಿಡಿದು ನಡಿಯುತ್ತಿರಲಾಗಿ
ಮಹೀತಳನ ಜಡೆಸಿದು ಮರೀಚಕನ ಶಿರ ಬೆಂದು
ರುದ್ರನ ತ್ರಿವಿಧದ ಕಣ್ಣು ಮುಚ್ಚಿತ್ತು
ಇಂತಿವು ನಿರ್ಧರವಾದಲ್ಲಿ ಅರಿಗೊಡಲಿಲ್ಲ
ಗೋರಕ್ಷ ಪಾಲಕ ಮಹಾ ಪ್ರಭು ಸಿದ್ಧ ಸೋಮನಾಥ ಲಿಂಗಕ್ಕೆ
ಇದಿರಿಲ್ಲ ಎಂದೆ.

ಟೀಕು:— ಪ್ರಪಂಚು ಬ್ರಹ್ಮಾಂಡದಿಂದ ಉದಯವಾದ ಪಂಚಭೂತಾಶ್ರಯವಾದ ದೇಹವೆಂಬುದೀಗ, ಬ್ರಹ್ಮಾಂಡದಲೊಂದು ಪಿಂಡಹುಟ್ಟಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ದೇಹಿಯಾಗಿರ್ದ ಆತ್ಮನು ಸಂಚಿತ ಪ್ರಾರಾಬ್ಧ ಆಗಮಿ ಎಂಬ ಕರ್ಮತ್ರಯಾಂಗಳಿಗಾಧಾರವಾಗಿ ದೇಹವ ರಕ್ಷಿಸುತ್ತಿಹನೆಂಬುದೀಗ, ಕರ್ಮದಿಂದೆ ಬೆಳವುತ್ತಿದೆ ನೋಡಾ ಎಂಬ ಶಬ್ದಕ್ಕರ್ಥ. ಇಂತಪ್ಪ ಕರ್ಮ ಕಲ್ಪಿತ ಭಾವದಿಂದ ಇರುತ್ತಿರ್ದ ಆತ್ಮಂಗೆ ಶಿವಜ್ಞಾನೋದಯವಾಗಿ ಸಂಸಾರ ಪ್ರಪಂಚ ನಿವೃತ್ತಿಯ ಮಾಡಿ ಶ್ರೀಗುರೋಪಾವಸ್ಥೆಯ ಮಾಡಲು ಆ ಶ್ರೀಗುರು ಕರುಣಿಸಿ ಕ್ರಿಯಾದೀಕ್ಷೆಯಿಂದ ತನುವಿನಲ್ಲಿ ಚಾರವ ಸಂಬಂಧವ ಮಾಡಿ ಮನದಲ್ಲಿರವು ಸಂಬಂಧವಾಗಲು ಆ ಸುಜ್ಞಾನ ಕ್ರಿಯೆಗಳಲ್ಲಿ ಇಷ್ಟ-ಪ್ರಾಣಲಿಂಗ ಸಂಬಂಧವ ಮಾಡಿ ಆ ಲಿಂಗದಲ್ಲಿ ಪ್ರೀತಿ-ಪ್ರೇಮದಲ್ಲಾಚರಿಸುವದ ತೋರಿದನೆಂಬುದೀಗ, ಸುಮನ-ಸುಮಾನವೆಂಬ ರತಿವಿಡಿದು ನಡವುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಪೃಥ್ವಿಯಾಂಶದ ತನುವ ತಾಳಿರ್ದ ಜೀವನ ದೇಹೋಹಂ ಭಾವವು ಮನಸ್ಸಿನ ದುರ್ವಿವೇಕವು ಸುಜ್ಞಾನಾಗ್ನಿಯಿಂ ದಗ್ಧವಾಯಿತ್ತೆಂಬುದೀಗ, ಮಹಿತಳನ ಜಡೆಸಿದು ಮರೀಚಕನ ಶಿರಬೆಂದು ಎಂಬ ಶಬ್ದಕ್ಕರ್ಥ. ತಮೋಗುಣ ಸಂಬಂಧವಾದ ರುದ್ರತತ್ವದ ತ್ರಿಪುಟಿ ಜ್ಞಾನವು ನಾಸ್ತಿಯಾಯಿತ್ತೆಂಬುದೀಗ, ರುದ್ರನ ತ್ರಿವಿಧದ ಕಣ್ಣು ಮುಚ್ಚಿತ್ತೆಂಬ ಶಬ್ದಕ್ಕರ್ಥ. ಸಕಲ ತತ್ವಂಗಳೆಲ್ಲ ಲಿಂಗತತ್ವದಲ್ಲಿ ಒಡಗೂಡಿ ಲಿಯ್ಯವಾದ ಬಳಿಕ ಕಾಮಾದಿ ಅರಿಷಡ್ವರ್ಗಂಗಳಿಗಿಲ್ಲವೆಂಬುದೀಗ, ಇಂತಿವು ನಿರ್ಧರವಾದಲ್ಲಿ ಅರಿಗೊಡಲಿಲ್ಲ ಗೋರಕ್ಷಪಾಲಕ ಮಹಾಪ್ರಭು ಸಿದ್ಧಸೋಮನಾಥ ಲಿಂಗಕ್ಕೆ ಇದಿರಿಲ್ಲ ಎಂದೆ ಎಂಬ ಶಬ್ದಕ್ಕರ್ಥ.

೩

ಕುಂಡಲಿ ಎಂಬ ಆಧಾರದಲ್ಲಿ ಜಲ, ತೇಜ, ವಾಯುವೆಂಬ-
ತ್ರಿವಿಧ ಕೂಡಿ ಮಂಡಲ ಹುಟ್ಟಿತ್ತು.
ಅದಕ್ಕೆ ಬಾಯಿ ಮೂರು, ಹಿಡಿ ಆರು, ಜೋಳಿಯೊಂದರಲ್ಲಿ

ಉದಕವ ಕೊಳುತ್ತಿರಲಾಗಿ ಆ ಅಸುವಿನ ತೃಷೆಯುಡಗಿ
ಬಾಯ ಕಿಸಲೆ ಬಡಿದಲ್ಲಿ ಮಹಾಗಣನಾಥನ
ಐವತ್ತೆರಡು ಸರ ಹರಿದವು, ಮೂವತ್ತಾರು ಮಣಿ ಕೆಟ್ಟವು
ಇಪ್ಪತ್ತೈದು ಮಣಿ ಪುಂಜವಾಯಿತ್ತು
ಆರು ನಾಯಕ ರತ್ನ ಎಲ್ಲಿ ಅಡಗಿತ್ತೆಂದರಿಯೆ
ಮೂರು ರತ್ನವ ಕಂಡೆ ಒಂದು ಉರಿವುದು,
ಒಂದುಲಿವುದು, ಒಂದು ಬೆಳಗು ನಂದಿಹುದು,
ಇಂತಿ ತ್ರಿವಿಧ ದಂಗವ ಕಂಡು ಈ ಎಂಗದ ಮಣಿಯ
ಒಂದೊಂದ ಪವಣಿಸಲಾರದೆ ಈ ದಿನ ಮಣಿಯ ವಿರಳವ ತೋರಿಸಾ,
ಗೋರಕ್ಷ ಪಾಲಕ ಮಹಾಪ್ರಭು ಸಿದ್ಧ ಸೋಮನಾಥ ಲಿಂಗವೆ!

ಟೀಕು:— ಅಧೋ ಕುಂಡಲಿಯಲ್ಲಿರ್ಪ ಆ ವಿದ್ಯಾ ಮಾಯಾ ಶಕ್ತಿ ಎಂಬುದೀಗ, ಕುಂಡಲಿ ಎಂಬ ಆಧಾರದಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯಾ ಶಕ್ತಿಯಿಂದ ತ್ರಿತತ್ವದಲ್ಲಿ ಕೂಡಿದ ದೇಹ ಉದಯವಾಯಿತ್ತೆಂಬುದೀಗ, ಜಲ-ತೇಜ—ವಾಯುವೆಂಬ ತ್ರಿವಿಧ ಕೂಡಿ ಕಮಂಡಲ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ದೇಹ ಸಂಬಂಧಿಯಾಗಿರ್ದ ಆತ್ಮಂಗೆ ತ್ರಿವಿಧಾವಸ್ಥೆಗಳೆ ಬಾಯಾಗಿಹವೆಂಬುದೀಗ, ಅದಕ್ಕೆ ಬಾಯಿ ಮೂರು ಎಂಬ ಶಬ್ದಕ್ಕರ್ಥ. ಸಕಲ ಪ್ರಪಂಚ ಹಿಡಿವ ಷಟ್ ಕರಣಂಗಳೆ ಹಸ್ತವಾಗಿಹವೆಂಬುದೀಗ, ಹಿಡಿ ಆರು ಎಂಬ ಶಬ್ದಕ್ಕರ್ಥ. ಇಂತಪ್ಪ ವಿಷಯಾಸಕ್ತನಾಗಿರ್ದ ಆತ್ಮಂಗೆ ಶಿವಜ್ಞಾನೋದಯವಾಗಲು ತನ್ನ ನಿಜ ಸ್ವರೂಪವನರಿದು ಶಿವಾಪೇಕ್ಷೆ ಎಂಬ ದ್ವಾರದಿಂ ಸದ್ವಿವೇಕ ಸ್ವರೂಪವಾದ ಪರಮಾನಂದ ಜಲವ ನೀಂಟುತ್ತಿರ್ದನೆಂಬುದೀಗ, ಜೋಳಿಗೆಯೊಂದರಲ್ಲಿ ಉದಕವ ಕೊಳುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ ಜಲ ಸೇವನೆಯಿಂ ಜೀವನ ಜೀವಭಾವವು ಆಶಾ ತೃಷ್ಣೆಯುಡಗಿಹೋಯಿತ್ತೆಂಬುದೀಗ, ಆ ಅಸುವಿನ ತೃಷೆಯುಡಗಿ ಎಂಬ ಶಬ್ದಕ್ಕರ್ಥ. ಅಂತು ಪರಮಾನಂದ ಜಲಸೇವನೆಯಿಂದ ಸಕಲ ಪದಾರ್ಥವ ಜೀವಭಾವದಿಂ ಭೋಗಿಸುವ ಜಿಹ್ವಾ ಲಂಪಟತ್ವವು ನಷ್ಟವಾಯಿತ್ತೆಂಬುದೀಗ, ಬಾಯ ಕಿಸಲೆ ಬತ್ತಿದಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವಾತ್ಮನಲ್ಲಿ ಸಂಬಂಧವಾಗಿರ್ದ ಐವತ್ತೆರಡಕ್ಷರಂಗಳೆಲ್ಲವು ನಿವೃತ್ತಿಯಾಗಿ ಪ್ರಣಯ ಮಂತ್ರ ಸ್ವರೂಪವಾಗಿಹವೆಂಬುದೀಗ, ಮಹಾ ಗಣನಾಥನ ಐವತ್ತೆರಡು ಸಿರ ಹರಿದವು ಎಂಬ ಶಬ್ದಕ್ಕರ್ಥ. ಷಡಾಧಾರ ಚಕ್ರಂಗಳಲ್ಲಿಹ ಮೂವತ್ತಾರು ಭಾವವಳಿದು ಮಂತ್ರಲಿಂಗ ಸ್ವರೂಪವಾಗಿಹವೆಂಬುದೀಗ, ಮೂವತ್ತಾರು ಮಣಿ ಕೆಟ್ಟವೆಂಬ ಶಬ್ದಕ್ಕರ್ಥ. ಇಪ್ಪತ್ತೈದು ಅಂಗ ತತ್ವಂಗಳು ಅಳಿದು ಲಿಂಗ ತತ್ವದಲ್ಲಿ ಲಿಯ್ಯವಾದವೆಂಬುದೀಗ, ಇಪ್ಪತ್ತೈದು ಮಣಿಪುಂಜವಾಯಿತ್ತೆಂಬ ಶಬ್ದಕ್ಕರ್ಥ. ಷಡ್ವಿಧಾಂಗದಲ್ಲಿ ಷಡ್ವಿಧಲಿಂಗ ಸಂಬಂಧವಾಗಿ ಷಡ್ವಿಧ ಭಕ್ತಿಗಳಿಂದಾಚರಿಸಿ ಷಡ್ವಿಧ ಲಿಂಗದಲ್ಲಿ ಏಕಾರ್ಥವಾದ ಶರಣಂಗೆ ಆ ಷಡ್ವಿಧ ಲಿಂಗವು ತನ್ನಲ್ಲಿ

ನಿಷ್ಪತಿಯಾದ ಭೇದವ ಎರಡಿಟ್ಟು ಅರಿಯಲಿಲ್ಲವೆಂಬುದೀಗ, ಆರು ನಾಯಕ ರತ್ನ ಎಲ್ಲಿ ಅದಗಿತ್ತೆಂದರಿಯೆನೆಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣನು ಸುಜ್ಞಾನ ದೃಷ್ಟಿಯಿಂದ ತ್ರಿವಿಧ ಲಿಂಗದಲ್ಲಿ ನಿಜ ಸ್ವರೂಪವ ನಿರೀಕ್ಷಿಸುತ್ತಿರ್ದ ನೆಂಬುದೀಗ, ಮೂರು ರತ್ನವ ಕಂಡೆನೆಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣನ ಸತ್ಕ್ರಿಯಾಚಾರದಲ್ಲಿ ಇಷ್ಟಲಿಂಗವು ಪ್ರಕಾಶಿಸುತ್ತಿಹುದೆಂಬುದೀಗ, ಒಂದು ರಿವುದು ಎಂಬ ಶಬ್ದಕ್ಕರ್ಥ, ಆ ಸುಜ್ಞಾನ ಸ್ವರೂಪನಾದ ಶರಣನ ಹೃದಯ ಕಮಲ ಕರ್ಣಿಕಾವಾಸದಲ್ಲಿ ಸಂಬಂಧವಾದ ಪ್ರಾಣಲಿಂಗವು ಮಂತ್ರಸ್ವರೂಪಿ ನಿಂದೊಪ್ಪುತ್ತಿಹುದೆಂಬುದೀಗ, ಒಂದುಲಿವುದು ಎಂಬ ಶಬ್ದಕ್ಕರ್ಥ. ಈ ಕ್ರೀಯ ಜ್ಞಾನಂಗಳನೊಳಕೊಂಡಿರ್ಪ ಭಾವಲಿಂಗವು ಶರಣನ ಮಹಾಜ್ಞಾನ ಪ್ರಕಾಶದಲ್ಲಿ ನಿಷ್ಪತಿಯಾಯಿತ್ತೆಂಬುದೀಗ, ಒಂದು ಬೆಳಗು ನಂದಿಹುದೆಂಬ ಶಬ್ದಕ್ಕರ್ಥ. ಈ ತ್ರಿವಿಧ ಲಿಂಗದಲ್ಲಿ ತ್ರಿವಿಧಾಂಗವು ಏಕಾರ್ಥವಾದಬಳಿಕ ಇನ್ನು ಲಿಂಗಾಂಗ ಸಂಬಂಧವಿಡಿದಾಚರಿಸಿಹೆನೆಂಬ ಆಚರಣೆಗೆ ಬೀಗಿಚಿದಾದಿತ್ಯ ಸ್ವರೂಪವಾದ ತ್ರಿವಿಧ ಲಿಂಗಂಗಳಲ್ಲಿ ಹರುಕಿಲ್ಲದೆ ಸಮರಸವಾಗಿರ್ಪ ಭೇದವನು ಅರುಹಿಕೊಡೆಂದು ಶರಣ ಗುರುವಿಂಗೆ ಉಪಾವಸ್ಥೆಯ ಮಾಡುತ್ತಿಹನೆಂಬುದೀಗ, ಇಂತಿ ತ್ರಿವಿಧ ಲಿಂಗವ ಕಂಡು ಈ ಅಂಗದ ಮಣಿಯ ಒಂದೊಂದ ಪವಣಿಸಲಾರದೆ ಈ ದಿನ ಮಣಿಯ ವಿರಳವ ತೋರಿಸಾ ಗೋರಕ್ಷಪಾಲಕ ಮಹಾಪ್ರಭು ಸಿದ್ಧ ಸೋಮನಾಥ ಲಿಂಗವೆ ಎಂಬ ಶಬ್ದಕ್ಕರ್ಥ.

೪

ಬಿಸಿಲ ಕಹರು ಮಂಜಿನ ಮುಂಡಗೆಯ ನೆಟ್ಟು
ಮನೆ ಒಲೆಯುದಂತೆ ಅನಲನ ತೊಲೆಯ ಹಾಕಿ;
ಮಳೆಯ ಗಳುವ ಬಿಸಿ ಕೆಂಡದ ಹಂಜೇರಗಟ್ಟಂ ಕಟ್ಟಿ
ಹಿಂಡು ಗಟ್ಟಗೆಗಳು ವಿಗದ ಸಂದಿಯಲ್ಲಿ ಅಡಗಿತ್ತು
ಅನಿಲನ ಹುಲ್ಲ ಹೊದಿಸಿ ಕನ್ನೆ ಹೊಲಬಾಯಿತ್ತು
ನೆಲಗಟ್ಟು ಶುದ್ಧವಿಲ್ಲಾ ಎಂದು, ಗೋರಕ್ಷ ಪಾಲಕ
ಮಹಾ ಪ್ರಭು ಸಿದ್ಧ ಸೋಮನಾಥ ಲಿಂಗವು ಆ ಮನೆಗೆ
ಒಕ್ಕಲು ಬಾರಾ !

**ಟೀಕು**:— ಕ್ರಿಯಾ ಬಾಹ್ಯವಾದ ವಾಗಾದ್ವೈಯ ವೃತ್ತಿಯು ಎಂತೆಂದೊಡೆ ಜ್ಞಾನಾಜ್ಞಾನಂಗಳೆ ಶವರಾಗಿ, ಮಿಥ್ಯವಾದ ಅಹಂ ಮಮತೆಗಳೇ ಮುಂಡಿಗೆಯಾಗಿ, ದಶವಾಯುಗಳ ಪೊಯ್ಲುಗಳಲ್ಲಿ ಪಂಚಭೂತವೆಂಬ ಗ್ರಹವು ಸಂಚರಿಸದಂತೆ ನಿರ್ಧರವ ಮಾಡಿದನೆಂಬುದೀಗ, ಬಿಸಿಲ ಕಹರು ಮಂಜಿನ ಮುಂಡಗೆಯ ನೆಟ್ಟು ಮನೆ ಒಲೆಯದಂತೆ ಎಂಬ ಶಬ್ದಕ್ಕರ್ಥ. ಆ ಮನೆಗೆ ತ್ರಾಪತ್ರಯಾಗ್ನಿ ಸ್ವರೂಪವಾದ ಮೂಲ ಅಹಂಕಾರವನೆ ತೊಲೆಯಾಗಿ ಅಳವಡಿಸಿದನೆಂಬುದೀಗ, ಅನಲನ ತೊಲೆಯ ಹಾಕಿ ಎಂಬ ಶಬ್ದಕ್ಕರ್ಥ. ಜಲ ಬುದ್ಬುದಮಯವಪ್ಪ ತನ್ನ

ವಿನ ಮೂವತ್ತಾರು ತತ್ವಂಗಳೆಂಬ ಗಳುವ ಬೀಸಿಪನೆಂಬುದೀಗ, ಮಳೆಯು ಗಳುವ ಬೀಸಿ ಎಂಬ ಶಬ್ದಕ್ಕರ್ಥ. ಶೃತಜ್ಞಾನವೆಂಬ ಪಾಶದಲ್ಲಿ ಸಕಲ ತತ್ವಂಗಳ ಬಂಧಿಸಿದನೆಂಬುದೀಗ, ಕೆಂಡದ ಪಂಜರ ಗಟ್ಟಿಂಗಟ್ಟಿ ಎಂಬ ಶಬ್ದಕ್ಕರ್ಥ. ಆ ಶೃತಜ್ಞಾನವೆಂಬ ಪಾಶದಲ್ಲಿ ಕಾರಣ ತನು ಸಂಬಂಧವಾದ ಕರಣಂಗಳ ಮೂವತ್ತಾರು ತತ್ವಂಗಳಲ್ಲಿ ಸಿದ್ಧವನೂಡಿದನೆಂಬುದೀಗ, ಹಿಂಡುಗಟ್ಟಿಗೆ ಗಳುವಿನ ಸಂದಿಯಲ್ಲಿ ಅಡಗಿದ ಎಂಬ ಶಬ್ದಕ್ಕರ್ಥ. ಪ್ರಾಣವಾಯು ಸಂಬಂಧವಾದ ಶಬ್ದಾದಿ ವಿಷಯಂಗಳನೆ ಮೇಲು ಹೊದಕೆ ಹೊದಿಸಿದನೆಂಬುದೀಗ, ಅನಿಲನ ಹುಲ್ಲು ಹೊದಿಸಿ ಎಂಬ ಶಬ್ದಕ್ಕರ್ಥ. ಅಂತಪ್ಪ ಪಾಗಾದ್ಸ್ಯೈತಿಯು ಅಂಗವು ಆಯಿವಾಯಿತ್ತೆಂಬುದೀಗ, ಮನೆ ಹೊಲಬಾಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಪಾಗಾದ್ಸ್ಯೈತಿಯು ಅಂಗದಲ್ಲಿ ಅಭಿನ್ನ ಕ್ರಿಯಾಚಾರ ಒಳವಡದಿರಲು ಲಿಂಗ ಸಂಬಂಧನೆಲೆಗೊಳ್ಳದೆಂಬುದೀಗ, ನೆಲಗಟ್ಟು ಶುದ್ಧವಿಲ್ಲಾ ಎಂದು ಗೋರಕ್ಷ ಪಾಲಕ ಮಹಾಪ್ರಭು ಸಿದ್ಧ ಸೋಮನಾಥ ಲಿಂಗವು ಆ ಮನೆಗೆ ಒಕ್ಕಲು ಬಾರಾ ಎಂಬ ಶಬ್ದಕ್ಕರ್ಥ.

## ಕಂಭದ ಮಾರಿ ತಂದೆಯವರ ವಚನಗಳು

೧

ವೇದ ಕಲ್ಲಿಯಾಗಿ, ಶಾಸ್ತ್ರ ಮಣಿಯಾಗಿ,
ಪುರಾಣ ತೊಡಗಿನ ಬಂಧದ ನೂಲಾಗಿ
ಶಾಸ್ತ್ರದ ಪಸರದಲ್ಲಿ ಆಯತವ ಮಾಡಿ
ಗುರುವೆಂಬ ತಡಿಯ ಮೆಟ್ಟಿ
ನಾಭಿಯ ಮಧ್ಯವೆಂಬ ಲಿಂಗದ ಜಲವ ಹೊಕ್ಕು
ಮಹಾ ಸ್ಥಳ ಕುಳ ವಿವರಂಗಳೆಂಬ ಮಡುವಿಂಗೆ ಇಡಲಾಗಿ
ಅಡಗಿದ್ದ ಮತ್ಸ್ಯ ಎದ್ದಿತ್ತು;
ಬಲೆಯ ಹೊಲಬ ಕಂಡು ಅದು ಸ್ಥೂಲಕ್ಕೆ ಸೂಕ್ಷ್ಮವಾಗಿ
ಸೂಕ್ಷ್ಮಕ್ಕೆ ಸ್ಥೂಲವಾಗಿ, ಆ ಕಲ್ಲಿಯ ದ್ವಾರದಲ್ಲಿಯೇ ನುಸುಳುತ್ತ
ಕಲ್ಲಿಗೆ ಹೊರಗಾಗುತ್ತ, ಮತ್ತಾ ಕಲ್ಲಿಗೆ ಒಳಗಾಗುತ್ತ
ಮತ್ತಾ ಸ್ಥಳ ಕುಳಂಗಳಲ್ಲಿ ಕೂಡುತ್ತ
ಸ್ಥಲಂಗಳ ನರಿದು ಹೊರಗಾಗುತ್ತ ಭಾವಜ್ಞನಾಗಿ
ಭಾವ ರಹಿತನಾದೆಯಲ್ಲ,
ಮಾವನ ಮಗಳಿಗೆ ಅಣ್ಣನಾದೆಯಲ್ಲ, ಚನ್ನ ಕದಂಬಲಿಂಗಾ !

ಅಪಂಗಸಂಗವಿಲ್ಲದ ನಿರವಯ ಪರಬ್ರಹ್ಮವು ಶರಣನ ಶಿವಾದ್ವೈತ ಭಕ್ತಿಯಲ್ಲಿ ಸನ್ನಿಹಿತವಾಗಿ ಪರಮಾನಂದಾಂಬುಧಿಯಲ್ಲಿ ತಾನೆಂಬ ಶ್ರೇಷ್ಟವಿಲ್ಲದೆ ತನ್ನ ಸ್ವಲೀಲೆಯಿಂದ ತಾನೆ ಚರಿಸುತ್ತಿಹುದೆಂಬುದೀಗ, ಅದು ನಿರಂಗವ ಮತ್ಸ್ಯ ಸುಸಂಗದ ಹೊಳೆಯಲ್ಲಿ ನಿರತಿಶಯದಿಂದ ತಿರುಗಾಡುತ್ತದೆ ಕೊ ಕದಂಬಲಿಂಗವ ಬಲೆಯ ಹೊಲಬ ಕಂಡು ಎಂಬ ಶಬ್ದಾರ್ಕ್ಕಥ.

೩

ನಾಲು ಗೊಡಬೆಗೆ ಹೋಗದು, ಆರು ಗೊಡಬೆಗೆ ಬಾರದು.
ಮೂರು ಕೂಳಿಗೆ ಸಿಕ್ಕದು ನೋಡಾ !
ಬಸವಣ್ಣನ ಅಂಗದಲ್ಲಿ ಹರಿದು ಚನ್ನಬಸವಣ್ಣನ
ಹೃದಯದಲ್ಲಿ ಮೂಡಿ
ಪ್ರಭುದೇವರ ಕೈಯಲ್ಲಿ ಸಿಕ್ಕಿದೆಯಲ್ಲಾ
ಸಿಕ್ಕಿ ನಿನ್ನ ಕುಲಿಶದ ಹೊಲಸೇಕೆ ಕೆಡದು ?
ಇಂತೀ ತ್ರಿವಿಧದ ಕಲಸಾಟವ ಬಿಡು, ಕದಕಿತನ ಬೇಡ
ಕದಂಬಲಿಂಗ !

**ಟೀಕು:**— ಸಕಲ ವೇದ–ಶಾಸ್ತ್ರ–ಪುರಾಣ–ಆಗಮ ಪ್ರಮಾಣಿಂದ ಸಾಧಿಸಿಹೆನೆಂದಡೆ ಸಿಕ್ಕದು ಪರಬ್ರಹ್ಮವೆಂಬುದೀಗ, ನಾಲುಗೊಡಬೆಗೆ ಹೋಗದು ಎಂಬ ಶಬ್ದಾರ್ಕ್ಕಥ. ಷಡಾಧಾರ ಚಕ್ರಂಗಳಲ್ಲಿ ಷಡು ಸೋಪಾನವಿಟ್ಟು ಸಾಧಿಸಿಹೆನೆಂಬ ಯೋಗಿ ಜನಂಗಳಿಗೆ ಅಸಾಧ್ಯವಾಗಿರ್ಪುದು ಆ ಪರಬ್ರಹ್ಮವೆಂಬುದೀಗ, ಆರುಗೊಡಬೆಗೆ ಬಾರದು ಎಂಬ ಶಬ್ದಾರ್ಕ್ಕಥ. ಅಂತಪ್ಪ ನಿರಾಕಾರವಾದ ಪರಬ್ರಹ್ಮವನು ಜ್ಞಾತೃ-ಜ್ಞಾನ–ಜ್ಞೇಯವೆಂಬ ತ್ರಿಪುಟಿ ಜ್ಞಾನದಿಂ ಲಕ್ಷಿಸಿಹನೆಂದೊಡೆ ಸಿಕ್ಕದು ಪರಬ್ರಹ್ಮವೆಂಬುದೀಗ, ಮೂರುಕೂಳಿಗೆ ಸಿಕ್ಕದು ನೋಡಾ ಎಂಬ ಶಬ್ದಾರ್ಕ್ಕಥ. ಆ ಪರಬ್ರಹ್ಮವು ಬಸವೇಶ್ವರನ ಆಚಾರಾಂಗದಲ್ಲಿ ಇಷ್ಟಲಿಂಗಸ್ವರೂಪವಾಗಿ ಮೂರ್ತಿಗೊಂಡಿತ್ತೆಂಬುದೀಗ, ಬಸವಣ್ಣನ ಅಂಗದಲ್ಲಿ ಹರಿದು ಎಂಬ ಶಬ್ದಾರ್ಕ್ಕಥ. ಚನ್ನಬಸವಣ್ಣನ ಹೃದಯಕಮಲ ಕರ್ಣಿಕಾ ಮಧ್ಯದಲ್ಲಿ ಪ್ರಾಣಲಿಂಗ ಸ್ವರೂಪವಾಗಿ ನೆಲೆಗೊಂಡಿತ್ತು ಪರಬ್ರಹ್ಮವೆಂಬುದೀಗ, ಚನ್ನಬಸವಣ್ಣನ ಹೃದಯದಲ್ಲಿ ಮೂಡಿ ಎಂಬ ಶಬ್ದಾರ್ಕ್ಕಥ. ಅಲ್ಲಮಪ್ರಭುದೇವರ ಸುಜ್ಞಾನ ಹಸ್ತದಲ್ಲಿ ಭಾವಲಿಂಗ ಸ್ವರೂಪವಾಗಿ ಮೂರ್ತಿಗೊಂಡಿತ್ತು ಪರಬ್ರಹ್ಮವೆಂಬುದೀಗ, ಪ್ರಭುದೇವರ ಕೈಯಲ್ಲಿ ಸಿಕ್ಕಿದೆಯಲ್ಲ ಎಂಬ ಶಬ್ದಾರ್ಕ್ಕಥ. ಅಭೇದ್ಯವಾಗಿರ್ದ ಮಲತ್ರಯಂಗಳ ದುರ್ವಾಸನೆಯ ನಿವೃತ್ತಿಮಾಡೆಂದು ಶಿವಂಗೆ ಬಿನ್ನೈಸುತ್ತಿರ್ದ ಶರಣನೆಂಬುದೀಗ, ಸಿಕ್ಕಿ ನಿನ್ನ ಕುಲಿಶದ ಹೊಲಸೇಕೆ ಕೆಡದು ಎಂಬ ಶಬ್ದಾರ್ಕ್ಕಥ. ಮಲಕ್ರಿಯಂಗಳ ದುರ್ವರ್ತನೆಯ ಬಿಡಿಸೆಂದು ಉಪಾವಸ್ಥೆಯ ಮಾಡುತ್ತಿರ್ದ ಶರಣನೆಂಬುದೀಗ, ಇಂತಿ ತ್ರಿವಿಧದ ಕಲಸಾಟವ ಬಿಡು ಕದಕಿತನ ಬೇಡ ಕದಂಬಲಿಂಗ ಎಂಬ ಶಬ್ದಾರ್ಕ್ಕಥ.

೪

ಗಂಪಕ್ಕೆ ಸಿಕ್ಕೆ ಬಲೆಗೊಳಗಾಗೆ ಕೂಳಿಯು ಇರಿತದ-
ಘಾವರಕ್ಕೆ ನಿಲ್ಲೆ, ಸೆಳೆಗೋಲಿನ ಗಾಣದ ಕೀಟಕವ ನೊಲ್ಲೆ,
ನಿನ್ನಾಟ ಅದೇತರ, ಮಡುವಿನಾಟ ಕವಕಿತನ ಬೇಡ ಕದಂಬಲಿಂಗ

**ಟೀಕು:**— ತನ್ನ ನಿಜವೆ ಪರಬ್ರಹ್ಮವೆಂದರಿಯದೆ ಭಿನ್ನಭಾವದಿಂದ ಆಹ್ವಾನಿಸಿ ಹಿಡಿವವರಿಗೆ ಅಸಾಧ್ಯವಾಗಿಹುದು ಪರಬ್ರಹ್ಮವೆಂಬುದೀಗ, ಗಂಪಕ್ಕೆ ಸಿಕ್ಕೆ ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವು ಎರಡಿಟ್ಟು ಮಾಡುವ ಭಿನ್ನ ಶಕ್ತಿಗೆ ಅಸಾಧ್ಯವಾಗಿಹುದು ಎಂಬುದೀಗ, ಬಲೆಯೊಳಗಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮವು ಭಿನ್ನ ಜ್ಞಾನದಿಂದ ಸಾಧಿಸಿಹೆನೆಂಬವರ ಆಶಾ ತೃಷ್ಣೆಗೆ ಸಿಲ್ಕದೆ ಹೋಯಿತ್ತೆಂಬುದೀಗ, ಕೂಳಿಯ ಇರಿತದ ಘಾವರಕ್ಕೆ ನಿಲ್ಲೆ ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವು ಭಾವದಿಂ ಗ್ರಹಿಸಬೇಕೆಂಬ ಮಚ್ಚಿನ ಮೋಹದ ಜೀವಭಾವವೆಂಬ ಕೀಟಕದ ಸೋಂಕದೆ ಹೋಯಿತ್ತೆಂಬುದೀಗ, ಸೆಳೆಗೋಲಿನ ಗಾಣದ ಕೀಟಕವ ನೊಲ್ಲೆ ಎಂಬ ಶಬ್ದಕ್ಕರ್ಥ. ಇಂತಿವಕ್ಕೆ ವಿಲಕ್ಷಣವಾದ ಪರಬ್ರಹ್ಮವು ಚಿತ್ಸ್ವರೂಪನಾದ ಶರಣನ ಮಹಾ ಸ್ಥಲ ಕುಳಂಗಳಲ್ಲಿ ಪರಿಪೂರ್ಣವಾದ ಸದ್ವಿವೇಕ ಜಲದಲ್ಲಿ ಚರಿಸುತ್ತಿಹುದೆಂಬುದೀಗ, ನಿನ್ನಾಟ ಅದೇತರ ಮಡುವಿನಾಟ ಕವಕಿತನ ಬೇಡ ಕದಂಬಲಿಂಗ ಎಂಬ ಶಬ್ದಕ್ಕರ್ಥ.

೫

ಮಾಟ-ಕೂಟವೆಂಬ ತೆಪ್ಪವ ಮಾಡಿ
ಮೂರ್ತಿ-ವಿಶ್ವಾಸವೆಂಬ ಗಣೆಯಲ್ಲಿ ಹಿಡಿದು ಒತ್ತುತ್ತಿರಲಾಗಿ
ಹಾಯಿತ್ತು ಮಾರುತನೆಂಬ ಮತ್ಸ್ಯ
ಆ ಸರುವ ನೋಡಿ ತೆಪ್ಪವನೊತ್ತುತ್ತಿರಲಾಗಿ
ತ್ರಿವಿಧ ಸತ್ತೆಯು ಸರ್ವೇಂದ್ರಿಯ ಬೆಳದ
ಪಾಸೆಯು ಮರೆಯಲ್ಲಿ ತಪ್ಪಿ ಹಾಯಿತ್ತು ಮತ್ಸ್ಯ
ಇಂತಿ ಬರಿ ಕುಕ್ಕೆಯ ಹೊತ್ತು ಮತ್ಸ್ಯವ ಕಾಣದೆ
ವೆಚ್ಚಕ್ಕಡಹಿಲ್ಲ ಇದರಚ್ಚುಗವ ಬಿಡಿಸಾ
ಕದಕಿತನ ಬೇಡ ಕದಂಬಲಿಂಗ.

**ಟೀಕು:**— ತನು-ಮನ-ಧನವೆಂಬ ತ್ರಿವಿಧ ಪದಾರ್ಥವನು ತ್ರಿವಿಧ ಭಕ್ತಿಯಿಂದ ಗುರು-ಲಿಂಗ-ಜಂಗಮಕ್ಕೆ ಸಮರ್ಪಿಸುವ ಆಚಾರವೆ ತೆಪ್ಪವಾಗಿಹುದೆಂಬುದೀಗ ಮಾಟ-ಕೂಟವೆಂಬ ತೆಪ್ಪವ ಮಾಡಿ ಎಂಬ ಶಬ್ದಕ್ಕರ್ಥ. ಪರಬ್ರಹ್ಮವೆ ಗುರು-ಲಿಂಗ-ಜಂಗಮ ಸ್ವರೂಪವಾಯಿತ್ತೆಂಬ ವಿಶ್ವಾಸವೆ, ಭಕ್ತಿ ಮಹಾಜ್ಞಾನವೆ ಗಳೆಯಾಗಿ ಹಿಡಿದು ಆಚರಿಸುತ್ತಿರ್ದ ಶರಣನೆಂಬುದೀಗ, ಮೂರ್ತಿ-ವಿಶ್ವಾಸವೆಂಬ ಗಣೆಯ ಹಿಡಿದು ಒತ್ತುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಆ ಚೈತನ್ಯ ಸ್ವರೂಪವಾದ

ಪರಬ್ರಹ್ಮವು ಶರಣನ ಜ್ಞಾನ ಕ್ರಿಯಾಚಾರವ ನೊಳಗೊಂಡು ಸಂಚರಿಸುತ್ತಿಹುದೆಂಬುದೀಗ, ಹಾಯಿತ್ತು ಮಾರುತನೆಂಬ ಮತ್ಸ್ಯವೆಂಬ ಶಬ್ದಕ್ಕರ್ಥ. ಆ ಶರಣ ಸುಜ್ಞಾನ ದೃಷ್ಟಿಯಿಂದ ಸತ್ಪಥ ಮಾರ್ಗವ ನಿರೀಕ್ಷಿಸಿ ನೋಡಿ ಆವರಿಸುತ್ತಿರ್ದನೆಂಬುದೀಗ, ಆ ಸರುವ ನೋಡಿ ತೆಪ್ಪವನೊತ್ತುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಅಂತು ಆ ವಿಚಾರವಿಡಿದು ಆಚರಿಸುತ್ತಿರ್ದ ತನ್ನ ನಿಜವೆ ಪರಬ್ರಹ್ಮವೆಂದರಿಯದೆ ಅಲ್ಲಿ ಫಲ ಪದಂಗಳ ಬಯಕೆ ಹುಟ್ಟಲು ಹೊನ್ನು-ಹೆಣ್ಣು-ಮಣ್ಣೆಂಬ ಸಕಲ ಪ್ರಪಂಚಿನ ದಶೇಂದ್ರಿಯಗಳ ವಿಷಯ ಸುಖವನನುಭವಿಸಿ ಸಂಸಾರದಲ್ಲಿ ಬದ್ಧವಾದ ಆತ್ಮಂಗೆ ಪರಬ್ರಹ್ಮವು ಸಿಲ್ಕದೆ ಹೋಯಿತ್ತೆಂಬುದೀಗ, ತ್ರಿವಿಧದ ಸತ್ತೆಯ ಸರ್ವೇಂದ್ರಿಯ ಬೆಳೆದ ಪಾಸೆಯ ಮರೆಯಲ್ಲಿ ತಪ್ಪಿ ಹೋಯಿತ್ತು ಮತ್ಸ್ಯವೆಂಬ ಶಬ್ದಕ್ಕರ್ಥ. ಅಂತು ಪರಬ್ರಹ್ಮವು ಭಿನ್ನವಾಗಿ ಹೋಗಲು ಬರಿಯ ಆಚಾರವನೆ ಅಳವಡಿಸಿಕೊಂಡಿರ್ದನೆಂಬುದೀಗ, ಇಂತಿ ಬರಿ ಕುಕ್ಕೆಯ ಹೊತ್ತು ಮತ್ಸ್ಯವ ಕಾಣದೆ ಎಂಬ ಶಬ್ದಕ್ಕರ್ಥ. ಅಂತು ನಿತ್ಯವಾದ ನಿಜಮೋಕ್ಷ ಸಾಧ್ಯವಾಗದೆ ಇರಲು ಸಕಲ ಪದಾರ್ಥಂಗಳ ಶಿವಾರ್ಪಣವ ಮಾಡಿ ಲಿಂಗ ಭೋಗೋಪಭೋಗಿಯಾಗಿ ಜೀವಿಸುವದಕ್ಕೆ ತೆರಪಿಲ್ಲದೆ ಇರಲು ಅದ ಕಂಡು ಶರಣನು ಸಂಸಾರ ಮಾಯಾ ಪ್ರಪಂಚಿನ ಹೊದ್ದಿಗೆಯ ಬಿಡಿಸೆಂದು ಶಿವನಿಗೆ ಬಿನ್ನೈಸುತ್ತಿರ್ದನೆಂಬುದೀಗ, ವೆಚ್ಚಕ್ಕಡಹಿಲ್ಲ ಇದರಚ್ಚುಗವ ಬಿಡಿಸಾ ಕದಕಿತನ ಬೇಡ ಕದಂಬ ಲಿಂಗ ಎಂಬ ಶಬ್ದಕ್ಕರ್ಥ.

೬

ಹರಿವ ಹರುಕುಳಿಯಲ್ಲಿ ಕೈಯನಿಕ್ಕಿ ನೋಡಿ
ಅಡಗಿದ್ದಾವೆಯ ಹಿಡಿದೆ, ಒಂದು ಬಿಗಿದ ಬಲವ ಕಂಡು
ಏಗ್ಯೆದು ಕೈಯನಿಕ್ಕಿ ನೋಡಿ ಸಾಗಿಸಿ ಹಿಡಿದೆ
ಉಭಯ ಹೆರಳನಯ್ಯಣ್ಣನ, ಇಂತಿ ಸರುಹಿನ ತಪ್ಪಲಿನಲ್ಲಿ
ನೆಪ್ಪ ನೋಡುತ್ತ ಹೋಗುತ್ತಿರಲಾಗಿ ಒಂದು ಕಟ್ಟೆ
ಕಟ್ಟಿದ್ದುದ ಕಂಡೆ
ಆ ಕಟ್ಟೆಯೊಳಗಣ ನೀರು ತಡಿಯಲ್ಲಿ ಕಪ್ಪೋತ
ಮಧ್ಯದಲ್ಲಿ ಪೀತ, ಕಡೆಯಲ್ಲಿ ಶ್ವೇತವಾಗಿದ್ದಿತ್ತು.
ಈ ತ್ರಿವಿಧದ ನೀರ ಹೊಳದು ನೋಡುತ್ತಿರಲಾಗಿ
ಎನ್ನ ಕಣ್ಣಿನ ಹೊಳವು ಗೂಡಿ ಹೊಳೆಯಿತ್ತೊಂದು ಮತ್ಸ್ಯ.
ಆ ಹೊಳಹಿನ ಬೆಂಬಳಿಯಲ್ಲಿ ತಿಳಿದು ಕಂಡಿಹೆನೆಂದಡೆ
ಉದಕವನೊಡಗೂಡಿದ, ವರ್ಣ-ವರ್ಣವನೊಡಗೂಡಿದ
ಮತ್ಸ್ಯ ನೋಡಾ.
ಅದು ಎನಗಸಾಧ್ಯ, ಸಿಕ್ಕಿದವೆರಡೆ ಸಾಕು.

ಆವೆಯ ಓಟೆಯ ಕಳದು ಏಡಿಯ ಕಾಲು ಮುರಿದು
ಇಟ್ಟಿ ಸಾಕೆಂದು ಒರುತ್ತಿರಲಾಗಿ ಮುನ್ನೊಂದುಡುವ ಕಂಡೆ
ದಡಿಯಲ್ಲಿ ಹೊಯ್ದು ಆ ದಡಿ ಉಡುವಿನಲ್ಲಡಗಿತ್ತು
ಆ ಉಡು ತ್ರಿವಿಧದ ಅಡಿಯಲ್ಲಿ ಒಡಗೂಡಿತ್ತು
ಇದಕ್ಕೆ ಕಡೆ-ನಡು-ಮೊದಲ ಹೇಳಾ ಕದುಕಿತನ ಬೇಡ
ಕದಂಬಲಿಂಗ.

**ಟೀಕು:** — ಸಂಸಾರ ವಿಷಯ ಜಲಚರಿಸುವದಕ್ಕೆ ಇಂದ್ರಿಯಂಗಳೆ ದ್ವಾರವಾಗಿರುತ್ತಿಹವೆಂಬುದೀಗ, ಹರಿವ ಹರುಕುಳಿಯಲ್ಲಿ ಎಂಬ ಶಬ್ದಕ್ಕರ್ಥ. ಸುಜ್ಞಾನೋದಯವಾದ ಶರಣನು ತನ್ನ ಶಿವಭಾವದಿಂ ನಿರೀಕ್ಷಿಸಿ ಆ ಇಂದ್ರಿಯಂಗಳ ವಿಷಯಸುಖವನನುಭವಿಸುವ ಜೀವನ ಜೀವಭಾವವನು ಮಹಾನುಭಾವ ವಿವೇಕದಿಂ ನಿವೃತ್ತಿಮಾಡಿದನೆಂಬುದೀಗ, ಕೈಯನಿಕ್ಕಿ ನೋಡಿ ಅಡಗಿದ್ದಾವೆಯ ಹಿಡಿದೆನೆಂಬ ಶಬ್ದಕ್ಕರ್ಥ. ಆ ಶರಣ ತನ್ನ ಮಹಾನುಭಾವಾಂತರಂಗವೆಂಬ ಸದ್ವಿವೇಕದ್ವಾರವನು ಸುಜ್ಞಾನದೃಷ್ಟಿಯಿಂ ನೋಡುತ್ತಿರ್ದನೆಂಬುದೀಗ, ಒಂದು ಬಿಗಿದ ಬಿಲವ ಕಂಡು ಎಂಬ ಶಬ್ದಕ್ಕರ್ಥ. ಅಂತು ಸುಜ್ಞಾನ ದೃಷ್ಟಿಯಿಂ ನೋಡುತ್ತಿರ್ದ ಶರಣನು ತನ್ನ ಸದ್ಭಾವದಿಂ ವಿವೇಕಿಸಿ ನೋಡಿ ಅಂತರಂಗ-ಬಹಿರಂಗವೆಂಬ ಉಭಯ ದಳದಲ್ಲಿ ಕೂಡಿ ನಾನಾ ದುಶ್ಚರಿತ್ರಂಗಳಲ್ಲಿ ಚರಿಸುತ್ತಿರ್ಪ ಅಂತರಾತ್ಮನ ಆ ಸದ್ಭಾವ ಹಸ್ತದಿಂ ಅವಗ್ರಹಿಸಿದನೆಂಬುದೀಗ, ಏಗೈದು ಕೈಯನಿಕ್ಕಿ-ನೋಡಿ ಸಾಗಿಸಿ ಹಿಡಿದೆ ಉಭಯಲ್ಲಿ ಹೆರಳಯ್ಯಣ್ಣನ ಎಂಬ ಶಬ್ದಕ್ಕರ್ಥ. ಅಂತು ಅಂತರಂಗದ ಸುಜ್ಞಾನ ಮಾರ್ಗವಿಡಿದೆಯ್ದುತ್ತಿರ್ದ ಶರಣನು ತನುತ್ರಯಂಗಳ ವರ್ತನೆಯ ನಿವೃತ್ತಿ ಮಾಡಬೇಕೆಂದು ಶಿವಾಪೇಕ್ಷೆಯ ಮುಂದುಗೊಂಡೆಯ್ದುತ್ತಿರ್ದನೆಂಬುದೀಗ, ಇಂತಿ ಸರುವಿನ ತಪ್ಪಲಿನಲಿ ನೆಪ್ಪ ನೋಡುತ್ತ ಹೋಗುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಅಂತು ಶಿವಾಪೇಕ್ಷೆಯ ಮುಂದುಗೊಂಡೆಯ್ದುತ್ತಿರ್ದ ಶರಣನ ಸುಜ್ಞಾನ ದೃಷ್ಟಿಯ ಮುಂದೆ ಕಾರಣದೇಹ ತೋರುತ್ತಿಹುದೆಂಬುದೀಗ, ಮುಂದೆ ಒಂದು ಕಟ್ಟೆ ಕಟ್ಟಿದ್ದುದ ಕಂಡೆನೆಂಬ ಶಬ್ದಕ್ಕರ್ಥ. ಅಂತು ಕಾರಣದೇಹದಲ್ಲಿ ಪೂರ್ಣವಾಗಿರ್ಪ ಮನೋಜಲವೆಂಬುದೀಗ, ಆ ಕಟ್ಟೆಯೊಳಗಣ ನೀರು ಎಂಬ ಶಬ್ದಕ್ಕರ್ಥ. ಅಂತಪ್ಪ ಮನಸ್ಸು ಸ್ಥೂಲದೇಹದಲ್ಲಿ ಅಜ್ಞಾನಿ ಸಂಬಂಧಿಯಾಗಿಹುದೆಂಬುದೀಗ, ತಡಿಯಲ್ಲಿ ಕಪೋತವೆಂಬ ಶಬ್ದಕ್ಕರ್ಥ. ಮನಸ್ಸು ಸೂಕ್ಷ್ಮ ದೇಹದಲ್ಲಿ ಜ್ಞಾನಾಜ್ಞಾನ ಸಂಬಂಧಿಯಾಗಿಹುದೆಂಬುದೀಗ, ಮಧ್ಯದಲ್ಲಿ ಪೀತವರ್ಣವೆಂಬ ಶಬ್ದಕ್ಕರ್ಥ. ಅಂತು ಮನಸ್ಸು ಕಾರಣ ದೇಹದಲ್ಲಿ ನಿರ್ಮಲವಾದ ಸುಜ್ಞಾನವನೊಳಕೊಂಡಿಹುದೆಂಬುದೀಗ, ಕಡೆಯಲ್ಲಿ ಶ್ವೇತವಾಗಿದ್ದಿತ್ತು ಎಂಬ ಶಬ್ದಕ್ಕರ್ಥ. ಇಂತಪ್ಪ ತನುತ್ರಯಂಗಳ ವರ್ತನೆಯಲ್ಲಿ ಕೂಡಿರ್ಪ ಮನಸ್ಸು ನಿವೃತ್ತಿ ಮಾಡಿ ತನ್ನ ನಿಜವೆ ಪರಬ್ರಹ್ಮವೆಂದು ವಿವೇಕಿಸುತ್ತಿರ್ದ ಶರಣನ ಸುಜ್ಞಾನ ದೃಷ್ಟಿಯ ಮುಂದೆ ಚಿತ್ ಪ್ರಕಾಶವಾದ ನಿಷ್ಕಲ ಪರಬ್ರಹ್ಮವು ತೋರಿತ್ತೆಂಬುದೀಗ, ಈ ತ್ರಿವಿಧದ ನೀರಹೊಳಹು ನೋಡುತ್ತಿರಲಾಗಿ ಎನ್ನ

ಕಣ್ಣಿನ ಹೊಳವುಗೂಡಿಹೋಯಿತ್ತೆಂದು ಮತ್ಸ್ಯ ಎಂಬ ಶಬ್ದಕ್ಕರ್ಥ. ಅಂತು ಸುಜ್ಞಾನ ಪ್ರಕಾಶದಿಂ ನಿರಾಕಾರವಾದ ಪರಬ್ರಹ್ಮವ ವಿವೇಕಿಸಿ ಕಂಡಿಹೆನೆಂದೊಡೆ ಮನೋವರ್ತನೆಯಲ್ಲಿ ಕೂಡಿಹುದು ಆತ್ಮಜ್ಞಾನ; ಅಂತಪ್ಪ ಆತ್ಮಜ್ಞಾನದಲ್ಲಿ ಕೂಡಿಹುದು ನಿರಾಕಾರವಾದ ಪರಬ್ರಹ್ಮವು, ಶಿವಾದ್ವೈತ ಭಕ್ತಿಹೀನರಾಗಿರ್ಪ ಅದ್ವೈತ ಜ್ಞಾನಿಗಳಿಗೆ ಅಸಾಧ್ಯವೆಂಬುದೀಗ, ಆ ಹೊಳಪಿನ ಬೆಂಬಳಿಯಲ್ಲಿ ತಿಳಿದು ಕೊಂಡಿಹೆನೆಂದಡೆ ಉದಕವನೊಡಗೂಡಿದ ವರ್ಣ-ವರ್ಣವನೊಡಗೂಡಿದ ಮತ್ಸ್ಯ ನೋಡಾ ಅದು ಎನಗಸಾಧ್ಯವೆಂಬ ಶಬ್ದಕ್ಕರ್ಥ. ಅಂತಪ್ಪ ಸುಜ್ಞಾನ ಪ್ರಕಾಶದಿಂ ನಿವೃತ್ತಿಯಾದ ಜೀವಂತರಾತ್ಮಾದಿಗಳಿ ಮೋಕ್ಷಕ್ಕೆ ಕಾರಣವೆಂದರಿದು ಜೀವಂಗಾಶ್ರಯವಾದ ದೇಹಭಾವನೆ ನಿವೃತ್ತಿಮಾಡಿ ಅಂತರಾತ್ಮನ ನಾನಾ ದುಶ್ಚರಿತ್ರಂಗಳ ಛೇದಿಸಿ ಇಂತಿ ಉಭಯದಲ್ಲಿ ಕ್ರಿಯಾಜ್ಞಾನಂಗಳ ಅಳವಡಿಸಿಕೊಂಡು ಸತ್ಪಥ ಮಾರ್ಗವಿಡಿದು ಆಚರಿಸುತ್ತಿರ್ದನೆಂಬುದೀಗ, ಸಿಕ್ಕಿದವೆರಡೆ ಸಾಕು ಆಮೆಯ ಓಟೆಯ ಕಳದು ಏಡಿಯ ಕಾಲಮುರಿದು ಇಟ್ಟೆ ಸಾಕೆಂದು ಬರುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಶನ್ಯಾತ್ಮಾಂಗದಲ್ಲಿ ಸೂಕ್ಷ್ಮವಾಗಿಪ್ಪ ಚಿತ್ ಪ್ರಭಾ ಲಿಂಗವ ಶರಣ ಸುಜ್ಞಾನ ದೃಷ್ಟಿಯಿಂದ ನಿರೀಕ್ಷಿಸಿ ಶಿವಭಾವದಲ್ಲಿ ಅವಗ್ರಹಿಸಲು ಆ ಭಾವವು ಆ ಚಿತ್ ಪ್ರಭಾ ಲಿಂಗದಲ್ಲಿ ನಿಷ್ಪತ್ತಿಯಾಯಿತ್ತೆಂಬುದೀಗ, ಮುಂದೊಂದು ಉಡಕುವ ಕಂಡೆ ದಡಿಯಲ್ಲಿ ಹೊಯ್ದು ಅದರ ಉಡುಪಿನಲ್ಲಡಗಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮವು ಭಾವ-ಮನ-ದೃಕ್ಕನೊಳಕೊಂಡು ಗುರುಮುಖದಿಂ ಬಹಿಷ್ಕರಿಸಿ ಕರಸ್ಥಲಕ್ಕೆ ಇಷ್ಟಲಿಂಗ ಸ್ವರೂಪವಾಗಿ ಬಂದು ಶರಣನ ಕ್ರಿಯಾಜ್ಞಾನ ಭಾವಂಗಳಲ್ಲಿ ಇಷ್ಟ-ಪ್ರಾಣ-ಭಾವಲಿಂಗ ಸ್ವರೂಪವಾಗಿ ಮೂರ್ತಿಗೊಂಡಿತ್ತೆಂಬುದೀಗ, ಆ ಉಡು ತ್ರಿವಿಧದ ಅಡಿಯಲ್ಲಿ ಒಡಗೂಡಿತ್ತು ಇದಕ್ಕೆ ಕಡೆ-ನಡು-ಮೊದಲು ಹೇಳಾ, ಕದುಕಿತನಬೇಡ ಕದಂಬಲಿಂಗಾ ಎಂಬ ಶಬ್ದಕ್ಕರ್ಥ.

೭

ಮಹಾ ಘೋರಾರಣ್ಯದಲ್ಲಿ ಹೋಗುತ್ತಿರಲಾಗಿ
ಆಡುವ ನವಿಲ ಕಂಡು, ಹಾರುವ ಹಂಸೆಯ ಕಂಡು,
ಕೂಗುವ ಕೋಳಿಯ ಕಂಡು,
ಬೆಳಗಾಯಿತ್ತೆಂದು ಹೋಗುತ್ತಿರ್ದೆ ಕದಂಬಲಿಂಗದಲ್ಲಿಗೆ.

**ಟೀಕು:**— ಸುಜ್ಞಾನೋದಯವಾದ ಶರಣನ ಷಡಾಧಾರ ಚಕ್ರಂಗಳ ದಳಕುಳ ವರ್ಣಾಕ್ಷರಾಧಿ ದೇವತೆಗಳೆಲ್ಲವು ಅಳಿದು ಸದ್ವಿವೇಕ ವೃಕ್ಷ ಸ್ವರೂಪಿನಿಂ ಚಿದಾರಣ್ಯವ ನೆಯ್ದಿಹವೆಂಬುದೀಗ, ಮಹಾ ಘೋರಾರಣ್ಯದಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಚಿದಾರಣ್ಯದಲ್ಲಿ ಸುಜ್ಞಾನ ಮಾರ್ಗವಿಡಿದೆಯ್ದುತ್ತಿರಲು ಸಾವಧಾನ ಸನ್ನಿಹಿತವಾದ ಶಿವಜ್ಞಾನವ ಕಂಡನೆಂಬುದೀಗ, ಹೋಗುತ್ತಿರಲಾಗಿ ಆಡುವ ನವಿಲ ಕಂಡು ಎಂಬ ಶಬ್ದಕ್ಕರ್ಥ. ಸದ್ವಿವೇಕ ಸ್ವರೂಪವಾದ ಶರಣನು ಶ್ರೀಗುರು ಕಾರುಣ್ಯದಿಂ ಸರ್ವಾಂಗ ಲಿಂಗ ಸಂಬಂಧಿಯಾಗಿ ಹೃದಯ ಸರೋವರ

ದಲ್ಲಿ ಚರಿಸುತ್ತಿರ್ಪ ಪರಮಹಂಸನ ಪ್ರತ್ಯಕ್ಷವಾಗಿ ಕಂಡನೆಂಬುದೀಗ, ಹಾರುವ ಹಂಸೆಯ ಕಂಡು ಎಂಬ ಶಬ್ದಕ್ಕರ್ಥ. ತನ್ನ ಅಂತರಂಗದಲ್ಲಿ ಶಿವೋಹಂ-ಶಿವೋಹಂ ಎಂದು ಧ್ವನಿಗೈಯುತ್ತಿರ್ದ ಸತ್ತ್ರಣವ ಕಂಡನೆಂಬುದೀಗ, ಕೂಗುವ ಕೋಳಿಯ ಕಂಡು ಎಂಬ ಶಬ್ದಕ್ಕರ್ಥ. ಈ ತ್ರಿವಿಧವ ನೊಳಗೊಂಡಿರ್ಪ ಪರಿಪೂರ್ಣ ಜ್ಞಾನವು ಶರಣನ ಒಳಹೊರಗೆನ್ನದೆ ಸರ್ವಾಂಗದಲ್ಲಿ ಪ್ರಭಾವಿಸಲು ಮಹಾ ಘನಲಿಂಗದಲ್ಲಿ ಸಮರಸವ ನೆಯ್ದಿದನೆಂಬುದೀಗ, ಬೆಳಗಾಯಿತೆಂದು ಹೋಗುತ್ತಿರ್ದ ಕದಂಬಲಿಂಗದಲ್ಲಿಗೆ ಎಂಬ ಶಬ್ದಕ್ಕರ್ಥ.

## ರಕ್ಕಸದ ಬೊಮ್ಮಣ್ಣನವರ ವಚನಗಳು

### ೧

ಆರೆಂದರೂ ಎನಲಿ ಕೊಟ್ಟುದ ಕೊಡೆ, ಸಿಕ್ಕಿಸುವದ ಬಿಡೆ,
ಅನಂಗದ ನಡೆ, ಅತಿರೇಕದ ನುಡಿ, ಗತಿಗೆಟ್ಟವರ ಸಂಗ,
ಹೊಸಬರ ಕೂಟದ ಭಕ್ತಿಯನೊಲ್ಲದವರೊಡನಾಟ
ಅಸತ್ಯರು ಹೋದ ಹಾದಿ,
ಎನಗದೇ ಬಟ್ಟೆ, ರಕ್ಕಸನೊಡೆಯ ಕೊಟ್ಟದ ಬೇಡ.

**ಟೀಕು:**— ಸುಜ್ಞಾನೋದಯವಾದ ಶರಣನು ಶ್ರೀ ಗುರು ಕಾರುಣ್ಯದಿಂ ಸರ್ವಾಂಗ ಲಿಂಗ ಸಂಬಂಧಿಯಾಗಿ ರೂಪು-ರುಚಿ-ತೃಪ್ತಿ ಮೊದಲಾದ ಸಕಲ ಪದಾರ್ಥಂಗಳ ತನ್ನ ಅಂಗ-ಮನ-ಪ್ರಾಣಂಗಳಲ್ಲಿ ಸಾಹಿತ್ಯವಾಗಿರ್ಪ ತ್ರಿವಿಧ ಲಿಂಗಂಗಳಿಗೆ ಸದ್ಭಕ್ತಿಯಿಂದ ಅರ್ಪಿಸಿ ಲಿಂಗ ಭೋಗೋಪಭೋಗಿಯಾದ ಶರಣನು ಖಂಡಿತ-ಜ್ಞಾನಿಗಳು ಮೊದಲಾದ ಸೂತಕ ದೇಹಿಗಳ ನುಡಿಗೆ ಅಂಜನೆಂಬುದೀಗ, ಆರೆಂದರು ಎನಲಿ ಎಂಬ ಶಬ್ದಕ್ಕರ್ಥ. ಅಂತು ತನು-ಮನ-ಧನವೆಂಬ ತ್ರಿವಿಧ ಪದಾರ್ಥವ ಗುರು-ಲಿಂಗ-ಜಂಗಮಕ್ಕೆ ಸಮರ್ಪಣೆಯ ಮಾಡಿದ ಸದ್ಭಕ್ತನು ಉಪಾಧಿಯಿಂದ ಇದಿರಿಟ್ಟು ಅರ್ಪಿತವ ಮಾಡನೆಂಬುದೀಗ, ಕೊಟ್ಟುದ ಕೊಡನೆಂಬ ಶಬ್ದಕ್ಕರ್ಥ. ಲಿಂಗಾಂಗಕ್ಕೆ ಭಿನ್ನವಿಟ್ಟು ಭಾವಿಸಿ ಸಕಲ ಪದಾರ್ಥಂಗಳನು ಅರ್ಪಿಸಿದವರಿಗೆ ಖಂಡಿತ ಫಲ ಪದಂಗಳ ಕೊಟ್ಟು ಭವಕ್ಕೆ ಹಾಕುತ್ತಿಹನೆಂಬುದೀಗ, ಸಿಕ್ಕಿಸುವದು ಬಿಡೆನೆಂಬ ಶಬ್ದಕ್ಕರ್ಥ. ಅಂತಪ್ಪ ಶರಣ ಅಂಗ ಭಾವ ರಹಿತವಾಗಿ ಲಿಂಗಭಾವ ಘಟಿಸಿದ ಶರಣನು ಅಭಿನ್ನಕ್ರೀಯಿಂದ ಆಚರಿಸುತ್ತಿರ್ದನೆಂಬುದೀಗ, ಅನಂಗದ ನಡೆಯೆಂಬ ಶಬ್ದಕ್ಕರ್ಥ. ಆ ಶರಣನ ಶಿವೋಹಂ-ಶಿವೋಹಂ ಎಂಬ ಮಹಾನುಭಾವದರಿವು ವಾಗಾದ್ವೈತದ ನುಡಿಯುಲ್ಲವೆಂಬುದೀಗ, ಅತಿರೇಕದ ನುಡಿ ಎಂಬ ಶಬ್ದಕ್ಕರ್ಥ. ಭಿನ್ನ ಕ್ರಿಯಾಚಾರ ನಾಸ್ತಿಯಾಗಿರ್ಪ ತ್ರಿವಿಧ ಲಿಂಗಾನುಭಾವಿಗಳಲ್ಲಿ ಶರಣ ಸಂಸರ್ಗವ ಮಾಡುತಿರ್ದನೆಂಬುದೀಗ, ಗತಿಗೆಟ್ಟವರ ಸಂಗನೆಂಬ ಶಬ್ದಕ್ಕರ್ಥ. ತಮ್ಮ ನಿಜಸ್ವರೂಪವ

ನರಿಯದೆ ಲಿಂಗಾಂಗಕ್ಕೆ ಭಿನ್ನವಿಟ್ಟು ಆಚರಿಸುವ ದ್ವೈತ ಭಕ್ತಿಯ ನಿವೃತ್ತಿ ಮಾಡಿ ಶಿವಾದ್ವೈತ ಭಕ್ತಿಯಲ್ಲಿ ತತ್ಪರನಾದ ಸದ್ಭಕ್ತರಲ್ಲಿ ಶಿವಾನುಭಾವ ಸಂಭಾಷಣೆಯ ಮಾಡುತ್ತಿರ್ದನೆಂಬುದೀಗ, ಹೊಸಬರ ಕೂಟದ ಭಕ್ತಿಯನೊಲ್ಲದವರೊಡನಾಟ ವೆಂಬ ಶಬ್ದಕ್ಕರ್ಥ. ಷಡ್ವಿಧ ಲಿಂಗಾಂಗ ಸ್ಥಲವಿಡಿದು ಷಡ್ವಿಧ ಭಕ್ತಿಯಿಂದ ಆಚರಿಸಿ ಫಲ ಪದಂಗಳು ನಾಸ್ತಿಯಾಗಿರ್ಪ ಸದ್ಭಕ್ತರಲ್ಲಿ ಮೋಕ್ಷ ಮಾರ್ಗವನೆ ಕೃಪೆ ಮಾಡೆಂದು ಬಿನ್ನೈಸುತಿರ್ದ ಶರಣ ಶಿವಂಗೆಂಬುದೀಗ, ಅಸತ್ಯರು ಹೋದ ಹಾದಿ ಎನಗದೇ ಬಟ್ಟೆ, ರಕ್ಕಸನೊಡೆಯ ಕೊಟ್ಟದಬೇಡ ಎಂಬ ಶಬ್ದಕ್ಕರ್ಥ.

೨

ಭಕ್ತರ ಸತಿಯಾಗಿರ್ದವಳೆ ಎನ್ನ ಹೆಂಡರು,
ಭಕ್ತರ ತಲೆ-ಎನ್ನ ಕಾಲು,
ಭಕ್ತರ ಚಿತ್ತ-ಎನ್ನ ಕುಚಿತ್ತ,
ಭಕ್ತರ ದ್ರವ್ಯವೆನಗೆ ಹೇಯ,
ಭಕ್ತರ ಮುಕ್ತಿ ಎನ್ನ ಕುದುರೆಯ ಲಾಯ,
ಅವರು ಸತ್ತರೆ ಪಾಪ ಎನಗದು ನರಕ
ರಕ್ಕಸನೊಡೆಯ ಕೊಟ್ಟುದ ಬೇಡ.

**ಟೀಕು:—** ಸುಜ್ಞಾನೋದಯವಾಗಿ ಶ್ರೀಗುರು ಕಾರುಣ್ಯದಿಂ ಸರ್ವಾಂಗ ಲಿಂಗ ಸಂಬಂಧಿಯಾಗಿ ಸದಾಚಾರ ಸನ್ಮಾರ್ಗವಿಡಿದಾಚರಿಸುವ ಭಕ್ತ ಜನಂಗಳಿಗೆ ಸತಿಯಾಗಿರ್ಪ ಚಿಚ್ಛಕ್ತಿಯೇ ಚಿದ್ರೂಪನಾದ ಶರಣಂಗೆ ಭಕ್ತ್ಯಾಂಗನೆ ಯಾಗಿರುತ್ತಿಹಳೆಂಬುದೀಗ, ಭಕ್ತರ ಸತಿಯಾಗಿದ್ದವಳೆ ಎನ್ನ ಹೆಂಡರು ಎಂಬ ಶಬ್ದಕ್ಕರ್ಥ. ಸುಜ್ಞಾನಕ್ರೀಯಿಂದಾಚರಿಸುತ್ತಿರ್ಪ ಸದ್ಭಕ್ತನ ಮಹಾಜ್ಞಾನ ಪ್ರಕಾಶವು ಚಿತ್ಸ್ವರೂಪನಾದ ಶರಣನ ಅಭಿನ್ನ ಕ್ರಿಯಾಚಾರದಲ್ಲಿ ಸಂಬಂಧವಾಗಿಹುದೆಂಬುದೀಗ, ಭಕ್ತರ ತಲೆ ಎನ್ನ ಕಾಲು ಎಂಬ ಶಬ್ದಕ್ಕರ್ಥ. ಸದ್ಭಕ್ತರ ನಿರ್ಮಲವಾದ ಪರಿಪೂರ್ಣಜ್ಞಾನ ಚಿತ್ತಿನಿಂದ ಶರಣನ ವ್ಯಾಕುಲಚಿತ್ತವಳಿದು ಉನ್ಮನಿತತ್ವ ಸ್ವರೂಪ ವಾಯಿತ್ತೆಂಬುದೀಗ, ಭಕ್ತರ ಚಿತ್ತ ಎನ್ನ ಕುಚಿತ್ತವೆಂಬ ಶಬ್ದಕ್ಕರ್ಥ. ಅಣವಾದಿ ಮಲ ತ್ರಯಂಗಳ ನಿವೃತ್ತಿ ಮಾಡಿದ ಸುಜ್ಞಾನಿ ಶರಣನು ಶಿವಭಕ್ತರೊಡವೆಗಳ ಚೋರತನದಿಂದ ಅಪಹರಿಸುವವನಲ್ಲವೆಂಬುದೀಗ, ಭಕ್ತರ ದ್ರವ್ಯವೆನಗೆ ಹೇಯ ವೆಂಬ ಶಬ್ದಕ್ಕರ್ಥ. ಸದ್ಭಕ್ತರ ನಿಜಮೋಕ್ಷವೆ ಶರಣಂಗೆ ಅಂಗವಾಗಿರ್ಪ ಸತ್ಪ್ರಾಣ ಮಕ್ಕೆ ಆಶ್ರಯವಾಯಿತ್ತೆಂಬುದೀಗ, ಭಕ್ತರ ಮುಕ್ತಿ ಎನ್ನ ಕುದುರೆಯ ಲಾಯ ವೆಂಬ ಶಬ್ದಕ್ಕರ್ಥ. ತ್ರಿವಿಧ ಲಿಂಗಾನುಭಾವಿಗಳಾದ ಸದ್ಭಕ್ತರು ಮಹಾಘನ ಲಿಂಗದಲ್ಲಿ ಉರಿ ಕರ್ಪುರದ ಸಂಯೋಗದಂತೆ ಏಕಾರ್ಥವಾಗಿಹರಲ್ಲದೆ ಭಿನ್ನವಿಟ್ಟು ಫಲ ಪದಂಗಳ ಪಡದು ಭವ ಹೇತುವಾಗಿ ಜನ್ಮಾಂತರಕ್ಕೆ ಬಂದು ಪಾಪಕ್ಕೀಡಾಗಿ ನರಕಕ್ಕೆ ಹೋಗಲಿಲ್ಲವೆಂಬುದೀಗ, ಅವರು ಸತ್ತರೆ ಎನಗದು ನರಕ, ರಕ್ಕಸನೊಡೆಯ ಕೊಟ್ಟುದ ಬೇಡ ಎಂಬ ಶಬ್ದಕ್ಕರ್ಥ.

೩

ಭಕ್ತರೆಂಬ ಅಂಗವ ತಾಳಿರ್ದ ಬಸವ ಮೊದಲಾಗಿರ್ದವರೆಲ್ಲರ ಗಂಡ
ಅವರ ಹೆಂಡತಿಯರ ಸಂಗದವರ ಕಂಡರೆ ಬಿಡೆ
ಕಾಣದಿರೆ ಅಂಜಿದೆನಯ್ಯ, ಎನ್ನ ಕೊಂಡಾಡುವರಿಲ್ಲ,
ರಕ್ಕಸನೊಡೆಯ ಕೊಟ್ಟ್ವದ ಬೇಡ.

**ಟೀಕು:**— ಶಿವಜ್ಞಾನೋದಯವಾಗಿ ಶ್ರೀಗುರು ಕಾರುಣ್ಯದಿಂ ಸರ್ವಾಂಗ ಲಿಂಗ ಸಂಬಂಧವಾಗಿ ಸರ್ವಾಚಾರ ಸಂಪತ್ತು ವಿಡಿದಾಚರಿಸುವ ಬಸವೇಶ್ವರ ಮೊದಲಾದ ಷಟಸ್ಥಲ ಜ್ಞಾನಿಗಳಿಗೆ ಸುಜ್ಞಾನಸ್ವರೂಪನಾದ ಶರಣನೆ ಅಧಿಷ್ಠಾಯಕನಾಗಿರ್ದನೆಂಬುದೀಗ, ಭಕ್ತರೆಂಬ ಅಂಗವ ತಾಳಿರ್ದ ಬಸವ ಮೊದಲಾಗಿರ್ದವರೆಲ್ಲರ ಗಂಡನೆಂಬ ಶಬ್ದಕ್ಕರ್ಥ. ಆ ಸದ್ಭಕ್ತರುಗಳಲ್ಲಿರ್ಪ ಷಡ್ವಿಧ ಶಕ್ತಿಗಳೊಡನೆ ಕೂಡಿರ್ಪ ಷಡ್ವಿಧ ಲಿಂಗಂಗಳ ಶರಣ ತನ್ನ ಸುಜ್ಞಾನ ದೃಷ್ಟಿಯಿಂದ ನಿರೀಕ್ಷಿಸಿ ಷಡ್ವಿಧ ಭಕ್ತಿಯಿಂದ ಅನುಗ್ರಹಿಸುತ್ತಿಹನೆಂಬುದೀಗ, ಅವರ ಹೆಂಡತಿಯರ ಸಂಗದವರ ಕಂಡರೆ ಬಿಡೆನೆಂಬ ಶಬ್ದಕ್ಕರ್ಥ. ಅಂತಪ್ಪ ಷಡ್ವಿಧ ಲಿಂಗಂಗಳು ತನ್ನ ಸುಜ್ಞಾನಕ್ಕೆ ಗೋಚರಿಸದೆ ತನ್ನ ಸರ್ವಾಂಗದಲ್ಲಿ ಸಮರಸವಾಗಿರ್ಪ ಭೇದವನುಪಮಿಸಲಮ್ಮದೆ ಸೇವ್ಯ-ಸೇವಕತ್ವವಳಿದು ಒಂದೇ ಪರಬ್ರಹ್ಮವಾಗಿರ್ದನೆಂಬುದೀಗ, ಕಾಣದಿರೆ ಅಂಜಿದೆನಯ್ಯ ಎನ್ನ ಕೊಂಡಾಡುವರಿಲ್ಲ ರಕ್ಕಸನೊಡೆಯ ಕೊಟ್ಟ್ವದಬೇಡ ಎಂಬ ಶಬ್ದಕ್ಕರ್ಥ.

೪

ಹಸು ಕರದು ಹಾಲಿಲ್ಲ, ಹಾವಿದ್ದು ವಿಷವಿಲ್ಲ,
ಬಾಯಿದ್ದು ಹಸುವಿಲ್ಲ, ಅಂಗವಿದ್ದು ಅಸುವಿಲ್ಲ,
ಇಂತಿವರೆಲ್ಲರ ಸತಿಯರ ಗಂಡ ನಾ
ರಕ್ಕಸನೊಡೆಯ ಕೊಟ್ಟ್ವದ ಬೇಡಾ.

**ಟೀಕು:**— ಸುಜ್ಞಾನೋದಯವಾದ ಶರಣನ ಜೀವಭಾವವಳಿದು ಶಿವಭಾವ ಘಟಿಸಲು ಚಿತ್ತೆಂಬ ಸುರಧೇನುವಿನಿಂದ ಪರಮಾಮೃತರಸ ಫಲಿಸಲು ಭಿನ್ನಜ್ಞಾನ ನಾಸ್ತಿಯಾಯಿತ್ತೆಂಬುದೀಗ, ಹಸು ಕರದು ಹಾಲಿಲ್ಲವೆಂಬ ಶಬ್ದಕ್ಕರ್ಥ. ಅಂತು ಶರಣನ ಮನಸ್ಸು ಉನ್ಮನಿತತ್ವ ಸ್ವರೂಪವನೆಯ್ದಲು ಶಂಕಾವಿಷ ನಾಸ್ತಿಯಾಯಿತ್ತೆಂಬುದೀಗ, ಹಾವಿದ್ದು ವಿಷವಿಲ್ಲವೆಂಬ ಶಬ್ದಕ್ಕರ್ಥ. ಆ ಶರಣಂಗೆ ಶಿವಾಪೇಕ್ಷೆ ಉಂಟಾಗಿರ್ದು ಅಲ್ಲಿ ಆಶಾತೃಷ್ಣೆ ಇಲ್ಲವೆಂಬುದೀಗ, ಬಾಯಿ ಇದ್ದು ಹಸುವಿಲ್ಲ ಎಂಬ ಶಬ್ದಕ್ಕರ್ಥ. ಆ ಶರಣನ ಸರ್ವಾಂಗವೆಲ್ಲವು ಪ್ರಣಯ ಮಂತ್ರಸ್ವರೂಪವಾಗಲು ಅಲ್ಲಿ ಜೀವಭಾವವಿಲ್ಲದೆ ಹೋಯಿತ್ತೆಂಬುದೀಗ, ಅಂಗವಿದ್ದು ಅಸುವಿಲ್ಲವೆಂಬ ಶಬ್ದಕ್ಕರ್ಥ. ಇಂತಪ್ಪ ಶರಣ ಮಾಡುವ ಅಭಿನ್ನ ಕ್ರಿಯಾಚಾರ ತನ್ನಲ್ಲಿ ಸಂಬಂಧವಾಗಿಹ ಕಾರಣ ಆ ಸತ್ಕ್ರಿಯಾಚಾರವೆಲ್ಲವಕ್ಕೆ ಚಿತ್ ಸ್ವರೂಪನಾದ ಶರಣ ಅಧಿಷ್ಠಾಯಕನಾಗಿಹಕಾರಣವೆಂಬುದೀಗ, ಇಂತಿವರೆಲ್ಲರ ಸತಿಯರ ಗಂಡ ನಾರಕ್ಕಸಗೊಡೆಯ ಕೊಟ್ಟ್ವದ ಬೇಡಾ ಎಂಬ ಶಬ್ದಕ್ಕರ್ಥ.

ನಡೆವವರೆಲ್ಲರೂ ಹೆಂಗೂಸಿನ ಗಂಡಂದಿರು
ಮಾಡುವವರೆಲ್ಲರೂ ಮಹಾಲಕ್ಷ್ಮಿಯ ತೊಂಡಂದಿರು
ಉಂಬುವವರೆಲ್ಲರೂ ಅವರೆಂಜಲ ಕೂಳು ಇದನೆಂದೆ
ನಾಯನ ನಿದಿರಾದರೆ ಅವರ ಬಾಯ ಕೊಂಬರ ಗಂಡ ನಾ
ರಕ್ಕಸನೊಡೆಯ ಕೊಟ್ಟದ ಬೇಡಾ.

**ಟೀಕು:—** ಲಿಂಗಾಂಗಕ್ಕೆರಡಿಟ್ಟು ತ್ರಿಕಾಲಂಗಳ ಕುರಿತು ಭಿನ್ನ ಕ್ರಿಯ ಮಾಡಿ ಮಾಯಾ ಸಂಬಂಧವಾದ ಸಕಲ ಭೋಗಂಗಳ ಪಡದು ಭೋಗಿಸಿ ಮಾಯಾ ಸಕ್ತರಾಗಿಹರೆಂಬುದೀಗ, ನಡೆವವರೆಲ್ಲರು ಹೆಂಗೂಸಿನ ಗಂಡಂದಿರು ಎಂಬ ಶಬ್ದಕ್ಕರ್ಥ. ಗುರು–ಲಿಂಗ–ಜಂಗಮವ ಭಿನ್ನವಿಟ್ಟು ಭಿನ್ನ ಭಕ್ತಿಯಿಂದ ತನು–ಮನ–ಧನವನರ್ಪಿಸಿ ಲಕ್ಷ್ಮಿಸಂಬಂಧವಾದ ಫಲ ಪದಂಗಳ ಪಡದು ಮದೋನ್ಮತ್ತರಾಗಿರ್ದರೆಂಬುದೀಗ, ಮಾಡುವವರೆಲ್ಲರೂ ಮಹಾಲಕ್ಷ್ಮಿಯ ತೊಂಡಂದಿರು ಎಂಬ ಶಬ್ದಕ್ಕರ್ಥ. ಅಂತಪ್ಪ ಉಪಾಧಿ ಭಕ್ತನ ಮನೆಯಲ್ಲಿ ಅನುಸರಣೆಯಿಂದ ಕೊಂಬುದೆಲ್ಲವು ಅವರ ಉಚ್ಚಿಷ್ಟಕ್ಕೆ ಸಮಾನವೆಂಬುದೀಗ, ಉಂಬವರೆಲ್ಲರು ಅವರೆಂಜಲ ಕೂಳು ಎಂಬ ಶಬ್ದಕ್ಕರ್ಥ. ಕೊಳಬಹುದೆಂದು ವಾಗ್ವಾದವ ಮಾಡುವ ಲಾಂಛನಧಾರಕರ ಭಿನ್ನಾಪೇಕ್ಷೆಯೆಂಬ ಬಾಯನು ನಿವೃತ್ತಿ ಮಾಡುವ ಸುಜ್ಞಾನ ಸನ್ನಹಿತವಾದ ಶರಣನೆ ಅಧಿಷ್ಠಾಯಕನಾಗಿಹನೆಂಬುದೀಗ, ಇದನೆಂದೆ ನಾಯನ ನಿದಿರಾದರೆ ಅವರ ಬಾಯ ಕೊಂಬರ ಗಂಡ ನಾ ರಕ್ಕಸ ನೊಡೆಯ ಕೊಟ್ಟದಬೇಡ ಎಂಬ ಶಬ್ದಕ್ಕರ್ಥ.

## ಕದಿರ ರೆಮ್ಮವ್ವೆಯರ ವಚನಗಳು

೧

ಎಲ್ಲರ ಗಂಡಂದಿರು ಪರದಳವಿ ಭಾಡರು–
ಎನ್ನ ಗಂಡ ಮನೆದಳವಿ ಭಾಡ;
ಎಲ್ಲರ ಗಂಡರು ಗಜ ಬೇಟೆಕಾರರು—
ಎನ್ನ ಗಂಡ ಮನೆಯ ಬೇಟೆಕಾರ;
ಎಲ್ಲರ ಗಂಡಂದಿರು ತಂದಿಕ್ಕಿಸಿ ಕೊಂಬರು—
ಎನ್ನ ಗಂಡ ತಾರದೆ ಇಕ್ಕಿಸಿಕೊಂಬ;
ಎಲ್ಲರ ಗಂಡಂದಿರಿಗೆ ಮೂರು– ಎನ್ನ ಗಂಡಂಗೆ ಒಂದೇ;
ಅದೊಂದು ಸಂದೇಹ ಕದಿರ ರೆಮ್ಮಿಯೊಡೆಯ ಗುಮ್ಮೇಶ್ವರಾ

ಟೀಕು:— ಮಾಯಾ ಶಕ್ತಿಯ ವಲ್ಲಭರಾದ ಖಂಡಿತ ಜ್ಞಾನಿಗಳೆಲ್ಲರು ಬಹಿರಂಗದ ಪ್ರಪಂಚು ತನು ದಂಡಣೆಗಳಿಂ ನಿವೃತ್ತಿ ಮಾಡಬೇಕೆನುತ್ತಿಹರೆಂಬುದೀಗ, ಎಲ್ಲರ ಗಂಡಂದಿರು ಪರದಳವಿ ಭಾಡರು ಎಂಬ ಶಬ್ದಕ್ಕರ್ಥ. ಚಿತ್ ಸ್ವರೂಪವಾದ ಶರಣ ಸತಿಗೆ ಮಹಾಘನ ಲಿಂಗವೆ ಪತಿಯಾದ ಕಾರಣ ಆ ಮಹಾಘನ ಲಿಂಗವು ಶರಣನ ಸರ್ವಾಂತರಂಗವನ್ನು ಅವಗ್ರಹಿಸಿ ಮನಸ್ಸಿನಿಂ ತೋರುವ ಸಂಕಲ್ಪ-ವಿಕಲ್ಪ ಮೊದಲಾದ ಸಕಲ ಪ್ರಪಂಚ ನಿವೃತ್ತಿ ಮಾಡಿ ಶಿವಜ್ಞಾನವ ಪ್ರಭಾವಿಸಿ ಕೊಡುತ್ತಿಹುದೆಂಬುದೀಗ, ಎನ್ನ ಗಂಡ ಮನದಳವಿ ಭಾಡನೆಂಬ ಶಬ್ದಕ್ಕರ್ಥ. ಮಾಯಾ ಶಕ್ತಿ ವಲ್ಲಭರಾದ ಭಿನ್ನ ಜ್ಞಾನಿಗಳೆಲ್ಲರು ಬಹಿರಂಗದ ಅಷ್ಟ ಮದಂಗಳ ನಷ್ಟವ ಮಾಡಬೇಕು ಎನುತ್ತಿಹರು ಚಿದ್ರೂಪನಾದ ಶರಣನ ಬಾಹ್ಯಾಂಭ್ಯಾಂತರಂಗಳ ನೊಳಕೊಂಡು ಪರಿಪೂರ್ಣವಾಗಿರ್ಪ ಪರಶಿವ ತತ್ವವು ಅಂತರಂಗದ ಅಷ್ಟ ಮದಗಳು ನಷ್ಟವ ಮಾಡಿ ಚಿದಹಂಕಾರ ಸ್ವರೂಪವ ನೆಯ್ದಿಸುತ್ತಿಹನೆಂಬುದೀಗ, ಎಲ್ಲರ ಗಂಡಂದಿರು ಗಜ ಬೇಟೆಕಾರರು ಎನ್ನ ಗಂಡ ಮನೆಯ ಬೇಟೆಕಾರನೆಂಬ ಶಬ್ದಕ್ಕರ್ಥ. ತಮ್ಮ ನಿಜವೆ ಪರಬ್ರಹ್ಮವೆಂದರಿಯದೆ ದ್ವೈತ ಭಾವದಿಂದ ಲಿಂಗಕ್ಕೆ ಸರ್ವ ಕ್ರಿಯೋಪಚಾರಂಗಳ ಮಾಡಿ ಭಿನ್ನ ಫಲಪದಂಗಳ ಪಡದು ಭೋಗಿಸಿದವರು ಭವ ಹೇತುವಪ್ಪ ಜನ್ಮಾಂತರಕ್ಕೆ ಬಂದು ಮಾಯಾ ಸಂಬಂಧವಾದ ಸಕಲ ವಿಷಯ ಪದಾರ್ಥಂಗಳ ಜೀವ ಭಾವದಿಂದ ಭುಂಜಿಸುತ್ತಿಹರು ಸುಜ್ಞಾನ ಸನ್ನಿಹಿತವಾದ ಶರಣ ಸತಿಗೆ ಪತಿಯಾಗಿರ್ಪ ಮಹಾ ಘನ ಲಿಂಗವು ಫಲಪದಂಗಳ ಕೊಟ್ಟು ಭವಕ್ಕೆ ತಾರದೆ ಅಂಗ-ಮನ-ಪ್ರಾಣ ಸರ್ವೇಂದ್ರಿಯಂಗಳಲ್ಲಿ ಸಂಬಂಧವಾದ ಸಕಲ ಪದಾರ್ಥಂಗಳ ಭಕ್ತಿಯಿಂದರ್ಪಿಸಿಕೊಂಡು ಪ್ರಸಾದವ ಕರುಣಿಸಿ ನಿತ್ಯವಾದ ಮುಕ್ತಿಯ ಕೊಡುತ್ತಿಹುದು ಶರಣಂಗೆ ಎಂಬುದೀಗ, ಎಲ್ಲರ ಗಂಡಂದಿರು ತಂದಿಕ್ಕಿಸಿಕೊಂಬರು ಎನ್ನ ಗಂಡ ತಾರದೆ ಇಕ್ಕಿಸಿಕೊಂಬನೆಂಬ ಶಬ್ದಕ್ಕರ್ಥ. ಮಾಯಾ ಶಕ್ತಿಯ ವಲ್ಲಭರಾದ ಭಿನ್ನ ಜ್ಞಾನಿಗಳೆಲ್ಲರು ತ್ರಿಪುಟಿ ಜ್ಞಾನ ಸಂಬಂಧಿಗಳಾಗಿಹರು ಚಿತ್ ಪ್ರಭಾಂಗ ಸ್ವರೂಪವಾದ ಶರಣ ಸತಿಗೆ ಪ್ರಾಣದೊಲ್ಲಭನಾದ ಪರಬ್ರಹ್ಮ ಲಿಂಗಕ್ಕೆ ಅಖಂಡ ಜ್ಞಾನ ಪ್ರಕಾಶವೊಂದೆ ಶರಣನ ಸರ್ವಾಂಗವ ನವ ಗ್ರಹಿಸಿ ನಿಷ್ಪತಿಯಾಯಿತ್ತೆಂಬುದೀಗ, ಎಲ್ಲರ ಗಂಡಂದಿರಿಗೆ ಮೂರು, ಎನ್ನ ಗಂಡಂಗದೊಂದೆ ಅದೊಂದು ಸಂದೇಹ ಕದಿರ ರೆಮ್ಮಿಯೊಡೆಯ ಗುಮ್ಮೇಶ್ವರಾ ಎಂಬ ಶಬ್ದಕ್ಕರ್ಥ.

೨

ಎಲ್ಲರ ಹೆಂಡತಿಯರು ತೊಳಸಿಕ್ಕುವರು—
ಎನ್ನ ಗಂಡಂಗೆ ತೊಳಸುವದಿಲ್ಲ;
ಎಲ್ಲರ ಗಂಡಂದಿರು ಬಸಿವರು-ಎನ್ನ ಗಂಡಂಗೆ ಬಸಿವುದಿಲ್ಲ;
ಎಲ್ಲರ ಗಂಡಂದಿರಿಗೆ ಬೀಜವುಂಟು-ಎನ್ನ ಗಂಡಂಗೆ ಅಂಡಜವಿಲ್ಲ
ಎಲ್ಲರ ಗಂಡಂದಿರು ಮೇಲೆ-ಎನ್ನ ಗಂಡ ಕೆಳಗೆ—
ನಾ ಮೇಲೆ, ಕದಿರ ರೆಮ್ಮಿಯೊಡೆಯ ಗುಮ್ಮೇಶ್ವರಾ !

**ಟೀಕು:**— ಸಾಕಾರವಾದ ಲಿಂಗಕ್ಕೆ ಸತಿಯರೆನ್ನಿಸಿಕೊಂಬ ದ್ವೈತಿಗಳುಭಿನ್ನ ಕ್ರೀಗಳ ಮಾಡಿ ಫಲಪದಂಗಳ ಪಡದು ಭೋಗಿಸಿ ಭವಹೇತುವಾಗಿ ಜನನಕ್ಕೆ ಬಂದು ಭಿನ್ನವಿಟ್ಟು ಪದಾರ್ಥಂಗಳ ಲಿಂಗಕ್ಕರ್ಪಿಸಿ ಭೋಗಿಸುತ್ತಿಹರು ಮಹಾ ಘನಲಿಂಗವ ಸರ್ವಾಂಗದಲ್ಲಿ ಸಂಬಂಧವ ಮಾಡಿಕೊಂಡಿರ್ಪ ಶರಣ ಸತಿಯು ಸಕಲ ಪದಾರ್ಥಗಳ ಅಭಿನ್ನಭಾವದಿಂ ಲಿಂಗಕ್ಕರ್ಪಿಸಿ ಲಿಂಗಭೋಗೋಪಭೋಗಿಯಾಗಿಹಳಲ್ಲದೆ ಭೇದಭಾವದಿಂ ಜನನಕ್ಕೆ ಬರಲಿಲ್ಲವೆಂಬುದೀಗ, ಎಲ್ಲರ ಹೆಂಡತಿಯರು ತೊಳಸಿಕ್ಕುವರು, ಎನ್ನ ಗಂಡಂಗೆ ತೊಳಸುವದಿಲ್ಲವೆಂಬ ಶಬ್ದಕ್ಕರ್ಥ. ಮಾಯಾ ಶಕ್ತಿಯ ವಲ್ಲಭರಾದ ಭಿನ್ನ ಜ್ಞಾನಿಗಳೆಲ್ಲರು ದೇಹೇಂದ್ರಿಯ ವಿಷಯ ರಸಂಗಳ ನಿವೃತ್ತಿಯ ಮಾಡಬೇಕೆನ್ನುತ್ತಿಹರು ಸರ್ವಾಂಗಲಿಂಗ ಸಂಬಂಧಿಯಾಗಿರ್ಪ ಶರಣ ಸತಿಯು ದೇಹೇಂದ್ರಿಯ ವಿಷಯ ರಸಂಗಳ ನಿವೃತ್ತಿಮಾಡಿ ಕಳೆಯಲಿಲ್ಲವೆಂಬುದೀಗ, ಎಲ್ಲರ ಗಂಡಂದಿರು ಬಸಿವರು ಎನ್ನ ಗಂಡಂಗೆ ಬಸಿವುದಿಲ್ಲವೆಂಬ ಶಬ್ದಕ್ಕರ್ಥ. ಮಾಯಾಶಕ್ತಿಯ ವಲ್ಲಭರಾದ ದ್ವೈತಿಗಳೆಲ್ಲಕ್ಕೂ ತಾನೆಂಬ ಅಹಂಕಾರವು ಉಂಟಾಗಿರುತ್ತಿಹುದು ಶರಣಸತಿಗೆ ಚೈತನ್ಯ ಸ್ವರೂಪವಾದ ಮಹಾ ಘನಲಿಂಗನೆಂಬ ಪತಿಗೆ ಜನನಕ್ಕೆ ಕಾರಣವಾದ ಅಹಂಕಾರ ನಾಸ್ತಿಯಾಯಿತ್ತೆಂಬುದೀಗ, ಎಲ್ಲರ ಗಂಡಂದಿರಿಗೆ ಬೀಜವುಂಟು—ಎನ್ನ ಗಂಡಂಗೆ ಅಂಡಜವಿಲ್ಲವೆಂಬ ಶಬ್ದಕ್ಕರ್ಥ. ಮಾಯಾ ಶಕ್ತಿಯ ವಲ್ಲಭರಾದ ಖಂಡಿತ ಜ್ಞಾನಿಗಳೆಲ್ಲರು ಲಿಂಗಕ್ಕೆ ಸರ್ವ ಕ್ರಿಯೋಪಚಾರಂಗಳಮಾಡಿ ಫಲಭೋಗ ಪ್ರಾಪ್ತಿಯನೆಯ್ದಿ ಸ್ವರ್ಗದಲ್ಲಿ ತೇಜಿಷ್ಟರಾಗಿಹರು ಶರಣಸತಿಗೆ ವಲ್ಲಭನಾಗಿರ್ಪ ಮಹಾಘನ ಲಿಂಗವು ಚತುರ್ವಿಧ ಫಲಂಗಳ ಮುಟ್ಟದೆ ಶರಣನ ಸರ್ವಾಂಗದಲ್ಲಿ ಸಂಬಂಧವಾಗುತ್ತಿರಲು ಆ ಲಿಂಗಕ್ಕೆ ಶರಣನೆ ಅಧಿಷ್ಟಾಯಕನಾಗಿ ಸಮರಸಭಾವದಿಂದ ಇರುತ್ತಿಹನೆಂಬುದೀಗ, ಎಲ್ಲರ ಗಂಡಂದಿರು ಮೇಲೆ, ಎನ್ನ ಗಂಡ ಕೆಳಗೆ ನಾ ಮೇಲೆ ಕದಿರ ರೆಮ್ಮಿಯೊಡೆಯ ಗುಮ್ಮೇಶ್ವರ ಎಂಬ ಶಬ್ದಕ್ಕರ್ಥ.

೩

ನಾ ತಿರುಹುವ ರಾಟೆಯ ಕುಲ-ಜಾತಿಯ ಕೇಳಿರಣ್ಣಾ !
ಅಡಿಯಣ ಹಲಗೆ ಬ್ರಹ್ಮ, ತೋರಣ ವಿಷ್ಣು
ನಿಂದ ಬೊಂಬೆ ಮಹಾರುದ್ರ,
ರುದ್ರನ ಬೆಂಬಳಿಯವೆರಡು ಸೂತ್ರದ ಕರ್ನ
ಅರಿವೆಂಬ ಕದುರು, ಭಕ್ತಿಯೆಂಬ ಕೈಯಲ್ಲಿ ತಿರುವಲಾಗಿ
ಸುತ್ತಿತ್ತು ನೂಲು, ಕದುರು ತುಂಬಿತ್ತು
ರಾಟೆಯ ತಿರುವಲಾರೆ, ಎನ್ನ ಗಂಡ ಕುಟ್ಟಿಹ
ಇನ್ನೇವೆ ಕದಿರ ರೆಮ್ಮಿಯೊಡೆಯ ಗುಮ್ಮೇಶ್ವರಾ.

**ಟೀಕು:** — ಶಿವಜ್ಞಾನೋದಯವಾಗಿ ಶ್ರೀಗುರು ಕಾರುಣ್ಯದಿಂ ಸರ್ವಾಂಗ ಲಿಂಗ ಸಂಬಂಧವಾಗಿರ್ಪ ಶರಣನ ಸರ್ವಾಚಾರ ಸಂಪತ್ತಿನ ಆಚರಣೆ ಎಂತೆಂ

ದೊಡೆ– ಇಷ್ಟಲಿಂಗ ಸಂಬಂಧವಾದ ಆಚಾರವೆಂಬುದೀಗ, ನಾ ತಿರುಹುವ ರಾಟಿಯು ಕುಲ ಜಾತಿಯು ಕೇಳಿರಣ್ಣಾ ಅಡಿಯಣ ಹಲಗೆ ಬ್ರಹ್ಮನೆಂಬ ಶಬ್ದಕ್ಕರ್ಥ. ತನ್ನ ಹೃದಯ ಕಮಲ ಕರ್ನಿಕಾ ಮಧ್ಯದಲ್ಲಿ ಚಿತ್ ಪ್ರಕಾಶವಾಗಿ ತೊಳಗಿ ಬೆಳಗುವ ಪ್ರಾಣಲಿಂಗದಲ್ಲಿ ಆಚರಿಸುವ ನೈಷ್ಟ ಭಾವಂಗಳೆರಡು ತೋರಣವಾಗಿಹುವೆಂಬುದೀಗ, ತೋರಣ ವಿಷ್ಣುವೆಂಬ ಶಬ್ದಕ್ಕರ್ಥ. ಆ ನೈಷ್ಟ ಭಾವಂಗಳನೊಳಕೊಂಡು ಪರಿಪೂರ್ಣ ಜ್ಞಾನ ತೋರುತ್ತಿಹುದೆಂಬುದೀಗ, ನಿಂದ ಬೊಂಬೆ ಮಹಾ ರುದ್ರನೆಂಬ ಶಬ್ದಕ್ಕರ್ಥ. ಅಂತಪ್ಪ ಮಹಾ ಜ್ಞಾನದ ಬೆಂಬಳಿಯಲ್ಲಿ ತೋರುವ ಜ್ಞಾನಕ್ರಿಯೆಗಳೆರಡು ಭಿನ್ನವಿಲ್ಲದಿಹವೆಂಬುದೀಗ, ರುದ್ರನ ಬೆಂಬಳಿಯವೆರಡು ಸೂತ್ರದ ಕರ್ನವೆಂಬ ಶಬ್ದಕ್ಕರ್ಥ. ಅಂತು ಜ್ಞಾನಕ್ರಿಯೆಗಳನು ಒಳಕೊಂಡು ಸದ್ವಿವೇಕ ಜ್ಞಾನ ಸಂಬಂಧವಾದ ಶಿವಾದ್ವೈತ ಭಕ್ತಿಯಿಂದ ಆಚರಿಸುತ್ತಿಹನು ಎಂಬುದೀಗ, ಅರಿವೆಂಬ ಕದುರು, ಭಕ್ತಿಯೆಂಬ ಕೈಯಲ್ಲಿ ತಿರುಹಲಾಗಿ ಎಂಬ ಶಬ್ದಕ್ಕರ್ಥ. ಅಂತು ಸದ್ಭಕ್ತಿಯಿಂದ ಆಚರಿಸುತ್ತಿರ್ದ ಶರಣನ ಸ್ವಾನುಭಾವ ಸೂತ್ರವು ಸದ್ವಿವೇಕ ಜ್ಞಾನದಲ್ಲಿ ಪರಿಪೂರ್ಣವಾಯಿತ್ತೆಂಬುದೀಗ, ಸುತ್ತಿತ್ತು ನೂಲು, ಕದುರು ತುಂಬಿತ್ತು ಎಂಬ ಶಬ್ದಕ್ಕರ್ಥ. ಅಂತು ಅಭಿನ್ನ ಕ್ರಿಯಾಚಾರವನು ಹಿಡಿದು ಆಚರಿಸುತ್ತಿರ್ದ ಶರಣನು ಭಿನ್ನ ಕ್ರಿಯಾಚಾರವ ಹಿಡಿದು ಆಚರಿಸಿದೊಡೆ ಆ ಮಹಾ ಘನಲಿಂಗವೆಂಬ ಪತಿ, ಆಜ್ಞೆಯ ಮಾಡಿಹನೆಂದರಿದು ಭಿನ್ನ ಕ್ರಿಯಾಚಾರವ ವಿಸರ್ಜಿಸಿ ಸಾವಧಾನ ಸಂಪನ್ನನಾಗಿ ಉಪಾವಸ್ಥೆಯ ಮಾಡುತ್ತಿಹನೆಂಬುದೀಗ, ರಾಟಿಯ ತಿರುಹಲಾರೆ ಎನ್ನ ಗಂಡ ಕುಟ್ಟಿಹ ಇನ್ನೇವೆ ಕದಿರ ರೆಮ್ಮಿಯೊಡೆಯ ಗುಮ್ಮೇಶ್ವರಾ ಎಂಬ ಶಬ್ದಕ್ಕರ್ಥ.

## ಕನ್ನದ ಮಾರಿ ತಂದೆಯವರ ವಚನಗಳು

೧

ಊರ ಕನ್ನವನಿಕ್ಕಿ ನೀರ ಕದ್ದೆನು, ಹೋಗಾಗಲಾರು ಅರಿಯರು
ಬಾಹಾಗ ಎಲ್ಲರು ಅರಿದರು, ಅರಿದರಲ್ಲಾ ಎಂದು ಸುರಿದೆ
ನೀರ ಹಾಕಿದೆ ಮಡಕೆಯ ಕನ್ನಗತ್ತಿ ಕೈಯಲ್ಲಿದೆ
ಅಂಗ ಸಿಕ್ಕಿತ್ತು ಮವನಂಗೆ ದೂರ ಮಾರೇಶ್ವರಾ !

**ಟೀಕು:**— ಮೂಲ ಜ್ಞಾನೋದಯವಾದ ಶರಣನು ಅನಿತ್ಯವಾದ ದೇಹಭಾವವ ನಿವೃತ್ತಿ ಮಾಡಿದನೆಂಬುದೀಗ, ಊರ ಕನ್ನವನಿಕ್ಕಿ ಎಂಬ ಶಬ್ದಕ್ಕರ್ಥ. ನೀರೆಂದೊಡೆ ಮನಸ್ಸು. ಅಂತಪ್ಪ ಮನೋವರ್ತನೆಯ ಮಹಾನುಭಾವ ಬೋಧೆಯಿಂ ಬೋಧಿಸಿ ಉನ್ಮನಿತತ್ವ ಸ್ವರೂಪವ ಮಾಡಿದನೆಂಬುದೀಗ, ನೀರ ಕದ್ದೆನೆಂಬ ಶಬ್ದಕ್ಕರ್ಥ. ಆತ್ಮನು ಅಜ್ಞಾನ ಮರವೆಯಿಂದ ದೇಹವನು ತಾಳಿ

ಬರುವಲ್ಲಿ ಸಕಲ ಕರಣಂಗಳಿಗರುಹಿಪಲ್ಲದೆ ಅಜ್ಞಾನಿಗಳಾಗಿರ್ದವೆಂಬುದೀಗ, ಹೋಹಾಗಲಾದು ಅರಿಯರು ಎಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮಂಗೆ ಸುಜ್ಞಾನೋದಯವಾಗಲು ಸಕಲ ಕರಣಂಗಳ ವರ್ತನೆಯು ನಿವೃತ್ತಿ ಮಾಡಿ ಶ್ರೀ ಗುರು ಕಾರುಣ್ಯದಿಂ ಸರ್ವಾಂಗ ಲಿಂಗ ಸಂಬಂಧವಾದಲ್ಲಿ ಅವೆಲ್ಲ ಜ್ಞಾನಕರಣಂಗಳಾಗಿ ಅಮರಗಣ ತತ್ವವನೆಯ್ದಿದವೆಂಬುದೀಗ, ಬಾಹಾಗ ಎಲ್ಲರೂ ಅರಿವರೆಂಬ ಶಬ್ದಕ್ಕರ್ಥ. ಅಂತಪ್ಪ ಸಕಲ ಕರಣಂಗಳೆಲ್ಲ ಜ್ಞಾನ ಕರಣಂಗಳಾಗಿ ಪರಬ್ರಹ್ಮವ ಸುಜ್ಞಾನ ದೃಷ್ಟಿಯಿಂ ನೋಡುತ್ತಿರ್ದವೆಂಬುದೀಗ, ಅಂದರಲ್ಲಾ ಎಂದು ಎಂಬ ಶಬ್ದಕ್ಕರ್ಥ. ಆ ಮನಸ್ಸಿನ ದುರ್ವಿವೇಕವ ಕೆಡಿಸಿ ಉನ್ಮನಿ ತತ್ವಸ್ವರೂಪವ ಮಾಡಿ ಮಹಾ ಘನಲಿಂಗದಲ್ಲಿ ನಿಷ್ಪತಿಯನೆಯ್ದಿಸಿದನೆಂಬುದೀಗ, ಸುರಿವ ನೀರನೆಂಬ ಶಬ್ದಕ್ಕರ್ಥ. ಚಿತ್ ಸ್ವರೂಪನಾದ ಶರಣ ತನ್ನ ಚಿತ್ ಕಾಯವೆಂಬ ಚಿತ್ ಭಾಂಡವನು ಚಿದ್ ಘನಲಿಂಗದಲ್ಲಿ ಏಕಾರ್ಥವ ಮಾಡಿದನೆಂಬುದೀಗ, ಹಾಕಿದ ಮಡಕೆಯನೆಂಬ ಶಬ್ದಕ್ಕರ್ಥ. ಅಂತಪ್ಪ ಚಿತ್ ಸ್ವರೂಪನಾದ ಶರಣನ ಸುಜ್ಞಾನ ಪ್ರಕಾಶವು ಶಿವಭಾವದಲ್ಲಿ ಏಕಾರ್ಥವಾಯಿತ್ತೆಂಬುದೀಗ, ಕನ್ನಗತ್ತಿ ಕೈಯ್ಯಲ್ಲಿದೆ ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಆಚಾರಾಂಗವು ಇಷ್ಟ ಲಿಂಗದಲ್ಲಿ ಏಕಾರ್ಥವಾಯಿತೆಂಬುದೀಗ, ಅಂಗ ಸಿಕ್ಕಿತ್ತು ಮದನಂಗೆ ಮಾರ ಮಾರೇಶ್ವರಾ ಎಂಬ ಶಬ್ದಕ್ಕರ್ಥ.

೨

ಎನ್ನ ಕನ್ನಗತ್ತಿಯೊಡೆಯಂಗೆ ಆಡನರಿದೆ
ಕೊಡಗವ ಬಲಿಯ ನಿಕ್ಕಿದೆ ಎನ್ನ ಮಾತಾ-ಪಿತನ ಮೀಸಲ ನಿಕ್ಕಿದೆ
ಇಷ್ಟಕ್ಕೆ ಕನ್ನ ಎನಗೆ ಕೂರ್ತು ಬಾರದಿರ್ದಡೆ
ಮಾಕನ ವೈರಿ ಮಾರೇಶ್ವರಾ ನಿಲ್ಲಾ ಎಂದೆ.

**ಟೀಕು:**— ಶಿವಜ್ಞಾನಪ್ರಕಾಶವೆಂಬುದೀಗ, ಎನ್ನ ಕನ್ನಗತ್ತಿ ಎಂಬ ಶಬ್ದಕ್ಕರ್ಥ. ಅಂತಪ್ಪ ಸುಜ್ಞಾನಕ್ಕೆ ಕರ್ತೃವಾಗಿರ್ಪ ಮಹಾಘನ ಲಿಂಗಕ್ಕೆ ರಜೋಗುಣ ಸಂಬಂಧವಾದ ಜೀವನ ಜೀವಭಾವವನು ಸುಜ್ಞಾನ ಶಸ್ತ್ರದಿಂ ನಿವೃತ್ತಿಮಾಡಿ ಭಕ್ತಿಯಿಂ ಪದಾರ್ಥ ಸ್ವರೂಪವ ಮಾಡಿ ಸಮರ್ಪಿಸುತ್ತಿಹನೆಂಬುದೀಗ, ಎನ್ನ ಕನ್ನಗತ್ತಿಯೊಡೆಯಂಗೆ ಆಡನರಿದೆನೆಂಬ ಶಬ್ದಕ್ಕರ್ಥ. ಮನಸ್ಸಿನ ಸಂಕಲ್ಪ—ವಿಕಲ್ಪ ಮೊದಲಾದ ದುರ್ವರ್ತನೆಯ ಸುಜ್ಞಾನ ಬೋಧೆಯಿಂ ನಿವೃತ್ತಿಮಾಡಿ ಆ ಉನ್ಮನಿ ಸ್ವರೂಪವಾದ ಮನವ ಪ್ರಾಣಲಿಂಗದಲ್ಲಿ ಏಕಾರ್ಥವ ಮಾಡಿದನೆಂಬುದೀಗ, ಕೊಡಗದ ಬಲಿಯನಿಕ್ಕಿದೆನೆಂಬ ಶಬ್ದಕ್ಕರ್ಥ. ಶಿವಶಕ್ತಿ ಸಂಬಂಧವಾದ ದೇಹ-ಪ್ರಾಣಂಗಳ, ಜ್ಞಾನ ಕ್ರಿಯಾಚಾರಗಳಲ್ಲಿ ನಿಲಿಸಿ ಅಂತಪ್ಪ ಜ್ಞಾನಕ್ರೀಗಳಲ್ಲಿ ಇಷ್ಟ-ಪ್ರಾಣಲಿಂಗ ಸಂಬಂಧವಾಗಿ ಅತಿ ಭಕ್ತಿಯಿಂ ಪದಾರ್ಥವಾಗಿರ್ದವೆಂಬುದೀಗ, ಎನ್ನ ಮಾತಾ-ಪಿತನ ಮೀಸಲನಿಕ್ಕಿದೆನೆಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗ ತತ್ವಂಗಳೆಲ್ಲವನು ಲಿಂಗಮುಖದಲ್ಲಿ ಅರ್ಪಿಸಿ ಏಕಾರ್ಥವ ಮಾಡಿದ ಶರಣನು ಮಹಾಘನ ಲಿಂಗದಲ್ಲಿ ನಿರ್ಲಯ್ಯಲಹ ನಿಜಮೋಕ್ಷ ಸಾಧ್ಯವಾದುದಿಲ್ಲ ಎಂದು

ಉಪಾವಸ್ಥೆಯ ಮುಂದುಗೊಂಡು ಭಕ್ತಿಯಿಂದ ಆಚರಿಸುತ್ತಿರ್ದನೆಂಬುದೀಗ, ಇಷ್ಟಕ್ಕೆ ಕಣ್ಣ ಎನಗೆ ಕೂರ್ತುಬಾರದಿರ್ದಡೆ ಪಾಕನ ವೈರಿ ಮಾರೇಶ್ವರನಿಲ್ಲಾ ಎಂದೆ ಎಂಬ ಶಬ್ದಕ್ಕರ್ಥ.

೨

ಕತ್ತಲೆಯಲಿ ಕನ್ನವ ನಿಕ್ಕಿದರೆ ಕತ್ತಿಯಕೊಟ್ಟ ಕರ್ತನಿಂಗೆ ಭಂಗ;
ಅವರು ಮರದಿರ್ದಲ್ಲಿ ಮನೆಯ ಹೊಕ್ಕಡೆ,
ಎನ್ನ ಚೋರತನದ ಅರಿಕೆಗೆ ಭಂಗ;
ಮರದಿರ್ದವರನು ಎಬ್ಬಿಸಿ ಅವರಿಗೆ ಅವರೊಡವೆಯ ತೋರಿ
ಎನ್ನೊಡವೆಯ ತಂದೆ ಮವನಂಗೆ ದೂರ ಮಾರೇಶ್ವರಾ !

**ಟೀಕು:**— ದೇಹಸಂಬಂಧಿಯಾಗಿರ್ದ ಆತ್ಮನು ಅಜ್ಞಾನದಲ್ಲಿ ಕೂಡಿರ್ದು ದೇಹಭಾವದ ನಿವೃತ್ತಿಮಾಡಿಹೆನೆಂದೊಡೆ ಆಗದೆಂಬುದೀಗ, ಕತ್ತಲೆಯಲ್ಲಿ ಕನ್ನವ ನಿಕ್ಕಿದಡೆ ಎಂಬ ಶಬ್ದಕ್ಕರ್ಥ. ಅಂತು ಅಜ್ಞಾನದಿಂ ದೇಹಭಾವದ ನಿವೃತ್ತಿ ಮಾಡಿಹೆನೆಂದೊಡೆ ತನಗೆ ಸುಜ್ಞಾನವನು ಅಳವಡಿಸಿಕೊಟ್ಟ ಶ್ರೀಗುರುವಿಂಗೆ, ಹಾಸ್ಯವೆಂದರಿದ ಶರಣನು ಆ ಅಜ್ಞಾನದ ಹೊದ್ದದೆ ವಿಲಕ್ಷಣವಾಗಿರ್ದನೆಂಬುದೀಗ, ಎನಗೆ ಕತ್ತಿಯಕೊಟ್ಟ ಕರ್ತನಿಂಗೆ ಭಂಗವೆಂಬ ಶಬ್ದಕ್ಕರ್ಥ. ಅಂತು ಸಕಲ ಕರಣಂಗಳೆಲ್ಲವು ನಿಜಸ್ವರೂಪವನರಿದು ಅಜ್ಞಾನಿಗಳಾಗಿರ್ದಲ್ಲಿ ಎಂಬುದೀಗ, ಅವರುಮರದಿರ್ದಲ್ಲಿ ಮನೆಯಹೊಕ್ಕಡೆ ಎಂಬ ಶಬ್ದಕ್ಕರ್ಥ. ಆ ಸಕಲ ಕರಣಂಗಳೆಲ್ಲವನು ಜ್ಞಾನ ಕರಣಂಗಳ ಮಾಡಿ ಪ್ರಾಣಲಿಂಗದ ಸೇವಕರೆನಿಸುವದಲ್ಲದೆ ದೇಹಭಾವದ ಕೂಡಿಕೊಂಡು ಸಕಲ ಕರಣಂಗಳ ವರ್ತನೆಯಲ್ಲಿ ಹೋದ ಶರಣನೆಂಬುದೀಗ, ಎನ್ನಚೋರತನದರಿಕೆಗೆ ಭಂಗ; ಮರದಿರ್ದವರನೆಬ್ಬಿಸಿ ಎಂಬ ಶಬ್ದಕ್ಕರ್ಥ. ಆ ಸಕಲ ಕರಣಂಗಳಿಗೆ ಪ್ರಾಣಲಿಂಗದ ನಿಜ ಸ್ವರೂಪವನು ಅರುಹಿದನೆಂಬುದೀಗ, ಅವರಿಗೆ ಅವರೊಡವೆಯ ತೋರಿ ಎಂಬ ಶಬ್ದಕ್ಕರ್ಥ. ಆತ್ಮಾಂತರ್ಗತವಾಗಿರ್ದ ಸದ್ರೂಪವಾದ ಪರಬ್ರಹ್ಮವ ಗುರುಮುಖದಿಂ ಬಹಿಷ್ಕರಿಸಿ ತನ್ನ ಕರಾಂಗದಲ್ಲಿ ಇಷ್ಟಲಿಂಗಸ್ವರೂಪವಾಗಿ ಧರಿಸಿದನೆಂಬುದೀಗ, ಎನ್ನೊಡವೆಯ ತಂದೆ ಮದನಂಗೆ ದೂರ ಮಾರೇಶ್ವರಾ ಎಂಬ ಶಬ್ದಕ್ಕರ್ಥ.

## ಕಲಕೇತಯ್ಯನವರ ವಚನಗಳು

೧

ಎನ್ನ ಟಗರು ಆರು ಸನ್ನೆಗೆ ಎರದು, ಮೂರು ಸನ್ನೆಗೆ ಒಡದು,
ಲೆಕ್ಕವಿಲ್ಲದ ಸನ್ನೆಗೆ ಧಿಕ್ಕರಿಸಿ ನಿಲುವುದು
ಕುಟಿಲ ಕವಳವನೊಲ್ಲದು, ಮದ್ದು ಮರುಡಿ ಜಿಳುವೆಯ
ಗುಣಗಾಳಿಯ ಲೆಕ್ಕಿಸದು

ಇಂತಿ ಅರಿ-ಗುರಿಯ ಕೊಡಕಿತ್ತು ಒಂದು ಹಿಂದಕ್ಕಿರಿಸಿ
ಒಂದು ಹಿಡಿದಾಡಬಂದೆ ಆ ಕೋಡಿನಲ್ಲಿ ನಾನಾ ವರ್ಣದ ಶಬ್ದದ ಉಲಿವು
ಇಂತಿವೆಲ್ಲವು ಒಂದುಂಗುರದಲ್ಲಿ ಸೇರಿಸಿ
ಅಂಗುಲಗಳಲ್ಲಿ ಮುಟ್ಟಿಯಾಡುತ್ತ ಬಂದೆ
ಮೇಕಲೇಶ್ವರ ಲಿಂಗದಲ್ಲಿ ಲಿಯ್ಯವಾದ ಶರಣರ ನೋಡಿಹೆನೆಂದು

**ಟೀಕು:**— ಸುಜ್ಞಾನೋದಯದಿಂ ಶ್ರೀ ಗುರು ಕಾರುಣ್ಯವ ಪಡೆದು ಸರ್ವಾಂಗ ಲಿಂಗ ಸಂಬಂಧವಾದ ಶರಣನ ಜ್ಞಾನ ಕಲಾತ್ಮನೆಂಬುದೀಗ, ಎನ್ನ ಟಗರು ಎಂಬ ಶಬ್ದಕ್ಕರ್ಥ. ಅಂತಪ್ಪ ಚಿದಾತ್ಮನು ಷಟುಸ್ಥಲ ವಿಡಿದು ಆಚರಿಸಿ ಮಹಾ ಘನಲಿಂಗದಲ್ಲಿ ಏಕಾರ್ಥವಾಗಿ ಇನ್ನು ಇನ್ನು ಷಟುಸ್ಥಲದಾಚರಣೆ ವಿಡಿದು ಆಚರಿಸಲಿಲ್ಲವೆಂಬುದೀಗ, ಆರು ಸನ್ನೆಗೆ ಎಂದು ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನ ಕಲಾತ್ಮನು ತ್ರಿವಿಧ ಭಕ್ತಿಗಳಲ್ಲಿ ಕೂಡಿ ಭಿನ್ನವಾಗನೆಂಬುದೀಗ, ಮೂರು ಸನ್ನೆಗೆ ಒಡದು ಎಂಬ ಶಬ್ದಕ್ಕರ್ಥ. ಅಂತು ತ್ರಿವಿಧ ಭಕ್ತಿಯಲ್ಲಿ ತತ್ಪರನಾದ ಜ್ಞಾನ ಕಲಾತ್ಮನು ಪಿಂಡಾದಿ ಜ್ಞಾನ ಶೂನ್ಯಾಂತವಾದ ನೂರೊಂದು ಸ್ಥಲ ಕುಳಂಗಳಲ್ಲಿ ಆಚರಿಸುತ್ತಿಹನೆಂಬುದೀಗ, ಲೆಕ್ಕವಿಲ್ಲದ ಸನ್ನೆಗೆ ಧಿಕ್ಕರಿಸಿ ನಿಲುವುದು ಎಂಬ ಶಬ್ದಕ್ಕರ್ಥ. ಅಂತು ಸ್ಥಲವಿಡಿದು ಆಚರಿಸುತಿರ್ದ ಜ್ಞಾನ ಕಲಾತ್ಮನು, ಕುಟಿಲ ಸಂಬಂಧವಾದ ಪ್ರಾರಬ್ಧ ಯೋಗವ ನಿವೃತ್ತಿ ಮಾಡಿದನೆಂಬುದೀಗ, ಕುಟಿಲ ಕವಳವನೊಲ್ಲದು ಎಂಬ ಶಬ್ದಕ್ಕರ್ಥ. ಅಂತು ಪ್ರಾರಬ್ಧ ಭೋಗವ ನಿವೃತ್ತಿ ಮಾಡಿದ ಚಿದಾತ್ಮನು ಜ್ಞಾನಾ ಜ್ಞಾನ ಮಿಥ್ಯ ಮಾಯಾ ಮರವೆಯ ಗುಣ ತ್ರಯ ದಶವಾಯು ವಿಕಾರಂಗಳ ಬಗೆಗೊಳ್ಳನೆಂಬುದೀಗ, ಮುದ್ದು ಮರುಡಿ ಬೆಳವೆಯ ಗುಣ ಗಾಳಿಯ ಲೆಕ್ಕಿಸದು ಎಂಬ ಶಬ್ದಕ್ಕರ್ಥ. ಇಂತಪ್ಪ ಸಕಲ ಪ್ರಪಂಚ ನಿವೃತ್ತಿ ಮಾಡಿದ ಜ್ಞಾನ ಕಲಾತ್ಮನು ಚಿದಹಂಕಾರ-ಮದಹಂಕಾರ ವೆಂಬೆರಡು ಕೋಡುಗಳ ಸದ್ಭಾವ ಹಸ್ತದಲ್ಲಿ ಪಿಡಿದನೆಂಬುದೀಗ, ಇಂತಿ ಅರಿಗರೆಯ ಕೊಡಕಿತ್ತು ಎಂಬ ಶಬ್ದಕ್ಕರ್ಥ. ಅಂತು ಸದ್ಭಾವ ಹಸ್ತದಲ್ಲಿ ಸಂಬಂಧವಾದ ಚಿದಹಂಕಾರವನು ತನ್ನ ಮೂಲ ಜ್ಞಾನದಲ್ಲಿ ಸಂಬಂಧಿಸನೆಂಬುದೀಗ, ಒಂದ ಹಿಂದಕ್ಕಿರಿಸಿ ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣನು ತಾನೆ ಪರಶಿವನೆಂಬ ಮದದಂಕಾರವನು ಶಿವಾದ್ವೈತ ಭಕ್ತಿಯಲ್ಲಿ ಸಂಬಂಧಿಸಿದನೆಂಬುದೀಗ, ಒಂದ ಬಂದೆನೆಂಬ ಶಬ್ದಕ್ಕರ್ಥ. ಆ ಶಿವಾದ್ವೈತ ಭಕ್ತಿಯಲ್ಲಿ ಸಂಬಂಧವಾದ ಮದದಹಂಕಾರವೆಂಬ ಕೋಡಿನಲ್ಲಿ ಎಲ್ಲ ಸ್ಥಲಂಗಳನೊಳಕೊಂಡು ಶಿವೋಹಂ ಎಂದು ಸ್ಮರಿಸುತ್ತಿಹುದೆಂಬುದೀಗ, ಆ ಕೋಡಿನಲ್ಲಿ ನಾನಾ ವರ್ಣದ ಶಬ್ದದ ಉಲುವು ಎಂಬ ಶಬ್ದಕ್ಕರ್ಥ. ಇಂತಪ್ಪ ಪ್ರಣವ ಮಂತ್ರ ಸ್ವರೂಪವಾದ ಸ್ಥಲ ಕುಳಂಗಳನೆಲ್ಲವನು ಸೂಕ್ಷ್ಮವಾದ ಅಖಂಡ ಜ್ಞಾನ ಚಿತ್ತುವಿನಲ್ಲಿ ಸಂಬಂಧವ ಮಾಡಿದನೆಂಬುದೀಗ, ಇಂತಿವೆಲ್ಲವು ಒಂದುಂಗುರದಲ್ಲಿ ಸೇರಿಸಿ ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನ ಚಿತ್ತುವಿನಲ್ಲಿ ಸಂಬಂಧವಾದ ಸ್ಥಲ ಕುಳಂಗಳ ಷಡ್ವಿಧ ಭಕ್ತಿ

ಯಲ್ಲಿ ಸಂಬಂಧವ ಮಾಡಿ ಆಚರಿಸುತ್ತಿಹನೆಂಬುದೀಗ, ಅಂಗುಲಿಗಳಲ್ಲಿ ಮುಟ್ಟಿಯಾಡುತ್ತ ಬಂದನೆಂಬ ಶಬ್ದಕ್ಕರ್ಥ. ಅಂತು ಷಡ್ವಿಧ ಭಕ್ತಿವಿಡಿದಾಚರಿಸುತ್ತಿರ್ದ ಶರಣನು ಲಿಂಗಾಂಗ ಸಂಗಿಗಳಪ್ಪ ತ್ರಿವಿಧ ಲಿಂಗಾನುಭಾವಿಗಳ ಸಂಭಾಷಣೆಯ ಹಾರೈಸುತ್ತಿರ್ದನೆಂಬುದೀಗ, ಮೇಕಲೇಶ್ವರ ಲಿಂಗದಲ್ಲಿ ಲಿಯ್ಯವಾದ ಶರಣರ ನೋಡಿಹೆನೆಂದು ಎಂಬ ಶಬ್ದಕ್ಕರ್ಥ.

೨

ನಾನು ನಿನಗೆ ತಂಗಿಯ ಕೊಟ್ಟು, ನೀನೆನಗೆ ಮೈದುನನಾದೆ
ನಿನಗೆ ಅಕ್ಕನಕೊಟ್ಟು ನೀನೆನಗೆ ಭಾವನಾದೆ
ನಾನು-ನೀನು ಏನಹರೆಂಬುದ ತಿಳಿದು
ಅಣ್ಣನಿಗೆ ತಂಗಿ, ಅಕ್ಕನಿಗೆ ತಮ್ಮ ಇವರಿಬ್ಬರು
ಇವರಿಬ್ಬರು ವೃಷ್ಟದಲ್ಲಿ ಒಡಹುಟ್ಟಿದರಾದ,
ಮತ್ತೆ ತಂಗಿಯ ಮಗಳು ಸೊಸೆಯಾಗಿ—
ಅಕ್ಕನ ಮಗ ಅಳಿಯನಾದ ಚಿತ್ರವ ನೋಡಾ !
ಒಂದು ಯೋನಿಯಲ್ಲಿ ಬಂದುದನರಿಯದೆ
ನಿನ್ನ ಒಡಹುಟ್ಟಿದವಳಿಗೆ ನೀ ಗಂಡನಾಗಿ ಎನಗೆ ನೀ ಭಾವನಾದ—
ಪರಿಯ ನಾಚಿಸಬಂದೆ, ಕಲಕೇತನಲ್ಲಿ ಕೊಳು ಕೊಡಬೇಡ
ಮೇಕಲೇಶ್ವರ ಲಿಂಗನ ಹೊಲಬು ತಿಳಿಯ ಬಲ್ಲಡೆ.

ಟೀಕು:— ನಾನೆಂದೊಡೆ ಚಿದ್ರೂಪನಾದ ಶರಣನು. ತಂಗಿ ಎಂದೊಡೆ ಶರಣನಿಗೆ ಕಿರಿಯಳಾದ ಕ್ರಿಯಾಶಕ್ತಿ. ಅಂತಪ್ಪ ಸತ್ಕ್ರಿಯಾ ಶಕ್ತಿಯನು ಇಷ್ಟಲಿಂಗಕ್ಕೆ ಲಿಂಗವ ಮಾಡಿದನೆಂಬುದೀಗ, ನಾನು ನಿನಗೆ ತಂಗಿಯ ಕೊಟ್ಟು ಎಂಬ ಶಬ್ದಕ್ಕರ್ಥ. ನೀನೆಂದೊಡೆ ಇಷ್ಟಲಿಂಗವು. ಅಂತಪ್ಪ ಮಹಾಘನಲಿಂಗವ ಶರಣ ತನ್ನ ಚಿತ್‌ಪ್ರಭಾ ಲಿಂಗದಲ್ಲಿ ಸಮರಸವ ಮಾಡಿದನೆಂಬುದೀಗ, ನೀನೆನಗೆ ಮೈದುನನಾದೆ ಎಂಬ ಶಬ್ದಕ್ಕರ್ಥ. ನಾನೆಂದೊಡೆ ಚಿತ್‌ಸ್ವರೂಪನಾದ ಶರಣ. ಅಂತು ಶರಣನಿಗೆ ಅಕ್ಕನೆ ಜ್ಞಾನಶಕ್ತಿ. ಅಂತಪ್ಪ ಸುಜ್ಞಾನ ಶಕ್ತಿಯನು ಚೈತನ್ಯಸ್ವರೂಪವಾದ ಪ್ರಾಣಲಿಂಗಕ್ಕೆ ಜ್ಞಾನಾಂಗ ಸ್ವರೂಪವ ಮಾಡಿದನೆಂಬುದೀಗ, ನಾ ನಿನಗೆ ಅಕ್ಕನ ಕೊಟ್ಟು ಎಂಬ ಶಬ್ದಕ್ಕರ್ಥ. ನೀನೆಂದೊಡೆ ಪ್ರಾಣಲಿಂಗವು. ಅಂತಪ್ಪ ಚೈತನ್ಯ ಸ್ವರೂಪವಾದ ಪ್ರಾಣಲಿಂಗವನು ಶರಣ ತನ್ನ ಉನ್ಮನಿಸ್ವರೂಪವಾದ ಮನೋಮಧ್ಯದಲ್ಲಿ ಸಮರಸವ ಮಾಡಿದನೆಂಬುದೀಗ, ನೀನೆನಗೆ ಭಾವನಾದೆ ಎಂಬ ಶಬ್ದಕ್ಕರ್ಥ. ಶರಣ-ಲಿಂಗವೆಂದೆರಡಾದುದು ಒಂದೆ ಪರಬ್ರಹ್ಮವೆಂದರಿದನೆಂಬುದೀಗ, ನಾನು ನೀನು ಏನಹರೆಂಬುದ ತಿಳಿದು ಇಷ್ಟಲಿಂಗಕ್ಕೆ ಸತ್ಕ್ರಿಯಾ ಶಕ್ತಿಯ ಅಂಗವ ಮಾಡಿದನೆಂಬುದೀಗ, ಅಣ್ಣನಿಗೆ ತಂಗಿ ಎಂಬ ಶಬ್ದಕ್ಕರ್ಥ. ಜ್ಞಾನಶಕ್ತಿ ಎಂಬುವಳೀಗ, ಅಕ್ಕನೆಂಬ ಶಬ್ದಕ್ಕರ್ಥ. ಅಂತಪ್ಪ ಸುಜ್ಞಾನಶಕ್ತಿಯನು ಇಷ್ಟಲಿಂಗದಿಂದ ಕಿರಿಯರಾದ ಪ್ರಾಣಲಿಂಗಕ್ಕೆ ಆ ಶಿವಜ್ಞಾನ ಶಕ್ತಿಯ

ಸಂಬಂಧವ ಮಾಡಿದನೆಂಬುದೀಗ, ಅಕ್ಕನಿಗೆ ತಮ್ಮನೆಂಬ ಶಬ್ದಕ್ಕರ್ಥ. ಇಂತಪ್ಪ ಇಷ್ಟಪ್ರಾಣವೆರಡು ಶ್ರೀಗುರುವಿನ ಭಾವದಿಂದ ಉದಯವಾದ ಕಾರಣ ಸಹೋದರವಾಯಿತ್ತೆಂಬುದೀಗ, ಇವರಿಬ್ಬರು ವೃಷ್ಟದಲ್ಲಿ ಒಡಹುಟ್ಟಿದರಾದ ಮತ್ತೆ ಎಂಬ ಶಬ್ದಕ್ಕರ್ಥ. ತಂಗಿಯೆಂದೊಡೆ ಕ್ರಿಯಾಶಕ್ತಿ. ಅಂತಪ್ಪ ಸತ್ಕ್ರಿಯಾಶಕ್ತಿಯಿಂದ ಹುಟ್ಟಿದ ಭಕ್ತಾಂಗನೆ ಪ್ರಾಣಲಿಂಗಕ್ಕೆ ಅಂಗವಾಗಿಹಳೆಂಬುದೀಗ, ತಂಗಿಯ ಮಗಳು ಸೊಸೆಯಾಗಿ ಎಂಬ ಶಬ್ದಕ್ಕರ್ಥ. ಅಕ್ಕನೆಂದೊಡೆ ಜ್ಞಾನಶಕ್ತಿ. ಅಂತಪ್ಪ ಜ್ಞಾನಶಕ್ತಿಯಿಂದ ಹುಟ್ಟಿದ ಇಷ್ಟಲಿಂಗವು ಕ್ರಿಯಾಶಕ್ತಿಗೆ ಗಂಡನಾದ ಸಂಬಂಧದಿಂದ, ಅಕ್ಕನಮಗ ಅಳಿಯನಾದ ಚಿತ್ರವನೋಡಾ ಎಂಬ ಶಬ್ದಕ್ಕರ್ಥ. ಅಖಂಡ ಚಿಚ್ಛಕ್ತಿಯ ನಿಜ ಸುಷುಪ್ತಿಯಿಂದ ಉದಯವಾಗಿ ಎಂಬುದೀಗ, ಒಂದುಯೋನಿಯಲ್ಲಿ ಬಂದುದನರಿಯದೆ ಎಂಬ ಶಬ್ದಕ್ಕರ್ಥ. ಅಜ್ಞಾನ ಶಕ್ತಿಗೆ ಪ್ರಾಣಲಿಂಗವು ಪತಿಯಾದ ಕಾರಣ ನಿನ್ನ ಒಡಹುಟ್ಟಿದವಳಿಗೆ ನೀ ಗಂಡನಾಗಿ ಎಂಬ ಶಬ್ದಕ್ಕರ್ಥ. ಆ ಚಿದ್ಘನ ಲಿಂಗವು ಶರಣನು ಉನ್ಮನಿ ಸ್ವರೂಪವಾದ ಮನವನೊಳಕೊಂಡು ಪ್ರಾಣಲಿಂಗವಾದ ಬಳಿಕ ಆ ಲಿಂಗದಲ್ಲಿ ಬೆರೆಸಿದೆನೆಂಬ ಭಿನ್ನಭಾವವ ತೊಲಗಿಸಿದನೆಂಬುದೀಗ, ಎನಗೆ ನೀ ಭಾವನಾದಹರಿಯ ನಾಚಿಸಬಂದೆ ಕಲಕೇತನಲ್ಲಿ ಕೊಳುಕೊಡೆ ಬೇಡ ಮೇಕಲೇಶ್ವರ ಲಿಂಗನ ಹೊಲಬ ತಿಳಿಯಬಲ್ಲಡೆ ಎಂಬ ಶಬ್ದಕ್ಕರ್ಥ.

೩

ಕ್ರಿಯಾಶಕ್ತಿ ಬ್ರಹ್ಮಂಗೆ ಸರಸ್ವತಿಯಾಗಿ ಬಂದುದನರಿದು,
ಇಚ್ಛಾಶಕ್ತಿ ವಿಷ್ಣುವಿಂಗೆ ಮಹಾಲಕ್ಷ್ಮಿಯಾಗಿ ಬಂದುದನರಿದು,
ಜ್ಞಾನಶಕ್ತಿ ರುದ್ರಂಗೆ ಉಮಾದೇವಿಯಾಗಿ ಸಲೆಸಂದುದನರಿದು
ಇಂತಿ ತ್ರಿವಿಧ ಶಕ್ತಿಗಳ ಮನೋಹರದಲ್ಲಿ;
ತ್ರಿವಿಧ ಮೂರ್ತಿಗಳ ಆಡುವದ ಕಂಡು
ನಾನಾ ಸುಖ ಪರಿಪೂರ್ಣ ಕಳೆಯಿಂದ--
ಕ್ರಿಯಾಶಕ್ತಿ ಅದರ ಸುಖದಿಂದ ಇಚ್ಛಾಶಕ್ತಿ
ಈ ಉಭಯಾಶಕ್ತಿ ಸನ್ಮತವಾಗಿ ನಿಂದುಳುಮೆ ಜ್ಞಾನಶಕ್ತಿ
ಇಂತಿ ತ್ರಿವಿಧ ಶಕ್ತಿಯು ಒಡಹುಟ್ಟಿ ನಾಬಂದೆ
ಬ್ರಹ್ಮಂಗೆ ಕಿರುತಂಗಿಯ ಕೊಟ್ಟು ಮೈದುನನ ಮಾಡಿಕೊಂಡೆ
ವಿಷ್ಣುವಿಂಗೆ ನಡುವಿನಾಕೆಯ ಕೊಟ್ಟು
ಬಿಡುಮುಡಿಯ ಮೈದುನನ ಮಾಡಿಕೊಂಡೆ
ರುದ್ರಂಗೆ ಹಿರಿಯಕ್ಕನ ಕೊಟ್ಟು ಎನ್ನೊಡಗೂಡುವ ಭಾವನ ಮಾಡಿಕೊಂಡೆ
ಕಿರುತಂಗಿಯ ಗಂಡಸತ್ತ, ನಡು ತಂಗಿಯ ಗಂಡಬಿಟ್ಟ,

ಹಿರಿಯಕ್ಕನ ಕೊಂದ ಭಾವ; ಇಂತಿ ಮೂವರು ಕೊಳುಕೊಡೆ
ಪಿಷ್ಟ ಸಂಬಂಧ ನಷ್ಟವಾಯಿತ್ತು
ಕಲು ಹೃದಯವ ಕಲಕವಲ್ಲ ಬಂದೆಗೆಲ್ಲ
ಸೋಲವೆಂಬ ಟಗರ ಕೋಡ ಹಿಡಿದು
ಮೋಕಲೇಶ್ವರ ಲಿಂಗವಲ್ಲದಿಲ್ಲಾ ಎಂದು ನಲಿದು ಕುಣಿದಾಡುತ್ತ ಬಂದೆ

ಟೀಕು:— ಪರಶಿವನು ಸೃಷ್ಟಿಯ ಮಾಡಲೋಸುಗವಾಗಿ ರಜೋಗುಣ ಸಂಬಂಧವಾದ ಬ್ರಹ್ಮಂಗೆ ಸರಸ್ವತಿಯಾದಳು ಕ್ರಿಯಾ ಶಕ್ತಿ ಎಂಬುದೀಗ, ಕ್ರಿಯಾ ಶಕ್ತಿ ಬ್ರಹ್ಮಂಗೆ ಸರಸ್ವತಿಯಾಗಿ ಬಂದುದನರಿದು ಎಂಬ ಶಬ್ದಕ್ಕರ್ಥ. ಲೋಕದ ಸ್ಥಿತಿಯ ನಡೆಸಲೋಸ್ಕರ ಇಚ್ಛಾ ಶಕ್ತಿ ವಿಷ್ಣುವಿಂಗೆ ಮಹಾಲಕ್ಷ್ಮಿಯಾಗಿ ಬಂದುದನರಿದು ಎಂಬುದೀಗ, ಇಚ್ಛಾ ಶಕ್ತಿ ವಿಷ್ಣುವಿಗೆ ಮಹಾಲಕ್ಷ್ಮಿಯಾಗಿ ಬಂದುದನರಿದು ಎಂಬ ಶಬ್ದಕ್ಕರ್ಥ. ಜಗತ್ ಸಂಹಾರ ಮಾಡುವದಕ್ಕೋಸ್ಕರ ಜ್ಞಾನ ಶಕ್ತಿ ರುದ್ರಂಗೆ ಉಮಾದೇವಿಯಾದಳೆಂಬುದೀಗ, ಜ್ಞಾನ ಶಕ್ತಿ ರುದ್ರಂಗೆ ಮಾದೇವಿಯಾಗಿ ಸಲೆ ಸಂದುದನರಿದು ಎಂಬ ಶಬ್ದಕ್ಕರ್ಥ. ಇಂತಪ್ಪ ತತ್ವ ತ್ರಯಂಗಳಲ್ಲಿ ಶಕ್ತಿ ತ್ರಯದೊಡನೆ ಕೂಡಿ ಉತ್ಪತ್ತಿ ಸ್ಥಿತಿ ಸಂಹಾರಗಳ ಮಾಡುವದ ಶರಣ ಸುಜ್ಞಾನ ದೃಷ್ಟಿಯಿಂದ ಕಂಡನೆಂಬುದೀಗ, ಇಂತಿ ತ್ರಿವಿಧ ಶಕ್ತಿಗಳ ಮನೋಹರದಲ್ಲಿ ತ್ರಿವಿಧ ಮೂರ್ತಿಗಳು ಆಡುವದ ಕಂಡ ಎಂಬ ಶಬ್ದಕ್ಕರ್ಥ. ಇಂತಪ್ಪ ತತ್ವ ತ್ರಯಂಗಳಲ್ಲಿ ಕೂಡಿರ್ದ ಜೀವಂಗೆ ಶಿವ ಕೃಪೆಯಿಂದ ಸುಜ್ಞಾನೋದಯವಾಗಿ ಗುರೋಪಾವಸ್ಥೆಯ ಮಾಡಲು ಶ್ರೀ ಗುರು ಕರುಣಿಸಿ ಪ್ರಸನ್ನವಾಗಿ ದೀಕ್ಷೆ ತ್ರಯಂಗಳಿಂ ತನು ತ್ರಯಂಗಳ ಭಸ್ಮವ ಮಾಡಿ ಆ ತನು ತ್ರಯಂಗಳಲ್ಲಿ ತ್ರಿವಿಧ ಲಿಂಗ ಸಂಬಂಧವ ಮಾಡಲು ಆ ತ್ರಿವಿಧ ಲಿಂಗಕ್ಕೆ ರೂಪು-ರುಚಿ-ಪರಿಣಾಮವೆಂಬ ತ್ರಿವಿಧ ಪದಾರ್ಥವನು ಕ್ರಿಯಾ-ಜ್ಞಾನ-ಇಚ್ಛೆಯೆಂಬ ತ್ರಿವಿಧ ಶಕ್ತಿಗಳ ಮುಖದಿಂದರ್ಪಿಸಿದ, ತ್ರಿವಿಧ ಪ್ರಸಾದವ ಸ್ವೀಕರಿಸಿದ ಶರಣನು ತ್ರಿವಿಧ ಶಕ್ತಿಗಳನೊಳಕೊಂಡು ತ್ರಿವಿಧ ಭಕ್ತಿ ಸ್ವರೂಪ ತಾನಾಗಿರ್ದನೆಂಬುದೀಗ, ನಾ ನಾ ಸುಖ ಪರಿಪೂರ್ಣ ಕಳಕಳಿಯಿಂದ ಕ್ರಿಯಾ ಶಕ್ತಿ ಅಪರ ಸುಖದಿಂದ ಇಚ್ಛಾಶಕ್ತಿ ಈ ಉಭಯ ಶಕ್ತಿ ಸನ್ನಹಿತವಾಗಿ ನಿಂದುಳುಮೆ ಜ್ಞಾನ ಶಕ್ತಿ, ಇಂತಿ ತ್ರಿವಿಧ ಶಕ್ತಿಯ ಒಡಹುಟ್ಟಿ ನಾ ಬಂದೆನೆಂಬ ಶಬ್ದಕ್ಕರ್ಥ. ಶರಣ ತನ್ನ ಆಚಾರಾಂಗದಲ್ಲಿ ಸಂಬಂಧವಾದ ಇಷ್ಟ ಲಿಂಗಕ್ಕೆ ಕ್ರಿಯಾ ಶಕ್ತಿಯ ಸಂಬಂಧವ ಮಾಡಿದನೆಂಬುದೀಗ, ಬ್ರಹ್ಮಂಗೆ ಕಿರು ತಂಗಿಯ ಕೊಟ್ಟು ಎಂಬ ಶಬ್ದಕ್ಕರ್ಥ. ಅಂತಪ್ಪ ಮಹಾ ಘನಲಿಂಗವ ತನ್ನಾಚಾರಾಂಗದಲ್ಲಿ ಸಮರಸವ ಮಾಡಿದನೆಂಬುದೀಗ, ಮೈದುನನ ಮಾಡಿಕೊಂಡೆನೆಂಬ ಶಬ್ದಕ್ಕರ್ಥ. ಶರಣ ತನ್ನ ಹೃದಯ ಕಮಲ ಕರ್ಣಿಕಾ ಮಧ್ಯದಲ್ಲಿ ಚಿತ್ ಪ್ರಕಾಶವಾಗಿ ತೊಳಗಿ ಬೆಳಗುತ್ತಿರ್ದ ಪ್ರಾಣಲಿಂಗಕ್ಕೆ ಜ್ಞಾನಶಕ್ತಿಯ ಲಿಂಗವ ಮಾಡಿದನೆಂಬುದೀಗ, ವಿಷ್ಣುವಿಂಗೆ ನಡುವಿನಾಕೆಯ ಕೊಟ್ಟು ಎಂಬ ಶಬ್ದಕ್ಕರ್ಥ. ತನ್ನ ಉನ್ಮನಿ ಸ್ವರೂಪವಾದ ಮನೋ ಮಧ್ಯದಲ್ಲಿ

ಪ್ರಾಣಲಿಂಗವ ಸಮರಸವ ಮಾಡಿದನೆಂಬುದೀಗ, ಬಿಡುಮುಡಿಯ ಮೈದುನನ ಮಾಡಿಕೊಂಡೆನೆಂಬ ಶಬ್ದಕ್ಕರ್ಥ. ಕಾರಣ ದೇಹ ಸಂಬಂಧವಾದ ಭಾವಲಿಂಗಕ್ಕೆ ಇಚ್ಛಾಶಕ್ತಿಯ ಸಂಗವ ಮಾಡಿದನೆಂಬುದೀಗ, ರುದ್ರಂಗೆ ಹಿರಿಯಕ್ಕನ ಕೊಟ್ಟೆ ಎಂಬ ಶಬ್ದಕ್ಕರ್ಥ. ಆ ಭಾವಲಿಂಗವನು ತನ್ನ ಭಾವವಾದಾತ್ಮನಲ್ಲಿ ಸಮರಸವ ಮಾಡಿದನೆಂಬುದೀಗ, ಎನ್ನೊಡಗೂಡುವ ಭಾವನ ಮಾಡಿಕೊಂಡೆನೆಂಬ ಶಬ್ದಕ್ಕರ್ಥ, ಆ ಕ್ರೀಯಲ್ಲಿ ಸಂಬಂಧವಾದ ಇಷ್ಟಲಿಂಗವು ಸದ್ರೂಪವಾಗಿ ನಿಷ್ಪತಿಯಾಯಿತ್ತೆಂಬುದೀಗ, ಕಿರುತಂಗಿಯ ಗಂಡ ಸತ್ತನೆಂಬ ಶಬ್ದಕ್ಕರ್ಥ. ಅಂತು ಪ್ರಾಣಲಿಂಗವು ಶರಣನ ಸುಜ್ಞಾನವನೊಳಕೊಂಡು ಸಕಲ ಕರಣಂಗಳ ನಿವೃತ್ತಿ ಮಾಡುತ್ತಿಹುದೆಂಬುದೀಗ, ನಡು ತಂಗಿಯ ಗಂಡ ಬಿಟ್ಟನೆಂಬ ಶಬ್ದಕ್ಕರ್ಥ. ಆ ಚಿಚ್ಛಕ್ತಿಯ ನೊಳಕೊಂಡು ತೊಳಗಿ ಬೆಳಗುತ್ತಿಹುದು ಭಾವಲಿಂಗ, ಆ ಲಿಂಗದಲ್ಲಿ ಬೆರೆಸಿದೆನೆಂಬ ಭಿನ್ನ ಭಾವವ ನಿವೃತ್ತಿ ಮಾಡಿದನೆಂಬುದೀಗ ಹಿರಿಯಕ್ಕನ ಕೊಂದ ಭಾವ ಇಂತಿ ಮೂವರ ಕೊಳು ಕೊಡೆ ಪಿಷ್ಟ ಸಂಬಂಧ ನಷ್ಟವಾಯಿತ್ತು ಕಲುಹೃದಯವ ಕಲಕಮುಲ್ಲ ಬಂದೆಗೆಲ್ಲಸೋಲವೆಂಬ ಟಗರ ಕೋಡಹಿಡಿದು ಮೇಕಲೇಶ್ವರ ಲಿಂಗ ವಲ್ಲದಿಲ್ಲಾ ಎಂದು ನಲಿದು ಕುಣಿದಾಡುತ್ತ ಬಂದೆನೆಂಬ ಶಬ್ದಕ್ಕರ್ಥ.

೪

ಕಾಲ ನಾಲ್ಕು ಮುರಿದು ಕೋಡೆರಡನಿತ್ತು
ಆರಡಗಿತ್ತು ಟಗರಿನ ಹಣೆಯಲ್ಲಿ;
ಮೂರು ಹೋಯಿತ್ತು ಕೋಡೆರಡರಲ್ಲಿ
ಎಂಟು ಹೋಯಿತ್ತು ಕಾಲು ನಾಲ್ಕರಲ್ಲಿ
ಟಗರಿನ ಜೀವ ಉಭಯ ಸನ್ನೆಯಲ್ಲಿ ಹೋಯಿತ್ತು
ಇಂತು ಕಲಕೇತನ ವಿದ್ಯವ ಧರಿಸಿ ಮಹಾ ಶರಣರ
ಮನವ ಮಂದಿರವಲ್ಲಿ ಕಲಕೇತನ ಒಲವರವಲ್ಲಿ
ಮೂಡಿ ಮುಳುಗು ಬೇಡಾ ಎಂದು ಸಾರಿ ಮಾರಬಂದೆ
ಶುದ್ಧ ಪ್ರಸಾದವೆನಗುಂಟು, ಸಿದ್ಧ ಪ್ರಸಾದವೆನಗುಂಟು,
ಪ್ರಸಿದ್ಧ ಪ್ರಸಾದ ನಿಮಗುಂಟು
ಆ ಪ್ರಸನ್ನ ಪ್ರಸಾದವೆನಗೆ ಬೇಕೆಂದು–
ಮೇಕಲೇಶ್ವರ ಲಿಂಗವ ನೊಡಗೂಡಿಕೊಂಡು ಬೇಡ ಬಂದೆ.

**ಟೀಕು:**— ಸುಜ್ಞಾನೋದಯವಾದ ಶರಣನು ಮನ—ಬುದ್ಧಿ—ಚಿತ್ತ ಅಹಂಕಾರವೆಂಬ ಚತುಃಕರಣಗಳನು ಸದ್ಭಾವಹಸ್ತದಿಂ ನಿವೃತ್ತಿಮಾಡಿದನೆಂಬುದೀಗ, ಕಾಲ ನಾಲ್ಕಮುರಿದು ಎಂಬ ಶಬ್ದಕ್ಕರ್ಥ. ಅಂತು ಚತುಃಕರಣಗಳು ನಷ್ಟವಾದಲ್ಲಿ ಜೀವನ ಅಹಂಕಾರ-ಮಮಕಾರವೆಂಬ ಕೋಡು ಭಗ್ನವಮಾಡಿದನೆಂಬುದೀಗ, ಕೋಡೆರಡ ಕಿತ್ತು ಎಂಬ ಶಬ್ದಕ್ಕರ್ಥ. ಟಗರೆಂದೊಡೆ ಸಜ್ಜೀವನು,

ಹಣೆಯೆಂದೊಡೆ ಶಿವಾದ್ವೈತ ಭಕ್ತಿ. ಆ ಭಕ್ತಿಯಿಂ ಷಡೇಂದ್ರಿಯಂಗಳ ವರ್ತನೆ ನಿವೃತ್ತಿಯಾಯಿತ್ತೆಂಬುದೀಗ, ಆರಡಗಿತ್ತು ಟಗರಿನ ಹಣೆಯಲ್ಲಿ ಎಂಬ ಶಬ್ದಕ್ಕರ್ಥ. ಅಂತು ಅಹಂಕಾರ–ಮಮಕಾರಂಗಳೊಡನೆ ತನುತ್ರಯಂಗಳು ನಿವೃತ್ತಿಯಾದವೆಂಬುದೀಗ, ಮೂರಹೋಯಿತ್ತು ಕೋಡೆರಡರಲ್ಲಿ ಎಂಬ ಶಬ್ದಕ್ಕರ್ಥ. ಅಂತು ಸುಜ್ಞಾನ ಸನ್ನಹಿತವಾದ ಶರಣನ ಚತುಃಕರಣಂಗಳಳಿದ ಕೋಡೇ ಅಷ್ಟಮದಂಗಳು ನಷ್ಟವಾದವೆಂಬುದೀಗ, ಎಂಟು ಹೋಯಿತ್ತು ಕಾಲು ನಾಲ್ಕರಲ್ಲಿ ಎಂಬ ಶಬ್ದಕ್ಕರ್ಥ. ಗುರುಕಾರುಣ್ಯದಿಂದ ಲಿಂಗಾಂಗ ಸಂಬಂಧಿಯಾದ ಶರಣನು ಜ್ಞಾನಕ್ರೀಯಿಂ ಮಥನಿಸುತ್ತಿರಲು ಜೀವನ ಜೀವಭಾವ ನಿವೃತ್ತಿಯಾಯಿತ್ತೆಂಬುದೀಗ, ಟಗರಿನ ಜೀವ ಉಭಯ ಸನ್ನೆಯಲ್ಲಿ ಹೋಯಿತ್ತು ಎಂಬ ಶಬ್ದಕ್ಕರ್ಥ. ಅಂತು ಶಿವಜ್ಞಾನ ಪ್ರಕಾಶವಾಗಿ ಶರಣನ ನಿಜಾನು ಭಾವಾಂತರಂಗದಲ್ಲಿ ಸುಜ್ಞಾನ ಸಮರಸ ಭೋಧೆಯಲ್ಲಿರ್ದನೆಂಬುದೀಗ, ಇಂತಿ ಕಲಕೇತನ ವಿದ್ಯೆವ ಧರಿಸಿ ಮಹಾ ಶರಣರ ಮನದ ಮಂದಿರದಲ್ಲಿ ಎಂಬ ಶಬ್ದಕ್ಕರ್ಥ. ಪರಶಿವನು ಕೊಡುವ ಖಂಡಿತ ಫಲಪದಂಗಳ ಬಯಸಬೇಡಾ ಎಂದು ಚಿತ್ ಸ್ವರೂಪನಾದ ಶರಣ ಸುಜ್ಞಾನ ಬೋಧೆಯ ಬೋಧಿಸುತ್ತಿರ್ದನೆಂಬುದೀಗ, ಕಲಕೇತನ ವಲಯದಲ್ಲಿ ಮೂಡಿ ಮುಳುಗಬೇಡಾ ಎಂದು ಸಾರಿ ಮಾರ ಬಂದನೆಂಬ ಶಬ್ದಕ್ಕರ್ಥ. ಸದ್ರೂಪವಾದ ಗುರುವಿಂಗೆ ರೂಪು ಅರ್ಪಿತವಾದಲ್ಲಿ ಶುದ್ಧಪ್ರಸಾದ ಚಿದ್ರೂಪವಾದ ಲಿಂಗಕ್ಕೆ ರುಚಿ ಅರ್ಪಿತವಾದಲ್ಲಿ ಸಿದ್ಧ ಪ್ರಸಾದ ಈ ಉಭಯ ಪ್ರಸಾದವ ಶರಣ ಚಿದ್ದ್ವಾರದಿಂ ಸ್ವೀಕರಿಸುತ್ತಿರ್ದನೆಂಬುದೀಗ, ಶುದ್ಧ ಪ್ರಸಾದವೆನಗುಂಟು ಎಂಬ ಶಬ್ದಕ್ಕರ್ಥ. ಷಟುಸ್ಥಲ ಬ್ರಹ್ಮಿಗಳಾದ ವೀರ ಮಾಹೇಶ್ವರರು ಆನಂದ ಸ್ವರೂಪವಾದ ಸುಜ್ಞಾನ ಜಂಗಮ ಲಿಂಗಕ್ಕೆ ಪರಿಣಾಮ ಪದಾರ್ಥವ ನರ್ಪಿಸಿ ಆ ಜಂಗಮ ಲಿಂಗದಿಂದ ಉದಯವಾದ ಪ್ರಸಿದ್ಧ ಪ್ರಸಾದವ ಚಿದ್ದ್ವಾರದಿಂ ಸ್ವೀಕರಿಸುತ್ತಿಹರೆಂಬುದೀಗ, ಪ್ರಸಿದ್ಧ ಪ್ರಸಾದ ನಿಮಗುಂಟು ಎಂಬ ಶಬ್ದಕ್ಕರ್ಥ. ಆ ನಿರ್ಮಲ ಸ್ವರೂಪವಾದ ಪ್ರಸನ್ನ ಪ್ರಸಾದವ ಸತ್ಪಥ ಮಾರ್ಗವಿಡಿದು ಸಾಧಿಸಬೇಕಾಗಿ ಶರಣಲಿಂಗದಲ್ಲಿ ಜ್ಞಾನ ಕ್ರಿಯಾಚಾರನೆ ವಿಡಿದಿಯ್ಯುತ್ತಿರ್ದನೆಂಬುದೀಗ, ಪ್ರಸನ್ನ ಪ್ರಸಾದವೆನಗೆ ಬೇಕೆಂದು ಮೇಕಲೇಶ್ವರ ಲಿಂಗವ ನೊಡಗೂಡಿಕೊಂಡು ಬೇಡಬಂದೆನೆಂಬ ಶಬ್ದಕ್ಕರ್ಥ.

---

## ಕಾಮಾಟದ ಭೀಮಣ್ಣನವರ ವಚನಗಳು

೧

ಐಗೈಮನೆ ನಾಗೈಕಂಭ ಮೂಗೈತೊಲೆ ಭೇದ ಕರವಳ ಹಾಕಿನೋಡಿ
ಅರಿದಡೆ ಆಯು ಬಂದಿತ್ತು; ಮರೆದಡೆ ಆಯು ಹೋಯಿತ್ತು;
ಮೂಗಯ್ಯ ಕರದಲ್ಲಿ ಇದರ ರೆಕೆಯಾಗಿ,
ಹೇಳಾ ದಾರೇಶ್ವರಾ, ನಿನ್ನಾಲಯಕ್ಕೆ !

ಟೀಕು:— ಚಿದಾಂಶಿಕನಾದ ಆತ್ಮಂಗೆ ದೇಹಸಂಬಂಧವಾಗಲು ಪಂಚಭೌತಿಕವೆ ಗುರುವಾಗಿರ್ಪುದೆಂಬುದೀಗ, ಐಗ್ರಮನೆ ಎಂಬ ಶಬ್ದಕ್ಕರ್ಥ. ಆ ಗೃಹಕ್ಕೆ ಚತುಃಕರಣಂಗಳೆ ಕಂಭಂಗಳಾಗಿರ್ಪುದೆಂಬುದೀಗ, ನಾಗ್ರೈಕಂಭವೆಂಬ ಶಬ್ದಕ್ಕರ್ಥ. ಆ ಗೃಹಕ್ಕೆ ತನುತ್ರಯಂಗಳೆ ತೊಲೆಯಾಗಿರ್ಪವೆಂಬುದೀಗ, ಮೂಗ್ರೈತೊಲೆಯೆಂಬ ಶಬ್ದಕ್ಕರ್ಥ. ಸುಜ್ಞಾನೋದಯವಾದ ಜ್ಞಾನಕಲಾತ್ಮನು ಶಿವಾಪೇಕ್ಷೆಯ ಮುಂದುಗೊಂಡು ಗುರೋಪಾವಸ್ಥೆಯ ಮಾಡುತ್ತಿರ್ದನೆಂಬುದೀಗ, ಭೇದಕರವಳ ಹಾಕಿನೋಡಿ ಎಂಬ ಶಬ್ದಕ್ಕರ್ಥ. ತನ್ನ ತಾನರಿವಡೆ ಲಿಂಗ ಸಂಬಂಧವಾಯಿತ್ತು, ತನ್ನ ತಾ ಮರೆದರೆ ಅಜ್ಞಾನವು ಎಡೆಗೊಂಡಿತ್ತು ಎಂಬುದೀಗ, ಅರಿದಡೆ ಅಯುಬಂದಿತ್ತು, ಮರೆದಡೆ ಆಯು ಹೋಯಿತ್ತು ಎಂಬ ಶಬ್ದಕ್ಕರ್ಥ. ಚಿದ್ಘನ ಲಿಂಗಕ್ಕೆ ಆಶ್ರಯವಾದ ಚಿದ್ಗೃಹಕ್ಕೆ ತ್ರಿವಿಧಲಿಂಗದ ಭಕ್ತಿಯಿಂದಲ್ಲದೆ ಮುಕ್ತಿಯಿಲ್ಲವೆಂದು ಶಿವಾಪೇಕ್ಷೆಯ ಮುಂದುಗೊಂಡು ಶಿವಾನುಭವಿಗಳ ಬೆಸಗೊಳ್ಳುತ್ತಿರ್ದ ಶಿವಶರಣನೆಂಬುದೀಗ, ಮೂಗಯ್ಯ ಕರದಲ್ಲಿ ಐದರ ರೇಕೆಯಾಗಿ ಹೇಳಾ ದಾರೇಶ್ವರ ನಿನ್ನಾಲಯಕ್ಕೆ ಎಂಬ ಶಬ್ದಕ್ಕರ್ಥ.

೨

ಬೋದಿಗೆ ನಾಲ್ಕು, ಕಂಭವೆಂಟ ಅರಗು, ಗಾರಲು ಹತ್ತು,
ತೊಲೆ ಒಂದೆ ಏರಿತ್ತು; ಮುಚ್ಚಳ ವಲಗೆಗೆ ದಿಕ್ಕುಗಾಣದೆ
ಕರ್ಮ ಕಾಂಡಿಗಳೆಲ್ಲರು ಕಾಮನ ಕಾಮಾಟಕ್ಕೊಳಗಾಗಿ ಹೋದರು;
ಈ ಗುಣವ ನಾನು ನೀನೆಂಬುದ ತಿಳಿದು ನೋಡು
ದಾರೇಶ್ವರ ಲಿಂಗವನು ಅರಿವುದಕ್ಕೆ !

ಟೀಕು:— ಶಿವಾಂಶೀಕನಾದ ಆತ್ಮಂಗೆ ದೇಹಸಂಬಂಧವಾಗಲು ಅಂತಃಕರಣಂಗಳೆ ಬೋದಿಗೆಯಾಗಿ ಅಷ್ಟತನುಗಳೆ ಕಂಭಗಳಾದವೆಂಬುದೀಗ, ಬೋದಿಗೆ ನಾಲ್ಕು ಕಂಭವೆಂಬ ಶಬ್ದಕ್ಕರ್ಥ, ಆ ಜೀವಂಗೆ ದಶವಾಯುಗಳೆ ದುಶ್ಚರಿತ್ರವಾಗಿ ಅಜ್ಞಾನಸ್ವರೂಪವಾದ ಮೂಲಹಂಕಾರ ತಮೋಗುಣ ಸಂಯುಕ್ತವಾದ ಕಾರಣತನು ಸಂಬಂಧವಾಗಿಹುದೆಂಬುದೀಗ, ಅರಗುಗಾಲು ಹತ್ತು ತೊಲೆ ಒಂದೇ ಏರಿತ್ತು ಎಂಬ ಶಬ್ದಕ್ಕರ್ಥ. ಜೀವನ ಲಿಂಗಕ್ಕೆ ಲಿಂಗಾಚಾರಗಳವಡಿಸಿಕೊಡುವ ಜ್ಞಾನಗುರು ದೇಹೇಂದ್ರಿಯ ವಿಷಯ ಸುಖವನು ಅನುಭವಿಸಿ ಕರ್ಮಕಾಂಡಿಗಳಪ್ಪ ಸಿದ್ಧಾಂತಿಗಳು ಕಾಲನ ಲಯೋಧರ್ಮಕ್ಕೆ ಒಳಗಾದವರೆಂಬುದೀಗ, ಮುಚ್ಚಳವಲಗೆಗೆ ದಿಕ್ಕುಗಾಣದೆ ಕರ್ಮಕಾಂಡಿಗಳೆಲ್ಲರು ಕಾಮನ ಕಾಮಾಟಕ್ಕೊಳಗಾಗಿ ಹೋದರು ಎಂಬ ಶಬ್ದಕ್ಕರ್ಥ. ಭಿನ್ನ ಭಾವವಳಿದು ಸಮ್ಯಜ್ಞಾನಿಯಾದ ಶರಣನು ಅಂಗ-ಲಿಂಗವೆಂಬ ಭಿನ್ನವಳಿದು ಅಖಂಡಲಿಂಗವಾಗಿರ್ಪನೆಂಬುದೀಗ, ಈ ಗುಣವ ನಾನು ನೀನೆಂಬುದ ತಿಳಿದು ನೋಡು ದಾರೇಶ್ವರ ಲಿಂಗವನು ಅರಿವುದಕ್ಕೆ ಎಂಬ ಶಬ್ದಕ್ಕರ್ಥ.

ಮೂರು ಕೋಲು ಬ್ರಹ್ಮಂಗೆ ಅಳದು ಕೊಟ್ಟೆ !
ನಾಲ್ಕು ಕೋಲು ವಿಷ್ಣುವಿಂಗೆ ಅಳದು ಕೊಟ್ಟೆ !
ಐದು ಕೋಲು ರುದ್ರಂಗೆ ಅಳದು ಕೊಟ್ಟೆ !
ಆರು ಕೋಲು ಈಶ್ವರಂಗೆ ಅಳದು ಕೊಟ್ಟೆ !
ಒಂದು ಕೋಲು ಸದಾಶಿವಂಗೆ ಅಳದು ಕೊಟ್ಟೆ !
ಇಂತಿ ಐವರು ಕೋಲಿನ ಒಳಹೊರಗಿನಲ್ಲಿ—
ಅಳಲುತ್ತ-ಬಳಲುತ್ತ ಒಳಗಾದರು
ಇಂತಿ ಒಳಹೊರಗೆ ಶೋಧಿಸಿಕೊಂಡು ಅಳಿವುಳಿವಿನ
ವಿವರವನರಿಯಬೇಕು ದಾರೇಶ್ವರ ಲಿಂಗವನರಿವುದಕ್ಕೆ !

**ಟೀಕು:**— ಜ್ಞಾನ ಕಲಾತ್ಮಂಗೆ ದೇಹ ಸಂಬಂಧವಾಗಲು ಆ ದೇಹದ ವಿವರವೆಂತೆಂದೊಡೆ: ಗುಣ ತ್ರಯ ಯುಕ್ತವಾದ ಸ್ಥೂಲತನು ಬ್ರಹ್ಮನ ಸೃಷ್ಟಿಯೊಳಗಾಗಿಹುದೆಂಬುದೀಗ, ಮೂರು ಕೋಲು ಬ್ರಹ್ಮಂಗೆ ಅಳದು ಕೊಟ್ಟೆನೆಂಬ ಶಬ್ದಕ್ಕರ್ಥ. ಚತುಃಕರಣಯುಕ್ತವಾದ ಸೂಕ್ಷ್ಮತನು ವಿಷ್ಣುವಿನ ಪ್ರಾರಬ್ಧ ಭೋಕ್ತೃಕರ್ಮವೆಂಬ ಸ್ಥಿತಿಗೊಳಗಾಗಿರ್ಪುದು ಎಂಬುದೀಗ, ನಾಲ್ಕು ಕೋಲು ವಿಷ್ಣುವಿಂಗೆ ಅಳದು ಕೊಟ್ಟೆನೆಂಬ ಶಬ್ದಕ್ಕರ್ಥ. ಪಂಚಕರಣ ಯುಕ್ತವಾದ ಕಾರಣತನು ರುದ್ರನ ಲಯೋಧರ್ಮವೆಂಬ ಹೊಡೆಗಿಚ್ಚಿನೊಳಗಾಗಿಹುದೆಂಬುದೀಗ, ಐದು ಕೋಲು ರುದ್ರಂಗೆ ಅಳದು ಕೊಟ್ಟೆನೆಂಬ ಶಬ್ದಕ್ಕರ್ಥ. ಷಡ್ವಿಧಾವಸ್ಥೆಯನುಳ್ಳ ಜೀವರು ಆಹಾರ-ವ್ಯವಹಾರ-ವಿಷಯಜ್ಞಾನಯುಕ್ತರಾಗಿ ಈಶ್ವರನ ತಿರೋಧಾನ ಶಕ್ತಿಯಲ್ಲಿ ಸಿಕ್ಕೆಗೊಳಗಾಗಿರ್ಪರೆಂಬುದೀಗ, ಆರು ಕೋಲು ಈಶ್ವರಂಗೆ ಅಳದು ಕೊಟ್ಟೆನೆಂಬ ಶಬ್ದಕ್ಕರ್ಥ. ಅಜ್ಞಾನ-ಅಹಂಕಾರ ಯುಕ್ತವಾಗಿರ್ಪ ಜೀವರು ಸದಾಶಿವನ ಅನುಗ್ರಹ ಶಕ್ತಿಯೆಂಬ ಶಿಖಿಗೊಳಗಾಗಿರ್ಪರೆಂಬುದೀಗ, ಒಂದು ಕೋಲ ಸದಾಶಿವಂಗೆ ಅಳದು ಕೊಟ್ಟೆನೆಂಬ ಶಬ್ದಕ್ಕರ್ಥ. ಇಂತು ಐದು ತತ್ವಂಗಳು ಬ್ರಹ್ಮಾಂಡದಲ್ಲಿಯೆ ಹುಟ್ಟಿ ಆ ಬ್ರಹ್ಮಾಂಡದ ವ್ಯಾಪಾರ ಬಲ್ಲವರಾಗಿ ಅಲ್ಲಿಯೇ ಸುಖ-ದುಃಖಗಳನ್ನು ಅನುಭವಿಸುತ್ತ ಅಳಿವುಳಿವಿಗೊಳಗಾದರೆಂಬುದೀಗ, ಇಂತಿ ಐವರು ಕೋಲಿನ ಒಳ-ಹೊರಗಿನಲ್ಲಿಅಳಲುತ್ತ-ಬಳಲುತ್ತ ಒಳಗಾದರುಎಂಬ ಶಬ್ದಕ್ಕರ್ಥ.ಇಂತಿವರ ಅಳಿವುಳಿವ ಹೊದ್ದದೆ ಅಭಿನ್ನಜ್ಞಾನಿಯಾಗಿರ್ಪ ಶರಣನು ಜನನ-ಮರಣಂಗಳನಳಿದು ಲಿಂಗವಾಗಿರ್ಪನೆಂಬುದೀಗ, ಇಂತಿ ಒಳ-ಹೊರಗೆ ಶೋಧಿಸಿಕೊಂಡು ಅಳಿವುಳಿವಿನ ವಿವರವನರಿಯಬೇಕು ದಾರೇಶ್ವರ ಲಿಂಗವನರಿವುದಕ್ಕೆ ಎಂಬ ಶಬ್ದಕ್ಕರ್ಥ.

# ಉಗ್ಘಡಿಸುವ ಗಬ್ಬಿದೇವಯ್ಯನವರ ವಚನಗಳು

೧

ಒಂದು ಬಾಗಿಲಲ್ಲಿ ಇಬ್ಬರ ತಡವೆ, ಎರಡು ಬಾಗಿಲಲ್ಲಿ ಮೂವರ ತಡವೆ,
ಆರು ಬಾಗಿಲಲ್ಲಿ ಒಬ್ಬನ ತಡವೆ, ಒಂಭತ್ತು ಬಾಗಿಲಲ್ಲಿ ನಿಂದು ನೋಡಲಾಗಿ,
ಕೂಡಲ ಸಂಗಮದೇವರಲ್ಲಿ ಬಸವಣ್ಣ ಎತ್ತ ಹೋದನೆಂದರಿಯೆ !

**ಟೀಕು:—** ಸುಜ್ಞಾನೋದಯವಾದ ಶರಣನು ಶಿವಾದ್ವೈತ ಭಕ್ತಿಯಲ್ಲಿ ನಿರ್ಧರವಾಗಿ ನಿಂದು ಶ್ರೀ ಗುರು ಕಾರುಣ್ಯದಿಂ ದೇಹ-ಪ್ರಾಣಂಗಳ ವರ್ತನೆಯ ನಿವೃತ್ತಿ ಮಾಡಿ ದೇಹಕ್ಕಾಚಾರ, ಪ್ರಾಣನಲ್ಲರಿವು ಸಂಬಂಧವಾಯಿತ್ತೆಂಬುದೀಗ ಒಂದು ಬಾಗಿಲಲ್ಲಿ ಇಬ್ಬರ ತಡವೆ, ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನ ಕ್ರೀಯಲ್ಲಿ ಸಂಬಂಧವಾದ ಇಷ್ಟ-ಪ್ರಾಣ ಲಿಂಗದಾಚರಣೆಯಿಂದ ಜೀವ ತ್ರಯಂಗಳು ನಷ್ಟವಾದವೆಂಬುದೀಗ, ಎರಡು ಬಾಗಿಲಲ್ಲಿ ಮೂವರ ತಡವೆ ಎಂಬ ಶಬ್ದಕ್ಕರ್ಥ. ಅಂತು ವಿಶ್ವ ತೈಜಸನ ಪ್ರಜ್ಞರೆಂಬ ಜೀವ ತ್ರಯಂಗಳು•ಇಷ್ಟ-ಪ್ರಾಣ-ಭಾವಲಿಂಗದಲ್ಲಿ ಏಕಾರ್ಥವಾದ ಶರಣನು ಷಡೇಂದ್ರಿಯ ದ್ವಾರದಲ್ಲಿ ಚರಿಸುತ್ತಿಹುದೆ ಮನಸ್ಸು; ಆ ಮನೋ ಪ್ರಕೃತಿಯ ಸುಜ್ಞಾನ ಬೋಧೆಯಿಂ ಛೇದಿಸಿ ಉನ್ಮನಿ ತತ್ವ ಸ್ವರೂಪಿನಿಂ ಲಿಂಗದಲ್ಲಿ ಏಕಾರ್ಥವ ಮಾಡಿದನೆಂಬುದೀಗ, ಆರು ಬಾಗಿಲಲ್ಲಿ ಒಬ್ಬನ ತಡವೆ ಎಂಬ ಶಬ್ದಕ್ಕರ್ಥ. ಆ ಮನಸ್ಸಲಿಂಗದಲ್ಲಿ ಏಕಾರ್ಥವ ಮಾಡಿದ ಶರಣನು ನವದ್ವಾರಂಗಳೆಲ್ಲ ನವ ವಿಧಲಿಂಗ ಸ್ವರೂಪವಾದಲ್ಲಿ ಸುಜ್ಞಾನ ದೃಷ್ಟಿಯಿಂ ನೋಡುತ್ತಿರ್ದ ಶರಣನೆಂಬುದೀಗ, ಒಂಭತ್ತು ಬಾಗಿಲಲ್ಲಿ ನಿಂದು ನೋಡಲಾಗಿ ಎಂಬ ಶಬ್ದಕ್ಕರ್ಥ. ಆ ನವದ್ವಾರಂಗಳೆಲ್ಲ ಲಿಂಗ ಸ್ವರೂಪವಾದ ಶರಣನ ಆಚಾರಾಂಗದಲ್ಲಿ ಸಂಬಂಧವಾಗಿರ್ದ ಶ್ರೀ ಗುರುತತ್ವವು ಅಲ್ಲಿಯೆ ನಿಷ್ಪತಿಯಾಯಿತ್ತೆಂಬುದೀಗ, ಕೂಡಲ ಸಂಗಮ ದೇವರಲ್ಲಿ ಬಸವಣ್ಣ ಎತ್ತ ಹೋದನೆಂದರಿಯೆನೆಂಬ ಶಬ್ದಕ್ಕರ್ಥ.

೨

ಭಕ್ತಿ ಸ್ಥಲಕ್ಕೊಬ್ಬ-ಮಾಹೇಶ್ವರ ಸ್ಥಲಕ್ಕಿಬ್ಬರು
ಪ್ರಸಾದಿಸ್ಥಲಕ್ಕೆ ಆತನಳಿಯನಲ್ಲವಿಲ್ಲ ಪ್ರಾಣಲಿಂಗಿ ಸ್ಥಲಕ್ಕೆ,
ಮೂವರು ಶರಣಸ್ಥಲಕ್ಕೆ ನಾಲ್ವರು ಐಕ್ಯಸ್ಥಲಕ್ಕೆ
ಅಕ್ಕನ ತಮ್ಮನಲ್ಲದಿಲ್ಲ ಇಂತಿ ಕುರುಹಿನ ಬೆಂಬಳಿಯನರಿದು
ಬಿಡುವರ ಬಿಟ್ಟು, ತಡವರ ತಡವುತ್ತಿದೇನೆ,
ಕೂಡಲ ಸಂಗಮದೇವನಲ್ಲಿ ಬಸವಣ್ಣನರಿಕೆಯಾಗಿ.

**ಟೀಕು:** — ತ್ರಿವಿಧ ಪದಾರ್ಥವನು ಗುರು-ಲಿಂಗ-ಜಂಗಮಕ್ಕೆ ನಿರ್ವಂಚಕ ಭಕ್ತಿಯಿಂದ ಅರ್ಪಿಸುತ್ತಿಹರು ಬಸವೇಶ್ವರ ದೇವರೆಂಬುದೀಗ, ಭಕ್ತಿಸ್ಥಲಕ್ಕೊಬ್ಬ ನೆಂಬ ಶಬ್ದಕ್ಕರ್ಥ. ನೈಷ್ಠಿಕಾ ಭಕ್ತಿಯಿಂದೊಪ್ಪುತ್ತಿಹರು ಜಗದೇವ ಮೊಲ್ಲೆಯ ಬೊಮ್ಮಣ್ಣಂಗಳೆಂಬುದೀಗ, ಮಾಹೇಶ್ವರ ಸ್ಥಲಕ್ಕೆ ಇಬ್ಬರು ಎಂಬ ಶಬ್ದಕ್ಕರ್ಥ. ತ್ರಿವಿಧ ಪದಾರ್ಥವನು ತ್ರಿವಿಧ ಭಕ್ತಿಯಿಂದ ತ್ರಿವಿಧ ಲಿಂಗಮುಖದಿಂದ ಅರ್ಪಿಸಿ ಆ ಪ್ರಸಾದ ತ್ರಯವ ಸಾವಧಾನದಿಂ ಸ್ವೀಕರಿಸುತ್ತಿಹರು ಚನ್ನ ಬಸವೇಶ್ವರನೆಂಬ ಪ್ರಸಾದಿಯೆಂಬುದೀಗ, ಪ್ರಸಾದಿ ಸ್ಥಲಕ್ಕೆ ಆತನಳಿಯ ನಲ್ಲದಿಲ್ಲವೆಂಬ ಶಬ್ದಕ್ಕರ್ಥ. ಸಿದ್ಧರಾಮೇಶ್ವರ ದೇವರು, ನಿಜಗುಣದೇವರು, ಘಟ್ಟಿವಾಳಯ್ಯಗಳು ಈ ಮೂವರೂ ಪ್ರಾಣಲಿಂಗ ಸಂಬಂಧಿಗಳೆಂಬುದೀಗ, ಪ್ರಾಣಲಿಂಗಿ ಸ್ಥಲಕ್ಕೆ ಮೂವರು ಎಂಬ ಶಬ್ದಕ್ಕರ್ಥ. ಅಕ್ಕಗಳು, ಪ್ರಭುದೇವರು, ಗಜೇಶ ಮಸಣಯ್ಯಗಳು, ಉರಿಲಿಂಗಯ್ಯಗಳು ಈ ನಾಲ್ವರು ಶರಣಸ್ಥಲದವರೆಂಬುದೀಗ, ಶರಣ ಸ್ಥಲಕ್ಕೆ ನಾಲ್ವರು ಎಂಬ ಶಬ್ದಕ್ಕರ್ಥ. ಆ ಮಹಾಘನ ಲಿಂಗೈಕ್ಯ ಸ್ಥಲದಲ್ಲಿ ನಿಂದಾತನು ಅಜಗಣ್ಣದೇವರೆಂಬುದೀಗ, ಐಕ್ಯ ಸ್ಥಲಕ್ಕೆ ಅಕ್ಕನತಮ್ಮ ನಲ್ಲದಿಲ್ಲವೆಂಬ ಶಬ್ದಕ್ಕರ್ಥ. ಅಂತು ಷಡ್ವಿಧ ಲಿಂಗಾಂಗ ಸ್ಥಲವನರಿಯದಿರ್ಪ ಭಿನ್ನಜ್ಞಾನಿಗಳ ತನ್ನಾಚಾರದಲ್ಲಿ ಕೂಡದೆ ಷಡ್ವಿಧ ಲಿಂಗಾಂಗ ಸ್ಥಲ ಸಂಬಂಧಿಗಳಪ್ಪ ಷಟ್ಸ್ಥಲ ಜ್ಞಾನಿಗಳ ತನ್ನಾಚಾರದಲ್ಲಿ ಕೂಡಿದ ಷಡ್ವಿಧ ಲಿಂಗಾಂಗ ಸ್ಥಲ ಸಂಬಂಧಿಗಳಪ್ಪ ಷಟ್ಸ್ಥಲ ಜ್ಞಾನಿಗಳ ತನ್ನಾಚಾರದಲ್ಲಿ ಒಳಕೊಂಡಿರುತ್ತಿಹ ಶರಣನೆಂಬುದೀಗ, ಇಂತಿ ಕುರುಹಿನ ಬೆಂಬಳಿಯನರಿದು ಬಿಡುವರ ಬಿಟ್ಟು ತಡವರ ತಡವು ತ್ರಿವೇಣಿ ಕೂಡಲ ಸಂಗಮ ದೇವರಲ್ಲಿ ಬರವಣ್ಣನರಿಕೆಯಾಗಿ ಎಂಬ ಶಬ್ದಕ್ಕರ್ಥ.

೩

ಎರಡನರಿವಲ್ಲಿ ಭಂಡಾರಿ ಬಸವಣ್ಣ !
ಮೂರನರಿವಲ್ಲಿ ಚನ್ನಬಸವಣ್ಣ !
ಒಂದನರಿವಲ್ಲಿ ಪ್ರಭುದೇವರು,
ಇಂತಿ ಉಭಯದ ಸಂಗಂಗದ ಮರದಲ್ಲಿ ನಿಜಗುಣನ ನಿಜಸಂಗ
ಇಂತಿ ಬಂಧ-ಮೋಕ್ಷ-ಕರ್ಮಂಗಳು ಒಂದು ಇಲ್ಲದ ಮತ್ತೆ
ಬಾಗಿಲಿಗೆ ತಡಹಿಲ್ಲ, ಎನ್ನ ಮಣಿಹ ಕೆಟ್ಟಿತ್ತು
ಕೂಡಲ ಸಂಗಮ ದೇವರಲ್ಲಿ ಬಸವಣ್ಣ ಎನಗಾ ಮಣಿಹಬೇಡ
ಎಂದ ಕಾರಣ

**ಟೀಕು:** — ಅಂಗ-ಪ್ರಾಣಂಗಳಲ್ಲಿ ಉಭಯ ಲಿಂಗಸಂಬಂಧವಾಗಿ ಸುಜ್ಞಾನ ಕ್ರೀವಿಡಿದಾಚರಿಸುತ್ತಿಹರು ಬಸವೇಶ್ವರ ದೇವರು ಎಂಬುದೀಗ, ಎರಡನರಿವಲ್ಲಿ ಭಂಡಾರಿ ಬಸವಣ್ಣನೆಂಬ ಶಬ್ದಕ್ಕರ್ಥ. ತ್ರಿವಿಧಾಂಗದಲ್ಲಿ ತ್ರಿವಿಧಲಿಂಗ ಸಂಬಂಧವಾಗಿ ತ್ರಿವಿಧ ಭಕ್ತಿಗಳಿಂದ ಆಚರಿಸುತ್ತಿಹರು ಚನ್ನ ಬಸವೇಶ್ವರನ ದೇವರೆಂಬುದೀಗ, ಮೂರನರಿವಲ್ಲಿ ಚನ್ನಬಸವಣ್ಣನೆಂಬ ಶಬ್ದಕ್ಕರ್ಥ. ಏಕಮೇವಾ ದ್ವಿತೀಯ

ಸ್ವರೂಪವಾದ ಪರಬ್ರಹ್ಮವನರಿದು ತನ್ನ ಸುಜ್ಞಾನದಲ್ಲಿ ಸಂಬಂಧವ ಮಾಡಿಕೊಂಡಿಹರು ಪ್ರಭುದೇವರೆಂಬುದೀಗ, ಒಂದನರಿವಲ್ಲಿ ಪ್ರಭುದೇವರೆಂಬ ಶಬ್ದಕ್ಕರ್ಥ. ಅಂತು ಲಿಂಗಾಂಗವೆಂಬ ಉಭಯವಳಿದ ಶರಣನ ಮಹಾದರಿವು ಮಹಾಘನ ಲಿಂಗದಲ್ಲಿ ಸಮರಸವಾಯಿತ್ತೆಂಬುದೀಗ, ಇಂತಿ ಉಭಯದ ಸಂಗಂಗಳ ಮರದಲ್ಲಿ ನಿಜಗುಣನ ನಿಜಸಂಗವೆಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧಾಚರಣೆ ವಿಡಿದಾಚರಿಸಿ ಚಿದ್ಘನ ಲಿಂಗದಲ್ಲಿ ಏಕಾರ್ಥವಾದ ಶರಣಂಗೆ ಸಂಸಾರದ ಬದ್ಧತ್ವ ಬಿಡುಗಡೆ ಎಂಬುಭಯವಳಿದು ಸಂಚಿತ ಪ್ರಾರಬ್ಧ ಆಗಾಮಿಯೆಂಬ ಕರ್ಮತ್ರಯಂಗಳ ಮೀರಿ ಮಹಾಘನ ಲಿಂಗದಲ್ಲಿ ನಿರ್ವಯವಾದನೆಂಬುದೀಗ, ಇಂತಿ ಬಂಧ–ಮೋಕ್ಷ–ಕರ್ಮಂಗಳೊಂದೂ ಇಲ್ಲದ ಮತ್ತೆ ಬಾಗಿಲಿಗೆ ತಡಹಿಲ್ಲ ಎನ್ನ ಮಣಿಪ ಕೆಟ್ಟಿತ್ತು ಕೂಡಲಸಂಗಮದೇವರಲ್ಲಿ ಬಸವಣ್ಣ ಎನಗಾ ಮಣಿಹ ಬೇಡಾ ಎಂದ ಕಾರಣ ಎಂಬ ಶಬ್ದಕ್ಕರ್ಥ.

---

## ವೀರಗೊಲ್ಲಾಳರ ವಚನಗಳು

### ೧

ಆಡು ಆರುದಿಂಗಳು ಹುಟ್ಟಿ ಮೂರುದಿನ ಬದುಕಿ ಒಂದುದಿನ ಸತ್ತಿತ್ತು
ಕುರಿ ಕರುಹ ಮೇದು ಮರಿಗೆ ಮೊಲೆಗೊಟ್ಟಿತ್ತು;
ಮೊಲೆಯನುಂಗಿ ಕುರುಹಿನೊಳಗಡಗಿತ್ತು;
ಆಡು ಕುರಿ ಬಂದ ಬಟ್ಟೆಯ ಶೋಧಿಸಿಕೊಂಡು —
ತೋಳನ ತೊಡಕಿನಲ್ಲಿ ಸಾಯದೆ ಆರಿ ವೀರ ಬೀರೇಶ್ವರಲಿಂಗವಾ !

**ಟೀಕು:—** ಆಡೆಂದೊಡೆ ಜೀವಾತ್ಮನು. ಅಂತಪ್ಪ ಜೀವಾತ್ಮಂಗೆ ಸಮ್ಯಜ್ಞಾನೋದಯವಾಯಿತ್ತೆಂಬುದೀಗ, ಆಡು ಆರುತಿಂಗಳು ಹುಟ್ಟಿ ಎಂಬ ಶಬ್ದಕ್ಕರ್ಥ. ಅಂತಪ್ಪ ಸಮ್ಯಜ್ಞಾನೋದಯವಾದ ಸಜ್ಜೀವನು ಶ್ರೀಗುರು ಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧವಾಗಿ ಶ್ರೀಗುರು-ಲಿಂಗ–ಜಂಗಮಕ್ಕೆ ತನು–ಮನ–ಧನವೆಂಬ ತ್ರಿವಿಧ ಪದಾರ್ಥವ ತ್ರಿವಿಧ ಭಕ್ತಿಯಿಂದ ತ್ರಿವಿಧ ಮುಖದಲ್ಲರ್ಪಿಸಿ ತ್ರಿವಿಧ ಪ್ರಸಾದವ ಸ್ವೀಕರಿಸಿ ಅನಿತ್ಯ ಭಾವವಳಿದು ನಿತ್ಯ ಸ್ವರೂಪವಾಗಿರ್ದನೆಂಬುದೀಗ, ಮೂರು ದಿನ ಬದುಕಿ ಎಂಬ ಶಬ್ದಕ್ಕರ್ಥ. ಅಂತಪ್ಪ ತ್ರಿವಿಧ ಭಕ್ತಿಯಿಂದ ಆಚರಿಸಿದ ಶರಣನು ತನ್ನ ಅರಿವು ಚಿದ್ಘನ ಲಿಂಗದಲ್ಲಿ ನಿಷ್ಪತಿಯಾಗಲು ತಾನೆಂಬ ಭಾವವಡಗಿ ಮಹಾ ಘನ ಲಿಂಗದಲ್ಲಿ ಏಕಾರ್ಥವಾಯಿತ್ತೆಂಬುದೀಗ, ಒಂದು ದಿನ ಸತ್ತಿತ್ತೆಂಬ ಶಬ್ದಕ್ಕರ್ಥ. ಅಂತು ಮಹಾ ಘನಲಿಂಗದಲ್ಲಿ ಏಕಾರ್ಥವಾದ ಶರಣನ ಮಾಯಾ ಸಂಬಂಧವಾದ ದೇಹಭಾವವಳಿದು ಭಕ್ತಿಸ್ವರೂಪವಾಯಿತ್ತೆಂಬುದೀಗ, ಕುರಿಯೆಂಬ ಶಬ್ದಕ್ಕರ್ಥ. ತನ್ನಾಚಾರಾಂಗದಲ್ಲಿರ್ದ ಇಷ್ಟ ಬ್ರಹ್ಮವ

ಭಕ್ತಿಸ್ವರೂಪವಾದ ದೇಹವವಗ್ರಹಿಸಿತ್ತೆಂಬುದೀಗ, ಕುರಿ ಕುರುಹ ಮೇದು ಎಂಬ ಶಬ್ದಕ್ಕರ್ಥ. ಮರಿಯೆಂದೊಡೆ ಮನಸ್ಸು. ಅಂತಪ್ಪ ಉನ್ಮನಿ ಸ್ವರೂಪವಾದ ಮನಸ್ಸು ಇಷ್ಟಲಿಂಗದ ಚಿತ್ಕಳೆಯನು ಮನೋಮೂರ್ತಿ ಪ್ರಾಣಲಿಂಗವಾಗಿ ಅವಗ್ರಹಿಸಿತ್ತೆಂಬುದೀಗ, ಮರಿಗೆ ಮಲೆಗೊಟ್ಟಿತ್ತು ಎಂಬ ಶಬ್ದಕ್ಕರ್ಥ. ಆ ಮನಸ್ಸು ಚೈತನ್ಯ ಸ್ವರೂಪವಾದ ಪ್ರಾಣಲಿಂಗವನವಗ್ರಹಿಸಿ ಇಷ್ಟಲಿಂಗದ ಲಕ್ಷಣದೊಳಗೆ ನಿರ್ಲಕ್ಷವಾಯಿತ್ತೆಂಬುದೀಗ, ಮರಿ ಮೊಲೆಯನುಂಗಿ ಕುರುಹಿನೊಳಗಡಗಿತ್ತು ಎಂಬ ಶಬ್ದಕ್ಕರ್ಥ. ಜೀವಾತ್ಮನೆಂಬುದೀಗ ಆಡೆಂಬ ಶಬ್ದಕ್ಕರ್ಥ. ಮಾಯಾ ಶಕ್ತಿಯೆಂಬುದೀಗ, ಕುರಿಯೆಂಬ ಶಬ್ದಕ್ಕರ್ಥ. ಸಮಸ್ತ ವ್ಯಾಧಿಗಳಿಂ ಪೀಡಿಸಲ್ಪಟ್ಟ ತೋಳನೆಂಬ ಶಬ್ದಕ್ಕರ್ಥ. ಅಂತು ಜೀವಭಾವವನು, ಮಾಯಾಪ್ರಪಂಚನು, ಸಮಸ್ತ ವ್ಯಾಧಿಯನು ನಿವೃತ್ತಿಮಾಡಿ ಮಹಾಘನ ಲಿಂಗದಲ್ಲಿ ಏಕಾರ್ಥವಾದನೆಂಬುದೀಗ, ಆಡು ಕುರಿಬಂದ ಬಟ್ಟೆಯ ಶೋಧಿಸಿಕೊಂಡು ತೋಳನ ತೊಡಕಿನಲ್ಲಿ ಸಾಯದೆ ಅರಿವೀರ ಬೀರೇಶ್ವರ ಲಿಂಗವ ಎಂಬ ಶಬ್ದಕ್ಕರ್ಥ.

೨

ಮೂರು ಬೊಟ್ಟುಗ, ಆರು ವರ್ಣದ ಅಳಗ,
ಐದು ವರ್ಣದ ಸಂಚಿಗ,
ಇವರೊಳಗಾದ ನಾನಾ ವರ್ಣದ ಅಜಕುಲ ಕುರಿವರ್ಗ ಕೊಲುವ
ತೋಳನ ಕುಲ ಮುಂತಾದ ತ್ರಿವಿಧಟ್ಟೆಯು ಮೆಟ್ಟದೆ
ಮೂರರ ಮುಟ್ಟದೆ, ಆರ ತಟ್ಟದೆ, ಐದರ ಬಟ್ಟೆಯ ಮೆಟ್ಟದೆ,
ಒಂದೇ ಹೊಲದಲ್ಲಿ ಮೇದು ಮಂದಿಯಲ್ಲಿ ನಿಂದು
ಸಂದೇಹ ಕಳಿದುವು
ದಯದ ಸಂದೇಹ ವಳಿದು ಬೀರೇಶ್ವರ ಲಿಂಗದಲ್ಲಿಗೆ
ಹೋಗುತ್ತಿರಬೇಕು.

**ಟೀಕು:**— ದೇಹ ಸಂಬಂಧಿಯಾಗಿರ್ದ ಜೀವನು ತ್ರಿವಿಧಾವಸ್ಥೆಯಲ್ಲಿ ಕೂಡಿ ವರ್ತಿಸುತ್ತಿಹನೆಂಬುದೀಗ, ಮೂರು ಬೊಟ್ಟುಗನೆಂಬ ಶಬ್ದಕ್ಕರ್ಥ. ಷಡೇಂದ್ರಿಯಂಗಳ ಷಡ್ವಿಧ ವಿಷಯದಲ್ಲಿ ಲಂಪಟನಾಗಿಹನು ತೈಜಸನು ಎಂಬುದೀಗ, ಆರುವರ್ಣದ ಅಳಗನೆಂಬ ಶಬ್ದಕ್ಕರ್ಥ. ಪಂಚಕರಣದ ವ್ಯವಹಾರದಲ್ಲಿ ವ್ಯವಹರಿಸುತ್ತಿಹನು ಪ್ರಾಜ್ಞನೆಂಬುದೀಗ, ಐದುವರ್ಣದ ಸಂಚಿಗನೆಂಬ ಶಬ್ದಕ್ಕರ್ಥ. ಇಂತಪ್ಪ ಜೀವ ತ್ರಯಂಗಳು ಮುಖ್ಯವಾದ ಸಲಕರಣಂಗಳು, ರಜೋಗುಣ ಸಂಬಂಧವಾದ ದೇಹದಲ್ಲಿ ಇರುತ್ತಿಹವೆಂಬುದೀಗ, ಇವರೊಳಗಾದ ನಾನಾ ವರ್ಣದ ಅಜಿಕುಲವೆಂಬ ಶಬ್ದಕ್ಕರ್ಥ. ಅಜ್ಞಾನ ಸ್ವರೂಪಿಣಿಯಾದ ಮಾಯಾ ಶಕ್ತಿ ಎಂಬವಳೀಗ, ಕುರಿ ವರ್ಗವೆಂಬ ಶಬ್ದಕ್ಕರ್ಥ. ಕಾಲ ಸಂಬಂಧವಾದ ಉತ್ಪತ್ತಿ-ಸ್ಥಿತಿ-ಲಯವೆಂಬ ತ್ರಿವಿಧ ಬಟ್ಟೆಯು ಮೆಟ್ಟದೆ ಎಂಬುದೀಗ, ಕೊಲುವ ತೋಳನ ಕುಲ ಮುಂತಾದ ತ್ರಿವಿಧದ ಬಟ್ಟೆಯು ಮೆಟ್ಟದೆ ಎಂಬ ಶಬ್ದಕ್ಕರ್ಥ.

ಇಂತಪ್ಪ ಜೀವರಿಗೆ ಶಿವಸಂಸ್ಕಾರದಿಂ ಸುಜ್ಞಾನೋದಯವಾಗಲು ಶ್ರೀ ಗುರು ಕಾರುಣ್ಯದಿಂ ತ್ರಿವಿಧ ಲಿಂಗ ಸಂಬಂಧಿಯಾದ ಶರಣನ ತ್ರಿವಿಧಾವಸ್ಥೆಯಳಿದು ಲಿಂಗಾವಸ್ಥೆಯಾದನೆಂಬುದೀಗ, ಮೂರ ಮುಟ್ಟದೆ ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣ ಷಡೇಂದ್ರಿಯಂಗಳಲ್ಲಿ ಷಡ್ವಿಧಲಿಂಗ ಸಂಬಂಧವಾಗಿ ಆ ವಿಷಯ ಪದಾರ್ಥ ಲಿಂಗಾರ್ಪಿತವಾದಲ್ಲಿ ಆ ಷಡೇಂದ್ರಿಯಂಗಳ ವಿಷಯಕ್ಕೆ ಇಚ್ಛೈಸನೆಂಬುದೀಗ, ಆರ ತಟ್ಟದೆ ಎಂಬ ಶಬ್ದಕ್ಕರ್ಥ. ಆ ಶರಣನ ಮನ-ಬುದ್ಧಿ-ಚಿತ್ತ-ಅಹಂಕಾರ ಭಾವವೆಂಬ ಪಂಚಕರಣಂಗಳ ವರ್ತನೆಯಲ್ಲಿ ನಡೆಯನೆಂಬುದೀಗ, ಐವರ ಬಟ್ಟೆಯ ಮೆಟ್ಟದೆ ಎಂಬ ಶಬ್ದಕ್ಕರ್ಥ. ಜೀವ ತ್ರಯಂಗಳು ಮುಖ್ಯವಾದ ಸಕಲ ಕರಣಂಗಳೆಲ್ಲ ಜ್ಞಾನ ಕರಣಂಗಳಾಗಿರ್ಪ ಶರಣನ ಲಿಂಗ ಕ್ಷೇತ್ರವೆಂಬ ಹೊಲದಲ್ಲಿ ಬೆಳೆದ ಭಕ್ತ್ಯಾಮೃತವನೆ ಸ್ವೀಕರಿಸಿ ಎಂಬುದೀಗ, ಒಂದೆ ಹೊಲದಲ್ಲಿ ಮೇದು ಎಂಬ ಶಬ್ದಕ್ಕರ್ಥ. ಆ ಶರಣನ ಸರ್ವಾಚಾರ ಸಂಪತ್ತು ಹೆರೆ ಹಿಂಗದೆ ನಿಂದು ಎಂಬುದೀಗ, ಮುಂದಿಯಲ್ಲಿ ನಿಂದು ಎಂಬ ಶಬ್ದಕ್ಕರ್ಥ. ಆ ಶರಣ ಸುಜ್ಞಾನ ಪ್ರಕಾಶದಿಂ ಜ್ಞಾನಾಜ್ಞಾನವ ನಿವೃತ್ತಿ ಮಾಡಿದನೆಂಬುದೀಗ, ಸಂದೇಹಕಳಿದು ಎಂಬ ಶಬ್ದಕ್ಕರ್ಥ. ಪರಿಪೂರ್ಣ ಜ್ಞಾನ ಪ್ರಕಾಶ ಶರಣನ ಒಳ-ಹೊರಗೆ ಸರ್ವಾಂಗದಲ್ಲಿ ತೊಳಗಿ ಬೆಳಗುತ್ತಿಹುದು ಎಂಬುದೀಗ, ಉದಯದ ಎಂಬ ಶಬ್ದಕ್ಕರ್ಥ. ಆ ಪರಿಪೂರ್ಣ ಜ್ಞಾನಿಯಾದ ಶರಣ ಸಂಕಲ್ಪ-ವಿಕಲ್ಪ ನಿವೃತ್ತಿ ಮಾಡಿ ಮಹಾ ಘನಲಿಂಗದಲ್ಲಿ ಸಮರಸೈಕ್ಯವಾದನೆಂಬುದೀಗ, ಸಂದೇಹವಳಿದು ವೀರ ಬೀರೇಶ್ವರ ಲಿಂಗದಲ್ಲಿಗೆ ಹೋಗಬೇಕು ಎಂಬ ಶಬ್ದಕ್ಕರ್ಥ.

೩

ಕಂಪೆಯ ಕಟ್ಟಿ ಲೆತ್ತಿಯ ಹೊತ್ತು ಮರೆಯ ನಡಸುತ್ತ
ದೊಡ್ಡೆಯ ಹೊಡವುತ್ತ ಅಡ್ಡಗೋಲಿನಲ್ಲಿ ಹೋಹ ಚುಕ್ಕಿ
ಬೊಟ್ಟೆಗವಗ ತಿಟ್ಟುತ್ತ ಹಿಂಡನಗಲಿ ಹೋಹ ದಿಂಡೆಯ
ಮಣಿಸುಟ್ಟಿನ ಅಭಿ ಸಂದಿಯ ಕೋಲಿನಲ್ಲಿ ಇಡುತ್ತ
ಈ ಹಿಂಡಿನೊಳಗೆ ತಿರುಗಾಡುತ್ತಿದೇನೆ;
ಈ ವಿಕಾರದ ಹಿಂಡ ಬಿಡಿಸಿ ನಿಜ ನಿಳಯ ನಿಮ್ಮಂಗವ ತೋರಿಸು,
ಸಂಗದಲ್ಲಿರಿಸು ಎನ್ನೊಡೆಯ ವೀರ ಬೀರೇಶ್ವರಾ !

**ಟೀಕು:**— ದೇಹಸಂಬಂಧಿಯಾದ ಆತ್ಮಂಗೆ ಪ್ರಾರಬ್ಧ ಭೋಗವ ಸಂಬಂಧವ ಮಾಡಿದನು ಪರಶಿವನೆಂಬುದೀಗ, ಕಂಪೆಯ ಕಟ್ಟಿ ಲೆತ್ತಿಯ ಹೊತ್ತು ಎಂಬ ಶಬ್ದಕ್ಕರ್ಥ. ಇಂತಪ್ಪ ಆತ್ಮಂಗೆ ಸುಜ್ಞಾನೋದಯವಾಗಲು ಸಕಲ ಕರಣಂಗಳ ವರ್ತನೆಯ ನಿವೃತ್ತಿ ಮಾಡಿ ಸತ್ಪಥ ಮಾರ್ಗವಿಡಿದು ಚರಿಸುತ್ತಿಹನೆಂಬುದೀಗ ಮರೆಯ ನಡಸುತ್ತ ಎಂಬ ಶಬ್ದಕ್ಕರ್ಥ. ಆ ಶರಣ ಮಾಯಾ ಪ್ರಪಂಚ ನಿವೃತ್ತಿಯ ಮಾಡಿ ನಿರ್ಮಾಯ ಸ್ವರೂಪವ ಮಾಡಿದನೆಂಬುದೀಗ, ದೊಡ್ಡೆಯ ಹೊಡವುತ್ತ ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣ ಇಂದ್ರಿಯಂಗಳ

ವಿಷಯ ಪ್ರಪಂಚಿನತ್ತ ಹರಿವುತ್ತಿಹ ಸಂಕಲ್ಪ ರೂಪವಾದ ಮನೋ ಪ್ರಕೃತಿಯ ಶಿವಭಾವದಿಂ ಛೇದಿಸಿದನೆಂಬುದೀಗ, ಅಡ್ಡಗೋಲಿನಲ್ಲಿ ಹೋಹ ಚುಕ್ಕಿಬೊಟ್ಟಿನ ಒತ್ತಿನ ತಿಟ್ಟು ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣ ಸಕಲ ಕರಣಂಗಳ ನಗಲಿ ಹೋಹ ಅಹಂಕಾರಯುಕ್ತವಾದ ಭಾವವ ಅಂತರಂಗ–ಬಹಿರಂಗವನೊಳ ಕೊಂಡಿರ್ಪ ಅಭಿನ್ನ ಜ್ಞಾನದಿಂ ನಿವೃತ್ತಿಯ ಮಾಡಿದನೆಂಬುದೀಗ, ಹಿಂಡನಗಲಿ ಹೋಹ ದಿಂಡೆಯ ಮಣಿಘಟ್ಟಿನ ಅಭಿಸಂಧಿಯ ಕೋಲಿನಲ್ಲಿ ಇಡುತ್ತ ಎಂಬ ಶಬ್ದ ಕ್ಕರ್ಥ. ಇಂತು ಸಕಲ ಕರಣಂಗಳಲ್ಲಿ ಕೂಡಿರ್ದ ಆತ್ಮನು ಈ ಕರಣಂಗಳ ವರ್ತ ನೆಯ ನಿವೃತ್ತಿ ಮಾಡಿ ನಿತ್ಯವಾದ ಪರಬ್ರಹ್ಮಕ್ಕೆ ಅಂಗವಾದ ಅಖಂಡಜ್ಞಾನಚಿತ್ತನು ತರುಹಿಸಿಕೊಟ್ಟು ಲಿಂಗಾಂಗ ಸಂಬಂಧವ ಭಕ್ತಿಯೋಗವ ಕೃಪೆ ಮಾಡೆಂದು ಶ್ರೀ ಗುರುವಿಂಗೆ ಬಿನ್ನೈಸುತ್ತಿರ್ದ ಶಿಷ್ಯನೆಂಬುದೀಗ, ಈ ಹಿಂಡಿನೊಳಗೆ ತಿರಿಗಾಡು ತ್ತಿದ್ದೇನೆ ಈ ವಿಕಾರದ ಹಿಂಡಬಿಡಿಸಿ ನಿಜನಿಳಯ ನಿಮ್ಮಂಗವ ತೋರಿಸು ಸಂಗ ದಲ್ಲಿರಿಸು ಎನ್ನೊಡೆಯ ವೀರಬೀರೇಶ್ವರಾ ಎಂಬ ಶಬ್ದಕ್ಕರ್ಥ.

೪

ಹೋತನ ಕೊಯ್ದು ಕುರಿಯ ಸುಲಿದು ಮರಿಯ ಕೊರಳನೊತ್ತಿ
ಕಾವಲ ಕುನ್ನಿಯ ಕಡಹಿ ತೋಳನ ಕುಲವಗೆದ್ದು
ಕುರುಬನ ಕುರುಹಿನ ಕುಲವಡಗಿ ನೆರೆ ಅರಿವಿನ ಕುಲದಲ್ಲಿ
ಅಡಗಬೇಕು ವೀರ ಬೀರೇಶ್ವರ ಲಿಂಗವನರಿತ ಕಾರಣ.

**ಟೀಕು:—** ಸುಜ್ಞಾನೋದಯವಾದ ಶರಣನು ಅಹಂಕಾರಯುಕ್ತವಾದ ಜೀವಭಾವವ ಶಿವಜ್ಞಾನದಿಂ ಛೇದಿಸಿದನೆಂಬುದೀಗ, ಹೋತನ ಕೊಯ್ದು ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣ ಅಜ್ಞಾನ ಸಂಬಂಧವಾದ ಮಾಯೆಯನು ಸುಜ್ಞಾನ ಪ್ರಕಾಶದಿಂ ನಿವೃತ್ತಿಯ ಮಾಡಿದನೆಂಬುದೀಗ, ಕುರಿಯ ಸುಲಿದು ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಸ್ವರೂಪವಾದ ಶರಣನ ಮನಸ್ಸಿನ ಆ ಪೃಥ ಕಂಠವ ಶಿವಭಾವದಿಂ ನಿವೃತ್ತಿಯ ಮಾಡಿ ಉನ್ಮನಿ ತತ್ವದ ಸ್ವರೂಪವನೆಯ್ದಿಸಿದ ನೆಂಬುದೀಗ, ಮರಿಯ ಕೊರಳನೊತ್ತಿ ಎಂಬ ಶಬ್ದಕ್ಕರ್ಥ. ಆ ಚಿತ್ಸ್ವರೂಪ ವಾದ ಶರಣನು ಪಂಚೇಂದ್ರಿಯಂಗಳ ವರ್ತನೆಯ ಛೇದಿಸಿದನೆಂಬುದೀಗ, ಕಾವ ಲಕುನ್ನಿಯ ಕಡಹಿ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಸ್ವರೂಪನಾದ ಶರಣನು ಕಾಲಸಂಬಂಧವಾದ ಉತ್ಪತ್ತ್ಯ–ಸ್ಥಿತಿ-ಲಯಂಗಳಲ್ಲಿ ಎಸೆದನೆಂಬುದೀಗ, ತೋಳನ ಕುಲವಗೆದ್ದು ಎಂಬ ಶಬ್ದಕ್ಕರ್ಥ. ಆ ಶಿವಜ್ಞಾನಿಯಾದ ಶರಣನು ಜೀವನ ದೇಹ ಭಾವದ ಕುಲಾಕ್ರೀಯಂಗಗಳಿದು ಗುರು ಕರಜಾತಕನಾಗಿ ಅಂಗಾಂಗಸಂಬಂಧ ವಳವಡಲು ಶಿವ ಸತ್ಕುಲಜನಾದನೆಂಬುದೀಗ, ಕುರುಬನ ಕುರುಹಿನ ಕುಲವಡಗಿ ನೆರೆ ಅರಿವಿನ ಕುಲದಲ್ಲಿ ಅಡಗಬೇಕು. ವೀರ ಬೀರೇಶ್ವರ ಲಿಂಗವನರಿತ ಕಾರಣ ಎಂಬ ಶಬ್ದಕ್ಕರ್ಥ.

೫

ಹೋತನ ಹೊಡದು ಆಡಕೂಡಿ ಕುರಿಯ ನಿರಿಸಿ ಟಗರ ತಡದು,
ಹಿಂಡಗೊಬ್ಬುಳಿತೆಯ ಮಾಡಿ ಹುಲಿ-ತೋಳ-ಚೋರರ ಭಯವಂ ಕಳೆದು
ಹಿಂಡಿಗೊಡೆಯನಾಗಿ ಕಾವ ಗೊಲ್ಲಾಳ ನೀನೇ ವೀರ ಬೀರೇಶ್ವರಾ !

**ಟೀಕು:**— ಮೂಲ ಜ್ಞಾನೋದಯವಾದ ಶರಣನು ಅಹಂಕಾರವ ನಿವೃತ್ತಿಯ ಮಾಡಿದನೆಂಬುದೀಗ, ಹೋತನ ಹೊಡದು ಎಂಬ ಶಬ್ದಕ್ಕರ್ಥ. ಅಂತು ಅಹಂಕಾರವಳಿದು ಚಿದಹಂಕಾರ ಸ್ವರೂಪನಾದ ಶರಣನು ಶ್ರೀಗುರು ಕಾರುಣ್ಯದಿಂದ ರಜೋಗುಣ ಸಂಬಂಧವಾದ ಜೀವನ ಜೀವಭಾವವನು ಕ್ರಿಯಾದೀಕ್ಷೆಯಿಂದ ನಿವೃತ್ತಿಮಾಡಿ ಇಷ್ಟಲಿಂಗವಲ್ಲಿ ಏಕಾರ್ಥವ ಮಾಡಿದನೆಂಬುದೀಗ, ಆಡ ಕೂಡಿ ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣ ಷಡುವರ್ಣ ಸ್ವರೂಪವಾದ ಮಾಯಾ ಪ್ರಪಂಚು ನಿವೃತ್ತಿಯಮಾಡಿ ಚಿಚ್ಛಕ್ತಿಯ ಸ್ವರೂಪವ ಮಾಡಿದನೆಂಬುದೀಗ, ಕುರಿಯನಿರಿಸಿ ಎಂಬ ಶಬ್ದಕ್ಕರ್ಥ, ಆ ಚಿತ್‍ಸ್ವರೂಪನಾದ ಶರಣ ಗೆಲ್ಲ-ಸೋಲಕ್ಕೆ ಹೋರುವವ ಬಿಡಬೇಕೆಂಬುದೀಗ, ಟಗರ ತಡದು ಎಂಬ ಶಬ್ದಕ್ಕರ್ಥ. ಆ ಶರಣ ತನ್ನ ಸಕಲ ಕರಣಂಗಳನೆಲ್ಲ ಜ್ಞಾನ ಕರಣಂಗಳ ಮಾಡಿ ಚಿದ್ ಘನ ಲಿಂಗದಲ್ಲಿ ಏಕಾರ್ಥವ ಮಾಡಿದನೆಂಬುದೀಗ, ಹಿಂಡನೊಬ್ಬುಳಿತೆಯಮಾಡಿ ಎಂಬ ಶಬ್ದಕ್ಕರ್ಥ. ಆ ಚಿತ್‍ಸ್ವರೂಪನಾದ ಶರಣ ಕಾಲ ವ್ಯಾಘ್ರನ ಮರಣವನು ಸಮಸ್ತ ವ್ಯಾಧಿಗಳಿಂ ಪೀಡಿಸುವ ತೋಳನನು ಅರಿಷಡ್ವರ್ಗಂಗಳ ಹಗೆತನವ ನಿವೃತ್ತಿಯ ಮಾಡಿ ಸುಜ್ಞಾನಸ್ವರೂಪನಾಗಿಹನು ಎಂಬುದೀಗ, ಹುಲಿ-ತೋಳ-ಚೋರ ಭಯವುಂ ಕಳೆದು ಎಂಬ ಶಬ್ದಕ್ಕರ್ಥ. ಆ ಸುಜ್ಞಾನಿ ಶರಣನ ಸಕಲ ಜ್ಞಾನ ಕರಣಂಗಳೆಲ್ಲವಕ್ಕು ಲಿಂಗವೆ ಕರ್ತೃವಾಗಿ ರಕ್ಷಿಸುತ್ತಿಹನೆಂಬುದೀಗ, ಹಿಂಡಿಗೊಡೆಯನಾಗಿ ಕಾವ ಗೊಲ್ಲಾಳ ನೀನೆ ವೀರಬೀರೇಶ್ವರಾ ಎಂಬ ಶಬ್ದಕ್ಕರ್ಥ.

## ಅನಾಮಿಕ ನಾಚಯ್ಯನವರ ವಚನಗಳು

೧

ಒಂದೆಂದರಿದಂಗೆ ಎರಡೆಂಬುದಿಲ್ಲ; ಎರಡೆಂದರಿದಂಗೆ ಮೂರೆಂಬುದಿಲ್ಲ;
ಮೂರೆಂದರಿದಂಗೆ ಮುಟ್ಟಿದ ನಾಲ್ಕೆಂದರಿದಂಗೆ ನಗುತ್ತಿರ್ದ,
ಐದೆಂದರಿದಂಗೆಯಿದ್ದವ, ಆರೆಂದರಿದಂಗೆ ಮೀರಿದ
ಏಳೆಂದರಿದಂಗೆ ಎಚ್ಚರಿಸಿದ, ಎಂಟೆಂದರಿದಂಗೆ ಕಂಠಕವಿಲ್ಲ

ಒಂಭತ್ತೆಂದರಿದಂಗೆ ಸಂಭಾವಿತನಾದ ಹತ್ತೆಂದರಿದಂಗೆ
ಒಂದೆಂಬುದಿಲ್ಲ,
ಮಾಟ-ಕೂಟ-ನೋಟ-ಶೃಂಗಾರ-ಬೇಟ ಷೋಡಶೋ
ಪಚಾರಂಗಳು
ಕೂಟಕೆಂದು ಮಾಡಿದ ನಾಚಯ್ಯಪ್ರಿಯ್ಯ ಚನ್ನರಾಮ !

**ಟೀಕು:—** ಸುಜ್ಞಾನೋದಯವಾದ ಶರಣನು ಏಕಮೇವ ಪರಬ್ರಹ್ಮವೇ ತನ್ನ ನಿಜವೆಂದರಿದ ಲಿಂಗಾಂಗವೆಂದು ದ್ವೈತಭಾವ ತೋರಲಿಲ್ಲವೆಂಬುದೀಗ, ಒಂದೆಂದರಿದಂಗೆ ಎರಡೆಂಬುದಿಲ್ಲವೆಂಬ ಶಬ್ದಕ್ಕರ್ಥ. ಲಿಂಗಾಂಗವೆಂದೆರಡಾದುದು ಒಂದೇ ಪರಬ್ರಹ್ಮವೆಂದರಿದಲ್ಲಿ ಗುಣತ್ರಯಂಗಳೊಡನೆ ಕೂಡಿದ ತನುತ್ರಯಂಗಳು ನಷ್ಟವಾದವೆಂಬುದೀಗ, ಎರಡೆಂದರಿದಂಗೆ ಮೂರೆಂಬುದಿಲ್ಲವೆಂಬ ಶಬ್ದಕ್ಕರ್ಥ. ಅಂತಪ್ಪ ತನು ತ್ರಯಂಗಳು ನಷ್ಟವೆಂದರಿದ ಶರಣಂಗೆ ಇಷ್ಟ-ಪ್ರಾಣ-ಭಾವಲಿಂಗ ಗುರು ಮುಖದಿಂದ ಸಂಬಂಧವಾಯಿತ್ತೆಂಬುದೀಗ, ಮೂರೆಂದರಿದಂಗೆ ಮುಟ್ಟಿದನೆಂಬ ಶಬ್ದಕ್ಕರ್ಥ. ಅಂತು ಅಂಗತ್ರಯಂಗಳಲ್ಲಿ ಲಿಂಗತ್ರಯ ಸಂಬಂಧವಾದ ಶರಣನು ಮುಂದೆ ಮನ-ನಿರೀಕ್ಷಣ-ಇಳನ-ಯಜನವೆಂಬ ಚತುರ್ವಿಧ ಭಕ್ತಿ ಹಿಡಿದು ಆಚರಿಸುತ್ತಿರ್ದ ಶರಣನ ಚರಿತ್ರಕ್ಕೆ ಆ ಪರಶಿವಲಿಂಗವು ಪರಮಹರುಷದಲಿ ಲೋಲಾಡುತ್ತಿಹುದು ಎಂಬುದೀಗ, ನಾಲ್ಕೆಂದರಿದಂಗೆ ನಗುತ್ತಿರ್ದನೆಂಬ ಶಬ್ದಕ್ಕರ್ಥ. ಅಂತು ಚತುರ್ವಿಧ ಭಕ್ತಿಯಲ್ಲಿ ತತ್ಪರನಾಗಿ ಪಂಚಾಚಾರವಿಡಿದಾಚರಿಸಿದ ಶರಣನು ಹೃದಯ ಕಮಲ ಕರ್ಣಿಕಾ ಮಧ್ಯದಲ್ಲಿ ಮೂರ್ತಿಗೊಂಡಿತ್ತು ಪ್ರಾಣಲಿಂಗವೆಂಬುದೀಗ, ಐದೆಂದರಿದಂಗೆ ಯೆಯ್ದಿದನೆಂಬ ಶಬ್ದಕ್ಕರ್ಥ. ಅಂತಪ್ಪ ಪಂಚಾಚಾರ ವಿಡಿದಾಚರಿಸಿದ ಶರಣನು ಷಟ್ಸ್ಥಲ ಜ್ಞಾನಕ್ರೀ ವಿಡಿದಾಚರಿಸಿ ಆ ಮಹಾಘನ ಲಿಂಗಕ್ಕೆ ಅಧಿಷ್ಠಾಯಕನಾಗಿರ್ದನೆಂಬುದೀಗ, ಆರೆಂದರಿದಂಗೆ ಮೀರಿದನೆಂಬ ಶಬ್ದಕ್ಕರ್ಥ. ಅಂತು ಷಟ್ಸ್ಥಲ ಜ್ಞಾನಕ್ರಿ ವಿಡಿದಾಚರಿಸಿದ ಶರಣನು ಸಪ್ತ ಚಕ್ರಂಗಳಲ್ಲಿ ಲಿಂಗಸಂಬಂಧವಾಗಿ ಆಚರಿಸಿದ ಶರಣಂಗೆ ತನ್ನ ನಿಜಸ್ವರೂಪನು ಎಚ್ಚರಿಸಿ ಕೊಡುತ್ತಿಹುದು ಚಿದ್ಘನಲಿಂಗವೆಂಬುದೀಗ, ಏಳೆಂದರಿದಂಗೆ ಎಚ್ಚರಿಸಿದನೆಂಬ ಶಬ್ದಕ್ಕರ್ಥ. ಅಂತು ಸಪ್ತ ಚಕ್ರಂಗಳಲ್ಲಿ ಲಿಂಗ ಸಂಬಂಧವಾದ ಶರಣನು ಅಷ್ಟವಿಧ ಭಕ್ತಿ ಹಿಡಿದು ಆಚರಿಸಿದಲ್ಲಿ ಜನನ-ಮರಣದ ಭೀತಿ ಬಿಟ್ಟಿತ್ತೆಂಬುದೀಗ, ಎಂಟೆಂದರಿದವರಿಗೆ ಕಂಟಕವಿಲ್ಲವೆಂಬ ಶಬ್ದಕ್ಕರ್ಥ. ಅಂತು ಅಷ್ಟವಿಧ ಭಕ್ತಿಯಲ್ಲಿ ತತ್ಪರನಾದ ಶರಣನು ನವವಿಧ ಭಕ್ತಿ ಹಿಡಿದು ಆಚರಿಸಿದಲ್ಲಿ ಆ ಪರಶಿವನು ತನ್ನಲ್ಲಿ ಸಮರಸೈಕ್ಯವ ಮಾಡಿಕೊಂಡು ಅವ ಕಾಲದಲ್ಲಿಯೂ ಶರಣನನರಿದು ರಕ್ಷಿಸುತ್ತಿಹನೆಂಬುದೀಗ, ಒಂಭತ್ತೆಂದರಿದಂಗೆ ಸಂಭಾವಿತನಾದನೆಂಬ ಶಬ್ದಕ್ಕರ್ಥ. ಅಂತು ನವವಿಧ ಭಕ್ತಿವಿಡಿದು ಆಚರಿಸುತ್ತಿರ್ದ ಶರಣನು ದಶವಿಧ ಪಾದೋದಕವನರಿದು ಚಿದ್ವಾರದಿಂ ಸ್ವೀಕರಿಸಿ ಶರಣಂಗೆ ಅಹಂಬ್ರಹ್ಮವೆಂಬ ಅದ್ವೈತ ಜ್ಞಾನವಿಲ್ಲವೆಂಬುದೀಗ, ಹತ್ತೆಂದರಿದಂಗೆ ಒಂದೆಂಬುದಿಲ್ಲವೆಂಬ ಶಬ್ದಕ್ಕರ್ಥ. ಅಂತು ಅದ್ವೈತ ಜ್ಞಾನವ ನಿವೃತ್ತಿ ಮಾಡಿದ ಶರಣನು

ತ್ರಿವಿಧ ಪದಾರ್ಥವನು ತ್ರಿವಿಧಲಿಂಗಮುಖದಲ್ಲಿ ಅರ್ಪಿಸುವದೀಗ, ಮಾಟವೆಂಬ ಶಬ್ದಕ್ಕರ್ಥ. ಅಂತಪ್ಪ ತ್ರಿವಿಧಲಿಂಗದಲ್ಲಿ ಸಮರಸೈಕ್ಯವೆಂಬುದೀಗ, ಕೂಟವೆಂಬ ಶಬ್ದಕ್ಕರ್ಥ. ಚಿತ್‌ಸ್ವರೂಪನಾದ ಶರಣ ಅವಿರಳ ಜ್ಞಾನದೃಕ್ಕಿಂದ ಚಿದ್‌ಘನ ಲಿಂಗವ ನೋಡುತ್ತಿರ್ದನೆಂಬುದೀಗ, ನೋಟವೆಂಬ ಶಬ್ದಕ್ಕರ್ಥ. ಪಂಚಾಚಾರ ದೊಡನೆ ಲಾವಣ್ಯವಾಗಿ ಒಪ್ಪುತ್ತಿಹುದು ಶರಣಂಗೆಂಬುದೀಗ, ಶೃಂಗಾರವವೆಬೇಟ ಷೋಡಶೋಪಚಾರಂಗಳು ಕೂಟಕ್ಕೆಂದು ಮಾಡಿದ ನಾಚಯ್ಯಪ್ರಿಯ್ಯ ಚನ್ನರಾಮ ಎಂಬ ಶಬ್ದಕ್ಕರ್ಥ.

## ತೆಲುಗೇಶ ಮಸಣಯ್ಯನವರ ವಚನ

೧

ಹಳದಿಯ ಸೀರೆಯನುಟ್ಟು ಜಳಹದ ವಾಲೆಯ ಕಿವಿಯಲ್ಲಿಕ್ಕಿ
ಮೊಳೆಯ ಡಂಗೆಯ ಪಿಡಿದು, ಗುಲಗಂಜಿಯ ದಂಡೆಯ ಕಟ್ಟಿ
ತುತ್ತುರು ತುರು ಎಂಬ ಕೊಳಲ ಬಾರಿಸುತ
ಅಪಳ ಚಪಳವೆಂಬ ಉಲಿವ ಘಂಟೆಯ ಕಟ್ಟಿ
ತುತ್ತುರು ಜಂಗುಳಿ ದೈವಗಳನೆಲ್ಲವ ಹಿಂದು-ಮುಂದು ಮಾಡಿ
ಆಳುವ ನಮ್ಮ ಶಂಭು ತೆಲುಗೇಶ್ವರನ ಮನೆಯ ಗೊವಾಳನೀತಾ !

ಟೀಕು:— ಚಿತ್ ಪ್ರಕಾಶವಾದ ಜ್ಞಾನಾಂಬರವ ಸರ್ವಾಂಗಕ್ಕೆ ಶರಣನು ಅಲಂಕರಿಸಿದನೆಂಬುದೀಗ, ಹಳದಿಯ ಸೀರೆಯನುಟ್ಟು ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣ ನಿರ್ಮಲವಾದ ಸರ್ವಾಚಾರ ಸಂಪತ್ತೆಂಬ ಆಚಾರವ ತನ್ನನಾಹತ ಕರ್ಣದ್ವಾರದಲ್ಲಿ ಧರಿಸಿದನೆಂಬುದೀಗ, ಬಳಹದ ಓಲೆಯ ಕಿವಿಯಲ್ಲಿಕ್ಕಿ ಎಂಬ ಶಬ್ದಕ್ಕರ್ಥ. ನೈಷ್ಠಿಯೆಂಬುದೆ ಮೊಳೆ, ಶಿವಭಾರವೆಂಬುದೆ ಡಂಗೆ, ಈ ಉಭಯ ವನು ಧೃತ ನಿಶ್ಚಯ ಹಸ್ತದಲ್ಲಿ ಧೃಡವಿಡಿದನೆಂಬುದೀಗ, ಮೊಳೆಯ ಡಂಗೆಯ ಪಿಡಿದು ಎಂಬ ಶಬ್ದಕ್ಕರ್ಥ. ಇಂತಪ್ಪ ನೈಷ್ಠಿಭಾವ ಸಂಬಂಧವಾದ ಶರಣ ತನ್ನ ಷಡ್ವಿಧಾಂಗದಲ್ಲಿ ಷಡ್ವಿಧ ಲಿಂಗವನು ಸ್ವಾನುಭಾವ ಸೂತ್ರದಿಂ ಬಂಧಿಸಿದನೆಂಬು ದೀಗ, ಗುಲಗಂಜಿಯ ದಂಡೆಯ ಕಟ್ಟಿ ಎಂಬ ಶಬ್ದಕ್ಕರ್ಥ. ಇಂತಪ್ಪ ಷಟಸ್ಥಲ ಜ್ಞಾನಕ್ರೀ ವಿಡಿದಾಚರಿಸುತ್ತಿರ್ದ ಶರಣ ಶಿವೋಹಂ ಶಿವೋಹಂ ಎಂದು ಶಿವ ಮಂತ್ರ ಸ್ಮರಣೆಯ ಮಾಡುತ್ತಿರ್ದನೆಂಬುದೀಗ, ತುತ್ತುರು ತುರು ಎಂಬ ಕೊಳಲ ಬಾರಿಸುತ ಎಂಬ ಶಬ್ದಕ್ಕರ್ಥ. ಚಿದ್ರೂಪನಾದ ಶರಣ ಚಿದ್ ಘನಲಿಂಗಕ್ಕೆ ಮಾಡುವ ಅಷ್ಟ ವಿಧಾಚರಣೆ–ಷೋಡೋಪಚಾರ ಮುಖ್ಯವಾದ ಕ್ರೀ ಬಹಳವಾದ ಕಾರಣ ಅಪಳೆವೆಂಬ ಶಬ್ದಕ್ಕರ್ಥ. ಚಿತ್ ಸ್ವರೂಪನಾದ ಶರಣನ ನಿಜಾಂತರಂಗದ ಸುಜ್ಞಾನ ಪ್ರಕಾಶವೆಂಬುದೀಗ, ಚಪಳವೆಂಬ ಶಬ್ದಕರ್ಥ. ಇಂತಪ್ಪ ಸುಜ್ಞಾನ ವಿಡಿದು ಆಚರಿಸುತ್ತಿರ್ದ ಶರಣ ಶಿವೋಹಂ–ಶಿವೋಹಂ ಎಂದು ಪ್ರಣವ ಮಂತ್ರ ವನು ಉಚ್ಚರಿಸುತ್ತಿರ್ದನೆಂಬುದೀಗ, ಉಲಿಯ ಘಂಟೆಯ ಕಟ್ಟಿ ಎಂಬ ಶಬ್ದ ಕ್ಕರ್ಥ. ಅಂತು ಶಿವೋಹಂ ಭಾವದಲ್ಲಿ ಸನ್ನಹಿತನಾಗಿರ್ಪ ಶರಣನು ಬ್ರಹ್ಮ-

ವಿಷ್ಣುವಾದಿ ದೇವತೆಗಳೆಲ್ಲರನು ಸೇವಕರ ಮಾಡಿ ಭೋಗ-ಭುಕ್ತಿಗಳ ಕೊಟ್ಟು ರಕ್ಷಿಸುತ್ತಿಹನೆಂಬುದೀಗ, ತುತ್ತುರು ಜಂಗುಳಿ ದೈವಗಳನೆಲ್ಲವ ಒಂದ ಮಾಡಿ ಆಳುವ ನಮ್ಮ ಶಂಭು ತೆಲುಗೇಶ್ವರನ ಮನೆಯ ಗೋವಳ ನೀತಾ ಎಂಬ ಶಬ್ದಕ್ಕರ್ಥ.

## ಬಳ್ಳೇಶ್ವರ ಮಲ್ಲಯ್ಯನವರ ವಚನಗಳು

೧

ಆರು ಬಣ್ಣದ ಹಕ್ಕಿಯು ತೋರಿದ ಗುರಿಯ ನುಂಗಿ
ಮೀರಿ ನಿಂದುದು ಗಗನ ಮಂಡಲದಲ್ಲಿ,
ಸಾರುತ್ತೈದುದೆ ಹೋಗಿ ಮೀರಿ ಬರಬೇಡ ಎಂದು
ಬೇರೆ ಮತ್ತೊಂದಧಿಕ ತೋರುತ್ತದೆ,
ಮೂರು ಕೋಣೆಗಳೊಳಗೆ ಈರೈದು ತಲೆ
ಎಂಟ ನೋಡಿ ಬಂದಾ ಶಿಶು ಬೆಸಗೊಂಬುದು,
ಪ್ರಾಣವಿಲ್ಲದ ಸೇನೆ ಪದ್ಮಶಂಖೆಯು ಕೋಟಿ
ಘಾಳಿವರಿದುದು ಎಂಟು ಜಾವದೊಳಗೆ
ಜಾತಿಗಾರನ ಕೈಯ್ಯ ಮಾಣಿಕ್ಯ ಸಿಕ್ಕದೆ ಅಳಿಗೊಂಡಿತ್ತು
ಜಗವ ಬೆಳುಮಾಡಿ ಜಾಣಕವಿಗಳಿಗೆ ಎದೆದಲ್ಲಣ
ಬಳ್ಳೇಶ್ವರನ ಕನ್ನಡವು ಹೇಳುವಡೆ ಯುಗ ಶಂಕೆ ಶಿವಶಿವಾ !

**ಟೀಕು:**— ಷಡ್ವರ್ಣ ಸ್ವರೂಪಮಪ್ಪ ಪರಮಹಂಸನೆಂಬುದೀಗ, ಆರು ಬಣ್ಣದ ಹಕ್ಕಿ ಎಂಬ ಶಬ್ದಕ್ಕರ್ಥ. ಆ ಪರಮಹಂಸನು ಶ್ರೀಗುರು ತೋರಿಕೊಟ್ಟ ಸಗುಣ ಬ್ರಹ್ಮವೆಂಬ ಲಕ್ಷ್ಯವ ಸದ್ವಿವೇಕ ಮುಖದಿಂದ ಅವಗ್ರಹಿಸಿದನೆಂಬುದೀಗ, ತೋರಿದ ಗುರಿಯ ನುಂಗಿ ಎಂಬ ಶಬ್ದಕ್ಕರ್ಥ. ಆ ನಿಜವನೊಳಕೊಂಡ ಆತ್ಮಾಕಾಶದಲ್ಲಿ ಸ್ವಲೀಲಾಪರನಾಗಿ ಸ್ವಸ್ಥ ಭಾವದಿಂದಿರ್ಪನೆಂಬುದೀಗ, ಮೀರಿ ನಿಂದುದು ಗಗನ ಮಂಡಲದಲ್ಲಿ ಎಂಬ ಶಬ್ದಕ್ಕರ್ಥ. ಇಂತು ನಿಜವನೊಳಕೊಂಡ ಆತ್ಮಾಕಾಶದಲ್ಲಿ ಸ್ವಲೀಲಾ ಪರನಾಗಿ ಸ್ವಸ್ಥ ಭಾವದಲ್ಲಿರ್ಪ ಶರಣನ ಸರ್ವಜ್ಞಾನ ದೃಷ್ಟಿಗೆ ಗೋಚರಿಸುವ ನಿರಾಳ ಶಿವ ತತ್ವದ ಮಹಾನುಭಾವಯೋಗದಿಂ ಕೂಡಿದ ಬಳಿಕ ಕೂಡಿದಂತಿಹುದಲ್ಲದೆ ಮರಳಿ ಭಿನ್ನ ಕ್ರಿಯಾ ನಾಚರಿಸಿ ಭವಕ್ಕೆ ಬಾರಲಾಗದೆಂದುದು ಆ ಶರಣನ ನಿಜೋಪದೇಶವೆಂಬುದೀಗ, ಸಾರಿತ್ತೈದುದೆ ಹೋಗಿ ಮೀರಿ ಬರಬೇಡ ಎಂದು ಬೇರೆ ಮತ್ತೊಂದಧಿಕ ತೋರುತ್ತದೆ ಎಂಬ ಶಬ್ದಕ್ಕರ್ಥ. ತ್ರಿಕೋಣೆಗಳೊಳಗೆ ತಲೆದೋರುವ ದಶವಾಯು ಅಷ್ಟ ತನುಗಳ ನಿವೃತ್ತಿ ಮುಖವನರಿದು ಆಚರಿಸುವ ಶರಣನ ಮುಖದಿಂ ಶಿವಾನುಭಾವವಲಾಗಿಸುವದೆಂಬು

ದೀಗ, ಮೂರು ಕೋಣೆಗಳೊಳಗೆ ಈರೈದು ತಲೆ ಎಂಟ ನೋಡಿ ಬಂದಾಶಿಸುವ ಬೆಸಗೊಂಬುದೆಂಬ ಶಬ್ದಕ್ಕರ್ಥ. ಇಂತು ಭಕ್ತಿ ಸಾಮ್ರಾಜ್ಯವನಾಳುವ ಶರಣನ ಮಂತ್ರಜ್ಞಾನ ಚೈತನ್ಯವಿಡಿದಿರ್ಪ ಸಕಲ ತತ್ತ್ವ ಕಾರಣಂಗಳು ಸರ್ವಾಚಾರ ಸಂಪತ್ತಿನಿಂ ಶಿವಸಾಮ್ರಾಜ್ಯವ ಸೂರೆಗೊಳಲು ಉದ್ಯೋಗಿಸಿ ಅಷ್ಟವಿಧ ಸಕೀಲದಲ್ಲಿ ಅನುವರ್ತಿಸುತ್ತಿಹುದೆಂಬುದೀಗ, ಪ್ರಾಣವಿಲ್ಲದ ಸೇನೆ ಪದ್ಮ-ಶಂಖಿಯು ಕೋಟಿ ಘಾಳಿವರಿವುದು ಎಂಟು ಜಾವದೊಳಗೆ ಎಂಬ ಶಬ್ದಕ್ಕರ್ಥ. ಇಂತು ಶಿವ ತತ್ತ್ವದ ಸಾಧಕನಾದ ಶರಣನ ಸದ್ಭಾವ ಹಸ್ತದ ಚಿತ್‌ಪ್ರಭಾಲಿಂಗವೆಂಬುದೀಗ, ಜಾತಿಗಾರನ ಕೈಯ ಮಾಣಿಕ್ಯವೆಂಬ ಶಬ್ದಕ್ಕರ್ಥ. ಆ ಚಿತ್ ಪ್ರಭಾಲಿಂಗವು ಆವುದರಿಂದಲೂ ಸಾಧ್ಯವಾಗದೆ ಜಗವ ಮಾಯಾ ಭ್ರಾಂತಿಗೀಡುಮಾಡಿ ಕಾಡುತ್ತಿಹುದೆಂಬುದೀಗ, ಮಾಣಿಕ್ಯ ಸಿಕ್ಕದೆ ಅಳಿಗೊಂಡಿತ್ತು ಜಗವ ಬೇಳು ಮಾಡಿ ಎಂಬ ಶಬ್ದಕ್ಕರ್ಥ. ಆ ಶಿವಾನುಭಾವದನುವನು ಉಪಮಿಸುವಡೆ ಯುಗ ಪ್ರಮಾಣಂಗಳಿಗೆ ಶಂಕೆಯ ಮಾಡದಾಗಿ ನಿಜವನರಿದಿಹೆನೆಂಬ ಕೃತ ಜ್ಞಾನಿಗಳ ಮತಿಗೆ ಭಿನ್ನೈಸದೆ ಚಿತ್ತವನಳಕಿಸುತ್ತಿಹುದು ಆಶ್ಚರ್ಯವೆಂಬುದೀಗ, ಜಾಣ ಕವಿಗಳಿಗೆದೆಪಲ್ಲಣ ಬಳ್ಳೇಶ್ವರನ ಕನ್ನಡವ ಹೇಳುವಡೆ ಯುಗ ಶಂಕೆ ಶಿವಶಿವಾ ಎಂಬ ಶಬ್ದಕ್ಕರ್ಥ.

೨

ದೇವರಾಜ್ಯದಲ್ಲಿ ಧಾರೆಯ ಭೋಜನರಮನೆಯ ವಾಲಗದೊಳಗೆ
ಹೊಂಪುಳಿವರಿವುತ್ತ ನಾಲ್ಕು ದಿಕ್ಕಿನಲ್ಲಿ ನಾಲ್ವರ ಪಣೆಯ ಬೆಳಗು
ಜಾಣ ಭಾಷೆಯಲ್ಲಿ ಮಧ್ಯದಲೊಬ್ಬಳು ಆಣತಿಯ ಸರವು
ಮಹಾದೇವಿ ಗಾಂಧಾರಿಯನು ತೋರಿ ಒದವಿಸಿದ ಮಧು
ಮಾಧವಿಯನು ಭೋಜಗದ್ಯವ ನೋಡಲು ಶಿವನು ಕೇಳುತ್ತಿರೆ
ಬಾಣಸಿಗ ಹಡಪದವನೆ ಬಲ್ಲನು ಕಾಣಾ
ಕೊಂಕಿಲ್ಲದೆ ಸಬುದರಸ ಭೇದವನು ರಾಣಿ ಬಲ್ಲಳು
ಕುಮುದ ಪಾತ್ರ ವಿಧಾಂತ ಮಾವತಿಗ ಭೇದವನು
ಮೇಲೆ ಅಂಗರಿಕನು ದೀವಟಿಗೆ ಧಾರೆವಟ್ಟದ ಜಾಣನು
ಅಲ್ಲಿ ಚಂಬಕನ ಕಹಳೆ ಭೋರೆಂದು ಬಾರಿಸಿ
ಪ್ರತಾಪ ಕದಳಿ ಗೆಯದೆ ವಲ್ಲಣ ಆರು ಬಣ್ಣದ ವಸ್ತುವ
ಮೂರು ಬಣ್ಣಕ್ಕೆ ತಂದು ಕೆವಣಿಸಿದನು
ಕಮಠಸುರದ ಕಮಾಹಾರಧಾರದ ಖೂಳರ—
ನಾಲ್ವರ ಬಯಕೆಯನು ದೇವ ಬಳ್ಳೇಶ್ವರನ ಕನ್ನಡ ವಿಪರೀತಾ !

**ಟೀಕು:**— ಶಿವ ಸಾಮ್ರಾಜ್ಯದೊಳು ಮೋಕ್ಷಾಂಗನೆಯ ಕೈಯ ಹಿಡಿದು [illegible] ಸಂಗ ಸಂಯೋಗದಿಂ ಪರಮ ಸುಖ ಪರಿಣಾಮಿಯಹ ಸರ್ವಜ

ಶರಣನೆಂಬುದೀಗ, ದೇವರಾಜ್ಯದಲ್ಲಿ ಧಾರೆಯು ಭೋಜನೆಂಬ ಶಬ್ದಕ್ಕರ್ಥ. ಅಂತಪ್ಪ ಶರಣ ತನ್ನ ಚಿದಂಗವೆಂಬ ರಾಜಭವನದಲ್ಲಿ ಸಕಲ ಕರಣಂಗಳು ಶಿವಾನು ಭಾವ ವಿವೇಕದಿಂ ವಶವರ್ತಿಗಳಾಗಿ ಪಾಲೈಸುವ ನಿಯೋಗದೊಳು ಪರುಷ ಭಾವ ದಿಂದಿರಲೀಗ, ಅರಮನೆಯ ಪಾಲಗದೊಳಗೆ ಹೊಂಪುಳಿವರಿವುತ್ತ ಎಂಬ ಶಬ್ದ ಕ್ಕರ್ಥ. ಆ ಶಿವ ಸುಖೋತ್ಸಾಹದಿಂ ಕುಂಡಲಿ ಸ್ಥಾನದ ಶುಪ್ತ ಭುಂಜರಗ ನೂರ್ಧ್ವ ಮುಖವಾಗಿ ಪಶ್ಚಿಮ ನಾಳದಿಂ ಬ್ರಹ್ಮರಂಧ್ರವನೆಯ್ದಿ ಪ್ರಕಾಶಿಸಲು ಅಂತರಂಗದ ಚತುಃ ಸ್ಥಲಂಗಳಲ್ಲಿ ಚತುರ್ವಿಧ ಲಿಂಗ ಪ್ರಕಾಶವಾಯಿತ್ತೆಂಬು ದೀಗ, ನಾಲ್ಕು ದಿಕ್ಕಿನಲ್ಲಿ ನಾಲ್ವರ ಪಣಿಯ ಬೆಳಗು ಎಂಬ ಶಬ್ದಕ್ಕರ್ಥ. ಆ ಲಿಂಗ ಪ್ರಕಾಶವಾದ ಅಂತರಂಗದಲ್ಲಿ ಜ್ಞಾನಶಕ್ತಿ ಸುಲಲಿತ ವಚನದಿಂದ ಉಪ ದೇಶ ಮಂತ್ರವನು ಉಚ್ಚರಿಸುತ್ತಿರಲದೀಗ, ಜಾಣ ಭಾಷೆಯಲ್ಲಿ ಮಧ್ಯದ ಲೊಬ್ಬಳು ಆಣತಿಯರಸವೆಂಬ ಶಬ್ದಕ್ಕರ್ಥ. ಆ ಶರಣಂಗೆ ಚಿಚ್ಛಕ್ತಿ ಸದಾಚಾರ ಸಂಪತ್ತಿನ ಸದ್ವಾಸನೆಯನುಳ್ಳ ಕ್ರಿಯಾ ಶಕ್ತಿಯನರುಹಿ ಬೋಧಾಮೃತವ ಸೂಚ ಸುತ್ತಿರಲದೀಗ, ಮಹಾದೇವಿ ಗಾಂಧಾರಿಯನು ತೋರಿ ವದವಿಸಿ ಮಧುಮಾಧ ವಿಯನೆಂಬ ಶಬ್ದಕ್ಕರ್ಥ. ನಾಹಂ-ಕೋಹಂ-ಸೋಹಂ ಎಂಬ ಶಬ್ದ ಸೂತಕ ವಿಲ್ಲದ ಶಿವೋಹಂ ಎಂಬ ಧ್ಯಾನಾಮೃತದನುವ ಪಟ್ಟದ ರಾಣಿಯೆಂಬ ಇಚ್ಛಾಶಕ್ತಿ ಬಲ್ಲಳೆಂಬುದೀಗ, ಕೊಂಕಿಲ್ಲ ಶಬುದರಸ ಭೇದವನು ರಾಣಿ ಬಲ್ಲಳೆಂಬ ಶಬ್ದಕ್ಕರ್ಥ. ಆ ಶಿವೋಹಂ ಭಾವದಿಂ ಶಿವಕೀರ್ತನಂಗೈಯ್ಯಲು ಆ ಶರಣಂಗೆ ಚಿಲ್ಲಿಂಗ ಪ್ರಸನ್ನ ವಾದುದನು ನಿರ್ವಂಚಕ ಬುದ್ಧಿ, ದಾಸೋಹಚಿತ್ತವೆಂಬುಭಯವನು ಕರಣಂಗಳೆ ಬಲ್ಲವೆಂಬುದೀಗ, ಭೋಜ್ಯ ಗದ್ಯವನೋಡಲು ಶಿವನು ಕೇಳುತ್ತಿರೆ ಬಾಣಸಿಗ ಹಡಪದವನೆ ಬಲ್ಲನು ಕಾಣಾ ಎಂಬ ಶಬ್ದಕ್ಕರ್ಥ. ಸದ್ವಾಸನಾ ಹೃತ್ಕಮಲದಕ್ಕೆ ವಿಧಾಂತನಾದ ಎಂಟು ವಿಧದ ಮದವನುಳ್ಳ ವೈಕಾರಿಕಾಗಜವ ವಿವೇಕಾಂಕುಶ ದಿಂದೊತ್ತಿ ಸತ್ಪಥದೊಳ್ ನಡಿಸುವ ಚಿದಹಂಕಾರದ ನಿಲವೆಂಬುದೀಗ, ಮೇಲೆ ಅಂಗರಿಕನೆಂಬ ಶಬ್ದಕ್ಕರ್ಥ. ಆ ಶರಣನ ಅಜ್ಞಾನ ತಮಸ್ಸು ಹೊರ್ದವಂತೆ ನಿಜವ ಪ್ರಕಾಶಿಸುವ ಸುಜ್ಞಾನವೆಂಬುದೀಗ, ದೀವಟಿಗನೆಂಬ ಶಬ್ದಕ್ಕರ್ಥ. ಆ ಶರಣನ ಸರ್ವೇಂದ್ರಿಯ ದ್ವಾರದೊಳು ಅನ್ಯ ವಿಷಯ ಪ್ರವೇಶವಾಗದಂತಿರ್ಪ ಸಾವಧಾನ ಸಕೀಲವನುಳ್ಳ ಸಜ್ಜೀವನ ಸುಷುಮ್ನಾದ್ವಾರದೊಳು ಕೋಹಂ ಮಳಿದು ಸೋಹಂಮೆಂಬ ಸುನಾದ ಧ್ವನಿ ಸೂಚಿಸುತ್ತಿರಲು ಜಯಿಸಬಾರದ ದೇಹೇಂದ್ರಿ ಯಾದಿಗಳು ಇರಲಂಜಿ ತೊಲಗಿದವೆಂಬುದೀಗ, ಅಲ್ಲಿ ಚಂಬಕನ ಕಹಳೆ ಭೋರೆಂದು ಬಾರಿಸಿ ಪ್ರತಾಪಕದಳಿಗೆಯದೆ ದಲ್ಲಣ ಎಂಬ ಶಬ್ದಕ್ಕರ್ಥ. ಇಂತಾ ಗಲಾ ಶರಣನು ಷಡ್ವರ್ಣಾತ್ಮಕವಾತ ಷಡ್ವಿಧಲಿಂಗ ತ್ರಿವರ್ಣ ಸ್ವರೂಪವಾದ ಲಿಂಗತ್ರಯದೊಳಗಡಗಿಸಿ ಅಂಗತ್ರಯದೊಳಳವಡಿಸಿಕೊಂಡನೆಂಬುದೀಗ, ಆರು ಬಣ್ಣದ ವಸ್ತುವ ಮೂರು ಬಣ್ಣಕ್ಕೆ ತಂದು ಕೆವಣಿಸಿದನೆಂಬ ಶಬ್ದಕ್ಕರ್ಥ. ಕಮ ಳವೆಂದೊಡೆ ದೇಹ. ಅಸುರವೆಂದೊಡೆ ಅಸುರ ಕರ್ಮವನೀವ ಆಹಾರವೆಂದೊಡೆ ಇಂದ್ರಿಯ ವಿಷಯ ಸುಖಾಧಾರದಾ ಎಂದೊಡೆ, ಇವೆಲ್ಲವ ಧರಿಸಿದ ಜೀವನು. ಇಂತಿ ಜೀವಭಾವದಿಂದ ಇತರ ಕಾಮ್ಯಾರ್ಥಂಗಳ ಬಯಸುವ ಕುಟಿಲ ಕುಹಕ

ತಂತ್ರಭ್ಯಾಸಿಗಳಹ ಚತುರ್ವಿಧ ಸಾಧಕರಿಗೆ ಆ ತ್ರಿವಿಧಲಿಂಗ ಸಂಬಂಧಿಯಪ್ಪ ಶರಣನ ನಿಲುವು ಗೋಚರಿಸದಿರ್ಪುದು ಆಶ್ಚರ್ಯವೆಂಬುದೀಗ, ಕಮಠಾಸುರದ ಕಠಾಹಾರಧಾರದ ಖೂಳರ ನಾಲ್ವರ ಬಯಕೆಯನು ದೇವ ಬಳ್ಳೇಶ್ವರನ ಕನ್ನಡ ವಿಪರೀತವೆಂಬ ಶಬ್ದಕ್ಕರ್ಥ.

೩

ಧರೆಯೊಳಗೆ ಚೋದ್ಯವ ನೋಡಿರೆ, ಒಂದು ಹರಿಣಿಯ ಮೃಗವು,
ಓದ ಬಲ್ಲುದಾ ಚಲುವ ಗಿಳಿಯಲ್ಲಿ ವಿಪರೀತ ಕೊಂಬು–ಕೊಂಬು
ಗಳುಂಟು
ಇಂಬು ಕಾಲಲ್ಲಿ ಮುಖವು ಜಂಬುದ್ವಿಪದ ಬೆಳಗಿನ--
ಉದಯದ ಆಹಾರವದಕ್ಕೆ; ಸಂಭ್ರಮವ ನುಡಿವ ಕವಿಗಳ
ಮುಖವ ಝಳಪಿಸಿತ್ತು ಶಂಭು ಬಳ್ಳೇಶ್ವರನ ಕೊರಳ ಹಾರವ
ನೋಡಿ ನಗುತ್ತ.

**ಟೀಕು:**— ಚಿದಾರಣ್ಯದೋಳ್ ಪ್ರವರ್ತಿಸುವ ಚಿಚ್ಛಕ್ತಿಯೆಂಬ ಹರಿಣಿಯ ಮೃಗವು ಮಹದಾಕಾಶದಲ್ಲಿ ಸ್ವಲೀಲೆಯಿಂ ಸರ್ವಲಕ್ಷಣ ಸಂಪನ್ನಿಕೆಯಿಂದ ಒಪ್ಪುವ ಪರಮಹಂಸನಲ್ಲಿ ಮಹಾನುಭಾವವ ಸಾಧಿಸಬಲ್ಲುದಿದು ಜಗದೊಳಗೆ ಆಶ್ಚರ್ಯವೆಂಬುದೀಗ, ಧರೆಯೊಳಗೆ ಚೋದ್ಯವ ನೋಡಿರೆ ಒಂದು ಹರಿಣಿಯ ಮೃಗವು ಓದಬಲ್ಲುದಾ ಚೆಲುವ ಗಿಳಿಯಲ್ಲಿ ಎಂಬ ಶಬ್ದಕ್ಕರ್ಥ. ಇಂತು ಗುರು ಮುಖದಿಂ ಮಹಾನುಭಾವವ ಸಾಧಿಸುತ್ತಿರ್ದ ಶರಣಸತಿಯು ಸದ್ವಿವೇಕವೆಂಬ ಶಿರಸ್ಸಿನ ಶಾಂತಿ–ದಾಂತಿಗಳೊಳಗಾದ ಷಡ್ವಿಧ ಭಕ್ತಿಗಳೆ ಸದಾಚಾರ ಸಂಪತ್ತಿಗಿಂಬಾದುದು ಆಶ್ಚರ್ಯವೆಂಬುದೀಗ, ವಿಪರೀತ ಕೊಂಬು-ಕೊಂಬುಗಳುಂಟು ಇಂಬು ಎಂಬ ಶಬ್ದಕ್ಕರ್ಥ. ಆ ಶರಣ ಸತಿಯು ಸತ್ಕ್ರಿಯಾಚಾರದಲ್ಲಿ ಸುಜ್ಞಾನ ಮುಖದೋರುತ್ತಿಹುದೆಂಬುದೀಗ, ಕಾಲಲ್ಲಿ ಮುಖವು ಎಂಬ ಶಬ್ದಕ್ಕರ್ಥ. ಆ ಶರಣ ಸತಿಗೆ ಸ್ಥೂಲ ತನುವಿನಲ್ಲಿ ಪ್ರಕಾಶಿಸುವ ಲಿಂಗಮುಖದಿಂದೊಗೆದ ಶುದ್ಧ ಪ್ರಸಾದ ಆಹಾರವಾಗಿರ್ಪುದೆಂಬುದೀಗ, ಜಂಬು ದ್ವೀಪದ ಬೆಳಗಿನುದಯದ ಆಹಾರವದಕ್ಕೆ ಎಂಬ ಶಬ್ದಕ್ಕರ್ಥ. ಆ ಶ್ರೀಗುರುವಿನ ನೈಷ್ಠಿಕಾ ಭಾವದೋಳ್ ಚಿದ್ವಿಭೂಷಣಮಪ್ಪ ಶಿವಾನುಭಾವದ ಸಾರ್ಥಂಗಳನು ಅರಿದು ಆನಂದಿಸುತ್ತಿರ್ಪ ಶರಣ ಸತಿ ಇತರ ಮಥದಭ್ಯಾಸದಿಂ ಬಲ್ಲೆವೆಂದು ಅಹಂಕರಿಸಿ ನುಡಿವ ಖಂಡಿತ ಜ್ಞಾನಿಗಳ ಅರಿವೆಲ್ಲ ಮರವೆಗೊಳಗೆಂದು ಧಿಕ್ಕರಿಸುತ್ತಿರಲೀಗ, ಸಂಭ್ರಮ ನುಡಿವ ಕವಿಗಳ ಮುಖವ ಝಳಪಿಸಿತ್ತು ಶಂಭು ಬಳ್ಳೇಶ್ವರನ ಕೊರಳ ಹಾರವ ನೋಡಿ ನಗುತ್ತ ಎಂಬ ಶಬ್ದಕ್ಕರ್ಥ.

೪

ಮೇಘ ಮಂಡಲದರಸು, ಅನುರಸದರಸಿಯ ಮೈಯಲ್ಲಿತಾಗೆ
ಒಡಗಿದ ಅನುಮಿಷ ರತ್ನ ಪ್ರಭೆಯ ನೋಡುವಡ,

ಇಪ್ಪತ್ತೈದು ನೂರೆಂಟರ ಮಧ್ಯ ತುಸಿದ ಸಮಾಧಿ
ಕೆತಾರಾ ಮಧ್ಯದ ಆನೆಯ ಕುಂಭ ಸ್ಥಲದ ಭವನಿಕೆಯ ಮೇಲೆ
ಜಾಣ ನಿಟ್ಟಿಸಬಲ್ಲಡೆ ಹೇಳಾ ! ಕನ್ನದುಳಿಯ ಕೆಂಪನು
ತನ್ನ ಕೈಯಲ್ಲಿ ಕೊಟ್ಟಡೆ ಬಿನ್ನಾಣದ ಕಳವು ಹೇಳಾ !
ತನ್ನ ಮನೆಯಲ್ಲಿ ಕರ್ನ ಚಕ್ರ ಪತ್ರವನಿರಿಸಿದಡೆ ನಿನ್ನಳವೆ
ಲೋಕದೊಳು
ಬಲ್ಲ ಜಾಣರು ಹಣ್ಣಿನೊಳಗಣ ಪದ್ಮದೆಸಳೆಸಳು
ಕಮ್ಮೊರೆದೇವ ಬಳ್ಳೇಶ್ವರನ ಅನುಭಾವದ ಸಿರಿದೊಡಕು.

ಟೀಕು:— ಪರಮಾನಂದ ರಸಮಯವಾದ ಚಿದಾಕಾಶ ಮಧ್ಯದಲ್ಲಿ ಸಮಸ್ತ ವರ್ಣಾತ್ಮಕನೆನಿಸುವ ಮಂತ್ರರಾಜನಿರುತ್ತಿರಲೀಗ, ಮೋಕ್ಷಮಂಡಲದರಸೆಂಬ ಶಬ್ದಕ್ಕರ್ಥ. ಆ ಮಂತ್ರಾಧಿಪತಿಯಾದ ಪರಶಿವನು ಜ್ಞಾನಾಮೃತವಾದ ಚಿಚ್ಛಕ್ತಿಯ ಚಿದಂಗದಲ್ಲಿ ಅಭಿನ್ನ ಸಂಯೋಗವನೆಯ್ದಿದನೆಂಬುದೀಗ, ಅಸುರದರಸಿಯ ವೈಯಲ್ಲಿ ತಾಗೆ ಎಂಬ ಶಬ್ದಕ್ಕರ್ಥ. ಆ ನೆಲೆಗೊಂಡ ಸಂಬಂಧದಿಂದಲ್ಲಿ ಮಹಾಜ್ಞಾನ ಪ್ರಕಾಶವಾಯಿತ್ತೆಂಬುದೀಗ, ಒದಗಿದ ಅನಿಮಿಷ ರತ್ನಪ್ರಭೆಯ ಎಂಬ ಶಬ್ದಕ್ಕರ್ಥ. ಆ ಮಹಾಜ್ಞಾನ ಪ್ರಕಾಶದಿಂ ತನ್ನ ತಾಕಾಬ ಚಿದ್ರೂಪನುಳ್ಳ ಶರಣನು ಪಂಚವಿಂಶತಿ ತತ್ವ, ಅಷ್ಟೋತ್ತರ ಶತಕರಣಂಗಳೆಲ್ಲವ ನಿವೃತ್ತಿಮುಖಕ್ಕೆ ತಂದು ಅಲ್ಲಿ ಚಿತ್ತೇಕಾಗ್ರದಿಂದ ಇರುತ್ತಿರ್ದನೆಂಬುದೀಗ, ನೋಡುವಡೆ ಇಪ್ಪತ್ತೈದು ನೂರೆಂಟರ ಮಧ್ಯ ತೂಗಿದ ಸಮಾಧಿಕೆಯೆಂಬ ಶಬ್ದಕ್ಕರ್ಥ. ಮಹದಂಕಾರದ ಸದ್ವಿವೇಕಾನುಭಾವದಲ್ಲಿ ತೋರುವ ಚಿತ್ ಪ್ರಕಾಶಲಿಂಗವ ಅವಿರಳ ಜ್ಞಾನದೃಷ್ಟಿಯಿಂ ಕಾಬ ತೆರನರಿದಾತನೆ ಸರ್ವಜ್ಞ ಶರಣನೆಂಬುದೀಗ, ತಾರಾಮಧ್ಯದ ಆನೆಯ ಕುಂಭಸ್ಥಳದ ಭವನಿಕೆಯ ಮೇಲೆ ಜಾಣ ನಿಟ್ಟಿಸಬಲ್ಲಡೆ ಹೇಳಾ ಎಂಬ ಶಬ್ದಕ್ಕರ್ಥ. ಆ ಶರಣನ ಕೃತನಿಶ್ಚಯ ಹಸ್ತದಲ್ಲಿ ನೈಷ್ಠಿಕಾಜ್ಞಾನವ ಸಂಬಂಧಿಸಲು ಅಸಾಧ್ಯ ಸಾಧಕನಾಗಿರ್ದನೆಂಬುದೀಗ, ಕನ್ನದುಳಿಯ ಕೆಂಪನು ತನ್ನ ಕೈಯಲ್ಲಿ ಕೊಟ್ಟಡೆ ಬಿನ್ನಣದ ಕಳವು ಹೇಳಾ ಎಂಬ ಶಬ್ದಕ್ಕರ್ಥ. ಇಂತಪ್ಪ ಶರಣನ ಅಂಗವೆಂಬ ಗೃಹದಲ್ಲಿ ಸಂಚಯ ಸಂಬಂಧವಾದ ಸತ್ಕ್ರಿಯಾಚಾರ ಜಗದ ಬಿನ್ನಾಣಿಗಳಿಗೆ ಅಶಕ್ಯವಾಗಿಹುದೆಂಬುದೀಗ, ತನ್ನ ಮನೆಯಲ್ಲಿ ಕರ್ನಚಕ್ರ ಪತ್ರವನಿರಿಸಿದಡೆ ನಿನ್ನಳವೆ ಲೋಕದೊಳು ಬಲ್ಲ ಜಾಣರು ಎಂಬ ಶಬ್ದಕ್ಕರ್ಥ. ಆ ಸತ್ಕ್ರಿಯಾ ಸಂಪನ್ನನಾದ ಶರಣನ ಮಹಾನುಭಾವ ಸಂಬಂಧವಪ್ಪ ಸದಾಚಾರವು ಸದ್ವಾಸನಾ ಸಂಪೂರ್ಣವಾಗಿರ್ದವೆಂಬುದೀಗ, ಹಣ್ಣಿನೊಳಗಣ ಪದ್ಮದೆಸಳೆಸಳು ಕಮ್ಮೊರೆಯೆಂಬ ಶಬ್ದಕ್ಕರ್ಥ. ಇಂತಪ್ಪ ಶರಣನ ನಿರ್ಣಯವಾರಿಗೂ ಸಾಧ್ಯವಾಗದೆ ಕಾಡುತ್ತಿದ್ದಿತೆಂಬುದೀಗ, ದೇವ ಬಳ್ಳೇಶ್ವರನ ಅನುಭಾವದ ಸಿರಿದೊಡಕು ಎಂಬ ಶಬ್ದಕ್ಕರ್ಥ.

೫

ಸಹಸ್ರಮುಖ, ಕೊರಳೊಂದು ನಾಸಿಕದಲುಂಬ
ಸುಖ ಘಾಸಿ ಮಾಡಿದರದರ ರೂಪು ನೋಡಾ !
ಘಾಸಿಯಾದ ಭಾಷೆ ಏಕೆ, ವರ್ಣದ ಕೌತುಕದಿಂದ
ಕಾಂತೆ ನೋಡಿದಳು ಕನ್ನಡಿಯ ಬೆಳಗ ಸೂಸಲೀಯದೆ
ಉಣಬಲ್ಲವನ ತೋರುತ್ತಿದೆ ಬಳ್ಳೇಶ್ವರನ ಕೊರಳ ಮಧ್ಯವ ನೋಡಿ
ನಗುತ್ತಿದೆ.

**ಟೀಕು:—** ಜೀವಹಂಸನ ಹಲವು ಮುಖವಾಗಿ ಚರಿಸುವ ಇಂದ್ರಿಯಂಗಳಿಗೆ ಮನ ಒಂದೇ ಕಾರಣವಾಗಿರ್ಪುದೆಂಬುದೀಗ, ಸಹಸ್ರಮುಖ ಕೊರಳೊಂದು ಎಂಬ ಶಬ್ದಕ್ಕರ್ಥ. ಆ ಜೀವಹಂಸನೂ ದುರ್ವಾಸನಾ ಸ್ವೀಕಾರವೆಂಬ ನಾಸಿಕದಿಂದ ಅನ್ಯ ವಿಷಯಂಗಳನು ಅನುಭವಿಸುತ್ತಿಹುದೆಂಬುದೀಗ, ನಾಸಿಕದಲುಂಬ ಸುಖವೆಂಬ ಶಬ್ದಕ್ಕರ್ಥ. ಆ ಜೀವನ ಜಡ ಪ್ರಶ್ನವ ಸತ್ಕ್ರಿಯಾ ಮುಖದಿಂ ಮಥನಿಸಲದೀಗ, ಘಾಸಿ ಮಾಡಿದರದರ ರೂಪು ನೋಡಾ ಎಂಬ ಶಬ್ದಕ್ಕರ್ಥ. ಇಂತು ಸತ್ಕ್ರಿಯಾ ಮುಖದಿಂ ದೇಹ ಧರ್ಮ ಕೆಡಲು ಆ ಜೀವನ ಶಬ್ದ ಜಾಲಂಗಳು ಸುಜ್ಞಾನ ಮುಖದಿಂ ಅಳಿಯಬೇಕೆಂಬುದೀಗ, ಘಾಸಿಯಾದ ಭಾಷೆ ಏಕೆ ಎಂಬ ಶಬ್ದಕ್ಕರ್ಥ. ಇಂತಪ್ಪ ಸತ್ಕ್ರಿಯಾ ಜ್ಞಾನದಿಂ ಕಾಯ-ಜೀವದ ಗುಣವಳಿದ ಶರಣ ಸತಿ ಪರಮಧ್ಯಾನ ಕರಿಗೊಂಡು ಸದ್ವಿವೇಕದರ್ಪಣವ ನಿರೀಕ್ಷಿಸಿ ತನ್ನ ಪ್ರತಿಬಿಂಬ ಭಾವವ ನವಗ್ರಹಿಸಿದಳೆಂಬುದೀಗ, ವರ್ಣದ ಕೌತುಕದಿಂದ ಕಾಂತೆ ನೋಡಿದಳು ಕನ್ನಡಿಯ ಬೆಳಗನು ಎಂಬ ಶಬ್ದಕ್ಕರ್ಥ. ಆ ಪ್ರತಿಬಿಂಬ ಭಾವವು ಶರಣ ಮುಖಲಿಂಗವಾಗಿ ಸರ್ವೇಂದ್ರಿಯ ಸುಖವ ಬಿಡದೆ ಭೋಗಿಸುವ ಲಿಂಗದ ನಿಜವನರುಹಿ ಆ ಶರಣನ ನೈಷ್ಠಿಕಾಚಾರವ ಕಂಡು ಸಂಭ್ರಮಿಸುತ್ತಿಹುದೆಂಬುದೀಗ, ಸೂಸಲೀಯದೆ ಉಣಬಲ್ಲವನ ತೋರುತ್ತಿದೆ ಬಳ್ಳೇಶ್ವರನ ಕೊರಳ ಮಧ್ಯವನೋಡಿ ನಗುತ್ತಿದೆ ಎಂಬ ಶಬ್ದಕ್ಕರ್ಥ.

## ಹೊಡೆಹುಲ್ಲ ಬಂಕಣ್ಣನವರ ವಚನಗಳು

೧

ಧರೆಯಲ್ಲಿ ಬಿದ್ದ ಬೀಜ ಧರೆಯಲ್ಲಿಯೆ ಅಳಿಯಿತ್ತು, ಆಕಾಶದಲ್ಲಿ
ಫಲವಾಯಿತ್ತು
ಆ ಫಲವ ಬಯಲ ಕಣದಲೊಕ್ಕಿ ಮನದ ಹಗೆಯಲ್ಲಿ ತುಂಬಿ
ಬಾಯ ಹಗಹದಲ್ಲಿ ತೆಗದು ಕಣ್ಣಿನ ಕೊಳಗದಲಳವುತ್ತಿರಲಾಗಿ
ಕಂಡುಗವೆಂಬುದಕ್ಕೆ ಮೊದಲೆ ಕೊರಳಡಗಿತ್ತು,
ಕುಂಭೇಶ್ವರನಲ್ಲಿರ್ದ ಜಗನ್ನಾಥನರಿಕೆಯಾಗಿ.

ಟೀಕು:— ಸುಜ್ಞಾನೋದಯವಾದ ಶರಣನ ಆಚಾರಾಂಗದಲ್ಲಿ ಸಂಬಂಧವಾದ ನಿರ್ಬೀಜ ಸ್ವರೂಪವನೆಯ್ದಿದ ಇಷ್ಟಲಿಂಗವೆಂಬುದೀಗ, ಧರೆಯಲ್ಲಿ ಬಿದ್ದ ಬೀಜವೆಂಬ ಶಬ್ದಕ್ಕರ್ಥ. ಅಂತಪ್ಪ ಚಿದ್ ಘನಲಿಂಗವು ಚಿದ್ರೂಪನಾದ ಶರಣನ ಆಚಾರಾಂಗದಲ್ಲಿ ಸಮರಸವಾಯಿತ್ತೆಂಬುದೀಗ, ಧರೆಯಲ್ಲಿಯೇ ಅಳಿಯಿತ್ತೆಂಬ ಶಬ್ದಕ್ಕರ್ಥ. ಅಂತು ಗುರುಕರುಣದಿಂ ಪ್ರತ್ಯಕ್ಷವಾದ ಪರಬ್ರಹ್ಮವು ಚಿತ್ಕಲಾ ಸ್ವರೂಪಿನಿಂ ಬಂದು ಆತ್ಮನನವಗ್ರಹಿಸಿತ್ತೆಂಬುದೀಗ, ಆಕಾಶದಲ್ಲಿ ಫಲವಾಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಚೈತನ್ಯ ಸ್ವರೂಪವಾದ ಪ್ರಾಣಲಿಂಗದಲ್ಲಿ ಮೀರಿದ ಕ್ರಿಯಾಚಾರವಿಡಿದು ಆಚರಿಸುತ್ತಿರ್ದನೆಂಬುದೀಗ, ಆ ಫಲವ ಬಯಲ ಕಣದಲೊಕ್ಕಿ ಎಂಬ ಶಬ್ದಕ್ಕರ್ಥ. ಅಂತು ಉನ್ಮನಿ ಸ್ವರೂಪವಾದ ಮನೋಮಧ್ಯದ ನಿಜಾನುಭಾವಾಂತರಂಗದಲ್ಲಿ ಪ್ರಾಣಲಿಂಗವ ಸಮರಸವ ಮಾಡಿದನೆಂಬುದೀಗ, ಮನೆಯ ಪಗೆಯಲ್ಲಿ (ಪಗವದಲ್ಲಿ) ತುಂಬಿ ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣ ಚೈತನ್ಯ ಸ್ವರೂಪವಾದ ಪ್ರಾಣಲಿಂಗವನು ಷಡೇಂದ್ರಿಯಂಗಳಲ್ಲಿ ಷಡ್ವಿಧ ಲಿಂಗವಾಗಿ ಸಂಬಂಧವ ಮಾಡಿದನೆಂಬುದೀಗ, ಜಾಯಪರಪದಲ್ಲಿ ತೆಗೆದು ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣನು ಸುಜ್ಞಾನ ದೃಷ್ಟಿಯಿಂ ನೋಡಿ ತನ್ನ ನಿಜ ಸ್ವರೂಪವನು ವಿವೇಕಿಸುತ್ತಿರ್ದನೆಂಬುದೀಗ, ಕಣ್ಣಿನ ಕೊಳಗವಲಳವುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಅಖಂಡ ಪರಿಪೂರ್ಣವಾದ ಪರಬ್ರಹ್ಮವೆಂದು ಭಾವಿಸಿ ಶಿವೋಹಂ-ಶಿವೋಹಂ ಎನ್ನುತ್ತಿರಲಲ್ಲಿ ಲಿಂಗಾಂಗವೆಂಬ ಉಭಯವಳಿದು ಒಂದೇ ಪರಬ್ರಹ್ಮವಾಗಿತ್ತೆಂಬುದೀಗ, ಕಂಡುಗವೆಂಬುದಕ್ಕೆ ಮೊದಲೆ ಕೊಳಗಡಗಿತ್ತು ಕುಂಭೇಶ್ವರನಲ್ಲಿರ್ದ ಜಗನ್ನಾಥನರಿಕೆಯಾಗಿ ಎಂಬ ಶಬ್ದಕ್ಕರ್ಥ.

೨

ಸ್ವಯ ಪ್ರಸಾದಿಗುರು ಪ್ರಸಾದವನೊಲ್ಲ,
ಲಿಂಗ ಪ್ರಸಾದವ ಕೊಂಬ ಜ್ಞಾನ ಪ್ರಸಾದಿ—
ಜಂಗಮ ಪ್ರಸಾದವ ಕೊಂಬ ಲಿಂಗ ಪ್ರಸಾದವನೊಲ್ಲ
ಮಹಾ ಪ್ರಸಾದಿ ಪ್ರಸನ್ನ ಪ್ರಸಾದವ ಕೊಂಬ ಜಂಗಮ ಪ್ರಸಾದವನೊಲ್ಲ,
ಇಂತಿ ತ್ರಿವಿಧ ಪ್ರಸಾದದ ಭೇದವನರಿದು
ಒಂದನೊಡಗೂಡಿ ಒಂದನರ್ಪಿಸಬೇಕು
ಆ ಉಭಯವ ನೊಡಗೂಡಿ ಪ್ರಸನ್ನ ಪ್ರಸಾದವ
ಲಿಂಗಕ್ಕೆ ಕೊಟ್ಟು-ಕೊಳಬಲ್ಲ ಮಹಾಪ್ರಸಾದಿಗೆ
ಕುಂಭೇಶ್ವರ ಲಿಂಗದಲ್ಲಿ ಜಗನ್ನಾಥಂಗೆ ನಮೋ ನಮೋ ಎನುತಿರ್ದೆನು.

ಟೀಕು:— ಸುಜ್ಞಾನೋದಯವಾದ ಶಿಷ್ಯನು ಶ್ರೀಗುರು ಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧವಾಗಿ ಅಂಗ-ಮನ-ಪ್ರಾಣೇಂದ್ರಿಯ ಮೊದಲಾದ

ಸಕಲ ಪದಾರ್ಥವ ಲಿಂಗಾರ್ಪಿತವ ಮಾಡಿ ಆ ಪ್ರಸಾದವ ಸ್ವೀಕರಿಸುವ ಶರಣನು ಆ ಗುರು ತತ್ವದಲ್ಲಿ ಸಮರಸಭಾವದಿಂ ಪ್ರಸಾದವ ಸ್ವೀಕರಿಸುತ್ತಿಹನಲ್ಲದೆ ಆ ಶ್ರೀ ಗುರು ತತ್ವದಲ್ಲಿ ಉಪಾಧಿಯಿಂ ಪ್ರಸಾದವ ಕೊಳ್ಳನೆಂಬುದೀಗ, ಸ್ವಯಂಪ್ರಸಾದಿ ಗುರುಪ್ರಸಾದವನೊಲ್ಲನೆಂಬ ಶಬ್ದಕ್ಕರ್ಥ. ಅಂತಪ್ಪ ಶರಣರೂಪಾಗಿ ಬಂದ ಪದಾರ್ಥವ ಸಾವಧಾನ ಭಕ್ತಿಯಿಂ ಲಿಂಗಾರ್ಪಿತವ ಮಾಡಿ ಆ ಪ್ರಸನ್ನ ಪ್ರಸಾದವ ಸಮರಸಭಾವದಿಂ ಸ್ವೀಕರಿಸುತ್ತಿಹನೆಂಬುದೀಗ, ಲಿಂಗ ಪ್ರಸಾದವ ಕೊಂಬನೆಂಬ ಶಬ್ದಕ್ಕರ್ಥ. ಅಂತು ತನುತ್ರಯ ಮುಖ್ಯವಾದ ಸರ್ವಾಂಗವನು ಮಹಾ ಘನ ಲಿಂಗದಲ್ಲಿ ಸಮರಸೈಕ್ಯವ ಮಾಡಿದ ಮಹಾಜ್ಞಾನ ಸ್ವರೂಪನಾದ ಶರಣನು ಆ ಜಂಗಮವೆ ತನ್ನ ಚೈತನ್ಯಸ್ವರೂಪವಾದ ವಸ್ತುವೆಂದರಿದು ಭೋಜ್ಯ ಮುಖ್ಯವಾದ ಸಕಲ ಪದಾರ್ಥವನು ಸಮರ್ಪಿಸಿ ಆ ಪ್ರಸಾದವ ಸಮರಸಭಾವದಿಂ ಸ್ವೀಕರಿಸುತ್ತಿಹನೆಂಬುದೀಗ, ಜ್ಞಾನ ಪ್ರಸಾದಿ ಜಂಗಮಪ್ರಸಾದವ ಕೊಂಬನೆಂಬ ಶಬ್ದಕ್ಕರ್ಥ. ಅಂತು ಚಿದ್ರೂಪನಾದ ಶರಣ ತನ್ನಂಗದಲ್ಲಿ ಸಂಬಂಧವಾದ ಚಿದ್ಘನ ಲಿಂಗಕ್ಕೆ ಸಮರಸಭಾವದಿಂ ಸಕಲ ಪದಾರ್ಥವನು ಅರ್ಪಿಸಿ ಪ್ರಸಾದವ ಸ್ವೀಕರಿಸುತ್ತಿಹನಲ್ಲದೆ ಲಿಂಗವ ಭಿನ್ನವಿಟ್ಟು ಪ್ರಸಾದವ ಸ್ವೀಕರಿಸುವನಲ್ಲನೆಂಬುದೀಗ, ಲಿಂಗಪ್ರಸಾದವ ನೊಲ್ಲನೆಂಬ ಶಬ್ದಕ್ಕರ್ಥ. ಶ್ರೀಗುರು ಕಾರುಣ್ಯವ ಪಡೆದು ಸದ್ಭಕ್ತರೆಲ್ಲ ಸಾಕ್ಷಾತ್ ಶಿವಸ್ವರೂಪರೆಂದರಿದು, ಅಂತಪ್ಪ ಅರಿವಿನ ನಿಶ್ಚಯದಿಂ ಕೂಡಲ್ಪಟ್ಟ ಭಕ್ತಿ, ಆ ಭಕ್ತಿಯಿಂ ನಿರ್ಮಲವಾದ ಸಮಯ ಪ್ರಸಾದವ ಸ್ವೀಕರಿಸುತ್ತಿಹನೆಂಬುದೀಗ, ಮಹಾ ಪ್ರಸಾದಿ ಪ್ರಸನ್ನ ಪ್ರಸಾದವ ಕೊಂಬ ಶಿವೆಂಬ ಶಬ್ದಕ್ಕರ್ಥ. ಅಂತಪ್ಪ ಪ್ರಸಾದಿ ಭಕ್ತನು ಆ ಜಂಗಮವೆ ತನ್ನ ಚೈತನ್ಯವೆಂದು ಅಭಿನ್ನಭಾವದಿಂ ಪದಾರ್ಥವ ಸ್ವೀಕರಿಸುತ್ತಿಹನಲ್ಲದೆ ಭಿನ್ನಭಾವಿಯಾಗಿ ಪ್ರಸಾದವ ಕೊಳ್ಳನೆಂಬುದೀಗ, ಆ ಜಂಗಮ ಪ್ರಸಾದವನೊಲ್ಲನೆಂಬ ಶಬ್ದಕ್ಕರ್ಥ. ಅಂತು ಶುದ್ಧ-ಸಿದ್ಧ-ಪ್ರಸಿದ್ಧ ಪ್ರಸಾದವೆ ಪರಕ್ಕೆ ಪರವಾದ ಪರತತ್ವ ಪ್ರಸಾದವೆಂದರಿದು ಎಂಬುದೀಗ, ಇಂತಿ ತ್ರಿವಿಧ ಪ್ರಸಾದದ ಭೇದವನರಿದು ಎಂಬ ಶಬ್ದಕ್ಕರ್ಥ. ಅಂತು ತ್ರಿವಿಧ ಪ್ರಸಾದವು ಶರಣನ ತನುತ್ರಯದಲ್ಲಿ ಸಮರಸವಾಗಲು ಉಳುಮೆಯಾದ ಜ್ಞಾನ ಕಲಾತ್ಮನ ತ್ರಿವಿಧಲಿಂಗಕ್ಕೆ ಚೈತನ್ಯ ಸ್ವರೂಪವಾದ ಮಹಾಘನ ಲಿಂಗದಲ್ಲಿ ಸಮರಸ ಭಕ್ತಿಯಿಂ ಸಮರ್ಪಿಸಿ ಆ ಪ್ರಸನ್ನ ಪ್ರಸಾದವ ಸ್ವೀಕರಿಸುತ್ತಿಹನೆಂಬುದೀಗ, ಬಂದನೊಡಗೂಡಿ ಬಂದನರ್ಪಿಸಬೇಕೆಂಬ ಶಬ್ದಕ್ಕರ್ಥ. ಆ ಜ್ಞಾನಕ್ರೀಯಲ್ಲಿ ಸಮರಸವಾಗಿ ಬೆರೆಸಿ ತನ್ನ ಸರ್ವಾಂಗದಲ್ಲಿ ಸೋಂಕಿದ ಸುಖವನು ಲಿಂಗಾರ್ಪಿತವ ಮಾಡಿ ಆ ಪ್ರತ್ಯಕ್ಷವಾದ ಪ್ರಸಾದವ ಸ್ವೀಕರಿಸುತ್ತಿಹನೆಂಬುದೀಗ, ಆ ಉಭಯವನೊಡಗೂಡಿ ಪ್ರಸನ್ನ ಪ್ರಸಾದವ ಲಿಂಗಕ್ಕೆ ಕೊಟ್ಟು ಕೊಳಬಲ್ಲ ಮಹಾಪ್ರಸಾದಿಗೆ ಕುಂಭೇಶ್ವರ ಲಿಂಗದಲ್ಲಿ ಜಗನ್ನಾಥಂಗೆ ನಮೋ-ನಮೋ ಎನುತ್ತಿರ್ದೆನು ಎಂಬ ಶಬ್ದಕ್ಕರ್ಥ.

೩

ಕಾಯ ಪ್ರಸಾದಿಯಾದಲ್ಲಿ ಗುರು ಪ್ರಸಾದವನೊಲ್ಲ !
ಭಾವ ಪ್ರಸಾದಿಯಾದಲ್ಲಿ ಲಿಂಗ ಪ್ರಸಾದವನೊಲ್ಲ !

ಜ್ಞಾನ ಪ್ರಸಾದಿಯಾದಲ್ಲಿ ಜಂಗಮ ಪ್ರಸಾದವನೊಲ್ಲ !
ಇಂತಿ ತ್ರಿವಿಧ ಪ್ರಸಾದವನೊಲ್ಲ-ಬಲ್ಲವ ಮಹಾ ಪ್ರಸಾದವಕೊಂಬ
ಶುದ್ಧ-ಸಿದ್ಧ-ಪ್ರಸಿದ್ಧ-ಪ್ರಸನ್ನೇತಿ ಪ್ರಸಾದವ ಚತುರ್ಭಾಗದಲ್ಲಿ
ಗುರುವಿಗೆ ತನುವಳಿದು, ಲಿಂಗಕ್ಕೆ ಮನವಳಿದು
ಜಂಗಮಕ್ಕೆ ತ್ರಿವಿಧ ಮಲವಳಿದು ಆ ಅರಿವಿಂಗೆ ಕುರುಹಳಿದು
ಸ್ವಯವೆ ತಾನಾದ ಇದಿರೆಡೆಗೆಟ್ಟ ಐಕ್ಯ ಪ್ರಸಾದಿಗೆ
ಕುಂಭೇಶ್ವರ ಲಿಂಗದಲ್ಲಿ ಜಗನ್ನಾಥ ಸಾಕ್ಷಿಯಾಗಿ ನಮೋ-ನಮೋ
ಎನುತಿರ್ದೆನು.

**ಟೀಕು:**— ಸುಜ್ಞಾನೋದಯವಾದ ಶರಣನು ತನ್ನ ಸರ್ವಾಂಗವನು ಭಕ್ತಿಯಿಂ ಶ್ರೀಗುರುವಿಂಗೆ ಅರ್ಪಿಸಿ ಭೋಗಿಸುವ ಸುಜ್ಞಾನಿ ಶರಣನು ಗುರುತತ್ತ್ವದಲ್ಲಿ ಅಭಿನ್ನ ಪ್ರಸಾದವನು ಅರಿವಿನಿಂ ಸ್ವೀಕರಿಸುವನಲ್ಲದೆ ಶ್ರೀ ಗುರು ತತ್ತ್ವದಲ್ಲಿ ಉಪಾಧಿಯಿಂದ ಎರಡಿಟ್ಟು ಪ್ರಸಾದವ ಕೊಳ್ಳನೆಂಬುದೀಗ, ಕಾಯ ಪ್ರಸಾದಿಯಾದಲ್ಲಿ ಗುರುಪ್ರಸಾದವನೊಲ್ಲನೆಂಬ ಶಬ್ದಕ್ಕರ್ಥ. ತನ್ನಾಚಾರಾಂಗದಲ್ಲಿ ಸಂಬಂಧವಾದ ಇಷ್ಟಲಿಂಗದ ಚಿತ್ಕಳೆ ಉನ್ಮನಿ ಸ್ವರೂಪವಾದ ಮನವನೊಳಕೊಂಡು ಪ್ರಾಣಲಿಂಗವಾಗೊಪ್ಪುತ್ತಿಹುದೆಂಬುದೀಗ, ಭಾವ ಪ್ರಸಾದಿಯಾದಲ್ಲಿ ಎಂಬ ಶಬ್ದಕ್ಕರ್ಥ. ಆ ಚೈತನ್ಯ ಸ್ವರೂಪವಾದ ಪ್ರಾಣಲಿಂಗ ಸಂಬಂಧಿಯಾದ ಶರಣನು ಆ ಚಿದ್ ಘನಲಿಂಗಕ್ಕೆ ಸಕಲ ಪದಾರ್ಥವ ಅಭಿನ್ನ ಭಾವದಿಂದ ಅರ್ಪಿಸಿ ಪ್ರಸಾದ ಸ್ವೀಕರಿಸುತ್ತಿಹನಲ್ಲದೆ ಭಿನ್ನವಾಗಿ ಲಿಂಗಪ್ರಸಾದವ ಸ್ವೀಕರಿಸನೆಂಬುದೀಗ, ಲಿಂಗ ಪ್ರಸಾದವನೊಲ್ಲನೆಂಬ ಶಬ್ದಕ್ಕರ್ಥ. ಲಿಂಗ-ಮನ-ಪ್ರಾಣ-ಭಾವ ಮೊದಲಾದ ಸಕಲ ತತ್ತ್ವಂಗಳೆಲ್ಲ ಲಿಂಗ ತತ್ತ್ವವೆಂದರಿದ ಸಾವಧಾನ ಪ್ರಸಾದಿ ತನಗೆ ಚೈತನ್ಯ ಸ್ವರೂಪವಾದ ಸುಜ್ಞಾನ ಜಂಗಮಕ್ಕೆ ಅಭಿನ್ನ ಭಕ್ತಿಯಿಂ ಪದಾರ್ಥವನು ಅರ್ಪಿಸಿ ಪ್ರಸಾದವ ಸ್ವೀಕರಿಸುತ್ತಿಹನಲ್ಲದೆ ಆ ಜಂಗಮದ ತನ್ನಿಂದ ಅನ್ಯವಾಗಿ ಪದಾರ್ಥವನರ್ಪಿಸಿ ಪ್ರಸಾದವ ಕೊಂಡಿಹನೆಂಬ ಭಿನ್ನ ಜ್ಞಾನಿಯಲ್ಲವೆಂಬುದೀಗ, ಜ್ಞಾನ ಪ್ರಸಾದಿಯಾದಲ್ಲಿ ಜಂಗಮ ಪ್ರಸಾದವನೊಲ್ಲನೆಂಬ ಶಬ್ದಕ್ಕರ್ಥ. ಆ ಗುರು-ಲಿಂಗ-ಜಂಗಮದಿಂದುದಯವಾದ ಶುದ್ಧ-ಸಿದ್ಧ-ಪ್ರಸಿದ್ಧ ಪ್ರಸಾದವನು ಭಕ್ತಿ ವಿಶ್ವಾಸದಿಂದ ಸ್ವೀಕರಿಸಿದ ಶರಣನು ಈ ತ್ರಿವಿಧಕ್ಕು ಪರಿಯಾಯವೆ ಮೇಲಣ ಪರತತ್ತ್ವ ಪ್ರಸಾದ. ಆ ಪ್ರಸಾದವನು ಮಹದರುವಿನ ಹಸ್ತದಲ್ಲಿ ಗ್ರಹಿಸಿ ಸ್ವೀಕರಿಸುತ್ತಿಹನೆಂಬುದೀಗ, ಇಂತಿ ತ್ರಿವಿಧ ಪ್ರಸಾದವ ಬಲ್ಲ ಮಹಾ ಪ್ರಸಾದವ ಕೊಂಬನೆಂಬ ಶಬ್ದಕ್ಕರ್ಥ. ಈ ಚತುರ್ವಿಧ ಪ್ರಸಾದವ ಸ್ವೀಕರಿಸಿದ ಶರಣನು ಚತುರ್ವಿಧ ಭಕ್ತಿಗಳಿಂದ ಗುರುವಿಂಗೆ ತನುವರ್ಪಿತವಾಗಿ, ಲಿಂಗಕ್ಕೆ ಮನವರ್ಪಿತವಾಗಿ ಸುಜ್ಞಾನ ಜಂಗಮಕ್ಕೆ ತ್ರಿವಿಧ ಪದಾರ್ಥವರ್ಪಿತವಾಗಿ ಚೈತನ್ಯ ಸ್ವರೂಪವಾದ ಮಹಾ ಘನಲಿಂಗಕ್ಕೆ ಉಭಯವಳಿದು ತನ್ನ ಪರಿಪೂರ್ಣ ಜ್ಞಾನವ ಸಮರ್ಪಿಸಿ ಮಹಾ ಪ್ರಸಾದಿಯಾಗಿಹ ನೆಂಬುದೀಗ, ಶುದ್ಧ-ಸಿದ-ಪ್ರಸಿದ್ಧ-ಪ್ರಸನ್ನತೆ ಪ್ರಸಾ

ದವ ಚತುರ್ಭಾಗದಲ್ಲಿ ಗುರುವಿಂಗೆ ತನುವಳಿದು ಲಿಂಗಕ್ಕೆ ಮನವಳಿದು, ಜಂಗಮಕ್ಕೆ ತ್ರಿವಿಧ ಮಲವಳಿದು ಅರಿವಿಂಗೆ ಕುರುಹಳಿದು ಸ್ವಯವೆ ತಾನಾದ ಇದಿರಿಡೆಗೆಟ್ಟ ಐಕ್ಯ ಪ್ರಸಾದಿಗೆ ಕುಂಭೇಶ್ವರ ಲಿಂಗದಲ್ಲಿ ಜಗನ್ನಾಥನ ಸಾಕ್ಷಿಯಾಗಿ ನಮೋ ನಮೋ ಎನುತಿರ್ದೆನು ಎಂಬ ಶಬ್ದಕ್ಕರ್ಥ.

೪

ಕೈಯೊಡ್ಡಿ ಪ್ರಸಾದವ ಕೊಂಡರೆ ಕರ್ಮದಾರಿ
ಶೇಷ ಪ್ರಸಾದವ ನಾಯ್ದು ಕೊಂಡರೆ ವರ್ಮಹೀನ
ಉಕ್ಕುಳ ಪ್ರಸಾದವ ಕೊಂಡರೆ ಸತ್ಕ್ರಿಯೆಗೆ ಸಲ್ಲ
ಇಂತಿವನರಿದು ಸಜ್ಜನ ಪ್ರಸಾದವ ನಿರ್ಧರದಿಂದ ಕೊಂಬ
ಮಹಾ ಪ್ರಸಾದಿಯು ಕಾರುಣ್ಯವೆನಗೆಂದಿಗೆ ಸಾಧ್ಯವಪ್ಪುದೊ ?
ಕುಂಭೇಶ್ವರ ಲಿಂಗದಲ್ಲಿ ಜಗನ್ನಾಥನರಿದವಂಗಲ್ಲದೆ ಸಾಧ್ಯವಲ್ಲ.

ಟೀಕು:— ಶ್ರೀಗುರು ಜಂಗಮದ ಕೈಯೊಡ್ಡಿ ಪ್ರಸಾದವ ಕೊಂಡರೆ ಕರ್ಮದಾರಿ ಶೇಷವೆಂಬ ಶಬ್ದಕ್ಕರ್ಥ- ತಾನಚ್ಚ ಪ್ರಸಾದಿಯಾದ ಬಳಿಕ ಸೂಸಿದುದ ನಾಯ್ದು ಸೇವಿಸಲಾಗದು. ಅದೇತಕ್ಕೆಂದರೆ-ಪ್ರಸಾದಿಗಳಿಗೆ ಸಲ್ಲದು ಅವರಿಗೆ ಅರುವಿನ ನಿರ್ಧರವಿಲ್ಲವೆಂಬುದೀಗ, ಶೇಷ ಪ್ರಸಾದವನಾಯ್ದು ಕೊಂಡರೆ ವರ್ಮಹೀನನೆಂಬ ಶಬ್ದಕ್ಕರ್ಥ. ಪ್ರಸಾದಿಗಳಾದ ಭಕ್ತರು ವಾಂತಿ ಮಾಡಿದುದು ಪ್ರಸಾದವಲ್ಲವೇ ಎಂದು ಕೊಳಬಾರದು ಅಥವ ಕೊಂಡರೆ ಕ್ರಿಯಾಚಾರಕ್ಕೆ ಯೋಗ್ಯವಲ್ಲವೆಂಬುದೀಗ, ಉಕ್ಕುಳ ಪ್ರಸಾದವ ಕೊಂಡರೆ ಸತ್ಕ್ರಿಯೆಗೆ ಸಲ್ಲವೆಂಬ ಶಬ್ದಕ್ಕರ್ಥ. ಇಂತಹ ಭಿನ್ನವ ತೊಲಗಿಸಿ ಗುರು-ಲಿಂಗ-ಜಂಗಮವೆ ಪ್ರತ್ಯಕ್ಷ ಪರಬ್ರಹ್ಮವೆಂದರಿದು ತನು-ಮನ-ಧನ ಮೊದಲಾದ ಸಕಲ ಪದಾರ್ಥವ ತ್ರಿವಿಧ ಮುಖದಲ್ಲರ್ಪಿಸಿ ಆ ಪ್ರಸಾದ ತ್ರಯವನು ಸಮರಸಭಾವದಿಂದ ಸ್ವೀಕರಿಸುತ್ತಿಹನೆಂಬುದೀಗ, ಇಂತಿವನರಿದು ಸಜ್ಜನ ಪ್ರಸಾದವ ನಿರ್ಧರದಿಂದ ಕೊಂಬ ಮಹ ಪ್ರಸಾದಿಯು ಕಾರುಣ್ಯವೆನಗೆಂದಿಗೆ ಸಾಧ್ಯವಪ್ಪುದೊ ಕುಂಭೇಶ್ವರ ಲಿಂಗದಲ್ಲಿ ಜಗನ್ನಾಥನರಿಕೆ ಯಾದವಂಗಲ್ಲದೆ ಸಾಧ್ಯವಲ್ಲವೆಂಬ ಶಬ್ದಕ್ಕರ್ಥ.

## ಒಕ್ಕಲಗೇರಿ ಮುದ್ದಣ್ಣನವರ ವಚನಗಳು

೧

ಮೂರಡಿ ಮಣ್ಣಿಂಗೆ ಆರು ಹೊನ್ನ ತೆತ್ತು
ಮೀರಿ ಹರಿಕೆಯ ಕೊಳ್ಳನೆಂದು ಈ ಗ್ರಾಮದಲ್ಲಿದ್ದವರ ಮುಂದಿಟ್ಟು
ಮೀರಲಿಲ್ಲ ಎಂದು ಪಟ್ಟ ಮತ್ತೂರಗೂಡಿ,

ಹರಿಕೆಯು ಬೇಡಿದರೆ ನಾ ಕೊಡಲಿಲ್ಲ, ನೀ ಕೊಟ್ಟೆ,
ಪಟ್ಟೆ ನಮ್ಮ ನಟ್ಟನಡು ಮನೆಯ ಐದು ಕಾಲಿನ —
ನೆಲುಹಿನಲ್ಲಿ ಕಟ್ಟಿದ ಕೊ ನೀ ತಪ್ಪಿದರೆ ನಿನಗೆ ಹೇಳುವ
ಒಡೆಯರುಂಟೆ ?
ನಾನೊಕ್ಕಲು ನೀನೊಡೆಯ ಮೀರಿ ಕೊಂಡಿಹೆನೆಂದಡೆ
ಮುನ್ನವೆ ದಯ ಸೆರೆಗೆ ನಾನೊಳಗು ಗುತ್ತಿಗೆಕಾರಂಗೆ ಮತ್ತಾರು
ಕುಳವುಂಟೆ
ಇನ್ನು ಕೊಟ್ಟೆನಾದರೆ ಎನ್ನ ಹಟ್ಟಿ ಕೊಟ್ಟಿಗೆಯೊಡೆಯ ಕಾಮ
ಭೀಮ ಜೀವದನದಾಣೆ.

**ಟೀಕು:**— ಗುಣತ್ರಯಂಗಳೊಡನೆ ಕೂಡಿದ ತನುತ್ರಯ ಸಂಬಂಧಿಯಾದ ಆತ್ಮಂಗೆ ಶಿವಜ್ಞಾನೋದಯವಾಗಲು ಶ್ರೀಗುರು ಕಾರುಣ್ಯಮಂ ಪಡೆದು ತನ್ನಂಗ ತ್ರಯದಲ್ಲಿ ಲಿಂಗತ್ರಯ ಸಂಬಂಧವಾದ ಶರಣನು ಷಡೇಂದ್ರಿಯಂಗಳಲ್ಲಿ ಷಡ್ವಿಧ ಲಿಂಗ ಸಂಬಂಧವ ಮಾಡಿ ಷಡ್ವಿಧ ವಿಷಯ ಪದಾರ್ಥವ ಷಡ್ವಿಧ ಭಕ್ತಿಯಿಂದ ಅರ್ಪಿಸುತ್ತಿಹನೆಂಬುದೀಗ, ಮೂರದಿ ಮಣ್ಣಿಂಗೆ ಆರು ಹೊನ್ನಕೆತ್ತು ಎಂಬ ಶಬ್ದಕ್ಕರ್ಥ. ತಾ ಮುನ್ನ ಹುಟ್ಟಿ ಜೀವಭಾವದಿಂ ಭುಂಜಿಸಿದ ಅಪರಾಧಕ್ಕೆಂಬುದೀಗ, ಮೀರಿ ಹರಿಕೆಯ ಕೊಳ್ಳನೆಂದು ಎಂಬ ಶಬ್ದಕ್ಕರ್ಥ. ಇಂತು ಸಕಲ ಪದಾರ್ಥವೆಲ್ಲ ಲಿಂಗಕ್ಕರ್ಪಿತವಾಗಿ ಆ ಪ್ರಸನ್ನ ಪ್ರಸಾದವ ಸ್ವೀಕರಿಸಿ ಮಹಾ ಘನಲಿಂಗದಲ್ಲಿ ಏಕಾರ್ಥವಾದ ಶರಣನು ಲಿಂಗಕ್ಕಪರಾಧಿಯಾಗಿ ಭಿನ್ನ ಭಕ್ತಿ ಮಾಡುವವನಲ್ಲ ಅದೇನುಕಾರಣವೆಂದಡೆ- ಈ ಗ್ರಾಮವೆಂದರೆ ಶರಣನಾಚಾರಾಂಗ ಅಂತಪ್ಪ ಜ್ಞಾನ ಕಾಯದಲ್ಲಿಪ್ಪ ಸಕಲ ಕರಣಂಗಳೆಲ್ಲ ಪ್ರಾಣಲಿಂಗದಲ್ಲಿ ಸೇವಕರಾದ ಕಾರಣ ಆ ಶರಣನು ಶಿವ ತಾನಾಗಿ ಶಿವಲಿಂಗಪೂಜೆಯ ಮಾಡುವನಲ್ಲದೆ ಎರಡಿಟ್ಟು ದ್ವೈತ ಭಾವದಿಂದ ಲಿಂಗಾರ್ಚನೆಯ ಮಾಡುವನಲ್ಲವೆಂಬುದೀಗ, ಈ ಗ್ರಾಮದಲ್ಲಿಪ್ಪವರ ಮುಂದಿಟ್ಟು ಮೀರಲಿಲ್ಲ ಎಂಬ ಶಬ್ದಕ್ಕರ್ಥ. ಶ್ರೀಗುರು ಸಂಬಂಧವ ಮಾಡಿದ ಷಡಾಕ್ಷರಿ ಮಂತ್ರವು ಶರಣನ ಸರ್ವಾಂಗವನೊಳಕೊಂಡು ಚಿತ್‌ಪ್ರಕಾಶವನೊಳಕೊಂಡು ಬೆಳಗುತ್ತಿಹುದೆಂಬುದೀಗ, ಪಟ್ಟೆಯ ಕೊಟ್ಟು ಎಂಬ ಶಬ್ದಕ್ಕರ್ಥ. ಚಿತ್‌ಪ್ರಕಾಶವಾದ ಶರಣನು ದ್ವೈತಿಗಳು ಮುಖ್ಯವಾದ ಸಕಲಾತ್ಮರುಗಳ ಹಾಗೆ ಭಿನ್ನವಿಟ್ಟು ಕ್ರಿಯವ ಮಾಡುವದಕ್ಕಿಲ್ಲದ ಭಿನ್ನ ಕ್ರಿಯಾ ಚಾರವಿಡಿದು ಆಚರಿಸುತ್ತಿಹನೆಂಬುದೀಗ, ಮತ್ತೊರುಗೂಡಿ ಹರಿಕೆಯ ಬೇಡಿದರೆ ನಾ ಕೊಡಲಿಲ್ಲ ಎಂಬ ಶಬ್ದಕ್ಕರ್ಥ. ಶ್ರೀಗುರು ಸಂಬಂಧವ ಮಾಡಿಕೊಟ್ಟ ಶಿವ ಮಂತ್ರವು ಪಂಚಕರಣಂಗಳನೊಳಕೊಂಡು ತೋರುವ ಶಿವಭಾವದಗ್ರದಲ್ಲಿ ಸಂಬಂಧವಾಗಿಹುದೆಂಬುದೀಗ, ನೀ ಕೊಟ್ಟ ಪಟ್ಟೆ ನಮ್ಮ ನಟ್ಟ ನಡುಮನೆಯ ಐದು ಕಾಲನೆಲಹಿನಲ್ಲಿ ಕಟ್ಟಿದೆಕೊ ಎಂಬ ಶಬ್ದಕ್ಕರ್ಥ. ಲಿಂಗವೆಕರ್ತೃ. ಶರಣನೇ ಆ ಲಿಂಗಕ್ಕೆ ಭೃತ್ಯನೆಂಬುದೀಗ, ನೀ ತಪ್ಪಿದರೆ ನಿನಗೆ ಹೇಳುವ ಒಡೆಯ

ರುಂಟೆ? ನಾನೊಕ್ಕಲು ನೀನೊಡೆಯ ಮೀರಿಕೊಂಡೆಹೆನೆಂದಡೆ ಎಂಬ ಶಬ್ದಕ್ಕರ್ಥ. ಚಿತ್ಸ್ವರೂಪನಾದ ಕಾರಣ ಮೊದಲೆ ಮಹಾಘನಲಿಂಗದಲ್ಲಿ ತನ್ನ ಸರ್ವಾಂಗವನು ಸಮರಸವ ಮಾಡಿದನೆಂಬುದೀಗ, ಮುನ್ನವೆ ದಯ ಸೆರಗೆ ನಾನೊಳಗು ಎಂಬ ಶಬ್ದಕ್ಕರ್ಥ. ಅಂತು ಶರಣ ಸರ್ವಾಂಗ ಸುಖವನು ಮಹಾಘನಲಿಂಗಕ್ಕೆ ಅರ್ಪಿಸಿ ಒಡೆತನವನಿತ್ತಬಳಿಕ ಮತ್ತೆ ಕ್ರಿಯಾಚಾರವಿಡಿದು ಆಚರಿಸಲಿಲ್ಲವೆಂಬುದೀಗ, ಗುತ್ತಿಗೆಕಾರಂಗೆ ಮತ್ತೆ ಕುಳವುಂಟೆ ಇನ್ನು ಕೊಟ್ಟೆನಾದರೆ ಎನ್ನ ಹಟ್ಟಿ, ಕೊಟ್ಟಿಗೆಯೊಡೆಯ ಕಾಮಭೀಮ ಜೀವದನದಾಣೆಯೆಂಬ ಶಬ್ದಕ್ಕರ್ಥ.

೨

ನೀ ಕೊಟ್ಟ ಭೂಮಿ ಮುಂದೆ ಕರಲು, ಹಿಂದೆ ಇಂಗರಲು,
ಅಲ್ಲಿಂದಾಚೆಯ ಮಧ್ಯದ ಭೂಮಿ ಮೂರು ನೆಲದ ಭೂಮಿ,
ಆರೈದು ಬೆಳದೆಹೆನೆಂದಡೆ ಇದಾರ ವಶವಲ್ಲ
ಕಾಮ ಭೀಮ ಜೀವದನದೊಡೆಯ ನೀನೆ ಬಲ್ಲೆ.

**ಟೀಕು:—** ಶಿವಾತ್ಮಂಗೆ ಸಂಬಂಧವ ಮಾಡಿದ ತನುವೆಂಬದೀಗ, ನೀ ಕೊಟ್ಟ ಭೂಮಿಯೆಂಬ ಶಬ್ದಕ್ಕರ್ಥ. ರಜೋಗುಣ ಸಂಬಂಧವಾದ ಸ್ಥೂಲ ತನು ಅಜ್ಞಾನ ಸಂಬಂಧವಾಗಿಹುದೆಂಬುದೀಗ, ಮುಂದೆ ಕರಲು ಎಂಬ ಶಬ್ದಕ್ಕರ್ಥ. ಸಾತ್ವಿಕ ಗುಣಸಂಬಂಧವಾದ ಸೂಕ್ಷ್ಮ ದೇಹವು ಜ್ಞಾನಾಜ್ಞಾನದೊಡನೆ ಕೂಡಿಹುದೆಂಬುದೀಗ, ಹಿಂದೆ ಇಂಗರಲು ಎಂಬ ಶಬ್ದಕ್ಕರ್ಥ. ತಮೋಗುಣ ಸಂಬಂಧವಾದ ಕಾರಣ ದೇಹವು ತ್ರಿಪುಟಿ ಜ್ಞಾನದೊಡನೆ ಕೂಡಿಹುದೆಂಬುದೀಗ, ಅಲ್ಲಿಂದಾಚೆಯ ಮಧ್ಯದ ಭೂಮಿ ಮೂರು ನೆಲದಭೂಮಿಯೆಂಬ ಶಬ್ದಕ್ಕರ್ಥ. ಇಂತಪ್ಪ ಜ್ಞಾನದೊಡನೆ ಕೂಡಿದಾತ್ಮರುಗಳು ತನು ತ್ರಯಗಳ ನಿವೃತ್ತಿಯ ಮಾಡಿ ಲಿಂಗ ತ್ರಯದಲ್ಲಿ ಬೆರಸಿಹೆನೆಂದಡೆ ದೇವ-ದಾನವ-ಮಾನವರಿಗಸಾಧ್ಯವೆಂಬುದೀಗ, ಆರೈದು ಬೆಳದಿಹೆನೆಂದಡೆ ಇದಾರ ವಶವಲ್ಲ ಕಾಮ ಭೀಮ ಜೀವದನದೊಡೆಯ ನೀನೆ ಬಲ್ಲೆಯೆಂಬ ಶಬ್ದಕ್ಕರ್ಥ.

೩

ಕುಂಭದ ಮಳೆ ಹೋಯಿತ್ತು, ಮೂರಂಗದ ನೇಗಿಲು ತರಿಯಬೇಕು
ಆರಂಗದ ಭೂಮಿಯುಲರಸಲಾಗಿ ಒಂದೆ ಮರ ಹುಟ್ಟಿತ್ತು
ಹುಟ್ಟುವಲ್ಲಿ ಮೂರುಕವೆ, ಅಲ್ಲಿಂದಾಚೆಗೆ ಐದು ಕವೆ
ಕವಲಿನಲ್ಲಿ ಮತ್ತೆ ಕವಲಿ ಆರಾಯಿತ್ತು
ಆ ಆರರ ಕಲೆಯಲ್ಲಿ ಮೀರಿ ಕವತು ಇಪ್ಪತ್ತೈದಾಯಿತ್ತು
ಆ ಇಪ್ಪತ್ತೈದು ಕವಲಿನ ಮಧ್ಯದಲ್ಲಿ ನೂರೊಂದು ಶಾಖೆ ಕೊಂಬು

ಆ ಮರನನೇರಿ ಹಿಂದಳ-ಮುಂದಳ ಕೊಂಬ ಕಳದು
ಕೊಡಲಿಯಾಡುವದಕ್ಕೆ ತೆರಪುಮಾಡಿ ನಡುವಣ ಕೊಂಬ
ಕಡಿವುತ್ತಿರಲಾಗಿ,
ಒಂದು ಹೊಯಿಲಿಗದಂಗದ ತೊಟ್ಟ ಹರಿದು
ಉಭಯಕ್ಕೆ ದಿಂಡು ಹರಿದು ತ್ರಿವಿಧಕ್ಕೆ ಗರ್ಭದ ಕೆಚ್ಚು ಖಂಡಿತ
ವಾಯಿತ್ತು
ಮರತಟ್ಟಾರಬೇಕೆಂದು ಇರಿಸಿ ಬಂದೆ ಕಾಮ ಭೀಮ ಜೀವವನ
ದೊಡೆಯ ನೀನೆ ಬಲ್ಲೆ.

**ಟೀಕು:—** ದೇಹ ಸಂಬಂಧಿಯಾಗಿರ್ದ ಆತ್ಮಂಗೆ ಶಿವ ಸಂಸ್ಕಾರದಿಂದ ಸುಜ್ಞಾನೋದಯವಾಗಲು ಚಿದಾಕಾಶದಲ್ಲಿ ಸದ್ವಿವೇಕ ಸ್ವ ಸ್ವರೂಪವಾದ ಪರಮಾನಂದ ಜಲವು ಸರ್ವಾಂಗದಲ್ಲಿ ವೃಷ್ಟಿಯಾಗಿ ಕರಿಯಿತ್ತೆಂಬುದೀಗ, ಕುಂಭದ ಮಳೆ ಹೋಯಿತ್ತು ಎಂಬ ಶಬ್ದಕ್ಕರ್ಥ. ಆ ಪರಮಾನಂದ ಜಲವ ಸರ್ವಾಂಗದಲ್ಲಿ ಒಳಕೊಂಡ ಶರಣ ತನು ತ್ರಯಂಗಳನು ದೀಕ್ಷೆ ತ್ರಯಂಗಳಿಂದ ನಿವೃತ್ತಿಯ ಮಾಡಬೇಕೆಂದು ವಿವೇಕಿಸುತ್ತಿರ್ದನೆಂಬುದೀಗ, ಮೂರಂಗದ ನೇಗಿಲು ತರಿಸಬೇಕೆಂಬ ಶಬ್ದಕ್ಕರ್ಥ. ಷಡ್ವಿಧ ಚಿಹಂಗದಲ್ಲಿ ಸಂಬಂಧದಾಗಿರ್ಪ ಚಿದ್ ಘನ ಲಿಂಗವ ಕೂಡಬೇಕೆಂದು ಚಿದ್ರೂಪನಾದ ಶರಣ ತನ್ನ ಸದ್ವಿವೇಕ ಜ್ಞಾನದಿಂದ ವಿಚಾರಿಸುತ್ತಿರ್ದನೆಂಬುದೀಗ, ಆ ರಂಗದ ಭೂಮಿಯಲ್ಲರಸಲಾಗಿ ಎಂಬ ಶಬ್ದಕ್ಕರ್ಥ. ಆ ಶರಣನ ಸುಜ್ಞಾನ ವೃಷ್ಟಿಯ ಮುಂದೆ ಅಖಂಡ ಪರಿಪೂರ್ಣವಾದ ಪರಬ್ರಹ್ಮ ವೃಕ್ಷ ತೋರಿತ್ತೆಂಬುದೀಗ, ಒಂದೆ ಮರ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಆ ಒಂದೆ ಪರಬ್ರಹ್ಮವು ತ್ರಿತತ್ವ ಸ್ವರೂಪವಾಯಿತ್ತೆಂಬುದೀಗ, ಹುಟ್ಟುವಲ್ಲಿ ಕವೆಯೆಂಬ ಶಬ್ದಕ್ಕರ್ಥ. ಆ ತತ್ವತ್ರಯದಿಂದ ಪಂಚ ಸಾದಾಖ್ಯಂಗಳುದಯವಾಯಿತ್ತೆಂಬುದೀಗ, ಅಲ್ಲಿಂದಾಚೆಗೈದು ಕವೆ ಎಂಬ ಶಬ್ದಕ್ಕರ್ಥ. ಅಂತು ಪಂಚ ಸಾದಾಖ್ಯಂಗಳಿಂದ ಆಚಾರಾದಿ ಮಹಾಲಿಂಗಂಗಳು ಉದಯಿಸಿದವೆಂಬುದೀಗ, ಆ ಕವೆಯ ಕವಲಿನಲ್ಲಿ ಮತ್ತೆ ಕವಲಿ ಆರಾಯಿತ್ತೆಂಬ ಶಬ್ದಕ್ಕರ್ಥ. ಆ ಆಚಾರಾದಿ ಮಹಾಲಿಂಗಂಗಳೆ ಪಂಚವಿಂಶತಿ ಲಿಂಗಸ್ವರೂಪವಾಗಿರುತ್ತಿಹವೆಂಬುದೀಗ, ಆರರ ಕವೆಯಲ್ಲಿ ಮೀರಿದ ಕವಲು ಇಪ್ಪತ್ತೈದಾಯಿತ್ತೆಂಬ ಶಬ್ದಕ್ಕರ್ಥ. ಆ ಪಂಚವಿಂಶತಿ ಲಿಂಗಸ್ವರೂಪವನ್ನೈದಿದ ಪರಬ್ರಹ್ಮವು ಪಿಂಡಾದಿ ಜ್ಞಾನಶೂನ್ಯಾಂತವಾದ ನೂರೊಂದು ಸ್ಥಲ ಸ್ವರೂಪವ ನೈದಿತ್ತೆಂಬುದೀಗ, ಇಪ್ಪತ್ತೈದು ಕವಲಿನ ಮಧ್ಯದಲ್ಲಿ ನೂರೊಂದು ಶಾಖೆಗೊಂಬಗೂಡಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮವೆ ತನ್ನ ನಿಜವೆಂದರಿದು ಆ ಪರಬ್ರಹ್ಮವ ತನ್ನ ಸುಜ್ಞಾನ ಪ್ರಕಾಶದಿಂದ ಆಶ್ರಯಿಸಿದನೆಂಬುದೀಗ, ಆ ಮರನೇರಿ ಎಂಬ ಶಬ್ದಕ್ಕರ್ಥ. ಅಂತಪ್ಪ ಪರತತ್ವದಲ್ಲಿ ಸಮರಸಭಾವಿಯಾದ ಶರಣನು ರಾಜಸಹಂಕಾರ-ತಾಮಸಹಂಕಾರವೆಂಬ ಉಭಯವನು ಸುಜ್ಞಾನ ಶಸ್ತ್ರದಿಂದ ಛೇದಿಸಿ ಶಿವಜ್ಞಾನವಾಚರಿಸುವದಕ್ಕೆ

ತೆರಪು ಮಾಡಿದನೆಂಬುದೀಗ, ಹಿಂದಳ-ಮುಂದಳ ಕೊಂಬ ಕಳಿದು ಕೊಡಲಿಯಾಡುವದಕ್ಕೆ ತೆರಪು ಮಾಡಿ ಎಂಬ ಶಬ್ದಕ್ಕರ್ಥ. ಚಿತ್ ಸ್ವರೂಪನಾದ ಶರಣನು ತನ್ನ ಶಿವಜ್ಞಾನಪ್ರಕಾಶದಿಂದ ಸಾತ್ವಿಕಹಂಕಾರ ನಿವೃತ್ತಿಯ ಮಾಡಿ ಗುರೋಪಾವಸ್ಥೆಯ ಮಾಡಲು ಅಲ್ಲಿ ಶ್ರೀ ಗುರು ಕರುಣಿಸಿ ಪ್ರಸನ್ನವಾಗಿ ಕ್ರಿಯಾದೀಕ್ಷೆಯಿಂದ ತನುಭಾವ ನಷ್ಟವ ಮಾಡಿ ಇಷ್ಟಲಿಂಗವ ಸಂಬಂಧವ ಮಾಡಿದನೆಂಬುದೀಗ, ನಡುವಳ ಕೊಂಬ ಕಡಿವುತ್ತಿರಲಾಗಿ ಒಂದು ಹೊಯಿಲಿಗದಂಗದ ತೊಟ್ಟು ಹರಿದು ಎಂಬ ಶಬ್ದಕ್ಕರ್ಥ. ಶ್ರೀಗುರು ಮಂತ್ರದೀಕ್ಷೆಯಿಂದ ಸೂಕ್ಷ್ಮತನುವಿನ ವರ್ತನೆಯ ನಿವೃತ್ತಿಯ ಮಾಡಿ ಚೈತನ್ಯ ಸ್ವರೂಪವಾದ ಪ್ರಾಣಲಿಂಗವ ಸಂಬಂಧವ ಮಾಡಿದನೆಂಬುದೀಗ, ಉಭಯಕ್ಕೆ ಒಂದು ಹರಿದು ಎಂಬ ಶಬ್ದಕ್ಕರ್ಥ. ಶ್ರೀಗುರು ವೇದ ದೀಕ್ಷೆಯಿಂದ ಕಾರಣ ದೇಹದ ನಿವೃತ್ತಿಯ ಮಾಡಲು ಜನನಕ್ಕೆ ಕಾರಣವಾದ ಮೂಲ ಅಹಂಕಾರ ನಷ್ಟವಾಗಿ ಅಖಂಡ ಪರಿಪೂರ್ಣವಾದ ಭಾವಲಿಂಗ ಪರಿಪೂರ್ಣವಾಯಿತ್ತೆಂಬುದೀಗ, ತ್ರಿವಿಧಕ್ಕೆ ಗರ್ಭದ ಕೆಚ್ಚು ಖಂಡಿತವಾಯಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧವನೊಳಗೊಂಡಿರ್ದ ಶರಣನ ಜ್ಞಾನಕಾಯವು ಚಿತ್‌ಘನಲಿಂಗದಲ್ಲಿ ನಿಷ್ಪತ್ತಿಯಾಗಲೋಸುಗವಾಗಿ ಕ್ರಿಯಾಚಾರವಿಡಿದಿರ್ದನೆಂಬುದೀಗ, ಮರತಬಿಟ್ಟಾರಬೇಕೆಂದು ಇರಿಸಿ ಬಂದೆ ಕಾಮ ಭೀಮ ಜೀವಧನದೊಡೆಯ ನೀನೆ ಬಲ್ಲೆಯೆಂಬ ಶಬ್ದಕ್ಕರ್ಥ.

೪

ಪೂರ್ವಕ್ಕೆ ತಳವಾಗಿ, ಉತ್ತರಕ್ಕೆ ತಲೆವಾಗಿ ಬಿದ್ದ ಮರನ ತಂದು
ನಿಬದ್ಧಿಯ ಕಾರುಕನ ಕೈಯಲ್ಲಿ ಸುಬುದ್ಧಿಯ ಶಿಶು ಉದಯಿಸಿ
ಅನಾದಿಯೆಂಬ ಹುಗುಳ ತೆಗೆದು ಆದಿ ಈಯುವನಿಕ್ಕಿ
ಇಷ್ಟವೆಂಬ ವಿಶ್ವಾಸದ ಮೊಳೆಯ ಮೆಟ್ಟಿ,
ಭಾವವೆಂಬ ಜಗುಳೆಯ ನಿಕ್ಕಿ ಸದ್ಭಾವವೆಂಬ ಗುಳವ ತೊಡಿಸಿ
ಸತ್ಕ್ರಿಯೆಂಬ ಕಣ್ಣಿಯ ನೆನಿಲ ತೊಡ ಸುಜ್ಞಾನ ಚಕ್ಷುವೆಂಬನೊಗದ
ಉಘುಳುವ ಕೊನೆಯಲ್ಲಿ ನೆಲೆಗೊಳಿಸಿ,
ಎಡಗೋಲಿನಲ್ಲಿ ಕಾರಿಯ ಹೂಡಿ, ಬಲಗೋಲಿನಲ್ಲಿ ಬಿಳಿಯ ಹೂಡಿ
ಆಡು ಕೆತ್ತುವಂತೆ ದಾ ಎಂದು ಹೊಡೆಯಲಾಗಿ
ಭೂಮಿಯ ಒಡಗೂಡಿ ಸವೆಯಿತ್ತು, ಚಿತ್ತವಟ್ಟಕ್ಕೆ ದಿಕ್ಕಿಲ್ಲ.
ಕಾಮ ಭೀಮ ಜೀವಧನದೊಡೆಯ ನೀನೆ ಬಲ್ಲೆ.

**ಟೀಕು:**— ಶಿವಜ್ಞಾನೋದಯವಾದ ಶರಣನು ಅಭಿನ್ನಕ್ರಿಯಾಚಾರಕ್ಕೆ ತಾನು ಆದಿಯಾಗಿ ನಿಂದನೆಂಬುದೀಗ, ಪೂರ್ವಕ್ಕೆ ತಳವಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣ ಶಿವಾಪೇಕ್ಷೆಯಿಂದ ಸತ್ಪಥ ಮಾರ್ಗವ ಬಯಸಿ ಮೋಕ್ಷಾಪೇಕ್ಷನಾಗಿ ಶ್ರೀಗುರುವಿಂಗೆ ನಮಸ್ಕರಿಸುತ್ತಿರ್ದನೆಂಬುದೀಗ, ಉತ್ತರಕ್ಕೆ ತಲೆವಾಗಿ ಎಂಬ ಶಬ್ದಕ್ಕರ್ಥ. ಅಂತು ಭಕ್ತಿಯಿಂದುಪಾವಸ್ಥೆಯ ಮಾಡುವ ಶಿಷ್ಯನಿಗೆ ಶ್ರೀ

ಗುರು ಕರುಣಿಸಿ ದೀಕ್ಷತ್ರಯಂಗಳಿಂದ ತನುತ್ರಯಂಗಳ ನಿವೃತ್ತಿಮಾಡಿ ಇಷ್ಟ—ಪ್ರಾಣ-ಭಾವಲಿಂಗ ಸಂಬಂಧವ ಮಾಡಿದನೆಂಬುದೀಗ, ಬಿದ್ದಮರನ ತಂದು ಬುದ್ಧಿಯಕಾರಕನ ಕೈಯಲ್ಲಿ ಸುಬುದ್ಧಿಯ ಶಿಶು ಉಪಯಿಸಿ ಎಂಬ ಶಬ್ದಕ್ಕರ್ಥ. ಅನಾದಿ ಎಂದೊಡೆ ಆತ್ಮನು. ಅಂತಪ್ಪ ಆತ್ಮನ ಹುಗುಲೆಂದೊಡೆ ಶಿವಜ್ಞಾನ. ಆ ಶಿವಜ್ಞಾನ ಪ್ರಕಾಶವನೆ ಹುಗುಲಮಾಡಿದನೆಂಬುದೀಗ, ಅನಾದಿಯೆಂಬ ಹುಗುಲು ತೆಗೆದು ಎಂಬ ಶಬ್ದಕ್ಕರ್ಥ. ಆದಿ ಎಂದೊಡೆ ದೇಹ. ಅಂತಪ್ಪ ದೇಹದಲ್ಲಡಗಿರ್ದ ಸತ್ಕ್ರಿಯನೆ ಇಯವಾಗಿಸಿಕ್ಕಿದನೆಂಬುದೀಗ, ಆದಿಯೆಂಬ ಇಯವನಿಕ್ಕಿ ಎಂಬ ಶಬ್ದಕ್ಕರ್ಥ. ಇಷ್ಟಲಿಂಗವೇ ಮೇಲಣ ಪರಬ್ರಹ್ಮವೆಂಬ ವಿಶ್ವಾಸ ಘಟಿಸಿರ್ಪುದೇ ಮೇಳಿಯಾದ ಕಾರಣ, ಇಷ್ಟವೆಂಬ ವಿಶ್ವಾಸದಮೇಳಿಯ ಪಟ್ಟ ಎಂಬ ಶಬ್ದಕ್ಕರ್ಥ. ಇಂತಪ್ಪ ನಿಷ್ಠಾ ಸ್ವರೂಪನಾದ ಶರಣ ತನ್ನ ಶಿವಭಾವವನೆ ಜಿಗುಳಿಯಾಗಿಕ್ಕಿದನೆಂಬುದೀಗ, ಭಾವವೆಂಬ ಜಿಗಳೆಯನಿಕ್ಕಿ ಎಂಬ ಶಬ್ದಕ್ಕರ್ಥ. ಆ ಶರಣ ತನ್ನ ಸದ್ಭಾವವನೆ ಗುಳುವಾಗಿ ತೊಡಿಸಿದನೆಂಬುದೀಗ, ಸದ್ಭಾವವೆಂಬ ಗುಳುವ ತೊಡಿಸಿ ಎಂಬ ಶಬ್ದಕ್ಕರ್ಥ. ಆ ಚಿತ್‌ಸ್ವರೂಪನಾದ ಶರಣ ತನ್ನ ಸತ್ಕ್ರಿಯಾ ಚರಿತ್ರದಲ್ಲಿ ಸುಜ್ಞಾನ ಪ್ರಕಾಶವನು ಏಕಾರ್ಥವ ಮಾಡಿದನೆಂಬುದೀಗ, ಸತ್ಕ್ರಿಯೆಂಬ ಕಣ್ಣಿಯನೆ ನಿಲತೊಡಿಸಿ ಎಂಬ ಶಬ್ದಕ್ಕರ್ಥ. ಆ ಶರಣನ ಸ್ವಾನುಭಾವ ದೃಷ್ಟಿಯ ಸತ್ಕ್ರಿಯಾಚಾರವ ಎರಡರ ಅಗ್ರದಲ್ಲಿ ಎಂಬುದೀಗ, ಜ್ಞಾನಚಕ್ಷುವೆಂಬ ನೊಗವ ಉಭಯದ ಕೊನೆಯಲ್ಲಿ ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣ ತಮೋಗುಣ ಸಂಬಂಧವಾದ ಪ್ರಾಜ್ಞನನು ಕ್ರಿಯಾಚಾರದಲ್ಲಿ ನೆಲೆಗೊಳಿಸಿ ಸತ್ವಗುಣ ಸಂಬಂಧವಾದ ತೈಜಸನು ಸುಜ್ಞಾನದಲ್ಲಿ ಸಮರಸವ ಮಾಡಿ ಇಂತಪ್ಪ ಸುಜ್ಞಾನಕ್ರೀವಿಡಿದು ಶಿವಾದ್ವೈತ ಭಕ್ತಿಯಿಂದ ಆಚರಿಸುತ್ತಿರಲಾಗಿ ದೇಹ ಭಾವವಳಿದು ಮಹಾಘನಲಿಂಗದಲ್ಲಿ ಸಮರಸೈಕ್ಯವಾಯಿತ್ತೆಂಬುದೀಗ, ಎಡಗೋಲಿನಲ್ಲಿ ಕಾರಿಯ ಹೂಡಿ ಬಲಗೋಲಿನಲ್ಲಿ ಬೆಳೆಯ ಹೂಡಿ ಅಡಿಕೆತ್ತುವಂತೆ ದಾ ಎಂದು ಹೊಡೆಯಲಾಗಿ ಭೂಮಿ ಒಡಗೂಡಿಸಿ ವಯಿತ್ತು ಚಿತ್ತ ಒಟ್ಟಕ್ಕೆ ದಿಕ್ಕಿಲ್ಲ ಕಾಮ ಭೀಮ ಜೀವದನದೊಡೆಯ ನೀನೆ ಬಲ್ಲೆ ಎಂಬ ಶಬ್ದಕ್ಕರ್ಥ.

೫

ಲಿಂಗವೆ ಭೂಮಿಯಾಗಿ, ಲಿಂಗವೆ ಕಳೆಯಾಗಿ,
ವಿಶ್ವಾಸವೆಂಬ ಬತ್ತ ಬಲಿದು ಮಂಡು—
ಸುಖಿಯಾಗಿರಬೇಕೆಂದ ಕಾಮ ಭೀಮ ಜೀವದನದೊಡೆಯ.

**ಟೀಕು:**— ಚಿದ್‌ರೂಪವಾದ ಶರಣನ ಅಂಗವೆಲ್ಲ ಚಿತ್ ಪ್ರಕಾಶವಾದ ಚಿದಂಗ ಸ್ವರೂಪವನೆಯ್ದಿತ್ತೆಂಬುದೀಗ, ಅಂಗವೆ ಭೂಮಿಯಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಚಿದಂಗದಲ್ಲಿ ಸಂಬಂಧವಾದ ಇಷ್ಟ ಬ್ರಹ್ಮವೆ ಇಷ್ಟ-ಪ್ರಾಣಭಾವವೆಂದು ತ್ರಿವಿಧಲಿಂಗ ಸ್ವರೂಪವಾಗಿ ಆಚಾರಾದಿ ಮಹಾಲಿಂಗ ಷಡ್ವಿಧ ಅಂತು ನವವಿಧ ಲಿಂಗ ಸ್ವರೂಪನಾಗಿ ಬೆಳಯಿತ್ತು ಶರಣನ ತನುತ್ರಯ ಷಡೇಂದ್ರಿಯದಲ್ಲಿ ಎಂಬುದೀಗ, ಲಿಂಗವೆ ಬೆಳೆಯಾಗಿ ಎಂಬ ಶಬ್ದಕ್ಕರ್ಥ. ಆ ಚಿತ್‌ಸ್ವರೂ

ಪನಾದ ಶರಣ ಭಕ್ತಿ-ವಿಶ್ವಾಸದೊಡನೆ ರೂಪು-ರುಚಿ-ತೃಪ್ತಿಯೆಂಬ ತ್ರಿವಿಧ ಪದಾರ್ಥವನು ಇಷ್ಟ-ಪ್ರಾಣ-ಭಾವ ಲಿಂಗದಲ್ಲಿ ಶಬ್ದ-ಸ್ಪರ್ಶ-ರೂಪು-ರಸ-ಗಂಧ-ಪರಿಣಾಮವೆಂಬ ಷಡ್ವಿಧ ಲಿಂಗಕ್ಕೆ ಭಕ್ತಿಯಿಂದರ್ಪಿಸುತ್ತಿಹನೆಂಬುದೀಗ, ವಿಶ್ವಾಸವೆಂಬ ಬತ್ತಬಲಿದು ಎಂಬ ಶಬ್ದಕ್ಕರ್ಥ, ಆಲಿಂಗ ಸುಖ-ಪ್ರಸನ್ನ ಪ್ರಸಾದವನು ಭಕ್ತಿಯ ಮುಂದುಗೊಂಡು ಶರಣ ಸ್ವೀಕರಿಸುತ್ತಿರ್ದನೆಂಬುದೀಗ, ಉಂಡು ಸುಖಿಯಾಗಿರಬೇಕೆಂದ ಕಾಮ ಭೀಮ ದನವೊಡೆಯ ಎಂಬ ಶಬ್ದಕ್ಕರ್ಥ.

## ಕಿಲಾರದ ಭೀಮಣ್ಣನವರ ವಚನಗಳು

೧

ನಾನಾ ವರ್ಣದ ಗೋವುಗಳೆಲ್ಲವೂ ಕೂಡಿ ಒಂದೇ
ಹೊಲದಲ್ಲಿ ಮೇದು
ಆರು ಕೆರೆಯ ನೀರ ಕುಡಿದು, ಒಂದೇ ದಾರಿಯಲ್ಲಿ ನಿಂದು
ಮೂರು ಕೊಟ್ಟಿಗೆಯ ಗೊತ್ತಿಗೊಳಗಾದವು.
ಬಿಟ್ಟು ಕರೆಯಲಾಗಿ ಗೋವಿಗೆ ವರ್ಣ ಹಲವು
ಆ ಹಾಲಿಗೆ ಏಕ ವರ್ಣ ಬಟ್ಟಿಗೆ ಹತ್ತದೆ ಹಸುಕು ನಾರದೆ
ಕೌರೇಳದ ನಿರಸ ತಪ್ಪಿ ಮಧುರಸತುಂಬಿ ಕಾಸಿ ಉಣಬಲ್ಲರೆ
ಆತನೆ ಭೋಗಿ, ಆತ ನಿರತಿಶಯಾನುಭಾವ ಶುದ್ಧಾತ್ಮನು
ಕಾಲಕರ್ಮ ವಿರಹಿತ ತ್ರಿಪುರಾಂತಕ ಲಿಂಗವು ತಾನೆ.

**ಟೀಕು:**— ವಿಶ್ವ ತೈಜಸ ಪ್ರಾಜ್ಞರೆಂಬ ಜೀವ ತ್ರಯಂಗಳು ಷಡ್ವರ್ಣದಲ್ಲಿ ಕೂಡಿ ವರ್ತಿಸುತ್ತಿಹವೆಂಬುದೀಗ, ನಾನಾ ವರ್ಣದ ಗೋವುಗಳೆಲ್ಲವು ಕೂಡಿ ಎಂಬ ಶಬ್ದಕ್ಕರ್ಥ. ಅಂತಪ್ಪ ಷಡ್ವರ್ಣಂಗಳಲ್ಲಿ ಕೂಡಿದಾತ್ಮಂಗೆ ಸುಜ್ಞಾನೋದಯವಾಗಿ ಶ್ರೀಗುರು ಕಾರುಣ್ಯವಂ ಪಡದು ಅಂಗತ್ರಯಕ್ಕೆ ಲಿಂಗತ್ರಯ ಸಂಬಂಧವಾಗಿಲ್ಲಿ ಆ ಜೀವ ತ್ರಯಂಗಳು ನಿವೃತ್ತಿ ಮುಖದಿಂ ಲಿಂಗ ತ್ರಯದಲ್ಲಿ ಬೆರಸಿ ಭಕ್ತಿ ಕ್ಷೇತ್ರದಲ್ಲಿ ಬೆಳೆದ ಸುಜ್ಞಾನಾಂಕುರವ ಸ್ವೀಕರಿಸುತ್ತಿಹವೆಂಬುದೀಗ, ಒಂದೇ ಹೊಲವಲ್ಲಿ ಮೇದು ಎಂಬ ಶಬ್ದಕ್ಕರ್ಥ. ಷಡಾಧಾರ ಚಕ್ರದಲ್ಲಿರ್ದ ಪರಮಾನಂದ ಸ್ವರೂಪವಾದ ಸದ್ವಿವೇಕ ಜಲವ ಸ್ವೀಕರಿಸುತ್ತಿರ್ದವೆಂಬುದೀಗ, ಆರು ಕೆರಿಯ ನೀರು ಕುಡಿದು ಎಂಬ ಶಬ್ದಕ್ಕರ್ಥ. ಶಿವಾದ್ವೈತ ಭಕ್ತಿಯಿಂ ಶಿವಸತ್ಪಥ ಮಾರ್ಗದಲ್ಲಿ ಆಚರಿಸುತ್ತಿರ್ದವೆಂಬುದೀಗ, ಒಂದೇ ದಾರಿಯಲ್ಲಿ ಬಂದು ಎಂಬ ಶಬ್ದಕ್ಕರ್ಥ. ಆ ಶರಣನ ಆಚಾರಸ್ವರೂಪವಾದ ಅಂಗತ್ರಯಂಗಳಲ್ಲಿ ಸಂಬಂಧವಾದ ಲಿಂಗ ತ್ರಯಂಗಳಲ್ಲಿ ಆಜೀತ್ರಯಂಗಳ ಏಕಾರ್ಥವಾದವೆಂಬುದೀಗ, ಮೂರು ಕೊಟ್ಟಗೆಯ ಗೊತ್ತಿರಿಗೊಳಗಾದವು ಎಂಬ ಶಬ್ದಕ್ಕರ್ಥ. ಆ

ಚಿತ್ ಸ್ವರೂಪನಾದ ಶರಣನು ಸಕಲ ಪ್ರಪಂಚ ಸುಜ್ಞಾನ ಪ್ರಕಾಶದಿಂ ನಿವೃತ್ತಿಯ ಮಾಡಿದನೆಂಬುದೀಗ, ಬಿಟ್ಟು ಎಂಬ ಶಬ್ದಕ್ಕರ್ಥ. ಆ ಜೀವ ತ್ರಯಂಗಳ ಮಧ್ಯದಲ್ಲಿರ್ದ ಪರಮಾಮೃತರಸವ ತನ್ನ ಸ್ವಾನುಭಾವ ವಿವೇಕದಿಂ ಗ್ರಹಿಸುತ್ತಿರ್ದನೆಂಬುದೀಗ, ಕರೆಯಲಾಗಿ ಎಂಬ ಶಬ್ದಕ್ಕರ್ಥ. ಆ ಜೀವತ್ರಯಂಗಳೆಲ್ಲ ಪ್ರಣವ ಮಂತ್ರ ಸ್ವರೂಪವಾದ ಮಂತ್ರ ಸ್ಮರಣೆಯಲ್ಲಿ ಸಮರಸಭಾವಿಯಾಗಿರ್ದವೆಂಬುದೀಗ, ಗೋವಿಗೆ ವರ್ಣ ಹಲವು ಎಂಬ ಶಬ್ದಕ್ಕರ್ಥ. ಅಖಂಡ ಪ್ರಣವ ಸ್ವರೂಪಿನಿಂದ ಒಪ್ಪುತ್ತಿಹುದು ಪರಮಾಮೃತ ರಸವೆಂಬುದೀಗ, ಹಾಲಿಗೆ ಏಕ ವರ್ಣವೆಂಬ ಶಬ್ದಕ್ಕರ್ಥ. ಆ ಚಿದಾಮೃತ ರಸವ ಸ್ವೀಕರಿಸಿದ ಶರಣನು ದೇಹಭಾವವ ಹೊದ್ದನೆಂಬುದೀಗ, ಚೆಟ್ಟೆ ಹತ್ತದೆ ಎಂಬ ಶಬ್ದಕ್ಕರ್ಥ. ಆ ಶರಣನು ನಾನು ಜೀವನೆಂಬ ಮಾಯಾ ದುರ್ವಾಸನೆಯ ಭಾವವ ಹೊದ್ದನೆಂಬುದೀಗ, ಹಸುಕು ನಾರದೆ ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣ ಅಹಂ ಬ್ರಹ್ಮವೆಂದು ಹಾಗಾದ್ವೈತದಿಂದ ಉಳಿಯ ನೆಂಬುದೀಗ, ಕೌ ಕೇರಳದೆ ಎಂಬ ಶಬ್ದಕ್ಕರ್ಥ. ಸಂಸಾರ ವಿಷಯ ನಷ್ಟವಾಗಿ ಶರಣನ ಒಳ-ಹೊರಗೆನ್ನದೆ ಸರ್ವಾಂಗದಲ್ಲಿ ಪರಮಾಮೃತ ರಸವನೆ ತುಂಬಿತ್ತೆಂಬುದೀಗ, ನಿರಸ ತಪ್ಪಿ ಮಧುರಸ ತುಂಬಿತ್ತೆಂಬ ಶಬ್ದಕ್ಕರ್ಥ. ಆ ಪರಮಾಮೃತ ರಸವ ಜ್ಞಾನಾಗ್ನಿಯಲ್ಲಿ ಸಮರಸ ಪಾಕವ ಮಾಡಿ ಪ್ರಾಣಲಿಂಗಕ್ಕರ್ಪಿಸಿ ಆ ಪ್ರಸಾದವ ಭಕ್ತಿಯಿಂ ಸ್ವೀಕರಿಸುತ್ತಿದನೆಂಬುದೀಗ, ಕಾಸಿ ಉಣಬಲ್ಲರೆ ಆತನೆ ಭೋಗಿ ಆತನಿರತಿಶಯಾನುಭಾವ ಶುದ್ಧಾತ್ಮನು ಕಾಲಕರ್ಮ ವಿರಹಿತ ತ್ರಿಪುರಾಂತಕಲಿಂಗವು ತಾನೆ ಎಂಬ ಶಬ್ದಕ್ಕರ್ಥ.

೨

ಹಲವು ಗಿರಿಯ ತಪ್ಪಲುಗಳಲ್ಲಿ, ಮಲೆಯ ಮಂದಿರಂಗಳಲ್ಲಿ.
ಬಳಸಿ-ಬಳಸಿ ಮೇದು ಮತ್ತೆ ತಮ್ಮನೆಲ ಹೊಲಕ್ಕೆ ತಪ್ಪದೆ
ಬಪ್ಪವು ನೋಡಾ!
ಆ ಪಶುವಿಂಗೆ ಕಟ್ಟುಗೊತ್ತಿಲ್ಲ. ಕಾವಟ್ಟಿಗೊಳಗಲ್ಲ
ತಮ್ಮ ಠಾವಿಗೆ ಬಂದು ಹಾಲಕೊಟ್ಟು ಮತ್ತೆ ತಮ್ಮ
ನೆಲೆಯ ಠಾವಿಗೆ ಹೋದ ಮತ್ತೆ ಕಾವಲು ಕಟ್ಟಿಲ್ಲ
ಕಾಲಕರ್ಮವಿರಹಿತ ತ್ರಿಪುರಾಂತಕ ಲಿಂಗದೊಳಗಾದವಂಗೆ.

**ಟೀಕು:**—ಚಿತ್‌ಸ್ವರೂಪನಾದ ಶರಣನ ಸುಜ್ಞಾನಪ್ರಕಾಶದಿಂದ ಅಹಂಕಾರ ತ್ರಯವಳಿದು ಶಿವಹಂಕಾರ ಸ್ವರೂಪವನೆಯ್ದಿದನೆಂಬುದೀಗ, ಹಲವು ಗಿರಿಯವೆಂಬ ಶಬ್ದಕ್ಕರ್ಥ. ಅಂತಪ್ಪ ಶರಣಂಗೆ ಗುರು ಕಾರುಣ್ಯದಿಂದ ಅಂಗತ್ರಯಂಗಳು ಅಳಿದು ಲಿಂಗತ್ರಯ ಸಂಬಂಧವಾದವೆಂಬುದೀಗ, ತಪ್ಪಲುಗಳಲ್ಲಿ ಎಂಬ ಶಬ್ದಕ್ಕರ್ಥ. ಆ ಶರಣನ ಷಡಾಧಾರ ಚಕ್ರಂಗಳ ವರ್ತನೆಯಳಿದು ಸದ್ವಿವೇಕ ಸ್ವರೂಪವನೆಯ್ದಿದಲ್ಲಿ ಅಂತರಂಗದ ಚೈತನ್ಯಸ್ವರೂಪವಾದ ಪ್ರಾಣಲಿಂಗವಿಡಿದು ಭಕ್ತಿಜ್ಞಾನದಿಂದ ಆಚರಿಸುತ್ತಿಹವು ಆತ್ಮತ್ರಯಂಗಳೆಂಬುದೀಗ, ಮಲೆ ಮಂದಿ

ರಗಳಲ್ಲಿ ಬಳಸಿ-ಬಳಸಿ ಎಂಬ ಶಬ್ದಕ್ಕರ್ಥ. ಅಂತು ಸತ್ಪಥಮಾರ್ಗವಿಡಿದು ಆಚರಿಸುತ್ತಿರ್ಪ ಆತ್ಮತ್ರಯಂಗಳು ಚೈತನ್ಯ ಸ್ವರೂಪವಾದ ತ್ರಿವಿಧ ಲಿಂಗಕ್ಕೆ ತ್ರಿವಿಧ ಪದಾರ್ಥವನು ತ್ರಿವಿಧ ಭಕ್ತಿಗಳಿಂದ ಅರ್ಪಿಸಿ ತ್ರಿವಿಧ ಪ್ರಸಾದವ ಸ್ವೀಕರಿಸಿ ತ್ರಿವಿಧ ಲಿಂಗವಲ್ಲಿ ಏಕಾರ್ಥವಾಗಿಹವೆಂಬುದೀಗ, ಮೇದು ಮತ್ತೆ ತಮ್ಮ ನೆರೆಹೊಲಕ್ಕೆ ತಪ್ಪದೆ ಬಪ್ಪವು ನೋಡಾ ಎಂಬ ಶಬ್ದಕ್ಕರ್ಥ. ಆ ಸಜ್ಜೀವನು ಲಿಂಗತ್ರಯಕ್ಕೆ ಎರಡಿಟ್ಟು ಭಿನ್ನಕ್ರಿಯ ಮಾಡಲಿಲ್ಲವೆಂಬುದೀಗ, ಆ ಪಶುವಿಂಗೆ ಕಟ್ಟು ಗೊತ್ತಿಲ್ಲವೆಂಬ ಶಬ್ದಕ್ಕರ್ಥ. ಅಂತಪ್ಪ ಸಜ್ಜೀವನು ಕಾಲ—ಕಾಮರ ಭಯಕ್ಕೆ ಒಳಗಾಗಲಿಲ್ಲವೆಂಬುದೀಗ, ಕಾವು ಕಟ್ಟಿಗೊಳನೊಳಗಲ್ಲವೆಂಬ ಶಬ್ದಕ್ಕರ್ಥ. ಆ ಸಜ್ಜೀವನ ಸ್ವರೂಪವಾದ ಆತ್ಮಕ್ರಿಯಂಗಳು ತಾವು ಮುಕ್ತಿಯನೆಯ್ದುವದಕ್ಕೆ ಕಾರಣವಾದ ಲಿಂಗತ್ರಯದಲ್ಲಿ ಒಂದು ಭಕ್ತ್ಯಾಮೃತ ರಸವ ಸಮರ್ಪಿಸಿ ಮಹಾಘನ ಲಿಂಗದಲ್ಲಿ ವಿಶ್ರಾಂತಿಯ ನೆಯ್ದಿರ್ದನೆಂಬುದೀಗ, ತಮ್ಮ ತಾವಿಗೆ ಬಂದು ಹಾಲ ಕೊಟ್ಟು ಮತ್ತೆ ತಮ್ಮ ನೆಲೆಯ ತಾವಿಗೆ ಹೋದ ಮತ್ತೆ ಕಾವಲು ಕಟ್ಟಿಲ್ಲ ಕಾಲ ಕರ್ಮವಿರಹಿತ ತ್ರಿಪುರಾಂತಕ ಲಿಂಗದೊಳಗಾದವಂಗೆ ಎಂಬ ಶಬ್ದಕ್ಕರ್ಥ.

೩

ಎರಡು ಮೊಲೆಯ ಪಶುವಿಗೆ, ಕೊಂಬು ಮೂರು,
ಕಿವಿ ನಾಲ್ಕು, ಕಣ್ಣೊಂದೆ;
ಮೂರು ಮೊಲೆಯ ಪಶುವಿಗೆ, ಕೊಂಬು ನಾಲ್ಕು, ಕಿವಿಯೊಂದು
ಕಣ್ಣು ಮೂರು;
ನಾಲ್ಕು ಮೊಲೆಯ ಪಶುವಿಗೆ, ಕೊಂಬಾರು, ಕಿವಿ ಎಂಟು,
ಕಣ್ಣೆರಡು;
ಒಂದು ಮೊಲೆಯ ಪಶುವಿಗೆ, ಕೊಂಬು ಹಿಂದೆ, ಕಿವಿ ಸಂದಿಯಲ್ಲಿ
ಕಣ್ಣು ನೆತ್ತಿಯಲ್ಲಿ;
ಮುಟ್ಟಿ ನೋಡಿ ಕರೆದೆಹೆನೆಂದೊಡೆ ಕೆಚ್ಚಲು ಮೊಲೆಯೊಳಗಡಗಿತ್ತು.
ಮೊಲೆಯ ಮುಟ್ಟಿ ನೋಡಿಹೆನೆಂದೊಡೆ ಬಟ್ಟ ಬಯಲು
ಕಾಲ ಕರ್ಮ ವಿರಹಿತ ತ್ರಿಪುರಾಂತಕ ಲಿಂಗದೊಳಗಾಯಿತ್ತು.

**ಟೀಕು:—** ಅಂತರಂಗ—ಬಹಿರಂಗದಲ್ಲಿ ತೋರುವ ಉಭಯ ಭಕ್ತಿಗಳೇ ಸ್ತನವಾಗಿಹುದು ಕ್ರಿಯಾಶಕ್ತಿಗೆಂಬುದೀಗ, ಎರಡು ಮೊಲೆಯ ಪಶುವಿಗೆ ಎಂಬ ಶಬ್ದಕ್ಕರ್ಥ. ಅಂತಪ್ಪ ಕ್ರಿಯಾಶಕ್ತಿಗೆ ಕ್ರಿಯಾಜ್ಞಾನ ಭಾವಂಗಳು ಚಿದಹಂಕಾರ ಸ್ವರೂಪಿನಿಂ ಕೊಂಬುಗಳಾಗಿ ಒಪ್ಪುತ್ತಿಹವೆಂಬುದೀಗ, ಕೊಂಬು ಮೂರೆಂಬ ಶಬ್ದಕ್ಕರ್ಥ. ಆ ಕ್ರಿಯಾಶಕ್ತಿಗೆ ಚತುರ್ವಿಧ ಭಕ್ತಿಗಳೇ ಕೋಡುಗಳಾಗಿಹವೆಂಬುದೀಗ, ಕೊಂಬು ನಾಲ್ಕು ಎಂಬ ಶಬ್ದಕ್ಕರ್ಥ. ಆ ಜ್ಞಾನಶಕ್ತಿಗೆ ಸದ್ವಿವೇಕ ದ್ವಾರವು ಒಂದೇ ಎಂಬುದೀಗ, ಕಿವಿಯೊಂದೆ ಎಂಬ ಶಬ್ದಕ್ಕರ್ಥ. ಆ ಜ್ಞಾನ ಶಕ್ತಿಗೆ ಜ್ಞಾನ-ಸುಜ್ಞಾನ-ಮಹಾಜ್ಞಾನವೇ ನೇತ್ರವಾಗಿಹವೆಂಬುದೀಗ, ಕಣ್ಣು

ಮೂರು ಎಂಬ ಶಬ್ದಕ್ಕರ್ಥ. ಧರ್ಮ-ಅರ್ಥ-ಕಾಮ-ಮೋಕ್ಷಂಗಳೆ ಸ್ತನವಾಗಿಹ ಇಚ್ಛಾಶಕ್ತಿಗೆಂಬುದೀಗ, ನಾಲ್ಕು ಮೊಲೆಯ ಪಶುವಿಗೆ ಎಂಬ ಶಬ್ದಕ್ಕರ್ಥ. ಅಂತಪ್ಪ ಇಚ್ಛಾ ಶಕ್ತಿಗೆ ಮಂತ್ರಸ್ವರೂಪವಾದ ಷಟ್‌ಸ್ಥಲಂಗಳೆ ಚಿದಹಂಕಾರ ಸ್ವರೂಪಿನಿಂ ಕೋಡುಗಳಾಗಿಹವೆಂಬುದೀಗ, ಕೊಂಬು ಆರು ಎಂಬ ಶಬ್ದಕ್ಕರ್ಥ. ಅಂತಪ್ಪ ಇಚ್ಛಾಶಕ್ತಿಗೆ ಅಷ್ಟವಿಧ ಭಕ್ತಿಗಳೆ ಸದ್ವಿವೇಕದ್ವಾರವಾಗಿಹುವೆಂಬುದೀಗ, ಕಿವಿಎಂಟು ಎಂಬ ಶಬ್ದಕ್ಕರ್ಥ. ಅಂತಪ್ಪ ಇಚ್ಛಾಶಕ್ತಿಗೆ ಅಷ್ಟವಿಧ ಭಕ್ತಿಗಳೆ ಸದ್ವಿವೇಕ ದ್ವಾರವಾಗಿಹುವೆಂಬುದೀಗ, ಕಿವಿ ಎಂಟು ಎಂಬ ಶಬ್ದಕ್ಕರ್ಥ. ಆ ಆ ಇಚ್ಛಾಶಕ್ತಿಗೆ ಅಪರೋಕ್ಷ ಜ್ಞಾನ-ಸಹಜ ಜ್ಞಾನಂಗಳೆ ಚಕ್ಷುವಾಗಿಹುವೆಂಬುದೀಗ, ಕಣ್ಣೆರಡು ಎಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧ ಶಕ್ತಿಗೆ ಮಾತೃಸ್ಥಾನವಾದ ನಿಷ್ಕಲಚಿಚ್ಛಕ್ತಿಗೆ ಮಹಾಘನಲಿಂಗವೆ ಸ್ತನವಾಗೊಪ್ಪುತ್ತಿಹುದೆಂಬುದೀಗ, ಒಂದು ಮೊಲೆಯ ಪಶುವಿಗೆ ಎಂಬ ಶಬ್ದಕ್ಕರ್ಥ. ಅಂತಪ್ಪ ಚಿತ್ತೆಂಬ ಕಾಮಧೇನುವಿಂಗೆ ಚಿದಹಂಕಾರವೇ ಕೋಡು, ಮೂಲ ಜ್ಞಾನದಲ್ಲಿ ಸಂಬಂಧವಾಗಿಹುದೆಂಬುದೀಗ, ಕೊಂಬು ಹಿಂದೆ ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣನ ಅಸಿವದ ಸ್ವರೂಪವಾದ ಭಕ್ತಿಯಲ್ಲಿ ಸದ್ವಿವೇಕದ್ವಾರ ಸಂಬಂಧವಾಗಿಹುದೆಂಬುದೀಗ, ಕಿವಿ ಸಂದಿಯಲ್ಲಿ ಎಂಬ ಶಬ್ದಕ್ಕರ್ಥ. ಆ ಚಿತ್‌ಸ್ವರೂಪನಾದ ಶರಣನ ಮಹಾಜ್ಞಾನ ದೃಷ್ಟಿಯು ಜ್ಞಾನಸ್ವರೂಪದಿಂದ ಪರಶಿವತತ್ವದಲ್ಲಿ ಸಂಬಂಧವಾಗಿಹುದೆಂಬುದೀಗ, ಕಣ್ಣು ನೆತ್ತಿಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮವನು ಮಹದರುವಿನ ಹಸ್ತದಲ್ಲಿ ಗ್ರಹಿಸಿ ಸಂಬಂಧವ ಮಾಡಿಕೊಂಡಿಹೆನೆಂದಿರಲಾಗಿ ಚಿದಾಮೃತ ರಸವ ತುಂಬಿಕೊಂಡಿರ್ದ ಶರಣನ ಜ್ಞಾನ ಕಾಯವು ಆಚಾರ ಸ್ವರೂಪವಾದ ಇಷ್ಟಬ್ರಹ್ಮನಲ್ಲಿ ಸಮರಸವಾಯಿತ್ತೆಂಬುದೀಗ, ಮುಟ್ಟಿ ನೋಡಿ ಕರೆದೆಹೆನೆಂದೊಡೆ ಕೆಚ್ಚಲು ಮೊಲೆಯೊಳಡಗಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಇಷ್ಟ ಬ್ರಹ್ಮವನು ಸುಜ್ಞಾನ ದೃಷ್ಟಿಯಿಂ ನೋಡಿ ಕ್ರೀಯಿಂದಾಚರಿಸಿಹೆನೆನಲು ಲಿಂಗಾಂಗವೆಂಬೆರಡು ಸಮರಸಭಾವರಿದ ಒಂದೆಯಾಗಿ ಚಿದ್‌ಬಯಲ ಸ್ವರೂಪವಾದ ಪರಬ್ರಹ್ಮವೇಯಾಯಿತ್ತೆಂಬುದೀಗ, ಮೊಲೆಯ ಮುಟ್ಟಿ ನೋಡಿಹೆನೆಂದೆಡೆ ಬಟ್ಟಬಯಲು ಕಾಲಕರ್ಮ ವಿರಹಿತ ತ್ರಿಪುರಾಂತಕ ಲಿಂಗದೊಳಗಾಯಿತ್ತು ಎಂಬ ಶಬ್ದಕ್ಕರ್ಥ.

೪

ಇಮ್ಮನ ಹತ್ತಿಯು ಕಾಳ ಸುರಿದು ಪಶು ಮೇಯುತ್ತಿರಲಾಗಿ
ಒಮ್ಮನದ ಮೇದು ಇಮ್ಮನ ಉಳಿಯಿತ್ತು
ಅದು ಸುಮ್ಮಾನದಲ್ಲಿ ಕರೆಯ ಹೋಗಲಿಕೆ ಅಂಡೆಯಲ್ಲಿ
ಅಯ್ಗಳವ ಕರದು ಕಂದಲಲ್ಲಿ ಸುರಿಯಲಾಗಿ ಮೂಗಳವಾಯಿತ್ತು.
ಆ ಮೂಗಳವ ಒಲೆಯ ದೆಸೆಯಲ್ಲಿರಿಸಲಾಗಿ
ಕಾಸುವದಕ್ಕೆ ಮುನ್ನವೆ ನಾಶವಾಯಿತ್ತು.

ಇಂತಿ ಈಶ್ವರ ವಿಶ್ವಾಸದಲ್ಲಿ ಆತ್ಮ ನಿಶ್ಚೈಸಲಾಗಿ,
ಕಾಲಕರ್ಮ ವಿರಹಿತ ತ್ರಿಪುರಾಂತಕ ಲಿಂಗದೊಳಗಾದವನ ಇರವು.

**ಟೀಕು:—** ಸಂಕಲ್ಪ-ವಿಕಲ್ಪದೊಡನೆ ಕೂಡಿದ ಮನಸ್ಸಂಬಂಧವಾದ ಪಂಚ ವಿಷಯಂಗಳನೆ ಜೀವಂಗಾಹಾರವಾಗಿತ್ತ ಪರಶಿವನೆಂಬುದೀಗ, ಇಮ್ಮನ ಹತ್ತಿಯ ಕಾಳ ಸುರಿದು ಪಶು ಮೇಯುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಅಂತು ವಿಷಯಂಗಳನು ಅನುಭವಿಸುತ್ತಿರ್ದ ಜೀವಂಗೆ ಶಿವಸಂಸ್ಕಾರವೊದಗಿ ಸುಜ್ಞಾನೋದಯವಾಗಲು ಮನೋವರ್ತನೆಯು ಅಳಿದು ಉನ್ಮನಿ ತತ್ವ ಸ್ವರೂಪವಾದಲ್ಲಿ ಆ ಸಂಕಲ್ಪ-ವಿಕಲ್ಪಗಳೆಂಬ ಉಭಯವು ನಾಸ್ತಿಯಾಗಿ ಹೋಯಿತ್ತೆಂಬುದೀಗ, ಒಮ್ಮನವ ಮೇದು ಇಮ್ಮನವು ಉಳಿಯಿತ್ತೆಂಬ ಶಬ್ದಕ್ಕರ್ಥ. ಅಂತು ಜೀವಭಾವವಳಿದು ಸಜ್ಜೀವ ಸ್ವರೂಪವಾದ ಆತ್ಮನಲ್ಲಿ ಅಂತರ್ಗತವಾಗಿರ್ದ ಚಿದಾಮೃತ ಸ್ವರೂಪವಾದ ಪಂಚಾಚಾರವನು ಅಳವಡಿಸಿ ಕೊಟ್ಟನೆಂಬುದೀಗ, ಅದು ಸುಮ್ಮಾನದಲ್ಲಿ ಕರೆಯ ಹೋಗಲಿಕೆ ಅಂಡೆಯಲ್ಲಿ ಅಯ್ಗಳವ ಕರದು ಎಂಬ ಶಬ್ದಕ್ಕರ್ಥ. ಇಂತಪ್ಪ ಬಹಿರಂಗದ ಪಂಚಾಚಾರವನು ಶರಣ ತನ್ನ ಮುಖಕ್ಕೆ ತಂದು ಅಂತರಂಗದ ಚಿದ್ ಭಾಂಡದಲ್ಲಿ ಅವಿರಳ ಸಂಬಂಧವ ಮಾಡುತ್ತಿರಲು ತ್ರಿವಿಧ ಲಿಂಗ ಸ್ವರೂಪವಾಗಿ ತೋರಿದವೆಂಬುದೀಗ, ಕಂದಲಲ್ಲಿ ಸುರಿಯಲಾಗಿ ಮೂಗಳವಾಯಿತ್ತೆಂಬ ಶಬ್ದಕ್ಕರ್ಥ. ಆ ಚಿದ್ ಭಾಂಡದಲ್ಲಿ ಅವಿರಳ ಸಂಬಧವಾಗಿರ್ದ ತ್ರಿವಿಧ ಲಿಂಗಂಗಂಳನು ತನು ತ್ರಯಂಗಳಲ್ಲಿ ಸಾಹಿತ್ಯವ ಮಾಡಿಕೊಂಡು ಕ್ರಿಯಾಜ್ಞಾನ ವಿಡಿದು ಆಚರಿಸಿಹೆನೆಂಬಕ್ಕರವು ಭಯವಳಿದು ತನುತ್ರಯದಲ್ಲಿ ನಿಷ್ಪತಿಯಾದವೆಂಬುದೀಗ, ಆ ಮೂಗಳವ ಒಲೆಯ ದೆಸೆಯಲ್ಲಿರಿಸಲಾಗಿ ಕಾಸುವದಕ್ಕೆ ಮುನ್ನವೆ ನಾಶವಾಯಿತ್ತು ಇಂತಿ ಈಶ್ವರ ವಿಶ್ವಾಸದಲ್ಲಿ ಆತ್ಮ ನಿಶ್ಚೈಸಲಾಗಿ ಕಾಲಕರ್ಮ ವಿರಹಿತ ತ್ರಿಪುರಾತಂಕ ಲಿಂಗದೊಳಗಾದವ ಇರವು ಎಂಬ ಶಬ್ದಕ್ಕರ್ಥ.

## ಬಾಚಿ ಕಾಯಕದ ಬಸವಣ್ಣನವರ ವಚನಗಳು

೧

ಮೂರಂಗುಲದಲ್ಲಳದು ಅಯ್ದಂಗುಲದಲ್ಲಿ ಪ್ರಮಾಣಿಸಿ-
ಆರಂಗುಲದಲ್ಲಿ ಒಟ್ಟಕ್ಕೆ ಶುದ್ಧವಾಯಿತ್ತು;
ಎಂಟೆರಳತೆ ಹದಿನಾರರ ಚತುರ ಚತುರಸ, ಮೂವತ್ತೆರಡರ
ಮಧ್ಯದಲ್ಲಿ
ಹಸ್ತ ಕಂಬಿಯಲಿಕ್ಕಿ ಮೂರರಲ್ಲಿ ಭಾವಿಸಲಾಗಿ
ಎರಡು ಒಳಗೆ ನಿಂದಿತ್ತು;
ಒಂದು ಹೊರಗಾಗಿ ಕೈಸಾಲೆಯಾಯಿತ್ತು;

ಈ ಕೆಲಸವ ಹೊರಗೆ ಬಾಚಿಯಲ್ಲಿ ಸವದೆ, ಒಳಗೆ ಉಳಿಯಲ್ಲಿ ಸವದೆ
ಇಂತಿ ತೆರನ ತಿಳಿದೊಡೆ ಬಸವಣ್ಣ ಪ್ರಿಯ್ಯ-
ವಿಶ್ವ ಕರ್ನಾಟಕ್ಕೆ ಕಾಳಿಕಾ ವಿಮಲ ರಾಜೇಶ್ವರಲಿಂಗ
ವಲ್ಲದಿಲ್ಲಾ ಎಂದೆ.

**ಟೀಕು:—** ಶಿವಜ್ಞಾನೋದಯವಾದ ಶರಣನು ಸತ್ತು-ಚಿತ್ತಾನಂದ ಪರಬ್ರಹ್ಮವೆರಡು ಭಾವಿಸುತ್ತಿರಲು ಶ್ರೀಗುರು ಕಾರುಣ್ಯದಿಂ ಇಷ್ಟ-ಪ್ರಾಣ-ಭಾವಲಿಂಗವಾಗಿ ತನುತ್ರಯದಲ್ಲಿ ಸಂಬಂಧವ ಮಾಡಿದನೆಂಬುದೀಗ, ಮೂರಂಗುಲದಲ್ಲಳವು ಎಂಬ ಶಬ್ದಕ್ಕರ್ಥ. ಅಂತಪ್ಪ ತ್ರಿವಿಧ ಲಿಂಗವನೊಳಕೊಂಡಿರ್ಪ ಶರಣನ ಚಿದಂಗದಲ್ಲಿ ಪಂಚಾಚಾರ ಸಂಬಂಧವಾದ ಶರಣನು ತನ್ನ ಷಡ್ವಿಧಾಂಗದಲ್ಲಿ ಷಡ್ವಿಧ ಲಿಂಗವ ಧರಿಸಿ ಷಟ್‌ಸ್ಥಲ ಜ್ಞಾನಕ್ರೀಯಿಂದ ಆಚರಿಸುತ್ತಿರ್ದನೆಂಬುದೀಗ, ಆರಂಗುಲದಲ್ಲಿ ಒಟ್ಟಕ್ಕೆ ಶುದ್ಧವಾಯಿತ್ತು ಎಂಬ ಶಬ್ದಕ್ಕರ್ಥ. ಅಂತು ಷಟ್ ಸ್ಥಲ ಜ್ಞಾನಕ್ರೀವಿಡಿದು ಆಚರಿಸುತ್ತಿರ್ದ ಶರಣನು ಅಷ್ಟವಿಧ ಭಕ್ತಿಯಲ್ಲಿ ತತ್ಪರನಾಗಿರ್ದನೆಂಬುದೀಗ, ಎಂಟೆರಳತೆ ಎಂಬ ಶಬ್ದಕ್ಕರ್ಥ. ಅಂತಪ್ಪ ಅಷ್ಟವಿಧ ಭಕ್ತಿವಿಡಿದು ಆಚರಿಸುತ್ತಿರ್ದ ಶರಣನು ಹದಿನಾರು ತೆರದ ಜಂಗಮ ಭಕ್ತಿಯಿಂದ ಆಚರಿಸುತ್ತಿಹನೆಂಬುದೀಗ, ಹದಿನಾರರ ಎಂಬ ಶಬ್ದಕ್ಕರ್ಥ. ಅಂತು ಜಂಗಮ ಭಕ್ತಿಯಲ್ಲಿ ತತ್ಪರನಾಗಿರ್ದ ಶರಣನು ಮನ-ನಿರೀಕ್ಷಣ-ಇಳನ-ಯಜನವೆಂಬ ಚತುರ್ವಿಧ ಭಕ್ತಿವಿಡಿದು ಆಚರಿಸುತ್ತಿರ್ದನೆಂಬುದೀಗ, ಚತುರಸದ ಎಂಬ ಶಬ್ದಕ್ಕರ್ಥ. ಅಂತು ಚತುರ್ವಿಧ ಭಕ್ತಿವಿಡಿದಿರ್ದ ಶರಣನು ಮೂವತ್ತೆರಡು ತೆರದ ಭಕ್ತಿಯಲ್ಲಿ ತತ್ಪರನಾಗಿರ್ದನೆಂಬುದೀಗ, ಮೂವತ್ತೆರಡರ ಮಧ್ಯದಲ್ಲಿ ಎಂಬ ಶಬ್ದಕ್ಕರ್ಥ. ಅಂತು ಮೂವತ್ತೆರಡು ತೆರದ ಭಕ್ತಿವಿಡಿದು ಆಚರಿಸಿದ ಶರಣನ ಸರ್ವಾಚಾರ ಸಂಪತ್ತಿನಲ್ಲಿ ಸದ್ಭಾವ ಹಸ್ತವು ಏಕಾರ್ಥವಾಗಿಹುದೆಂಬುದೀಗ, ಹಸ್ತಕಂಬಿಯನಿಕ್ಕಿ ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣನು ಇಷ್ಟ-ಪ್ರಾಣ-ಭಾವಲಿಂಗದಲ್ಲಿ ಕ್ರಿಯಾಜ್ಞಾನ ಭಾವಾಚರಣೆಯಿಂದ ಆಚರಿಸುತ್ತ ಎಂಬುದೀಗ, ಮೂರರಲ್ಲಿ ಭಾವಿಸಲಾಗಿ ಎಂಬ ಶಬ್ದಕ್ಕರ್ಥ. ಆ ಶರಣನ ನಿಜಾಂತರಂಗದಲ್ಲಿ ಭಾವಲಿಂಗ-ಪ್ರಾಣಲಿಂಗವೆರಡು ಸಂಬಂಧವಾದವೆಂಬುದೀಗ, ಎರಡು ಒಳಗೆ ನಿಂದಿತ್ತೆಂಬ ಶಬ್ದಕ್ಕರ್ಥ. ಇಷ್ಟಲಿಂಗವು ಚಿತ್ ಸ್ವರೂಪನಾದ ಶರಣನ ಕ್ರಿಯಾ ಹಸ್ತದಲ್ಲಿ ಸಂಬಂಧವಾಯಿತ್ತೆಂಬುದೀಗ, ಒಂದು ಹೊರಗಾಗಿ ಕೈಸಾಲೆಯಾಯಿತ್ತು ಎಂಬ ಶಬ್ದಕ್ಕರ್ಥ. ಇಂತಪ್ಪ ಶರಣನು ಅಭಿನ್ನ ಕ್ರಿಯಾಚಾರವಿಡಿದು ಆಚರಿಸುತ್ತಿರ್ದನೆಂಬುದೀಗ, ಈ ಕೆಲಸವ ಹೊರಗೆ ಬಾಚಿಯಲ್ಲಿ ಸವದೆನೆಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣನು ಚೈತನ್ಯಸ್ವರೂಪವಾದ ಪ್ರಾಣಲಿಂಗದಲ್ಲಿ ಅರಿವಿನಾಚರಣೆಯಿಂದ ಆಚರಿಸುತ್ತಿಹನೆಂಬುದೀಗ, ಒಳಗೆ ಉಳಿಯಲ್ಲಿ ಸವದೆ, ಇಂತಿ ತೆರನ ತಿಳಿದಡೆ ಬಸವಣ್ಣ ಪ್ರಿಯ್ಯ ವಿಶ್ವ ಕರ್ನಾಟಕ್ಕೆ ಕಾಳಿಕಾ ವಿಮಲ ರಾಜೇಶ್ವರ ಲಿಂಗವಲ್ಲದಿಲ್ಲಾ ಎಂದೆನೆಂಬ ಶಬ್ದಕ್ಕರ್ಥ.

೨

ಘಟಸ್ಥಾವರದೊಳಗನೊಡದು ಕಿಚ್ಚಿನ ಹೊದೆಯ ಕಡೆಗಾಣಿಸಿ
ಮಿಕ್ಕಾದ ಹೊರಗಣ ಹೊರೆಯ ತಿಗುಡ ಕೆತ್ತಿ ಕಂಭವ ಶುದ್ಧೈಸಿ
ನೆಲವಟ್ಟಕ್ಕೆ ಚತುರಸವ ಇಂಬುಗೊಳಿಸಿ ಮೇಲಣ ವಟ್ಟಕ್ಕೆ,
ಎಂಟು ಧಾರೆಯ ಏಣು ಮುರಿದು ಗಡಿಗೆ ವಟ್ಟವ
ವರ್ತುಳಾಕಾರದಿಂ-
ಶುದ್ಧವ ಮಾಡಿ ಏಕೋತ್ತರ ಶತಸ್ಥಲವನೇಕೀಕರಿಸಿ,
ಒಂದು ದ್ವಾರದ ಬೋದಿಗೆಯಲ್ಲಿ ಕಂಭವ ಶುದ್ಧೈಸಿ,
ಕಂಭಯುರವಿಲ್ಲದೆ ನಿಂದ ಮತ್ತೆ ಚತುರಸದ ಭೇದ
ಅಷ್ಟ ದಿಕ್ಕಿನ ಬಟ್ಟೆ ಕೆಟ್ಟು
ನವರಸದ ಬಾಗಿಲು ಮುಚ್ಚಿ ತ್ರಿಕೋಣೆಯ ಉಲುವು ಕೆಟ್ಟು
ಮುಂದಣ ಬಾಗಿಲು ಮುಚ್ಚಿ ಹಿಂದಣ ಬಾಗಿಲು ಕೆಟ್ಟು
ನಿಜ ಒಂದೆ ಬಾಗಿಲಾಯಿತ್ತು
ಈ ಕೆಲಸವ ಆ ಕಂಭದ ನಡುವೆ ನಿಂದು ನೋಡಲಾಗಿ
ಮಂಗಳಮಯವಾಗಿತ್ತು
ಇದು ಯೋಗಸ್ಥಲವವ, ಘನಲಿಂಗ ಯೋಗಸ್ಥಲ,
ಇಂತಿ ಭೇದವ ತಿಳಿದಡೆ
ಬಸವಣ್ಣ ಪ್ರಿಯ್ಯ ವಿಶ್ವಕರ್ಮಟಕ್ಕೆ ಕಾಳಿಕಾ ವಿಮಲ
ರಾಜೇಶ್ವರಲಿಂಗವಲ್ಲದಿಲ್ಲಾ ಎಂದೆ.

**ಟೀಕು**:— ಸುಜ್ಞಾನೋದಯವಾದ ಶರನು ಘಟವೆಂದೊಡೆ ದೇಹ, ಸ್ಥಾವರವೆಂದೊಡೆ ಆತ್ಮನು; ಅಂತಪ್ಪ ದೇಹಾತ್ಮರ ವರ್ತನೆಯ ಸುಜ್ಞಾನ ಪ್ರಕಾಶದಿಂ ನಷ್ಟವ ಮಾಡಿದನೆಂಬುದೀಗ, ಘಟಸ್ಥಾವರದೊಳಗ ನೊಡಮೂ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹಾತ್ಮರ ವರ್ತನೆಯ ಛೇದನವಾದಲ್ಲಿ ಮೂಲ ಅಹಂಕಾರವೆಂಬ ಕಿಚ್ಚ ಮಹಾಜ್ಞಾನಾಗ್ನಿಯಿಂ ದಹಿಸಿದನೆಂಬುದೀಗ, ಕಿಚ್ಚಿನ ಹೊರೆಯ ಕಡೆಗಾಣಿಸಿ ಎಂಬ ಶಬ್ದಕ್ಕರ್ಥ. ಅಂತು ಮೂಲ ಅಹಂಕಾರವ ದಹಿಸಿದ ಶರಣನು ಸ್ಥೂಲ ದೇಹದ ಅನಿತ್ಯಭಾವವ ಕೆಡಿಸಿ ನಿತ್ಯವಾದ ಆಚಾರವ ಸಂಬಂಧವ ಮಾಡಿದನೆಂಬುದೀಗ, ಮಿಕ್ಕಾದ ಹೊರಗಣ ಹೊರೆಯ ತಿಗುಡಕೆತ್ತಿ ಎಂಬ ಶಬ್ದಕ್ಕರ್ಥ. ಅಂತಪ್ಪ ಆಚಾರ ಸಂಬಂಧವಾದ ಶರಣನು ಭಾವಸ್ತಂಭವನು ಸುಜ್ಞಾನಾಗ್ನಿಯಲ್ಲಿ ಸಮರಸವ ಮಾಡಿದನೆಂಬುದೀಗ, ಕಂಭವ ಶುದ್ಧೈಸಿ ಎಂಬ ಶಬ್ದಕ್ಕರ್ಥ. ಆ ಚಿತ್‌ಸ್ವರೂಪನಾದ ಶರಣನು ತನ್ನ ಆಚಾರ ಸ್ವರೂಪವಾದ ಜ್ಞಾನಾಂಗದಲ್ಲಿ ಚತುರ್ವಿಧ ಭಕ್ತಿಯ ಸಂಬಂಧವ ಮಾಡಿದನೆಂಬುದೀಗ, ನೆಲವಟ್ಟಕ್ಕೆ ಚತುರಸವ ಇಂಬುಗೊಳಿಸಿ ಎಂಬ ಶಬ್ದಕ್ಕರ್ಥ. ಅಂತು ಚತುರ್ವಿಧ ಭಕ್ತಿಯಲ್ಲಿ

ಸಂಪನ್ನನಾದ ಶರಣನು ತನ್ನ ಸ್ಥೂಲ ಸೂಕ್ಷ್ಮ ದೇಹದಲ್ಲಿ ಚೈತನ್ಯಸ್ವರೂಪವಾದ ಪ್ರಾಣಲಿಂಗವ ಮೂರ್ತಿಗೊಳಿಸಿ ಅಷ್ಟ ತನುವಿನ ವರ್ತನೆಯ ನಿವೃತ್ತಿಮಾಡಿ ಅಷ್ಟವಿಧ ಭಕ್ತಿಯ ನೆಲೆಗೊಳಿಸಿದನೆಂಬುದೀಗ, ಮೇಲಣವಟ್ಟಕ್ಕೆ ಎಂಟು ಧಾರೆಯ ಏಣು ಮುರಿದು ಎಂಬ ಶಬ್ದಕ್ಕರ್ಥ. ಇಂತಪ್ಪ ಅಷ್ಟವಿಧ ಭಕ್ತಿಯಲ್ಲಿ ನಿರ್ಧರವಾದ ಶರಣನು, ಗಡಿಗೆನೆಟ್ಟವೆಂದೊಡೆ ಕಾರಣ ದೇಹ ಅಂತಪ್ಪ ದೇಹದಲ್ಲಿ ಭಾವಲಿಂಗವ ಸಂಬಂಧವ ಮಾಡಿದನೆಂಬುದೀಗ, ಗಡಿಗೆ ವಟ್ಟವ ವರ್ತುಳಾಕಾರದಿಂ ಶುದ್ಧವ ಮಾಡಿ ಎಂಬ ಶಬ್ದಕ್ಕರ್ಥ. ಆ ಭಾವಲಿಂಗದ ವಿರಳ ಸಂಬಂಧಿಯಾದ ಸರ್ವಾಚಾರ ಸಂಪತ್ತಿನಲ್ಲಿ ನೂರೊಂದು ಸ್ಥಲವನೊಳಕೊಂಡು ತೋರುತ್ತಿಹನೆಂಬುದೀಗ, ಏಕೋತ್ತರ ಷಟಸ್ಥಲವನೇಕೀಕರಿಸಿ ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣನು ಸದ್ವಿವೇಕದ್ವಾರದಲ್ಲಿ ಶಿವಭಾವ ಸ್ತಂಭವ ಸುಜ್ಞಾನಾಗ್ನಿಯಲ್ಲಿ ಸಮರಸವ ಮಾಡಿದನೆಂಬುದೀಗ, ಒಂದು ದ್ವಾರದ ಬೋದಿಗೆಯಲ್ಲಿ ಕಂಭವ ಶುದ್ಧೈಸಿ ಎಂಬ ಶಬ್ದಕ್ಕರ್ಥ. ಆ ಶಿವಭಾವ ಸ್ತಂಭವ ಚಿತ್ಸ್ವರೂಪನಾದ ಶರಣನಲ್ಲಿ ಭಿನ್ನವಿಲ್ಲದೆ ನಿಂದು ಎಂಬುದೀಗ, ಕಂಭಯರವಿಲ್ಲದೆ ನಿಂದ ಮತ್ತೆ ಎಂಬ ಶಬ್ದಕ್ಕರ್ಥ. ಆ ಶಿವಭಾವ ಸ್ತಂಭದಲ್ಲಿ ನಿರ್ಧರವಾದ ಶರಣನು ಚತುರ್ವಿಧ ಭಕ್ತಿಯಿಂದ ಆಚರಿಸುತ್ತಿರಲಾಗಿ ಜೀವನು ಅಷ್ಟದಳದಲ್ಲಿ ಚರಿಸುವ ವರ್ತನೆ ಕೆಟ್ಟುಹೋಯಿತ್ತೆಂಬುದೀಗ, ಚತುರಸದ ಭೇದ ಅಷ್ಟದಿಕ್ಕಿನ ಬಟ್ಟೆ ಕೆಟ್ಟು ಎಂಬ ಶಬ್ದಕ್ಕರ್ಥ. ಅಂತು ಜೀವಭಾವ ನಷ್ಟವಾದಲ್ಲಿ ಚೈತನ್ಯಸ್ವರೂಪವಾದ ಪ್ರಾಣಲಿಂಗದ ಪರಿಪೂರ್ಣ ಪ್ರಕಾಶದಿಂ ನವದ್ವಾರದಲ್ಲಿ ಚರಿಸುವ ಸಂಸಾರ ವಿಷಯ ರಸವರತು ನವವಿಧ ಲಿಂಗಸ್ವರೂಪವಾಯಿತ್ತೆಂಬುದೀಗ, ನವರಸದ ಬಾಗಿಲು ಮುಚ್ಚಿ ಎಂಬ ಶಬ್ದಕ್ಕರ್ಥ. ಅಂತು ನವದ್ವಾರಂಗಳು ನಷ್ಟವಾದ ಶರಣನ ಆತ್ಮಕ್ರಿಯಂಗಳ ಶಬ್ದಜಾಲಂಗಳು ನಷ್ಟವಾಯಿತ್ತು, ತ್ರಿವಿಧಲಿಂಗ ಸಂಬಂಧದಿಂದ ಎಂಬುದೀಗ, ತ್ರಿಕೋಣೆಯ ಉಲುವು ಕೆಟ್ಟು ಎಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧ ಲಿಂಗಸಂಬಂಧವಾದ ಶರಣನ ಸದ್ವಿವೇಕದ್ವಾರ ಸಂಬಂಧವಾದ ಸತ್ಕ್ರಿಯಾಚಾರವು ಚಿದ್ಘನಲಿಂಗದಲ್ಲಿ ನಿಷ್ಪತಿಯಾಗಿ ತನ್ನ ಮೂಲಜ್ಞಾನ ಪ್ರಕಾಶವು ಮಹಾಘನಲಿಂಗದಲ್ಲಿ ಏಕಾರ್ಥವಾಯಿತ್ತೆಂಬುದೀಗ, ಮುಂದಣ ಬಾಗಿಲು ಮುಚ್ಚಿ ಹಿಂದಣ ಬಾಗಿಲು ಎಂಬ ಶಬ್ದಕ್ಕರ್ಥ. ಇಂತು ಲಿಂಗಾಂಗವೆಂಬುಭಯವಳಿದು ಅಖಂಡ ಪರಿಪೂರ್ಣವಾದ ಪರಬ್ರಹ್ಮವೆಯಾದನೆಂಬುದೀಗ, ನಿಜ ಒಂದೆ ಬಾಗಿಲಾಯಿತ್ತು ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣ ಇಂತಪ್ಪಾಚರಣೆಯನು ಶಿವಭಾವ ಸ್ತಂಭದಲ್ಲಿ ನಿಂದು ಸುಜ್ಞಾನದೃಷ್ಟಿಯಿಂ ನೋಡುತ್ತಿರಲಾಗಿ ಮಾಂಗಲ್ಯ ಸ್ವರೂಪವಾಗಿ ತೋರುತ್ತಿಹನೆಂಬುದೀಗ, ಈ ಕೆಲಸವ ಆ ಕಂಭದ ನಡುವೆ ನಿಂದು ನೋಡಲಾಗಿ ಮಂಗಳವಾಯ್ತು ಎಂಬ ಶಬ್ದಕ್ಕರ್ಥ. ಇಂತಪ್ಪ ಶರಣನ ಚರಿತ್ರವು ಭಿನ್ನಯೋಗವಂತಲ್ಲಿ ಅಖಂಡ ಪರಿಪೂರ್ಣವಾದ ಮಹಾಘನಲಿಂಗದಲ್ಲಿ ಸಮರಸೈಕ್ಯವ ನೆಯ್ದಿದ ಶಿವಯೋಗವೆಂಬುದೀಗ, ಇದು ಯೋಗಸ್ಥಲವಲ್ಲ ಘನಲಿಂಗ ಯೋಗ ಸ್ಥಲ, ಇಂತಿ ಭೇದವ ತಿಳಿದಡೆ ಬಸವಣ್ಣಪ್ರಿಯ ವಿಶ್ವ ಕರ್ಮಟಕ್ಕೆ ಕಾಳಿಕಾ ವಿಮಲ ರಾಜೇಶ್ವರಲಿಂಗವಲ್ಲದಿಲ್ಲಾ ಎಂದೆನೆಂಬ ಶಬ್ದಕ್ಕರ್ಥ.

# ಸೂಜಿಕಾಯಕದ ರಾಮಿತಂದೆಯರ ವಚನಗಳು

೧

ಮೂರು ಗಳಿಗೆಯನೊಂದುಗೂಡಿ ಹೊರೆಯಲ್ಲಿ ಅಯ್ದುವ
ಕತ್ತರಿಸಲಾಗಿ
ಆರು ಹೋಳಾಯಿತ್ತು ಆರಕ್ಕೆ ಮೂರಪ್ರತಿಯನಿಕ್ಕಲಾಗಿ,
ಸೂಜಿಯ ಮೊನೆಯ ಕೊನೆಯಲ್ಲಿ ಆರಡಗಿ ಮೂರೊಡಗೂಡಿದವು
ಮೀರಿ ಹೊಲಿವುದಕ್ಕೆ ಒಡಗೂಡುವ ಹೊಳ ಕಾಣೆ
ಇಂತಿ ಗುಣವಡಗಿದ ಮತ್ತೆ ಷಟು ಸ್ಥಲ ತ್ರಿವಿಧಕ್ಕು
ಪ್ರಸನ್ನ ಕಪಿಲ ಸಿದ್ಧ ಮಲ್ಲಿಕಾರ್ಜುನಲಿಂಗದಲ್ಲಿ ಒಡಗೂಟ

ಟೀಕು:— ಸುಜ್ಞಾನೋದಯವಾದ ಶರಣನು ಶ್ರೀ ಗುರೋಪಾವಸ್ಥೆಯ ಮಾಡಲು ಶ್ರೀ ಗುರು ಕರುಣಿಸಿ ದೀಕ್ಷೆ ತ್ರಯಂಗಳಿಂದ ತನುತ್ರಯಂಗಳ ನಷ್ಟವ ಮಾಡಿ ಲಿಂಗತ್ರಯವ ಸಂಬಂಧವ ಮಾಡಿದನೆಂಬುದೀಗ, ಮೂರುಗಳಿಗೆಯ ನೊಂದುಗೂಡಿ ಎಂಬ ಶಬ್ದಕ್ಕರ್ಥ. ಅಂತು ಲಿಂಗತ್ರಯ ಸಂಬಂಧವಾದ ಶರಣನು ತನ್ನ ಅಂತರಂಗಧ ಸದ್ವಿವೇಕಜ್ಞಾನದಿಂದ ಪಂಚಭೂತಂಗಳ ಛೇದಿಸಲು ಆತ್ಮಗೂಡಿ ಆ ಷಡ್ವಿಧ ಸ್ಥಲ ಸ್ವರೂಪವಾಯಿತ್ತೆಂಬುದೀಗ, ಹೊರೆಯಲ್ಲಿ ಅಯ್ದುವ ಕತ್ತರಿಸಲಾಗಿ ಆರು ಹೋಳಾಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಷಡ್ವಿಧ ಸ್ಥಲಂಗಳಲ್ಲಿ ಆ ತ್ರಿವಿಧ ಲಿಂಗವೆ ಷಡ್ವಿಧ ಲಿಂಗಸ್ವರೂಪವಾಗಿ ಸಂಬಂಧವಾದವೆಂಬುದೀಗ, ಆರಕ್ಕೆ ಮೂರ ಪ್ರತಿಯ ನಿಕ್ಕಲಾಗಿ ಎಂಬ ಶಬ್ದಕ್ಕರ್ಥ. ಅಂತು ಷಡ್ವಿಧಾಂಗವನು ಒಳಗೊಂಡಿರ್ಪ ಷಡ್ವಿಧ ಲಿಂಗವನು ಶರಣ ತನ್ನ ಶಿವಾನುಭಾವದಗ್ರದಲ್ಲಿ ಅವಗ್ರಹಿಸಲು ಆ ತ್ರಿವಿಧ ಲಿಂಗದಲ್ಲಿ ಷಡ್ವಿಧಲಿಂಗವನು ಏಕವ ಮಾಡಿದನೆಂಬುದೀಗ, ಸೂಜಿಯ ಮೊನೆಯ ಕೊನೆಯಲ್ಲಿ ಆರಡಗಿ ಮೂರೊಡಗೂಡಿದವು ಎಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧ ಲಿಂಗದಲ್ಲಿ ಸಮರಸೈಕ್ಯವಾದ ಶರಣಂಗೆ ಇನ್ನು ಸ್ಥಲವಿಡಿದಾಚರಿಸಿಹೆ ನೆಂದೊಡೆ ಇದಿರಿಟ್ಟು ತೋರಲಿಲ್ಲವೆಂಬುದೀಗ, ಮೀರಿ ಹೊಲಿವುದಕ್ಕೆ ಒಡಗೂಡುವ ಹೊಳ ಕಾಣೆನೆಂಬ ಶಬ್ದಕ್ಕರ್ಥ. ಇಂತಪ್ಪ ಸ್ಥಲ-ಕುಳಂಗಳು ನಿಷ್ಪತಿ ಯಾದ ಶರಣನ ಷಡ್ವಿಧಲಿಂಗ ಸ್ಥಲಂಗಳು ಮೇಲಣ ನಿಷ್ಕಲ ಲಿಂಗದಲ್ಲಿ ಸಮರಸವಾದವೆಂಬುದೀಗ, ಇಂತಿ ಗುಣವಡಗಿದ ಮತ್ತೆ ಷಟು ಸ್ಥಲ ತ್ರಿವಿಧಕ್ಕು ಪ್ರಸನ್ನ ಕಪಿಲ ಸಿದ್ಧ ಮಲ್ಲಿಕಾರ್ಜುನಲಿಂಗದಲ್ಲಿ ಒಡಗೂಡಿ ಎಂಬ ಶಬ್ದಕ್ಕರ್ಥ.

೨

ಬ್ರಹ್ಮಂಗಟ್ಟು ದಾರ, ವಿಷ್ಣುವಿಂಗೆ ಉಭಯದ ಹೊಲಿಗೆ
ರುದ್ರಂಗೆ ಪಿಬ್ಬಿ
ಮಿಕ್ಕಾದ ದೇವ ಕುಲಕ್ಕೆಲ್ಲಕ್ಕು ಅಲ್ಲಲ್ಲಿಗೆ ಕಲ್ಲಿಯ ಹೊಲಿಗೆ

ಈ ಗುಣವ ಬಲ್ಲವರೆಲ್ಲರೂ ಪ್ರಸನ್ನ ಕಪಿಲ ಸಿದ್ಧ ಮಲ್ಲಿಕಾರ್ಜುನ
ಲಿಂಗವ ಬಲ್ಲವರವರೂ

**ಟೀಕು:—** ಶಿವಜ್ಞಾನೋದಯವಾದ ಶರಣನು ಶ್ರೀ ಗುರೋಪಾವಸ್ಥೆಯು ಮಾಡಲು ಶ್ರೀಗುರು ಕರುಣಿಸಿ ರಜೋಗುಣ ಸಂಬಂಧವಾದ ಸ್ಥೂಲದೇಹಕ್ಕೆ ಆಚಾರವನಳವಡಿಸಿ ಪ್ರಾಣಲಿಂಗ ಸಾಹಿತ್ಯವ ಮಾಡಿದನೆಂಬುದೀಗ, ವಿಷ್ಣುವಿಂಗೆ ಉಭಯದ ಹೊಲಿಗೆ ಎಂಬ ಶಬ್ದಕ್ಕರ್ಥ. ತಮೋಗುಣ ಸಂಬಂಧವಾದ ಕಾರಣ ದೇಹಕ್ಕೆ ಮಹಾಜ್ಞಾನವ ನೆಲೆಗೊಳಿಸಿ ಭಾವಲಿಂಗ ಸಂಬಂಧವ ಮಾಡಿದನೆಂಬುದೀಗ, ರುದ್ರಂಗೆ ಪಿಬ್ಬಿ ಎಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧಲಿಂಗ ಸಂಬಂಧವಾದ ಶರಣನ ಇಂದ್ರಿಯಂಗಳೆಲ್ಲ ಷಡ್ವಿಧ ಮಂತ್ರಲಿಂಗ ಸಂಬಂಧವಾಗಿಪವೆಂಬುದೀಗ, ಮಿಕ್ಕಾದ ದೇವಕುಲಕ್ಕೆಲ್ಲಕ್ಕು ಅಲ್ಲಲ್ಲಿಗೆ ಕಲ್ಲಿಯ ಹೊಲಿಗೆಯೆಂಬ ಶಬ್ದಕ್ಕರ್ಥ. ಇಂತಪ್ಪ ಸರ್ವಾಂಗಲಿಂಗ ಸಂಬಂಧವ ಬಲ್ಲ ಶರಣ ಜನಂಗಳೆಲ್ಲರು ಲಿಂಗದ ನಿಜ ಸ್ವರೂಪವ ಬಲ್ಲರೆಂಬುದೀಗ, ಈ ಗುಣವ ಬಲ್ಲವರೆಲ್ಲರು ಪ್ರಸನ್ನ ಕಪಿಲ ಸಿದ್ಧ ಮಲ್ಲಿಕಾರ್ಜುನ ಲಿಂಗವ ಬಲ್ಲವರಪರೂ ಎಂಬ ಶಬ್ದಕ್ಕರ್ಥ.

೩

ತಲೆಗೆ ಮೂರು ಚಿಪ್ಪು ಅಂಗಕ್ಕಾರು ಚಿಪ್ಪು,
ಮಿಕ್ಕಾದ ಸರ್ವಾಂಗವೆಲ್ಲಕ್ಕೂ ಒಂದೇ ಚಿಪ್ಪಿನ ಕುಪ್ಪಸ
ಇದರಂಗದಾಚರಣೆಯ ಬಲ್ಲವ ಪ್ರಸನ್ನ ಕಪಿಲ ಸಿದ್ಧ
ಮಲ್ಲಿಕಾರ್ಜುನ ಲಿಂಗವ ಬಲ್ಲವ

**ಟೀಕು:—** ಸುಜ್ಞಾನ ಸನ್ನಹಿತವಾಗಿರ್ಪ ಶರಣನ ತನುಕ್ರಿಯದಲ್ಲಿ ತ್ರಿವಿಧ ಲಿಂಗವಾಗಿಹುದೆಂಬುದೀಗ, ತಲೆಗೆ ಮೂರು ಚಿಪ್ಪು ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣನ ಷಡ್ವಿಧಾಂಗದಲ್ಲಿ ಲಿಂಗಸಂಬಂಧವಾಗಿಹವೆಂಬುದೀಗ, ಅಂಗಕ್ಕಾರುಚಿಪ್ಪು ಎಂಬ ಶಬ್ದಕ್ಕರ್ಥ. ಆ ಚಿತ್‌ಸ್ವರೂಪನಾದ ಶರಣನ ಇಷ್ಟಲಿಂಗದಾಚಾರವು ಸರ್ವಾಂಗಕ್ಕೆ ಆವರಣವಾಯಿತ್ತೆಂಬುದೀಗ, ಸರ್ವಾಂಗಕ್ಕೆಲ್ಲಕ್ಕೂ ಒಂದೇ ಚಿಪ್ಪಿನ ಕುಪ್ಪಸ ಇದರಂಗದಾಚರಣೆಯ ಬಲ್ಲವ ಪ್ರಸನ್ನ ಕಪಿಲ ಸಿದ್ಧ ಲಿಂಗವ ಬಲ್ಲವ ಎಂಬ ಶಬ್ದಕ್ಕರ್ಥ.

೪

ಕಣ್ಣಡಕ ಒಂದು, ಕರ್ಣದಡಕವಾರು, ನಾಸಿಕದಡಕ ಒಸರವೆರಡು,
ಜಿಹ್ವೆಯಡಕ ಅಡಗಿದವೆಂಟು, ಅಡಗದವೆಂಟು,
ಎಂಟರೊಳಗೆ ಎಂಟಡಗಿ ಹದಿನಾರು ಚಿಪ್ಪು ಒಡಗೂಡಿದವು
ಎರಡರಲ್ಲಿ ಒಂದನೊಡಗೂಡಿ ಸಂದಗೂಡಿ ಹೊಲಿವದಕ್ಕೆ
ಒಂದನೂ ಕಾಣೆ
ಇಂತಿ ಪಂಚೇಂದ್ರಿಯದಂಗವ ಬಲ್ಲಡೆ ಪ್ರಸನ್ನ ಕಪಿಲ ಸಿದ್ಧ
ಮಲ್ಲಿಕಾರ್ಜುನ ಲಿಂಗವ ಬಲ್ಲ.

ಟೀಕು:— ಸುಜ್ಞಾನೋದಯುವಾದ ಶರಣನು, ಸಕಲ ಪ್ರಪಂಚ ನಿವೃತ್ತಿ ಮಾಡಿ ಶ್ರೀಗುರೋಪಾವಸ್ಥೆಯ ಮಾಡಲು ಆ ಶ್ರೀಗುರು ಕರುಣಿಸಿ ಮಹಾಘನ ಲಿಂಗವ ಕರಸ್ಥಲಕ್ಕೆ ತಂದುಕೊಡಲು ಆ ಲಿಂಗಕ್ಕೆ ಸತ್ಕ್ರಿಯೋಪಾಚಾರಂಗಳ ಕ್ರಿಯಾವೃಕ್ಕಿಂದ ನೋಡುತ್ತಿರ್ದನೆಂಬುದೀಗ, ಕಣ್ಣಡಕ ಒಂದು ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶಿಷ್ಯನ ಅನಾಹರ್ತ ಕರ್ಣದ್ವಾರದಲ್ಲಿ ನಿರೂಪಿಸಿದ ಷಡಾಕ್ಷರಿಯ ಮಂತ್ರವೆಂಬುದೀಗ, ನಾಸಿಕದಡಕ ಒಸರವೆರಡು ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶಿಷ್ಯನು ಇಡ-ಪಿಂಗಳ ದ್ವಾರದಲ್ಲಿ ಚರಿಸುವ ಪ್ರಾಣವಾಯು ವಿಕಾರವಳಿದು ನಾದಬಿಂದು ಸ್ವರೂಪವಾಗಿಹವೆಂಬುದೀಗ, ನಾಸಿಕದಡಕ ಒಸರವೆರಡು ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶಿಷ್ಯನು ಶಿವ ಮಂತ್ರ ಸ್ಮರಣೆಯಿಂದ ಅಷ್ಟವಿಧ ಶಬ್ದವನು ನಿವೃತ್ತಿಮಾಡಿದನೆಂಬುದೀಗ, ಜಿಹ್ವೆಯಡಕ ಅಡಗಿದ ಎಂಟು ಎಂಬ ಶಬ್ದಕ್ಕರ್ಥ. ಅಷ್ಟಾವರಣದ ಭಕ್ತಿಸ್ತೋತ್ರ ಶರಣನ ಜಿಹ್ವೆಯಲ್ಲಿ ಅಡಗದೆ ಇರುತ್ತಿಹವೆಂಬುದೀಗ, ಅಡಗದವೆಂಟು ಎಂಬ ಶಬ್ದಕ್ಕರ್ಥ. ಆ ಶರಣನ ಅಷ್ಟವಿಧ ಭಕ್ತಿಯಿಂದ ಅಷ್ಟ ಕುಶಬ್ದ ನಾಸ್ತಿಯಾದವೆಂಬುದೀಗ, ಎಂಟರೊಳಗೆ ಎಂಟಡಗಿ ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣನು ಹದಿನಾರು ತೆರದ ಜಂಗಮಭಕ್ತಿವಿಡಿದು ಆಚರಿಸುತ್ತಿರ್ದನೆಂಬುದೀಗ, ಹದಿನಾರು ಚಿಪ್ಪು ಒಡಗೂಡಿದವು ಎಂಬ ಶಬ್ದಕ್ಕರ್ಥ. ಇಂತಪ್ಪ ಶರಣನ ಅಂತರಂಗಜ್ಞಾನ-ಬಹಿರಂಗದ ಸತ್ಕ್ರಿಯಲ್ಲಿ ಪರಬ್ರಹ್ಮವ ಸಂಬಂಧವ ಮಾಡಿಕೊಂಡು ಸ್ಥಲವಿಡಿದಾಚರಿಸಿಹೆನೆಂದೆಡೆ ಸ್ಥಲಂಗಳಿಲ್ಲ ಬೀಗಿ ನಿಸ್ಪತಿಯಾದವೆಂಬುದೀಗ, ಎರಡರಲ್ಲಿ ಒಂದನೊಡಗೂಡಿ ಸಂದುಗೂಡಿ ಹೊಲಿವುದಕ್ಕೆ ಒಂದನೂಕಾಣೆ, ಇಂತಿ-ಪಂಚೇಂದ್ರಿಯದಂಗವ ಬಲ್ಲಡೆ ಪ್ರಸನ್ನ ಕಪಿಲ ಸಿದ್ಧ ಮಲ್ಲಿಕಾರ್ಜುನನ ಲಿಂಗವ ಬಲ್ಲವಾ ಎಂಬ ಶಬ್ದಕ್ಕರ್ಥ.

೫

ಕಾಲ ಕುಪ್ಪಸವ ಮೇಲಾಗಿ ಹೊಲಿದೆ, ಅಂಗದ ಕುಪ್ಪಸವ
ಮುಂಡಿಗೆ ಹೊಲಿದೆ,
ಮುಂಡೆಗೊಂಭತ್ತು ಚಿಪ್ಪು ಸರ್ವಾಂಗಕ್ಕೆ ತೊಡಿಸುವೆ
ಇದರ ಸಂದಿನ ಕೂಟವಬಲ್ಲಡೆ ಪ್ರಸನ್ನ ಕಪಿಲಸಿದ್ಧ ಮಲ್ಲಿಕಾರ್ಜುನನ
ಲಿಂಗವ ಬಲ್ಲವಾ !

ಟೀಕು:— ಸುಜ್ಞಾನೋದಯುವಾದ ಶರಣನು, ಕಾಲೆಂದೊಡೆ ಅಭಿನ್ನ ಕ್ರೀ ಅಂತಪ್ಪ ಸತ್ಕ್ರಿಯನೊಳಕೊಂಡಿರ್ದ ಆಚಾರವ ಮೀರಿದ ಕ್ರೀಯಲ್ಲಿ ಸಂಬಂಧವ ಮಾಡಿದನೆಂಬುದೀಗ, ಕಾಲ ಕುಪ್ಪಸವ ಮೇಲಾಗಿ ಹೊಲಿದನೆಂಬ ಶಬ್ದಕ್ಕರ್ಥ. ಆ ಶರಣ ಆತ್ಮಾಂಗದಲ್ಲಿ ಸಂಬಂಧವಾದ ಶಿವಾದ್ವೈತ ಭಕ್ತಿಯನು ಜ್ಞಾನಯ ಸ್ವರೂಪವಾದ ಪರಶಿವತತ್ವದಲ್ಲಿ ಅವಿರಳ ಸಂಬಂಧವ ಮಾಡಿದನೆಂಬುದೀಗ, ಅಂಗದ ಕುಪ್ಪಸವ ಮುಂಡಿಗೆ ಹೊಲದೆನೆಂಬ ಶಬ್ದಕ್ಕರ್ಥ. ಆ ಪರಶಿವ

ತತ್ವದಿಂದ ಉದಯವಾದ ನವವಿಧ ಲಿಂಗಂಗಳನು ತನುತ್ರಯ ಷಡೇಂದ್ರಿಯಂಗಳಲ್ಲಿ ಶರಣ ಸಮರಸವ ಮಾಡಿದನೆಂಬುದೀಗ, ಮುಂಡಿಗೊಂಬತ್ತು ಚಿಪ್ಪು ಸರ್ವಾಂಗಕ್ಕೆ ತೊಡಿಸುವೆ ಇದರ ಸಂದಿನ ಕೂಟವ ಬಲ್ಲಡೆ ಪ್ರಸನ್ನ ಕಪಿಲ ಸಿದ್ಧ ಮಲ್ಲಿಕಾರ್ಜುನ ಲಿಂಗವ ಬಲ್ಲವಾ ಎಂಬ ಶಬ್ದಕ್ಕರ್ಥ.

೬

ಮೊನೆ ಮೂರು ಹಿನ್ನಿಯೊಂದು ಆ ಸೂಜಿಯಲ್ಲಿ ಹೊಲಿದಿಹೆನೆಂದೊಡೆ
ಕುಪ್ಪಸಕ್ಕೆ ಚಿಪ್ಪು ಒಡಗೂಡವು ನೋಡಾ!
ಮೊನೆಯೊಂದು ಹಿನ್ನಿ ಮೂರಾಗಿ ಹೊಲಿದಡೆ
ಹಿನ್ನಿ ಮೂರರ ಧಾರ ಮೊನೆಯ ನಾಳದಲ್ಲಿ ಅಡಗಿದವು ನೋಡಾ!
ಆ ಮೂರ ಹಂಚಿಹಾಕಿ ಮೊನೆಯೊಂದರಲ್ಲಿ ಬೇರೆ-ಬೇರೆ
ಹೊಲಿಯ ಬಲ್ಲಡೆ
ಪ್ರಸನ್ನ ಕಪಿಲ ಸಿದ್ಧಮಲ್ಲಿಕಾರ್ಜುನ ಲಿಂಗವ ಬಲ್ಲವಾ!

**ಟೀಕು:—** ತ್ರಿಪುಟಿ ಜ್ಞಾನಿಯಾದ ಆತ್ಮನು ಭಿನ್ನಕ್ರೀಯಿಂದಾಚರಿಸುತ್ತಿರಲು ಆ ಆಚಾರಕ್ಕೆ ಸ್ಥಲಂಗಳು ಸಂಬಂಧವಿಲ್ಲದೆ ಹೋಯಿತ್ತೆಂಬುದೀಗ, ಮೊನೆಮೂರು ಹಿನ್ನಿಯೊಂದು ಆ ಸೂಜಿಯಲ್ಲಿ ಹೊಲಿದಿಹೆನೆಂದೊಡೆ ಕುಪ್ಪಸಕ್ಕೆ ಚಿಪ್ಪು ಒಡಗೂಡುವವು ನೋಡಾ ಎಂಬ ಶಬ್ದಕ್ಕರ್ಥ. ಶಿವಜ್ಞಾನೋದಯವಾದ ಶರಣನು ತ್ರಿಪುಟಿ ಜ್ಞಾನವ ನಷ್ಟವ ಮಾಡಿ ಪರಿಪೂರ್ಣ ಜ್ಞಾನವಿಡಿದು ಕ್ರಿಯಾ ಜ್ಞಾನ ಭಾವಂಗಳಿಂದ ಆಚರಿಸುತ್ತಿರ್ದನೆಂಬುದೀಗ, ಮೊನೆಯೊಂದು ಹಿನ್ನಿ ಮೂರಾಗಿ ಹೊಲಿದಡೆ ಎಂಬ ಶಬ್ದಕ್ಕರ್ಥ. ಇಂತಪ್ಪ ಕ್ರಿಯಾಜ್ಞಾನ ಭಾವಂಗಳಲ್ಲಿ ಸಂಬಂಧವಾದ ಸ್ವಾನುಭಾವ ಸೂತ್ರವು ಶಿವಾನುಭಾವದ ಅಗ್ರದಲ್ಲಿ ಏಕಾರ್ಥವಾಯಿತ್ತೆಂಬುದೀಗ, ಹಿನ್ನಿಯ ಮೂರರ ಧಾರ ಮೊನೆಯ ನಾಳದಲ್ಲಿ ಅಡಗಿದವು ನೋಡಾ ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣನ ಕ್ರಿಯಾ-ಜ್ಞಾನ-ಭಾವಂಗಳಲ್ಲಿ ಸಂಬಂಧವಾದ ತ್ರಿವಿಧ ಲಿಂಗಂಗಳನು ವಿಭಾಗಿಸಲು ಷಡ್ವಿಧ ಲಿಂಗ ಸ್ವರೂಪವಾದಲ್ಲಿ ಶಿವಾನುಭಾವದಿಂ ಶರಣ ತನ್ನ ಷಡೇಂದ್ರಿಯಂಗಳಲ್ಲಿ ಅವಿರಳ ಸಂಬಂಧವ ಮಾಡಿಕೊಂಡು ಆಚರಿಸುತ್ತಿಹನೆಂಬುದೀಗ, ಆ ಮೂರರ ಹಂಚಿ ಹಾಕಿ ಮೊನೆಯೊಂದರಲ್ಲಿ ಬೇರೆ ಬೇರೆ ಹೊಲೆಯುಬಲ್ಲಡೆ ಪ್ರಸನ್ನ ಕಪಿಲ ಸಿದ್ಧ ಮಲ್ಲಿಕಾರ್ಜುನ ಲಿಂಗವ ಬಲ್ಲವನೆಂಬ ಶಬ್ದಕ್ಕರ್ಥ.

೭

ಏತದಲ್ಲಿ ಚುಚ್ಚಿ ಓತದಲ್ಲಿ ತೆಗೆದು ಔತದಲ್ಲಿ ಒಡಗೂಡಿ,
ಕುರುಕಿನಲ್ಲಿ ಸುಳಿದು ಸೊನ್ನೆ ಸಂಜ್ಞೆಗೆಟ್ಟು-
ಸೂಜಿಯ ಮೊನೆ ಒಡಗೂಡುವದಕ್ಕೆರಡಿಲ್ಲ,

ದಾರಕ್ಕೆ ಹುರಿಯಿಲ್ಲ, ಇದನಾರು ಬಲ್ಲರು ?
ಇಂತಿವ ನಾರಯ್ಯ ಬಲ್ಲಡೆ,
ಪ್ರಸನ್ನ ಕಪಿಲ ಸಿದ್ಧ ಮಲ್ಲಿಕಾರ್ಜುನ ಲಿಂಗವ ಬಲ್ಲವ !

**ಟೀಕು:**— ಸುಜ್ಞಾನೋದಯುವಾಗಿ ತನ್ನ ನಿಜವ ತಿಳಿದು ಗುರೋಪಾವಸ್ಥೆಯ ಮಾಡುವ ಶಿಷ್ಯನಿಗೆ ಶ್ರೀ ಗುರು ಕರುಣಿಸಿ ದೀಕ್ಷೆ ತ್ರಯಂಗಳಿಂ ತನುತ್ರಯಂಗಳ ಪೂರ್ವಾಕ್ರಿಯವ ಕಳದು ಆ ಶಿಷ್ಯ ನಿಜಾಂತರಂಗದಲ್ಲಿ ತೊಳಗಿ-ಬೆಳಗುವ ಚೈತನ್ಯ ಸ್ವರೂಪವಾದ ಪರಮ ಚಿತ್ಕಲೆಯನುಭಾವಕ್ಕೆ ತಂದು, ಭಾವದಿಂದ ಮನಕ್ಕೆ ತಂದು, ಮನದಿಂದ ದೃಷ್ಟಿಗೆ ತಂದು, ಶಿಷ್ಯನ ಚಿದಂಗದಲ್ಲಿ ಅಸಿಪದ ಸಂಬಂಧವಾದ ಭಕ್ತಿಯಿಂದ ಇಷ್ಟಲಿಂಗ ಸಾಹಿತ್ಯವ ಮಾಡಿದನೆಂಬುದೀಗ, ಏತದಲ್ಲಿ ಚುಚ್ಚಿ ಓತದಲ್ಲಿ ತೆಗೆದ ಔತದಲ್ಲಿ ಒಡಗೂಡಿ ಎಂಬ ಶಬ್ದಕ್ಕರ್ಥ. ಇಂತಪ್ಪ ಇಷ್ಟಲಿಂಗ ಸಂಬಂಧಿಯಾಗಿರ್ಪ ಶರಣನು ಸತ್ಕ್ರಿಯಾಚಾರವಿಡಿದು ಶಿವಾದ್ವೈತ ಭಕ್ತಿಯಿಂದ ಆಚರಿಸುತ್ತಿರ್ದನೆಂಬುದೀಗ, ಕುರಿಕಿನಲ್ಲಿ ಸುಳಿದು ಎಂಬ ಶಬ್ದಕ್ಕರ್ಥ, ಆ ಭಕ್ತಿಭಾವ ಒಳವಟ್ಟ ಶರಣಂಗೆ ಜೀವನ ದೇಹ ಭಾವದ ಕುರುಹು ನಷ್ಟವಾಗಿ ಹೋಯಿತ್ತೆಂಬುದೀಗ, ಸೊನ್ನೆ ಸಂಜ್ಞೆಗೆಟ್ಟು ಎಂಬ ಶಬ್ದಕ್ಕರ್ಥ. ಆ ಶರಣ ಶಿವಾನುಭಾವದಿಂದ ಆಚರಿಸಿಹೆನೆಂದೊಡೆ ಲಿಂಗಾಂಗವೆಂಬ ಉಭಯವಿಲ್ಲದೆ ಹೋಯಿತ್ತೆಂಬುದೀಗ, ಸೂಜಿಯ ಮೊನೆ ಒಡಗೂಡುವದಕ್ಕೆ ಎರಡಿಲ್ಲವೆಂಬ ಶಬ್ದಕ್ಕರ್ಥ. ಆ ಚಿತ್‌ಸ್ವರೂಪನಾದ ಶರಣ ಸ್ವಾನುಭಾವ ಸೂತ್ರವನು ಮಹಾಘನಲಿಂಗದಲ್ಲಿ ಏಕಾರ್ಥವ ಮಾಡಿಹೆನೆಂಬ ಭಾವವಿಲ್ಲದೆ ಹೋಯಿತ್ತು ಎಂಬುದೀಗ, ದಾರಕ್ಕೆ ಹುರಿಯಿಲ್ಲ ಇದನಾರು ಬಲ್ಲರು ಇಂತಿವ ನಾರಯ್ಯ ಬಲ್ಲಡೆ ಪ್ರಸನ್ನ ಕಪಿಲ ಸಿದ್ಧಮಲ್ಲಿಕಾರ್ಜುನ ಲಿಂಗವ ಬಲ್ಲವನೆಂಬ ಶಬ್ದಕ್ಕರ್ಥ.

೮

ಹರಿ ಹತ್ತು ಒಲಿವುದೊಂದೆ ಸೂಜಿ ಸೆರಗೆಂಟು ಮಡಿಸುವದೊಂದೆ ಕೈ
ಅಡಿ ಆರು ನಡವುದೊಂದೆ ಕಾಲು ನುಡಿ ಮೂರು
ಅರಿವುದೊಂದೇ ಆತ್ಮ
ಇಂತಿ ಒಂದರೊಳಗೊಂದಡಗಿ ಸಂದಿಲ್ಲದ ನೂಲಾ
ಮಾಲೆಯ ಗಂಟನಿಕ್ಕಿ
ಒಂದಕ್ಕೆ ಮೂರು, ಆ ಮೂರಕ್ಕೆ ಆರು ಆ ಆರ ಅವಿಭಾಗಿಸಿ
ಮೂವತ್ತಾರ ಬೇರರಿವ ಇಪ್ಪತ್ತೈದ ಮೀರಿ ಕಾಬ ನೂರೊಂದರಲ್ಲಿ
ಸೂರೆ ಹೋಗದೆ ತನಗೊಂದು ತೋರಿದಲ್ಲಿಯೆ,
ಊರೆಲ್ಲಕ್ಕೂ ದೂರದೆ ಪ್ರಸನ್ನ ಕಪಿಲ ಸಿದ್ಧ
ಮಲ್ಲಿಕಾರ್ಜುನ ಲಿಂಗವ ನೊಡಗೂಡಬೇಕು

**ಟೀಕು:—** ಶಿವಜ್ಞಾನೋದಯುವಾದ ಶರಣನು ಭಿನ್ನಭಾವಿಯಾಗಿ ತೋರುವ ದಶೇಂದ್ರಿಯಂಗಳ ಶಿವಾನುಭಾವದಿಂ ಪಂಚಲಿಂಗದಲ್ಲಿ ಏಕಾರ್ಥವ ಮಾಡಿದನೆಂಬುದೀಗ, ಹರಿಹತ್ತು ಒಲಿವುದೊಂದೇ ಸೂಜಿಯೆಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣನು ತನ್ನ ಸದ್ಭಾವಹಸ್ತದಿಂದ ಅಷ್ಟತನುಗಳ ವರ್ತನೆಯು ನಷ್ಟವಮಾಡಿ ಅಷ್ಟವಿಧ ಭಕ್ತಿಯುಳ್ಳೊಡಗೂಡಿದನೆಂಬುದೀಗ, ಸೆರಗೆಂಟು ಮುಡಿಸುವದೊಂದೇ ಕೈ ಎಂಬ ಶಬ್ದಕ್ಕರ್ಥ. ಆ ಚಿತ್‌ಸ್ವರೂಪನಾದ ಶರಣ ಷಡ್ವಿಧ ಸ್ಥಲವಿಡಿದು ಅಭಿನ್ನಕ್ರೀಯಿಂದ ಆಚರಿಸುತ್ತಿರ್ದನೆಂಬುದೀಗ, ಅಡಿಯಾರು ನಡವುದೊಂದೆ ಕಾಲು ಎಂಬ ಶಬ್ದಕ್ಕರ್ಥ. ಅಂತು ಮಾನಸ ವಾಚಕ ಉಪಾಂಶಿಕಂಗಳಿಂ ಮಂತ್ರವನು ಉಚ್ಚರಿಸುವ ಜ್ಞಾನಕಲಾತ್ಮನು ಒಬ್ಬನೆಂಬುದೀಗ, ನುಡಿಮೂರು ಅರಿವುದೊಂದೇ ಆತ್ಮನೆಂಬ ಶಬ್ದಕ್ಕರ್ಥ. ಆ ಚಿದ್‌ಘನ ಲಿಂಗದಲ್ಲಿ ಚಿದ್ರೂಪನಾದ ಜ್ಞಾನಕಲಾತ್ಮನು ಏಕಾರ್ಥವಾದನೆಂಬುದೀಗ, ಇಂತಿ ಒಂದರೊಳಗೊಂಡಡಗಿ ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಂಬಂಧವನರಿಯದೆ ಸಕಲ ವೇದ-ಶಾಸ್ತ್ರ-ಆಗಮಂಗಳಿಂ ಪರಬ್ರಹ್ಮವನರಿದಿಹೆನೆಂದು ಎಂಬುದೀಗ, ಸಂದಿಲ್ಲದ ನೂಲಾಮಾಲೆಯು ಗಂಟನಿಕ್ಕಿ ಎಂಬ ಶಬ್ದಕ್ಕರ್ಥ. ಮೂರು-ಆರು ಮೂವತ್ತಾರು ಇಪ್ಪತ್ತೈದುನೂರೊಂದು ಸ್ಥಲ ಸ್ವರೂಪವನೆಯ್ದಿತ್ತು ಪರಬ್ರಹ್ಮವೆಂದು ಶಾಸ್ತ್ರಪ್ರಮಾಣಂಗಳಿಂ ಬೋಧಿಸಿಹೆನೆಂದು ಗುರುತತ್ವವನುಂಟುಮಾಡಿಕೊಂಡು ವೃಥಾ ಹೋಗದೆ ಎಂಬುದೀಗ, ಒಂದಕ್ಕೆ ಮೂರು ಆ ಮೂರಕ್ಕಾರು ಆ ಆರವಿಭಾಗಿಸಿ ಮೂವತ್ತಾರಬೇರರಿವ ಇಪ್ಪತ್ತೈದು ಮೀರಿ ಕಾಲ ನೂರೊಂದರಲ್ಲಿ ಸೂರೆಹೋಗದೆ ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣ ತನ್ನ ಸುಜ್ಞಾನದ ಮುಂದೆ ಇದಿರಿಟ್ಟು ತೋರುವ ಚೈತನ್ಯಸ್ವರೂಪವಾದ ಪ್ರಾಣಲಿಂಗದಲ್ಲಿ ಸಮರಸೈಕ್ಯವಾದ ಅವಿರಳಾನಂದ ಸುಖವನು ದ್ವೈತಾದ್ವೈತಿಗಳಿಗೆ ಬೋಧಿಸಿದೆ ಎಂಬುದೀಗ, ತನಗೊಂದು ತೋರಿದಲ್ಲಿಯೆ ಊರೆಲ್ಲಕ್ಕೂ ದೂರದೆ ಪ್ರಸನ್ನ ಕಪಿಲಸಿದ್ಧ ಮಲ್ಲಿಕಾರ್ಜುನಲಿಂಗವನೊಡಗೂಡಬೇಕು ಎಂಬ ಶಬ್ದಕ್ಕರ್ಥ.

೯

ಸ್ಥೂಲಕ್ಕೆ ಮೂರು, ಸೂಕ್ಷ್ಮಕ್ಕೆ ಎರಡು ಕಾರಣಕ್ಕೆ
ಒಂದೆಂದು ತಿಳಿದ ಮತ್ತೆ-
ನಾನಾ ಸಂದ ಸಂದ ಹೊಲಿಯಲೇತಕ್ಕೆ
ನಾಗಳಿಗೆಯ ಲೊಡಗೂಡಿದಳದು
ಮುಗಿದ ಮತ್ತೆ ಎರಡು ಹೊರೆಯಾಯಿತ್ತು,
ಎರಡು ಹೊರೆಯ ಹೊರಿಗೆಯ ನರಿತು ಹೋದವ ತಾನೇ
ಕವಾದ ಮತ್ತೆ
ಪ್ರಸನ್ನ ಕಪಿಲ ಸಿದ್ಧ ಮಲ್ಲಿಕಾರ್ಜುನ ಲಿಂಗವ
ನೊಡಗೂಡುವನ ಇರವು

**ಟೀಕು:—** ಚಿತ್‌ಸ್ವರೂಪನಾದ ಶರಣ ತನ್ನ ಸ್ಥೂಲಾಂಗದಲ್ಲಿ ಸಂಬಂಧವಾದ ಇಷ್ಟಲಿಂಗಕ್ಕೆ ಸತ್ಕ್ರಿಯೋಪಚಾರವಮಾಡಿ ರೂಪಾಗಿ ಬಂದ ಪದಾರ್ಥವನರ್ಪಿಸಿ ಆ ಲಿಂಗವೇ ತನ್ನ ಚೈತನ್ಯಸ್ವರೂಪವೆಂದು ಕ್ರಿಯಾಪ್ರತ್ಯಕ್ಷಿಂತ ನೋಡುತ್ತಿಹನೆಂಬುದೀಗ, ಸ್ಥೂಲಕ್ಕೆ ಮೂರು ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣ ತನ್ನ ಸೂಕ್ಷ್ಮಾಂಗದಲ್ಲಿ ಸಂಬಂಧವಾದ ಪ್ರಾಣಲಿಂಗಕ್ಕೆ ಮಂತ್ರ-ಧ್ಯಾನಂಗಳಿಂದ ಅರ್ಚಿಸುತ್ತಿಹನೆಂಬುದೀಗ, ಸೂಕ್ಷ್ಮಕ್ಕೆ ಎರಡು ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಸ್ವರೂಪನಾದ ಶರಣ ತನ್ನ ಕಾರಣಾಂಗದಲ್ಲಿ ಸಂಬಂಧವಾದ ಭಾವಲಿಂಗಕ್ಕೆ ಮನೋಲಯಕ್ರೀಗಳ ಮಾಡಿವನೆಂಬುದೀಗ, ಕಾರಣಕ್ಕೆ ಒಂದೆಂದು ತಿಳಿದ ಮತ್ತೆ ಎಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧ ಲಿಂಗದಲ್ಲಿ ಆಚರಿಸಿ ಸಮರಸೈಕ್ಯವಾದ ಶರಣಂಗೆ ಸ್ಥಲ ಕುಳ ಸಂಬಂಧವನು ಅರಿದು ಆಚರಿಸಿಹೆನೆಂಬುದಿಲ್ಲದೆ, ಹೋಯಿತ್ತೆಂಬುದೀಗ, ನಾನಾ ಸಂದ ಸಂದ ಹೊಲೆಯಲೀತಕ್ಕೆ ಎಂಬ ಶಬ್ದಕ್ಕರ್ಥ. ಗುರು-ಲಿಂಗ-ಜಂಗಮ-ಪ್ರಸಾದದಲ್ಲಿ ಚತುರ್ವಿಧ ಭಕ್ತಿಗಳಿಂ ಸಮರಸೈಕ್ಯವಾದ ಶರಣನೆಂಬುದೀಗ, ನಾಗಳಿಗೆಯ ಲೊಡಗೂಡಿವಳದು ಮುಗಿದ ಮತ್ತೆ ಎಂಬ ಶಬ್ದಕ್ಕರ್ಥ. ಆ ಚತುರ್ವಿಧವನು ಅಭಿನ್ನ ಜ್ಞಾನಕ್ರೀಯಲ್ಲಿ ಸಂಬಂಧಿಸಿ ಆ ಜ್ಞಾನಕ್ರೀಯಗಳ ಸರ್ವಾಂಗಕ್ಕೆ ಆವರಣವ ಮಾಡಿದ ಶರಣನು ಚಿದ್‌ಘನ ಲಿಂಗದಲ್ಲಿ ಏಕಾರ್ಥವಾದನೆಂಬುದೀಗ, ಎರಡು ಹೊರೆಯಾಯಿತ್ತು ಎರಡು ಹೊರೆಯ ಹೊಲಿಗೆಯನರಿತು ಹೊದದವ ತಾನೇಕವಾದ ಮತ್ತೆ ಪ್ರಸನ್ನ ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗವನೊಡಗೂಡುವನ ಇರವು ಎಂಬ ಶಬ್ದಕ್ಕರ್ಥ.

## ಕನ್ನಡಿ ಕಾಯಕದ ಅಮುಗಿದೇವಯ್ಯನವರ ವಚನಗಳು

೧

ನಾ ಶಸ್ತ್ರವ ಹಿಡಿದಲ್ಲಿ ಮುಮ್ಮುಖದಲ್ಲಿ ಒಂದನಿರಿಸಿ ಎರಡ ತೊಡುವೆನು,
ಪೂರ್ವಪಕ್ಷದಲ್ಲಿ ಆರನಿರಿಸಿ ಮೂರ ತೊಡುವೆನು,
ಉತ್ತರ ಪಕ್ಷದಲ್ಲಿ ಆರನಿರಿಸಿ ಮೂವತ್ತಾರ ತೊಡುವೆನು,
ಮೇಲಣ ದಂಡೆಯ ನೊತ್ತುವಲ್ಲಿ ಎರಡನಿರಿಸಿ ಇಪ್ಪತ್ತೈದ ತೊಡುವೆನು,
ಇಂತಿ ಕೆಲಸವ ಶೋಧಿಸಿ ಮುಗಿದಲ್ಲಿ ಕಂಕುಳ ತಟ್ಟೆಯ ಮೂಗ ಮುಟ್ಟೆನು
ಮಂಡೆಯ ಬೋಳಿಸುವೆನು, ಚಂಡಿಕೆಯನಿರಿಸುವೆನು,
ಬಸವಣ್ಣ ಪ್ರಿಯ ಕಮಳೇಶ್ವರ ಲಿಂಗ ಸಾಕ್ಷಿಯಾಗಿ !

**ಟೀಕು**:— ಶಿವಜ್ಞಾನೋದಯದಿಂ ತ್ರಿವಿಧ ಲಿಂಗಾಂಗ ಸಂಬಂಧಿಯಾದ ಶರಣನು ಸುಜ್ಞಾನಶಸ್ತ್ರವ ಸದ್ಭಾವ ಹಸ್ತದಲ್ಲಿ ದೃಢವಿಡಿದನೆಂಬುದೀಗ, ನಾ ಶಸ್ತ್ರವ ಹಿಡಿದಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣ ತನ್ನ ಆಚಾರಾಂಗದಲ್ಲಿ ಇಷ್ಟ ಬ್ರಹ್ಮವ ಮೂರ್ತಿಗೊಳಿಸಿ ದೇಹ-ಪ್ರಾಣಂಗಳ ವರ್ತನೆಯ ನಷ್ಟವ ಮಾಡಿದನೆಂಬುದೀಗ, ಮುಮ್ಮುಖದಲ್ಲಿ ಒಂದನಿರಿಸಿ ಎರಡನೋಡುವೆನೆಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣ ಬಹಿರಂಗದಲ್ಲಿ ಷಟ್‌ಸ್ಥಲ ಸಂಬಂಧವಾಗಿ ಅಹಂಕಾರ ತ್ರಯಂಗಳ ನಿವೃತ್ತಿ ಮಾಡಿದನೆಂಬುದೀಗ ಪೂರ್ವಪಕ್ಷದಲ್ಲಿ ಆರನಿರಿಸಿ ಮೂರ ತೊಡುವೆನೆಂಬ ಶಬ್ದಕ್ಕರ್ಥ. ಅಂತು ಅಹಂಕಾರ ತ್ರಯವ ನಿವೃತ್ತಿ ಮಾಡಿದ ಶರಣನ ಸುಚಿತ್ತಾದಿ ಭಾವಾಂತ್ಯವಾದ ಷಡ್ವಿಧ ಜ್ಞಾನಾಂಗದಲ್ಲಿ ಷಡ್ವಿಧ ಲಿಂಗಸಂಬಂಧವಾಗಲು ಆರು ಚಕ್ರಂಗಳಲ್ಲಿ ತೋರುವ ಮೂವತ್ತಾರು ತತ್ವಭಾವ ನಷ್ಟವಾಯಿತ್ತೆಂಬುದೀಗ, ಉತ್ತರ ಪಕ್ಷದಲ್ಲಿ ಆರನಿರಿಸಿ ಮೂವತ್ತಾರ ತೊಡುವೆನೆಂಬ ಶಬ್ದಕ್ಕರ್ಥ. ಅಂತು ತತ್ವಭಾವ ನಷ್ಟವಾದ ಶರಣನು ಆತ್ಮನಲ್ಲಿ ಹುದುಗಿರ್ದ ಸಕಲ ಪ್ರಪಂಚು ಸುಜ್ಞಾನದಿಂ ನಿವೃತ್ತಿ ಮಾಡಿ ಭಕ್ತಿನೈಷ್ಠೆಯಿಂದ ಆಚರಿಸುತ್ತಿರಲು ಇಪ್ಪತ್ತೈದು ತತ್ವಭಾವ ನಷ್ಟವಾಯಿತ್ತೆಂಬುದೀಗ, ಮೇಲಣ ದಂಡೆಯ ನೊತ್ತುವಲ್ಲಿ ಎರಡನಿರಿಸಿ ಇಪ್ಪತ್ತೈದ ತೊಡುವೆನೆಂಬ ಶಬ್ದಕ್ಕರ್ಥ. ಆ ಸಕಲ ಪ್ರಪಂಚ ನಿವೃತ್ತಿ ಮಾಡಿ ಭಕ್ತಿ-ನೈಷ್ಠೆವಿಡಿದು ಆಚರಿಸುತ್ತಿರ್ದ ಶರಣನು ಮಾಯಾ ಪ್ರಪಂಚ ಸೋಂಕನೆಂಬುದೀಗ, ಇಂತಿ ಕೆಲಸವ ಶೋಧಿಸಿ ಮುಗಿದಲ್ಲಿ ಕಂಕುಳ ತಟ್ಟಿಸು ಎಂಬ ಶಬ್ದಕ್ಕರ್ಥ. ಆ ಮಾಯಾ ದುರ್ವಾಸನೆಯ ಸೋಂಕದೆ ಶಿವ ಸದ್ವಾಸನೆಯ ಸ್ವೀಕರಿಸುತ್ತಿದನೆಂಬುದೀಗ, ಮೂಗ ಮುಟ್ಟಿಸು ಎಂಬ ಶಬ್ದಕ್ಕರ್ಥ. ಆ ಶಿವಸದ್ವಾಸನೆಯ ಸ್ವೀಕರಿಸಿದ ಶರಣನು ಅಜ್ಞಾನ ಕೇಶವ ಛೇದಿಸಿ ಪರಿಪೂರ್ಣ ಜ್ಞಾನಿಯಾಗಿರ್ದನೆಂಬುದೀಗ, ಮಂಡೆಯ ಬೋಳಿಸುವೆನೆಂಬ ಶಬ್ದಕ್ಕರ್ಥ. ಆ ಪರಿಪೂರ್ಣ ಜ್ಞಾನಿಯಾದ ಶರಣನು ತಾನೆ ಬ್ರಹ್ಮವಾದೆನೆಂಬ ಚಿದಹಂಕಾರವ ಚಿದ್ ಘನಲಿಂಗದಲ್ಲಿ ನಿಷ್ಪತಿಯನೆಯ್ದಿಸಿದನೆಂಬುದೀಗ, ಚಂಡಿಕೆಯನಿರಿಸುವೆನು ಬಸವಣ್ಣ ಪ್ರಿಯ ಕಮಳೇಶ್ವರ ಲಿಂಗ ಸಾಕ್ಷಿಯಾಗಿ ಎಂಬ ಶಬ್ದಕ್ಕರ್ಥ.

೨

ಹಿಡಿಯಿಲ್ಲದ ಶಸ್ತ್ರ, ಕೀಲಿಲ್ಲದ ಕತ್ತರಿ ಉಭಯವನೊಡಗೂಡಿದ ಚಿಮ್ಮುಟ
ರೂಹಿಲ್ಲದ ಚಣ ಹಲ್ಲಿಲ್ಲದ ಹಣಿಗೆ ಮಲವಿಲ್ಲದ ಬೆಳಗಿನ ಮುಕುರವ-
ಹಿಡಿದು ಶರಣರೆಲ್ಲರ ಅಡಿವಿಡಿದು ಆಡ ಬಂದೆ
ಚನ್ನ ಬಸವಣ್ಣಂಗೆ ಭೃತ್ಯನಾಗಿ, ಶರಣ ಸಂತತಿಗೆ ಲೆಂಕನಾಗಿ,
ಸತ್ಯ ಗುರುಚರ ಕರ್ತೃ ಸ್ವರೂಪಕ್ಕೆ ಡಿಂಗರಿಗರ,
ಉಭಯ ಡಿಂಗರಿಗರ ಕಂದನೆಂದು, ಪ್ರತಿ ಡಿಂಗರಿಗರ ಕಂದನೆಂದು
ಪ್ರತಿ ಪಾಲಿಸಿಕೊ ಬಸವಣ್ಣ ಪ್ರಿಯ ಕಮಳೇಶ್ವರ ಲಿಂಗಾ !

ಟೀಕು:— ಪರಬ್ರಹ್ಮನು ಆಹ್ವಾನಿಸಿ ಕರೆದಿಹೆನೆಂಬ ಭಿನ್ನ ಜ್ಞಾನವಲ್ಲದ ಶರಣನ ಅಭಿನ್ನ ಜ್ಞಾನವೆಂಬುದೀಗ, ಹಿಡಿಯಿಲ್ಲದ ಶಸ್ತ್ರವೆಂಬ ಶಬ್ದಕ್ಕರ್ಥ. ಗುಣತ್ರಯಂಗಳಿಲ್ಲದ ಶರಣನ ನಿತ್ಯಾನಿತ್ಯ ವಿವೇಕವೆಂಬುದೀಗ ಕೀಲಿಲ್ಲದ ಕತ್ತರಿ ಎಂಬ ಶಬ್ದಕ್ಕರ್ಥ. ಅಹಂಕಾರ-ಮಮಕಾರಂಗಳ ಹೊದ್ದದ ಶರಣ ನೈಷ್ಟಿಕಾ ಭಾವಂಗಳ ನೆಲೆಗೊಳಿಸಿದನೆಂಬುದೀಗ, ರೂಹಿಲ್ಲದ ಚಣವೆಂಬ ಶಬ್ದಕ್ಕರ್ಥ. ಸಕಲ ಕರಣಂಗಳ ಅಹಂಕಾರವಳಿದು ನಿರಹಂಕಾರವಾದುದೆ ಭಕ್ತಿ. ಅಂತಪ್ಪ ಭಕ್ತಿಯನು ದೃಢವಿಡಿದ ಶರಣನೆಂಬುದೀಗ, ಹಲ್ಲಿಲ್ಲದ ಹಣಿಗೆ ಎಂಬ ಶಬ್ದಕ್ಕರ್ಥ. ಮಲತ್ರಯಂಗಳು ನಾಸ್ತಿಯಾದ ಶಿವಜ್ಞಾನ ಪ್ರಕಾಶವ ಶರಣ ಸದ್ಭಾವ ಹಸ್ತದಲ್ಲಿ ಹಿಡಿದನೆಂಬುದೀಗ, ಮಲವಿಲ್ಲದ ಬೆಳಗಿನ ಮುಕುರವ ಹಿಡಿದು ಶರಣರೆಲ್ಲರ ಅಡಿ ವಿಡಿದು ಆಡಬಂದೆ ಚನ್ನಬಸವಣ್ಣಂಗೆ ಭೃತ್ಯನಾಗಿ, ಶರಣ ಸಂತತಿಗೆ ಲೆಂಕನಾಗಿ, ಸತ್ಯ ಗುರು ಚರ ಕರ್ತೃ ಸ್ವರೂಪಕ್ಕೆ ಡಿಂಗರಿಗರ ಉಭಯ ಡಿಂಗರಿಗರ ಪ್ರತಿ ಡಿಂಗರಿಗರ ಕಂಪನೆಂದು ಪ್ರತಿಪಾಲಿಸಿಕೊ ಬಸವಣ್ಣ ಪ್ರಿಯ್ಯ ಕಮಳೇಶ್ವರ ಲಿಂಗಾ ಎಂಬ ಶಬ್ದಕ್ಕರ್ಥ.

೩

ಅಂಗದ ರೋಮದ ಮುಮ್ಮೊನೆ ದೊರೆ ಮೊಳೆಗಾಣದಂತೆ,
ದಶಾಂಗುಲ ನಖ ಪ್ರತಿರೂಪು ದೋರದಂತೆ,
ಇದು ಶರೀರ ಚಿತ್ರಾಂಗಿಯ ಕಾಯದ ನಿರುಗೆಯ ತೆರ,
ಹೊರಗಣ ಕ್ರೀಆತ್ಮ ನೊಳಗಣ ಜ್ಞಾನ ಇಂತಿ ಉಭಯನವನರಿತು
ಕಾಯಕವನೊಡಗೂಡಿ ಮಾಡಬೇಕು,
ಹದಿನೆಂಟು ಕಾಯಕದೊಳಗಾದ ನಾಲ್ಕು ಕಾಯಕ ಹೊರಗಾದ
ಮೂರು ಕಾಯಕ ಮುಂತಾದ ತಾ ಬಂದ ಕಾಯಕದಂದವ ತಿಳಿದು
ಚನ್ನಬಸವಣ್ಣ ಸಾಕ್ಷಿಯಾಗಿ ಕಮಳೇಶ್ವರ ಲಿಂಗವ
ನೊಡಗೂಡಬೇಕು

ಟೀಕು:— ಪಂಚಭೂತಾಕ್ರಿಯವಾದ ದೇಹವೆಂಬುದೀಗ, ಅಂಗದ ಎಂಬ ಶಬ್ದಕ್ಕರ್ಥ. ಅಂತಪ್ಪ ಶರೀರದಲ್ಲಿರ್ದ ಸಕಲ ಕರಣಂಗಳೆಲ್ಲವನು ಸುಜ್ಞಾನಾಗ್ನಿಯಿಂ ಸುಟ್ಟು ಅದರ ಹುಟ್ಟಿಲ್ಲದಂತೆ ಮಾಡಿದ ಶರಣನೆಂಬುದೀಗ, ಅಂಗದ ರೋಮದ ಮುಮ್ಮೊನೆದೋರಿ ಮೊಳೆಗಾಣದಂತೆ ಎಂಬ ಶಬ್ದಕ್ಕರ್ಥ. ಜ್ಞಾನ ಕರ್ಮೇಂದ್ರಿಯಂಗಳ ವರ್ತನೆಯ ನಿವೃತ್ತಿಮಾಡಿ ಲಿಂಗೇಂದ್ರಿಯ ಸ್ವರೂಪವ ಶರಣನೆಂಬುದೀಗ, ದಶಾಂಗುಲವೆಂಬ ಶಬ್ದಕ್ಕರ್ಥ. ಆ ಸಲಕರಣಂಗಳ ಪ್ರಕೃತಿ ಭಾವ ಕೆಟ್ಟು ಜ್ಞಾನಕರಣಂಗಳಾಗಿರ್ದಲ್ಲಿ ಪ್ರಕೃತಿ ಭಾವದಿಂಚರಿಸಲಿಯ್ಯ ಶರಣನೆಂಬುದೀಗ, ನಖಪ್ರತಿರೂಪುದೋರದಂತೆ ಎಂಬ ಶಬ್ದಕ್ಕರ್ಥ- ಚಿದ್ರೂಪನಾದ ಶರಣನ ಸರ್ವಾಂಗವು ಮಂತ್ರಸ್ವರೂಪವಾಗಿ ಅಭಿನ್ನ ಕ್ರಿಯಾಚಾರದಲ್ಲಿ ಏಕಾರ್ಥವಾಯಿತ್ತೆಂಬುದೀಗ, ಇದು ಶರೀರ ಚಿತ್ರಾಂಗಿಯ ಕಾಯದ ನಿರುಗೆಯ ತೆರನೆಂಬ

ಶಬ್ದಕ್ಕರ್ಥ. ಆ ಚಿತ್‌ಸ್ವರೂಪನಾದ ಶರಣ ಇಷ್ಟಲಿಂಗಕ್ಕೆ ಮಾಡುವ ಅಷ್ಟವಿಧಾರ್ಚನೆ ಷೋಡಶೋಪಚಾರವೆಂಬುದೀಗ, ಹೊರಗಣ ಕ್ರೀಯೆಂಬ ಶಬ್ದಕ್ಕರ್ಥ. ಆ ಸುಜ್ಞಾನಿ ಶರಣನ ಆತ್ಮನಲ್ಲಿ ಸಂಬಂಧವಾದ ಪ್ರಾಣಲಿಂಗಕ್ಕೆ ಮಾಡುವ ಮೀರಿದ ಕ್ರಿಯಾಚರಣೆ ಎಂಬುದೀಗ, ಆತ್ಮನೊಳಗಣ ಜ್ಞಾನವೆಂಬ ಶಬ್ದಕ್ಕರ್ಥ. ಇಂತಪ್ಪ ಕ್ರಿಯಾಜ್ಞಾನವಿಡಿದು ಆಚರಿಸಿ ತನು-ಮನ-ಧನಂಗಳ ತ್ರಿವಿಧ ಮುಖದಲ್ಲಿ ಅರ್ಪಿಸುತ್ತಿಹನೆಂಬುದೀಗ, ಇಂತಿ ಉಭಯವನರಿತು ಕಾಯಕವನೊಡಗೂಡಿ ಮಾಡಬೇಕು ಎಂಬ ಶಬ್ದಕ್ಕರ್ಥ. ಹದಿನೆಂಟು ಲಿಂಗಗಳಲ್ಲಿ ಹದಿನೆಂಟು ತೆರದ ಭಕ್ತಿಯಿಂದ ಆಚರಿಸುತ್ತಿಹ ಶರಣನೆಂಬುದೀಗ, ಹದಿನೆಂಟು ಕಾಯಕವೊಳಗಾದ ಎಂಬ ಶಬ್ದಕ್ಕರ್ಥ. ಆ ಚಿತ್‌ಸ್ವರೂಪನಾದ ಶರಣ ಗುರುಭಕ್ತಿ-ಲಿಂಗಭಕ್ತಿ-ಜಂಗಮ ಭಕ್ತಿ-ಪ್ರಸಾದ ಭಕ್ತಿ ಎಂಬ ಚತುರ್ವಿಧ ಭಕ್ತಿಯಲ್ಲಿ ತತ್ಪರನಾಗಿ ಆಚರಿಸುತ್ತಿರ್ದನೆಂಬುದೀಗ, ನಾಲ್ಕು ಕಾಯಕ ಹೊರಗಾದ ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣ ಇಷ್ಟ-ಪ್ರಾಣ-ಭಾವಲಿಂಗದಲ್ಲಿ ಕ್ರಿಯಾಜ್ಞಾನ ಭಾವಂಗಳಿಂದ ಆಚರಿಸುತ್ತಿರ್ದನೆಂಬುದೀಗ, ಮೂರು ಕಾಯಕ ಮುಂತಾದ ಎಂಬ ಶಬ್ದಕ್ಕರ್ಥ. ಇಂತು ಭಕ್ತಿವಿಡಿದಾಚರಿಸಿದ ಶರಣನು ಶ್ರೀಗುರು ಕಾರುಣ್ಯ ಸತ್ಪಥ ಮಾರ್ಗವನು ಸುಜ್ಞಾನ ದೃಷ್ಟಿಯಿಂದ ನೋಡುತ್ತಿರ್ದನೆಂಬುದೀಗ, ತಾ ಬಂದ ಕಾಯಕದಂದವ ತಿಳಿದು ಚನ್ನಬಸವಣ್ಣ ಸಾಕ್ಷಿಯಾಗಿ ಕಮಳೇಶ್ವರಲಿಂಗವ ನೊಡಗೂಡಬೇಕು ಎಂಬ ಶಬ್ದಕ್ಕರ್ಥ.

೪

ಬೆನ್ನ ಪೀಳಿಗೆ ಎನ್ನ ಕೇಳಬೇಡ, ಅಂಗಾಲ ಹುಣ್ಣಿಗೆ ಎನ್ನ ಕೇಳಬೇಡ
ಬಾಯೊಳಗಣ ಬಗದಳಕ್ಕೆ ಎನ್ನ ಕೇಳಬೇಡ, ಆ ವ್ಯಾಧಿಗೆ ಬಲ್ಲವರ ಬಲ್ಲೆ
ಬೆನ್ನಿಗೆ ಬಸವಣ್ಣ, ಕಾಲ್ಲಿಗೆ ಚನ್ನ ಬಸವಣ್ಣ, ಬಾಯಿಗೆ ಪ್ರಭುದೇವರು —
ಬಸುರಿಗೆ ನಿಜಗುಣ, ಈ ರೋಗವ ಬಲ್ಲ ಮಿಕ್ಕಾದ ವ್ಯಾಧಿಗೆ
ನಾನರಸು ಮತ್ತಾರುವ ಬಳಿವಿಡಿಯಲಿಲ್ಲ
ಚನ್ನ ಬಸವಣ್ಣ ಮುಂತು ಕಮಳೇಶ್ವರ ಲಿಂಗವು ಹಿಂದುಳಿ ಒಡಗೂಡಬೇಕು.

**ಟೀಕು:—** ದೇಹವಿಡಿದು ಜನ್ಮಾಂತರಂಗಳಲ್ಲಿ ನಾ ಬರಲಾರೆನೆಂದು ವಿವೇಕಿಸುತ್ತಿರ್ದ ಶರಣನೆಂಬುದೀಗ, ಬೆನ್ನ ಪೀಳಿಗೆ ಎನ್ನ ಕೇಳಬೇಡವೆಂಬ ಶಬ್ದಕ್ಕರ್ಥ. ಲಿಂಗಾಂಗಕ್ಕೆ ಭಿನ್ನವಿಟ್ಟು ಮಾಡುವ ಭಿನ್ನ ಕ್ರಿಯಾಚಾರಕ್ಕೆ ನಾನಾರೆಂದು ಸದ್ವಿವೇಕದಿಂ ವಿವೇಕಿಸುತ್ತಿರ್ದನೆಂಬುದೀಗ, ಅಂಗಾಲ ಹುಣ್ಣಿಗೆ ಎನ್ನ ಕೇಳಬೇಡ ಎಂಬ ಶಬ್ದಕ್ಕರ್ಥ. ಭಿನ್ನಾಪೇಕ್ಷೆಯಿಂ ಸಕಲ ವಿಷಯಂಗಳ ಭುಂಜಿಸಲಾರೆನೆಂದು ವಿವೇಕಿಸುತ್ತಿರ್ದನೆಂಬುದೀಗ, ಬಾಯೊಳಗಣ ಬಗದಳಕ್ಕೆ ಎನ್ನಕೇಳ

ಬೇಡವೆಂಬ ಶಬ್ದಕ್ಕರ್ಥ. ಈ ತ್ರಿವಿಧವ ನಿವೃತ್ತಿ ಮಾಡಿದ ಶರಣರೆ ಪರಬ್ರಹ್ಮ ಸ್ವರೂಪರೆಂದರಿಪರೆಂಬುದೀಗ, ಆ ವ್ಯಾಧಿಗೆ ಬಲ್ಲವರ ಬಲ್ಲೆನೆಂಬ ಶಬ್ದಕ್ಕರ್ಥ. ದೇಹಸಂಬಧವಾಗಿ ಪರಿಭವಂಗಳಲ್ಲಿ ಬರುತ್ತಿರ್ದ ಆತ್ಮಂಗೆ ಸುಜ್ಞಾನೋದಯ ವಾಗಿ ಗುರೋಪಾವಸ್ಥೆಯ ಮಾಡಲು ಆ ಶ್ರೀಗುರು ಕರುಣಿಸಿ ಪ್ರಸನ್ನವಾಗಿ ದೀಕ್ಷೆ ತ್ರಯಂಗಳಿಂ ಜನ್ಮಾಂತರಂಗಳ ನಿವೃತ್ತಿ ಮಾಡಿ ಶರಣನ ಆಚಾರಾಂಗದಲ್ಲಿ ಇಷ್ಟಲಿಂಗ ಸಾಹಿತ್ಯವ ಮಾಡಿದನೆಂಬುದೀಗ, ಬೆನ್ನಿಗೆ ಬಸವಣ್ಣನೆಂಬ ಶಬ್ದಕ್ಕರ್ಥ. ಭಿನ್ನ ಕ್ರಿಯಾಚಾರವ ನಷ್ಟವ ಮಾಡಿದ ಅಭಿನ್ನ ಕ್ರಿಯಾಚಾರವ ನೆಲೆಗೊಳಿಸಿದ ಚನ್ನಬಸವೇಶ್ವರನೆಂಬುದೀಗ, ಕಾಲಿಗೆ ಚನ್ನ ಬಸವಣ್ಣನೆಂಬ ಶಬ್ದಕ್ಕರ್ಥ. ಜಂಗಮದ ಸುಜ್ಞಾನ ಬೋಧೆಯಿಂದ ಭಿನ್ನಾಪೇಕ್ಷೆಯು ನಷ್ಟವಾಗಿ ಶಿವಾ ಪೇಕ್ಷೆಯು ನೆಲೆಗೊಂಡಿತ್ತೆಂಬುದೀಗ, ಬಾಯಿಗೆ ಪ್ರಭುದೇವರು ಎಂಬ ಶಬ್ದ ಕ್ಕರ್ಥ. ಪ್ರಾರಾಬ್ಧ ಭೋಗ ಸ್ಥಿತಿಯ ನಿವೃತ್ತಿ ಮಾಡಿ ಲಿಂಗೋಪಭೋಗಿಯಾಗಿರ್ದ ಶರಣನೆಂಬುದೀಗ, ಬಸುರಿಗೆ ನಿಜಗುಣ ಈ ರೋಗವನೆ ಬಲ್ಲನೆಂಬ ಶಬ್ದಕ್ಕರ್ಥ. ಸಕಲ ಕರಣಂಗಳನೆಲ್ಲ ಸುಜ್ಞಾನ ಪ್ರಕಾಶದಿಂ ನಿವೃತ್ತಿ ಮಾಡಿ ಅವಕ್ಕೆ ಅಧಿಷ್ಠಾ ಯಕನಾಗಿರ್ದ ಶರಣನೆಂಬುದೀಗ, ಮಿಕ್ಕಾದ ವ್ಯಾಧಿಗೆ ನಾನರಸು ಮತ್ತಾರುವ ಬಳಿ ವಿಡಿಯಲಿಲ್ಲ ಚನ್ನಬಸವಣ್ಣ ಮುಂತು ಕಮಳೇಶ್ವರ ಲಿಂಗವು ಹಿಂದುಳಿ ಬೊಡಗೂಡಬೇಕು ಎಂಬ ಶಬ್ದಕ್ಕರ್ಥ.

೫೫

ಎನ್ನ ಕನ್ನಡಿ ಒಳ ಹೊರಗಿಲ್ಲ, ಎನ್ನಗಳಿಹ ಮುಟ್ಟನೊಳಕೊಂಡ
ಚಿರಪಡ ಪಕ್ಕಳವಲ್ಲ; ಕತ್ತಿಯ ಬಸವಣ್ಣ ಕೊಟ್ಟ
ಕತ್ತರಿಯ ಚನ್ನ ಬಸವಣ್ಣ ಕೊಟ್ಟ, ಕಿತ್ತು ಹಾಕುವ ಚಿಮ್ಮಟವ
ಪ್ರಭುರಾಯ ಕೊಟ್ಟ
ಮಿಕ್ಕಾದ ಎನ್ನಯ ಮುಟ್ಟ ಸತ್ಯಶರಣರು ಕೊಟ್ಟರು
ದೃಷ್ಟರ ತೋರಿ ಯಡಗುವ ಮುಕುರವ ಕೊಟ್ಟವರ ಹೇಳುವೆನು—
ದೃಷ್ಟ-ಪ್ರಸಿದ್ಧ-ಅಪ್ರತಿಯ-ಪ್ರಸನ್ನ
ಚನ್ನ ಬಸವಣ್ಣ ಪ್ರಿಯ್ಯ ಕಮಳೇಶ್ವರ ಲಿಂಗವು ಎನಗೆ ದೃಷ್ಟವ
ಕೊಟ್ಟಾತ ಬೆಳಗಿನೊಳಗಾದಾ.

**ಟೀಕು:—** ಸುಜ್ಞಾನೋದಯದಿಂ ಸರ್ವಾಂಗಲಿಂಗ ಸಂಬಂಧವಾದ ಶರ ಣನ ಮಹಾಜ್ಞಾನ ಪ್ರಕಾಶವು ಅಂತರಂಗ-ಬಹಿರಂಗದಲ್ಲಿ ಪರಿಪೂರ್ಣವಾಗಿರ್ದು ಖಂಡಿತ ತೋರಲಿಲ್ಲವೆಂಬುದೀಗ, ಎನ್ನ ಕನ್ನಡಿ ಒಳಹೊರಗಿಲ್ಲವೆಂಬ ಶಬ್ದಕ್ಕರ್ಥ. ಚಿತ್‌ಸ್ವರೂಪವಾದ ಶರಣನ ಜ್ಞಾನಕ್ರಿಯಾಚಾರ ಮುಖ್ಯವಾದ ಸರ್ವಾಚಾರ ಸಂಪತ್ತನೊಳಕೊಂಡ, ಅಖಂಡ ಜ್ಞಾನಚಿತ್ತು ಅದು ಖಂಡಿತವಲ್ಲದೆ ಅಖಂಡ ಸ್ವರೂಪವಾದ ಕಾರಣ ದೇಹ ಪ್ರಾಣಂಗಳ ಹೊದ್ದದೆಂಬುದೀಗ, ಎನ್ನಗಳಿಹ ಮುಟ್ಟನೊಳಕೊಂಡ ಚಿರಹಪಕ್ಕಳವಲ್ಲ ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ

ಶರಣಂಗೆ ಸುಜ್ಞಾನ ಶಸ್ತ್ರವ ಶ್ರೀ ಗುರು ಕರುಣಿಸಿದನೆಂಬುದೀಗ, ಕತ್ತಿಯು ಬಸವಣ್ಣ ಕೊಟ್ಟನೆಂಬ ಶಬ್ದಕ್ಕರ್ಥ. ಅನಿತ್ಯವಾದ ಮಾಯಾ ಪ್ರಪಂಚ ಬಿಟ್ಟು ನಿತ್ಯ ಸ್ವರೂಪವಾದ ಪರಶಿವ ತತ್ವವರಿವ ನಿತ್ಯಾನಿತ್ಯ ವಿವೇಕವು ಚಿದ್ ಘನಲಿಂಗದ ಕೃಪೆಯಿಂದ ಶರಣಂಗೆ ಸಾಧ್ಯವಾಯಿತ್ತೆಂಬುದೀಗ, ಕತ್ತರಿಯು ಚನ್ನಬಸವಣ್ಣ ಕೊಟ್ಟನೆಂಬ ಶಬ್ದಕ್ಕರ್ಥ. ಸಕಲ ಕರಣಂಗಳ ನಿವೃತ್ತಿಯು ಮಾಡುವ ನೈಷ್ಠಿ ಭಾವಂಗಳ ಸುಜ್ಞಾನ ಜಂಗಮ ಲಿಂಗ ಕರುಣಿಸಿದನೆಂಬುದೀಗ, ಕಿತ್ತು ಹಾಕುವ ಚಿಮ್ಮುಟಿವ ಪ್ರಭುರಾಯ ಕೊಟ್ಟನೆಂಬ ಶಬ್ದಕ್ಕರ್ಥ. ಆ ಶರಣಂಗೆ ಸಕಲ ಸ್ಥಲ ಕುಳಾದಿಗಳು ಮುಖ್ಯವಾದ ಸರ್ವಾಚಾರ ಸಂಪತ್ತು ಶಿವಶರಣರ ಶಿವಾನುಭಾವದ ಹೊರೆಯಲ್ಲಿರ್ದ ಕಾರಣ ಸಾಧ್ಯವಾಯಿತ್ತೆಂಬುದೀಗ, ಮಿಕ್ಕಾದ ಎನ್ನಯ ಮುಟ್ಟ ಸತ್ಯಶರಣರು ಕೊಟ್ಟರೆಂಬ ಶಬ್ದಕ್ಕರ್ಥ. ಆ ನಿರಾಕಾರವಾದ ಪರಬ್ರಹ್ಮವ ಸಾಕಾರವ ಮಾಡಿ ಕರಸ್ಥಲಕ್ಕೆ ಕೊಟ್ಟು ಆ ಮಹಾಘನಲಿಂಗದಲ್ಲಿ ಸಮರಸೈಕ್ಯವನೆಯ್ದುವ ಆಸಿಪದ ಸ್ವರೂಪವಾದ ಶಿವಜ್ಞಾನ ಪ್ರಕಾಶವ ಶ್ರೀಗುರು ಕರುಣಿಸಿದನೆಂಬುದೀಗ, ದೃಷ್ಟವ ತೋರಿಯುಡಗುವ ಮುಕುರವ ಕೊಟ್ಟವರ ಹೇಳುವೆನು ದೃಷ್ಟ-ಪ್ರಸಿದ್ಧ-ಅಪ್ರತಿಮ-ಪ್ರಸನ್ನ ಚನ್ನಬಸವಣ್ಣ ಪ್ರಿಯ್ಯ ಕಮಳೇಶ್ವರ ಲಿಂಗವು ಎನಗೆ ದೃಷ್ಟವ ಕೊಟ್ಟು ತಾ ಬೆಳಗಿನೊಳಗಾದ ಎಂಬ ಶಬ್ದಕ್ಕರ್ಥ.

## ಮಲಹರದ ಕಾಯಕದ ಚಿಕ್ಕದೇವಯ್ಯರ ವಚನಗಳು

೧

ಮುರಿಗಂಚು ತವರ ಹಿತ್ತಾಳೆ ಇವು ಮೊದಲಾದ ಲೋಹವ ತನ್ನಿ.
ಕಳ್ಳವಣ ಕಂದುಬೆಳ್ಳಿ ಮೊದಲಾದ ರೊಕ್ಕವ ತನ್ನಿ.
ನಿಮಗಲ್ಲದೊಡನೆ ಎನಗೆ ನಿಮಗೊಳಿತ್ತಹ ಒಡವೆಯು ಕೊಡುವೆ
ಎನ್ನ ಕಂಬಳಿಯು ಚೀಲವ ಬಿಡುವೆ, ಅದರಲ್ಲಿರ್ದ ಸಂಬಾರ ದ್ರವ್ಯವ—
ಕೊಡುವೆನೆಂಬುದಕ್ಕೆ ನನ್ನ ನಂಬಿ ಬನ್ನಿ.
ಊರ್ಧ್ವರೇತೋ ಮೂರ್ತಿ ಶ್ವೇತ ಸ್ವಯಂಭು ಕಪಿಲೇಶ್ವರ ಲಿಂಗದಾಣತಿ.

**ಟೀಕು:**— ಮುರಿಗಂಚೆಂದೊಡೆ, ಮನ. ತವರವೆಂದೊಡೆ ಬುದ್ಧಿ, ಹಿತ್ತಾಳೆ ಎಂದೊಡೆ ಚಿತ್ತ. ತಾಮ್ರವೆಂದೊಡೆ ಅಹಂಕಾರ. ಇಂತಪ್ಪ ಚತುಃಕರಣಂಗಳೆಂಬ ಅವಲೋಹವನು ಶ್ರೀಗುರು ಮುಖದಿಂ ನಿವೃತ್ತಿಮಾಡಿದನೆಂಬುದೀಗ, ಮುರಿಗಂಚು, ತವರ, ಹಿತ್ತಾಳೆ, ತಾಮ್ರ ಇವು ಮೊದಲಾದ ಲೋಹವ ತನ್ನಿ ಎಂಬ ಶಬ್ದಕ್ಕರ್ಥ. ಕರ್ತೃಹೀನವಾದ ವಾಗಾದ್ವೈತವೆಂಬುದೀಗ, ಕಳ್ಳವಣವೆಂಬ ಶಬ್ದ

ಕ್ಕರ್ಥ. ತನ್ನ ನಿಜಸ್ವರೂಪವನರಿಯದ ಭಿನ್ನಜ್ಞಾನವೆಂಬುದೀಗ, ಕಂದು ಬೆಳ್ಳಿಯೆಂಬ ಶಬ್ದಕ್ಕರ್ಥ. ಆತ್ಮನಿಗೆ ಹಿತವಲ್ಲದ ಅಂಗ ಕರಣಂಗಳ ವರ್ತನೆಯ ನಿವೃತ್ತಿಯ ಮಾಡಿ ಶ್ರೀಗುರು ಅಮರಗಣತ್ವದಿಂ ಲಿಂಗ ಕರಣಂಗಳ ಮಾಡಿ ಪ್ರಾಣ ಲಿಂಗದ ಸೇವಕರೆನಿಸಿದರೆಂಬುದೀಗ, ಮೊದಲಾದ ರೊಕ್ಕವ ತನ್ನಿ ನಿಮಗಲ್ಲದೊಡವೆ ಎನಗೆ ನಿಮಗೊಳ್ಳಿತಹ ಒಡವೆಯ ಕೊಡುವೆನೆಂಬ ಶಬ್ದಕ್ಕರ್ಥ. ಮಹಾಜ್ಞಾನ ಚಿತ್ತ ಪ್ರಭಾವಿಸಿದನೆಂಬುದೀಗ, ಎನ್ನ ಕಂಬಳಿಯ ಚೀಲವ ಬಿಡುವೆನೆಂಬ ಶಬ್ದಕ್ಕರ್ಥ. ಅಂತಪ್ಪ ಚಿತ್ತಿನ ಮಧ್ಯದಲ್ಲಿ ಚಿತ್‌ಪ್ರಕಾಶಮಯವಾಗಿ ತೊಳಗಿ-ಬೆಳಗುತ್ತಿರ್ದ ಸದ್ವಾಸನಾ ಸ್ವರೂಪವಾದ ಆಚಾರಾದಿ ಮಹಾಲಿಂಗಗಳ ಷಡ್ವಿಧಾಂಗದಲ್ಲಿ ಅವಿರಳ ಸಂಬಂಧವ ಮಾಡಿ ಆ ಲಿಂಗದಲ್ಲಿ ಷಡ್ವಿಧ ಭಕ್ತಿವಿಡಿದು ಆಚರಿಸುವ ಸರ್ವಾಚಾರ ಸಂಪತ್ತ ಶ್ರೀಗುರು ಶಿಷ್ಯಂಗೆ ಅರುಹಿದನೆಂಬುದೀಗ, ಅದರಲ್ಲಿರ್ದ ಸಂಬಾರ ದ್ರವ್ಯವ ಕೊಡುವೆನೆಂಬುದಕ್ಕೆ ನನ್ನ ನಂಬಿ ಬನ್ನಿ ಊರ್ಧ್ವರೇತೋ ಮೂರ್ತಿ ಶ್ವೇತ ಸ್ವಯಂಭು ಕಪಿಲೇಶ್ವರ ಲಿಂಗದಾಣತಿ ಎಂಬ ಶಬ್ದಕ್ಕರ್ಥ.

೨

ಮನ-ಬುದ್ಧಿ-ಚಿತ್ತ-ಅಹಂಕಾರವೆಂಬ ನಾಲ್ಕು ಮೋಹದಿಂದ
ಸರ್ವೇಂದ್ರಿಯದ ಮೊತ್ತ ಮನ ವಸ್ತುವ ಮುಟ್ಟದೆ ನಿಜನಿಷ್ಠೆಯ ನರಿಯದೆ
ಬಹು ಮೊತ್ತದ ಮಾತನಾಡುವದು ನಳ್ಳವಣಸಲ್ಲದ ತಾರ
ಇವೆಲ್ಲವ ತಿಳಿದು ಕಂಬಳಿಯ ಚೀಲದವನ ಬೆಂಬಳಿಯಲ್ಲಿ ಬನ್ನಿ
ನಿಮಗಲ್ಲದೊಡವೆಯ ನೊಳ್ಳಿತ್ತ ಮಾಡಿ ಕೊಡುವೆ
ಊರ್ಧ್ವರೇತೋ ಮೂರ್ತಿ ಶ್ವೇತ ಸ್ವಯಂಭು ಕಪಿಲೇಶ್ವರ ಲಿಂಗ ಸಾಕ್ಷಿಯಾಗಿ.

**ಟೀಕು:**— ಮನ-ಬುದ್ಧಿ-ಚಿತ್ತ-ಅಹಂಕಾರವೆಂಬ ನಾಲ್ಕು ಕರಣಂಗಳು ಅಜ್ಞಾನ ಸಂಬಂಧಿಗಳಾಗಿಹ ಕಾರಣ ಅಂತಪ್ಪ ಕಾರಣ ವಿಕಾರಂಗಳಿಂದ ಆತ್ಮನು ಗಸಣಿಗೊಳಗಾಗುತ್ತಿಹನೆಂಬುದೀಗ, ಮನ—ಬುದ್ಧಿ—ಚಿತ್ತ—ಅಹಂಕಾರವೆಂಬ ನಾಲ್ಕು ಲೋಹದಿಂದ ಎಂಬ ಶಬ್ದಕ್ಕರ್ಥ. ಅಂತು ಜ್ಞಾನ ಕರ್ಮೇಂದ್ರಿಯಂಗಳ ವಿಷಯ ಭೋಗದಿಂದ ಆತ್ಮ ಗಾರಾಗುತ್ತಿಹರೆಂಬುದೀಗ, ಸರ್ವೇಂದ್ರಿಯದ ಎಂಬ ಶಬ್ದಕ್ಕರ್ಥ. ಆ ಸಕಲ ಕರಣಂಗಳ ಉಪಟಳದಿಂದ ಆತ್ಮನು ತನ್ನ ನಿಜ ಸ್ವರೂಪವ ಮರದನೆಂಬುದೀಗ, ಮೊತ್ತವೆಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮಂಗೆ ಮನ ವಸ್ತುವಿನಲ್ಲಿ ನಿರ್ಧರವಾದುದಿಲ್ಲವೆಂಬುದೀಗ, ಮನವಸ್ತುವ ಮುಟ್ಟದೆ ಎಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮಂಗೆ ಭಕ್ತಿ – ನೈಷ್ಠೆ ಇಲ್ಲದೆ ಹೋಯಿತ್ತೆಂಬುದೀಗ, ನಿಜ ನಿಷ್ಠೆಯನರಿಯದೆ ಎಂಬ ಶಬ್ದಕ್ಕರ್ಥ. ವೇದ—ಶಾಸ್ತ್ರ-ಆಗಮ-ಪುರಾಣಗಳಿಂದ ಆತ್ಮಜ್ಞಾನವ ಸಾಧಿಸಿ ವಾಗಾ ದ್ವೈತದಿಂದುಲಿವುದೆ ಕರ್ತೃಹೀನವಾದ ಕಳ್ಳಹಣವೆಂಬುದೀಗ, ಬಹುಮೊತ್ತದ ಮಾತನಾಡುವದು ಕಳ್ಳವಣವೆಂಬ ಶಬ್ದಕ್ಕರ್ಥ. ಆತ್ಮನ ಸುಬುದ್ಧಿಯಳಿದ ಕುಬುದ್ಧಿ ಎಂಬುದೀಗ,

ಸಲ್ಲದ ತಾರವೆಂಬ ಶಬ್ದಕ್ಕರ್ಥ. ಇಂತಪ್ಪ ಆತ್ಮಂಗೆ ಸುಜ್ಞಾನೋದಯದಿಂದ ಆ ಕರಣಂಗಳೆಲ್ಲವನು ಜ್ಞಾನ ಕರಣಂಗಳ ಮಾಡಿ ಶಿವಸ್ವರೂಪರಾದ ಶಿವಾನುಭವಿಗಳ ಕೂಡ ಅನುಭವ ಗೋಷ್ಠಿಯಿಂದ ಮಥನಿಸುತ್ತಿರಲಾಗಿ ಸಕಲ ಕರಣಂಗಳ ವ್ಯವಹಾರ ಕೆಟ್ಟು ಜ್ಞಾನ ಕರಣಂಗಳಾದವೆಂಬುದೀಗ, ಇವೆಲ್ಲವ ತಿಳಿದು ಕಂಬಳಿಯ ಚೀಲದವನ ಬೆಂಬಳಿಯಲ್ಲಿ ಬನ್ನಿ ನಿಮಗಲ್ಲದೊಡವೆಯ ನೊಳ್ಳಿತ್ತುಮಾಡಿಕೊಡುವೆ ಊರ್ಧ್ವರೇತೋ ಮೂರ್ತಿ ಶ್ವೇತ ಸ್ವಯಂಭು ಕಪಿಲೇಶ್ವರ ಲಿಂಗ ಸಾಕ್ಷಿಯಾಗಿ ಎಂಬ ಶಬ್ದಕ್ಕರ್ಥ.

## ಸಗರದ ಬೊಮ್ಮಣ್ಣನವರ ವಚನಗಳು

೧

ಕಾಲಕಣ್ಣಿನಲ್ಲಿ ಒಬ್ಬ ಬಾಲೆ ಹುಟ್ಟಿದಳು ಆ ಬಾಲೆಗೆ ಮೊಲೆ ಒಂದೇ
ಉಂಬ ಮಕ್ಕಳು ಐವರು, ಅವಳ ಗಂಡ ಶಿಖಂಡಿ, ಮಕ್ಕಳು
ಹುಟ್ಟಿದ ಭೇದವಹೇಳಾ !
ಮಕ್ಕಳು ಅಪ್ಪಾ ಎಂಬುದಕ್ಕೆ ಮೊದಲೇ ಸತ್ತ ಹೆತ್ತ ತಂದೆ
ಅವನ ಹೆಂಡತಿ ಅವನೊಂದಾಗಿ ಹೊಂದಲೊಲ್ಲದೆ
ಪಿಂಡ ನೊಂದಿಗೆ ಹೊಂದಿದ ಸಗರದ ಬೊಮ್ಮನೊಡೆಯ ತನುಮನ
ಸಂಗಮೇಶ್ವರಾ !

**ಟೀಕು:**— ಜೀವನ ದುಶ್ಚರಿತ್ರದ ಅಜ್ಞಾನದೃಷ್ಟಿಯಲ್ಲಿ ಮಾಯಾ ಶಕ್ತಿ ಸಂಭೂತಳಾದಳೆಂಬುದೀಗ, ಕಾಲ ಕಣ್ಣಿನಲ್ಲಿ ಒಬ್ಬ ಬಾಲೆ ಹುಟ್ಟಿದಳು ಎಂಬ ಶಬ್ದಕ್ಕರ್ಥ. ಆ ಮಾಯೆಗೆ ಸಂಸಾರ ವಿಷಯ ರಸವ ತುಂಬಿಕೊಂಡಿರ್ದ ಘಟ ಸ್ವರೂಪಿನ ಸ್ತಾನ ಒಂದೆಂಬುದೀಗ, ಆ ಬಾಲೆಗೆ ಮೊಲೆ ಒಂದೆಂಬ ಶಬ್ದಕ್ಕರ್ಥ. ಆ ದೇಹ ಸಂಬಂಧವಾದ ಸಂಸಾರ ವಿಷಯ ಸುಖವನು ಅನುಭವಿಸುತ್ತಿಹವು ಪ್ರಕೃತಿಯಿಂ ಜನಿಸಿದ ಪಂಚೇಂದ್ರಿಯಗಳೆಂಬುದೀಗ, ಉಂಬ ಮಕ್ಕಳು ಐವರು ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯಾಶಕ್ತಿಯ ವಲ್ಲಭನಾದ ಜೀವಂಗೆ ಪರ ಬ್ರಹ್ಮೈಕ ವಿಷಯಜ್ಞಾನವಿಲ್ಲದ ಕಾರಣ ಶಿಖಂಡಿ ಎನಿಸಿದ. ಅಂತಾಗಿ ತಜ್ಜೀವನ ಮಾಯಾಶಕ್ತಿ ಭ್ರಾಂತಿಯೋಗದಿಂ ಪಂಚೇಂದ್ರಿಯಂಗಳು ಉದಯಿಸಿದವೆಂಬುದೀಗ, ಅವಳ ಗಂಡ ಶಿಖಂಡಿ ಮಕ್ಕಳು ಹುಟ್ಟಿದ ಭೇದವ ಹೇಳಾ ಎಂಬ ಶಬ್ದಕ್ಕರ್ಥ. ಅಂತಪ್ಪ ಪಂಚೇಂದ್ರಿಯಂಗಳು ಜೀವ-ಭಾವ-ಭ್ರಾಂತಿಯಿಂ ಉರಿವುದಕ್ಕೆ ಮುನ್ನವೆ ಇಂದ್ರಿಯ ಜನಕನಪ್ಪ ಜೀವಂಗೆ ಸುಜ್ಞಾನೋದಯವಾದಲ್ಲಿ ಗುರೋಪದೇಶದಿಂ ಅಂತರ್ಬಾಹ್ಯದಲ್ಲಿ ಲಿಂಗ ಸಂಬಂಧವಾಗಲು ಜೀವ ಭಾವ ಳಿದು ಚಿತ್ ಪ್ರಾಣಲಿಂಗದಲ್ಲಿ ಏಕಾರ್ಥವಾದನೆಂಬುದೀಗ, ಮಕ್ಕಳು ಅಪ್ಪಾ

ಎಂಬುದಕ್ಕೆ ಮೊದಲೆ ಸತ್ತ ಹೆತ್ತ ತಂದೆ ಎಂಬ ಶಬ್ದಕ್ಕರ್ಥ. ಬಳಿಕ ಪ್ರಾಣಲಿಂಗ ದಲ್ಲಿ ಏಕಾರ್ಥವಾದ ಜೀವಂಗೆ ವನಿತೆಯಾದ ಮಾಯೆಯಳಿದು ಕ್ರಿಯಾಶಕ್ತಿ ಸ್ವರೂಪಿನಿಂ ತಲ್ಲಿಂಗ ಸಂಗವ ಮಾಡದೆ ಸದ್ರೂಪ ಲಿಂಗದಲ್ಲಿ ತಲ್ಲಿಯ್ಯವಾದಳೆಂಬುದೀಗ, ಅವನ ಹೆಂಡತಿ ಅವನೊಂದಾಗಿ ಹೊಂದಲೊಲ್ಲದೆ ಮಿಂಡನೊಂದಿಗೆ ಹೊಂದಿದ ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರಾ ಎಂಬ ಶಬ್ದಕ್ಕರ್ಥ.

೨

ಕಪ್ಪೆ ಕಚ್ಚಿ ಹಾವು ಸತ್ತಿತ್ತು, ಹಾವಡಿಗ ಬಂದು ನೋಡಲಾಗಿ
ಆ ಹಾವಿದೆ ಹಾವು ಸತ್ತಿತ್ತು, ಇದೇನು ಗುಣವೆಂದೆ,
ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರಾ !

**ಟೀಕು:—** ಜ್ಞಾನ ಕಲಾತ್ಮನ ಬ್ರಹ್ಮರಂಧ್ರದ ಪರಮಾಮೃತ ಕೂಪದಲ್ಲಿರ್ದ ಪರಮ ಶಾಂತಿ ಬಂದು ಆಚಾರ್ಯಾನುಗ್ರಹದಿಂ ಬಹಿರ್ಗತ ಪ್ರಕಾಶವಾಗಿ ಅಂಗವನೊಳಕೊಂಡು ಶಂಕಾ ವಿಷ ಸಂಬಂಧಿಯಪ್ಪ ಮನೋ ಕುಂಡಲಿಯ ನವಗ್ರಹಿಸಲು ಮನವಳಿದು ಉನ್ಮನಿ ತತ್ವ ಸ್ವರೂಪವಾಯಿತ್ತೆಂಬುದೀಗ, ಕಪ್ಪೆ ಕಚ್ಚಿ ಹಾವು ಸತ್ತಿತ್ತು ಎಂಬ ಶಬ್ದಕ್ಕರ್ಥ. ಇಂತಾಗಿ ಮನೋ ವ್ಯಾಪಾರವನುಳ್ಳ ಜೀವನಳಿದು ಸಜ್ಜೀವ ಸ್ವರೂಪನಾಗಿ ಸತ್ಕ್ರಿಯಲ್ಲಿ ನಡದು ಸಮ್ಯಜ್ಞಾನದಿಂ ನೋಡಲಾಗಿ ಮನಸ್ಸಂಕಲ್ಪವಳಿದು ನಿಃಸಂಕಲ್ಪದಿಂ ನಿರ್ನಾಮಲಿಂಗವಾಯಿತ್ತೆಂಬುದೀಗ, ಹಾವಾಡಿಗ ಬಂದು ನೋಡಲಾಗಿ ಆ ಹಾವಿದೆ ಹಾವು ಸತ್ತಿತ್ತೆಂಬ ಶಬ್ದಕ್ಕರ್ಥ. ಇಂತಾದುದು ಪರಾನುಭೂತಿ ಇಂದೆಂದು ಆಶ್ಚರ್ಯಬಡುತ್ತಿರ್ದ ಶರಣನೆಂಬುದೀಗ, ಇದೇನು ಗುಣವೆಂದೆ ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರಾ ಎಂಬ ಶಬ್ದಕ್ಕರ್ಥ.

೩

ಭಾನುವಿನಂಗ ಮಧ್ಯದಲ್ಲಿ ಒಂದು ಏಣಿ ಏಣಿಗೆ ಮೂರು ಕಾವು ಮೆಟ್ಟಿ
ಹತ್ತುವದಕ್ಕೆ ಮೆಟ್ಟು ಎಂಭತ್ತುನಾಲ್ಕು ಲಕ್ಷ, ಅದನಿರಿಸುವದಕ್ಕೆ--
ಒಂದು ದಾರ; ಅದು ತಾಳಲಾರದೆ ಏಣಿ ಜಾರಿತ್ತು ಕಾವು ಮುರಿಯಿತ್ತು
ಹಲ್ಲು ಎಲ್ಲಿಗೆ ಹೋದವೆಂದು ಕಾಣಬಾರದು
ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರನಾಗಿ ಊರು ಹಡಗಿದ ಕಾರಣ.

**ಟೀಕು:—** ಮಹಾಮೇರುವ ಬಳಸಿ ದಿನ-ರಾತ್ರಿಯ ಸಡಿಸುತ್ತಿರ್ಪ ಸೂರ್ಯಂಗಾಸ್ಪದವಾಗಿರ್ಪದಾಕಾಶ ಹಾಗೆ, ಅಹಂಕಾರವೆಂಬ ಮೇರುವ ಬಳಸಿ

ಅರವು-ಮರವೆಯ ಹುಟ್ಟಿಸುವ ವೃತ್ತಿ ಜ್ಞಾನಕ್ಕಾಸ್ಪದವಾಗಿರ್ಪ ಆತ್ಮಾಕಾಶ ಮಧ್ಯದಲ್ಲಿ ದೇಹಭಾವ ತೋರಿತ್ತೆಂಬುದೀಗ, ಭಾನುವಿನಂಗ ಮಧ್ಯದಲ್ಲಿ ಒಂದು ಏಣಿಯೆಂಬ ಶಬ್ದಕ್ಕರ್ಥ. ಅಂತಪ್ಪ ದೇಹಕ್ಕೆ ಕರ್ಮತ್ರಯವೆ ಕಾಲಾಗಲು ಅಲ್ಲಿ ದುಶ್ಚರಿತ್ರವನೂರಿ ಜನ್ಮಾಂತರವನೆಯ್ದುವದಕ್ಕೆ ಜೀವಂಗೆ ಎಂಭತ್ತುನಾಲ್ಕು ಲಕ್ಷ ಭವಂಗಳೆ ಮೆಟ್ಟಾಗಿರ್ಪವೆಂಬುದೀಗ, ಏಣಿಗೆ ಮೂರು ಕಾವು ಮೆಟ್ಟು ಹತ್ತುವದಕ್ಕೆ ಮೆಟ್ಟು ಎಂಭತ್ತುನಾಲ್ಕುವೆಂಬ ಶಬ್ದಕ್ಕರ್ಥ. ಅಂತಪ್ಪ ದೇಹಭಾವವ ತಾಳುವದಕ್ಕೆ ಮನೋಸೂತ್ರವೆ ಆಧಾರವಾಗಿಪ್ಪುದೆಂಬುದೀಗ, ಅದನಿರಿಸುವದಕ್ಕೆ ಒಂದು ದಾರವೆಂಬ ಶಬ್ದಕ್ಕರ್ಥ. ಅಂತಪ್ಪ ಮನೋಮಧ್ಯದಲ್ಲಿ ಸುಜ್ಞಾನೋದಯವಾಗಿ ಭವಭಾರಕ್ಕಂಜಿ ತೊಲಗಲು ಆ ಮನವಳಿದು ಉನ್ಮನಿ ತತ್ವಸ್ವರೂಪವನೆಯ್ದಿದ ಜ್ಞಾನ ಕಲಾತ್ಮಂಗೆ ಚಿದೋಪದೇಶದಿಂದ ಅವಿರಳ ಶಿವತತ್ವವ ಅಂಗ-ಪ್ರಾಣಂಗಳಲ್ಲಿ ಸಂಗವಾಗಿ ನಾಮ-ರೂಪು-ಕ್ರೀಯಳಿದ ಕಾರಣ ದೇಹಭಾವವಳಿದು ಕರ್ಮತ್ರಯ ಕೆಟ್ಟು ಪುನರ್ಭವ ನಷ್ಟವಾಗಿ ನಿತ್ಯತ್ವವಳಪಟ್ಟಿತ್ತೆಂಬುದೀಗ, ಅದು ತಾಳಲಾರದೆ ಏಣಿ ಜಾರಿತ್ತು ಕಾವು ಮುರಿಯಿತ್ತು ಹಲ್ಲು ಎಲ್ಲಿಗೆ ಹೋದವೆಂದು ಕಾಣಬಾರದು ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರನಾಗಿ ಕುರುಹಡಗಿದ ಕಾರಣವೆಂಬ ಶಬ್ದಕ್ಕರ್ಥ.

೪

ಸೃಷ್ಟಿಯ ಮೇಲಣ ನರಪಟ್ಟಣದ ಹಾದಿಯಲ್ಲಿ ಕಟ್ಟಿದ ರೈವರು ಕಳ್ಳರು
ಇರಿವುದಕ್ಕೆ ಕೈದಿಲ್ಲ, ಹೊಯ್ಯುವದಕ್ಕೆ ದೊಣ್ಣೆಯಿಲ್ಲ
ಅವರು ಕಳ್ಳರಲ್ಲಾ ಎಂದು ಬೆಳ್ಳರು ಸಿಕ್ಕಿದರು ಕಳ್ಳರ ಕೈಯ್ಯ ಕರಟವಲ್ಲಿ
ಕಳ್ಳಿಯ ಹಾಲು ಕಳ್ಳರ ಕಣ್ಣಿನಲ್ಲಿ ಹೊಯ್ದು ಬೆಳ್ಳರೆಲ್ಲ ಹೋದರೆಂದರಿಯೆ
ಸಗರದ ಬೊಮ್ಮನೊಡೆಯ ತನುಮನ ಸಂಗವಾಗಿ ನಿಸ್ಸಂಗವಾದಾ.

**ಟೀಕು:—** ಪಂಚಭೂತಾಕ್ರಿಯವಪ್ಪ ದೇಹದೊಳಗೆ ಸಕಲ ತತ್ವಂಗಳಿಗಾಶ್ರಯವಾದ ಸೂಕ್ಷ್ಮ ತನುವಿನ ಪ್ರಪಂಚು ಮಾರ್ಗದಲ್ಲಿ ಪಾರಮಾರ್ಥ ವಂಚಕರಪ್ಪ ಪಂಚಕರಣಂಗಳು ಮಾಯಾ ಮೋಹದಿಂ ಬದ್ಧೀಕರಿಸಿಕೊಂಡಿರ್ಪವೆಂಬುದೀಗ, ಸೃಷ್ಟಿಯ ಮೇಲಣ ನರಪಟ್ಟಣದ ಹಾದಿಯಲ್ಲಿ ಕಟ್ಟಿದರೈವರು ಕಳ್ಳರೆಂಬ ಶಬ್ದಕ್ಕರ್ಥ. ಇಂತಪ್ಪ ಪಾರಮಾರ್ಥ ವಂಚಕರಪ್ಪ ಕರಣಂಗಳಿಗಾಶ್ರಯ ಪ್ರಪಂಚು ಮಾರ್ಗದಲ್ಲಿ ಗಮಿಸುವ ಸ್ಥೂಲ-ಸೂಕ್ಷ್ಮ ಇಂದ್ರಿಯ ಪ್ರಕೃತಿಯನಳಿವುದಕ್ಕೆ ಜ್ಞಾನಭಾವಂಗಳಿಲ್ಲವೆಂಬುದೀಗ, ಇರುವುದಕ್ಕೆ ಕೈದಿಲ್ಲ ಹೊಯ್ವುದಕ್ಕೆ ದೊಣ್ಣೆಯಿಲ್ಲವೆಂಬ ಶಬ್ದಕ್ಕರ್ಥ.

"ಆತ್ಮಾನಾಂ ಕೇವಲ ದಶ್ಶಿನದ"

ಎಂಬ ಶ್ರುತಿ ಪ್ರಮಾಣಿನಿಂದ ಆತ್ಮಚೈತನ್ಯ ವಿಡಿದಿರ್ಪರ್ವಾಗಿಯೂ ಕರಣಂಗಳು ಪರಮಾರ್ಥ ವಂಚಕರಲ್ಲೆಂದು ನುಡಿವ ವೇದಾಂತ ಜ್ಞಾನಿಗಳೆಲ್ಲರು ಕರಣಂಗಳ ಭಾವ ಪ್ರಕೃತಿಗೊಳಗಾದರೆಂಬುದೀಗ, ಅವರು ಕಳ್ಳರು ಅಲ್ಲಾ ಎಂದು ಬೆಳ್ಳರು ಸಿಕ್ಕಿದರು ಕಳ್ಳರ ಕೈಯ್ಯ ಕರಟದಲ್ಲಿ ಎಂಬ ಶಬ್ದಕ್ಕರ್ಥ. ಇಂತಪ್ಪ ವಾಗಾದ್ವೈತ ಜ್ಞಾನಿಗಳೆಲ್ಲರು ಕರಣಂಗಳ ಅಜ್ಞಾನ ದೃಷ್ಟಿಯಲ್ಲಿ ಅತಿ ವಿಷೋದಕದಂತಪ್ಪ ಸಂಸಾರ ರಸವನುಂಟುಮಾಡಿ ದುಃಕರಣಂಗಳಾಗಲು ಭವದತ್ತ ಹೋದರೆಂಬುದೀಗ, ಕಳ್ಳಿಯ ಹಾಲು ಕಳ್ಳರ ಕಣ್ಣಿನಲ್ಲಿ ಹೊಯ್ದು ಬೆಳ್ಳರೆಲ್ಲಿಹೋದರೆಂದರಿಯೆನೆಂಬ ಶಬ್ದಕ್ಕರ್ಥ. ಈ ಭೇದವನರಿದು ನಿವೃತ್ತಿಯ ಮಾಡಿದ ಶರಣ ಅಂಗಪ್ರಾಣಂಗಳಲ್ಲಿ ಲಿಂಗಸಂಬಂಧವಾಗಿ ಸರ್ವಸಂಗ ರಹಿತನಾಗಿರ್ಪನೆಂಬುದೀಗ, ಸಗರದ ಬೊಮ್ಮನೊಡೆಯ ತನುಮನ ಸಂಗವಾಗಿ ನಿಸ್ಸಂಗಿಯಾದನೆಂಬ ಶಬ್ದಕ್ಕರ್ಥ.

೫

ಕಾಡುಗುರಿ ಈಯಿತ್ತೊಂದು ಮಾದೇವರ ಮುಲ್ಲನ ಮರಿಯ—
ಅದಕ್ಕೆ ಮೇವಿಲ್ಲ, ಹಾಲನೊಲ್ಲದು, ಅದು ಬಾಲೆಯರ ಬಣ್ಣದ ಲೋಲಮರಿ
ಸಾಲುಗಾಲಿನಲ್ಲಿ ಹರಿದಾಡುತ್ತಿದೆ,
ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರ ಲಿಂಗವು ಒಲಿದು ವಲ್ಲದ ಕಾರಣ

**ಟೀಕು:**— ಭವಾರಣ್ಯ ಪ್ರವೇಶಿಯಾದ ಅಜ್ಞಾನ ಜಡ ಸ್ವರೂಪವನುಳ್ಳ ಮಾಯಾ ಸಂಕಲ್ಪ ಸಂಭೂತವಾದ ಗುಣತ್ರಯ ಸ್ವರೂಪನಪ್ಪ ಜೀವನೆಂಬುದೀಗ, ಕಾಡು ಗುರಿ ಈಯಿತ್ತೊಂದು ಮಾದೇವರ ಮುಲ್ಲನ ಮರಿಯನೆಂಬ ಶಬ್ದಕ್ಕರ್ಥ. ಇಂತಪ್ಪ ಅಜ್ಞಾನ ಭ್ರಾಂತು ಜೀವರಿಗೆ ಶಿವಪ್ರಸಾದ ಸೇವನೆಯಿಲ್ಲದ ಕಾರಣ ಜ್ಞಾನಾಮೃತವ ಸ್ವೀಕರಿಸದ ಪ್ರಪಂಚು ಶಕ್ತಿಯರ ವಿಲಾಸವಂ ಕಂಡು ಕ್ರೀಡಾ ಲೋಲನಾಗಿರ್ಪನೆಂಬುದೀಗ, ಅದಕ್ಕೆ ಮೇವಿಲ್ಲ, ಹಾಲನೊಲ್ಲದು ಅದು ಬಾಲೆಯರ ಬಣ್ಣದ ಲೋಲನೆಂಬ ಶಬ್ದಕ್ಕರ್ಥ. ಇಂತಪ್ಪ ಜೀವಂಗೆ ಶಿವನೊಲಿದು ಪ್ರಾರಾಬ್ಧ ಭೋಗವ ಕೊಟ್ಟು ರಕ್ಷಿಸಿ ಅಜ್ಞಾನಿಯೆನಿಸಿದ ಕಾರಣ ನಾನಾ ದುಶ್ಚರಿತ್ರಂಗಳ ಚರಿಸುತ್ತಿರ್ದನೆಂಬುದೀಗ, ಮರಿ ಸಾಲುಗಾಲಿನಲ್ಲಿ ಹರಿದಾಡುತ್ತಿದೆ ಸಗರದ ಬೊಮ್ಮನೊಡೆಯ ತನು ಮನ ಸಂಗಮೇಶ್ವರ ಲಿಂಗವು ಒಲಿದು ಒಲ್ಲದ ಕಾರಣವೆಂಬ ಶಬ್ದಕ್ಕರ್ಥ,

೬

ಗೋವ ಕುದುರೆಯ ಕಾಣದೆ, ಗೊಲ್ಲ ಕುರಿಯ ಕಾಣದೆ
ಗೋವಾಳಗೋವ ಕಾಣದೆ

ಗೊಲ್ಲನ ಕೇಳೆ ಗೊಲ್ಲ ಗೋವನ ಕೇಳೆಂದು ಬೆಸಸೆ
ಕುರಿ-ಕುದುರೆ- ಗೋವು ತಮ್ಮಡಿಯಲ್ಲಿ ನಿಂದಲಿ,
ಎಂದು ಹೇಳಿ ಚೋದ್ಯವಾಯಿತ್ತು, ಎಂದಡಗಿದ,
ಸಗರದ ಬೊಮ್ಮನೊಡೆಯ ತನುವಿನ ಮಧ್ಯದಲ್ಲಿ ನಿಸ್ಸಂಗ
ಸಂಗಮೇಶ್ವರನಾದಾ !

**ಟೀಕು:**— ಪವನಭ್ಯಾಸಯೋಗಿ ಪ್ರಾಣವಾಯುವಿಕಾರವ ತ್ಯಜಿಸಲರಿಯದೆ ಸಾಧಿಸುತ್ತಿರ್ದ ಕರ್ಮಕಾಂಡಿ ಮಾಯಾ ಸಂಬಂಧವಪ್ಪ ದೇಹ ಭಾವವನಳಿಯಲರಿಯದೆ ಭಿನ್ನಕ್ರಿಯನಾಚರಿಸುತ್ತಿಹ ಅಹಂ ಎಂಬ ಅದ್ವೈತ ಜ್ಞಾನಿ ಜೀವ ಭಾವವ ನಿವೃತ್ತಿಯ ಮಾಡಲರಿಯದೆ ಆತ್ಮೋಹಂ ಎಂದು ನುಡಿವುತ್ತಿಹನೆಂಬುದೀಗ, ಗೋವ ಕುದುರೆಯ ಕಾಣವೆ, ಗೊಲ್ಲ ಕುರಿಯ ಕಾಣದೆ ಗೊಲ್ಲಾಳ ಗೋವ ಕಾಣದೆ ಎಂಬ ಶಬ್ದಕ್ಕರ್ಥ. ವಾಗ್‌ಬ್ರಹ್ಮವಾದಿ ಎನಗೆ ಜೀವಭಾವವಿಲ್ಲೆಂದು ಸಿದ್ಧಾಂತಿಯ ಕೇಳೆ ಆ ಸಿದ್ಧಾಂತಿ ಎನಗದು ಸಂದೇಹವಾಗಿದೆ ಅಭ್ಯಾಸಯೋಗಿಯ ಕೇಳೆಂದು ತಮ್ಮೊಳು ತಾವೇ ಮಥಿಸುತ್ತಿರಲೆಂಬುದೀಗ, ಗೊಲ್ಲನ ಕೇಳೆ, ಗೋವನ ಕೇಳೆಂದು ಬೆಸಸೆ ಎಂಬ ಶಬ್ದಕ್ಕರ್ಥ. ಸಿದ್ಧಾಂತಿಯ ದೇಹಭಾವ, ಯೋಗಿಯ ಪ್ರಾಣವಾಯು ವಿಕಾರ, ಅದ್ವೈತಿಯ ಜೀವಭಾವ, ತಾವಾಚರಿಸುವ ಕರ್ಮಜ್ಞಾನ ಯೋಗಂಗಳಲ್ಲಿಯ ತೊಲಗದಿಹವೆಂಬ ಭಂಗಿಸಿ ನುಡಿದು ಆಶ್ಚರ್ಯಪಡುತ್ತಿರ್ದ ಶರಣನೆಂಬುದೀಗ, ಕುರಿ-ಕುದುರೆ-ಗೋವು ತಮ್ಮಡಿಯಲ್ಲಿ ನಿಂದವೆಂದು ಹೇಳಿ ಚೋದ್ಯವಾಯಿತ್ತು ಎಂದನೆಂಬ ಶಬ್ದಕ್ಕರ್ಥ. ಇಂತಪ್ಪ ತ್ರಿಕಾಂಡಿಗಳ ನಿರಾಕರಿಸಿ ಅವಿರಳಜ್ಞಾನ ಕ್ರಿಯಾಭಕ್ತಿವಿಡಿದಾಚರಿಸುವ ಶರಣನ ಸರ್ವಾಂಗದಲ್ಲಿ ಅಖಂಡ ಬ್ರಹ್ಮಾಂಡಬಡಗೂಡಲಾ ನಿಸ್ಸಂಗಲಿಂಗವೆ ಯಾವನೆಂಬುದೀಗ, ಅಡಗಿ ಸಗರದ ಬೊಮ್ಮನೊಡೆಯ ತನುವಿನ ಮಧ್ಯದಲ್ಲಿ ನಿಸ್ಸಂಗ ಸಂಗಮೇಶ್ವರನಾದನೆಂಬ ಶಬ್ದಕ್ಕರ್ಥ.

೭

ಹಾಲಿನ ಗಡಗೆಯಲ್ಲಿ ಮೂರೆಡೆಗೊತ್ತಿ ಮರಿಯ ನೀದುದಕಂಡೆ
ಮರೆ ಹಾಲಾಗಿ ಕುಡುಕೆ ಕೊತ್ತಿಯಾಗಿ ಮನೆಯೊ ಇಲಿಯಾಗಿ
ಚಿಕ್ಕ ಗಕ್ಕನೆ ಹಿಡಿದು ಸಿಕ್ಕಿತ್ತು ಸಂಸಾರದಿ ವಿಷಯುವಲ್ಲಿ
ಮನ ಎನ ಗೊಪ್ಪದ ಹೇಳು ಸಗರದ ಬೊಮ್ಮ ತನು ಮನ ಘನ
ಸಂಗಮೇಶ್ವರನಾದಾ !

**ಟೀಕು:**— ಸಂಸಾರ ವಿಷಯ ರಸವ ತಾಳಿಕೊಂಡಿರ್ದ ಅಂಗ ಸಂಬಂಧವಾದ ತನುಕ್ರಿಯಂಗಳಲ್ಲಿ ಮಾಯಾ ಸಂಭೂತನಾದ ಜೀವನಿರುತ್ತಿಹನೆಂಬುದೀಗ, ಹಾಲಿನ ಗಡಿಗೆ ಮೂರೆಡೆಗೊತ್ತಿ ಮರೆಯನೀದುದಕಂಡೆನೆಂಬ ಶಬ್ದಕ್ಕರ್ಥ. ಇಂತಪ್ಪ ಜೀವನು ಸಂಸಾರ ವಿಷಯ ರಸ ಸ್ವರೂಪನಾಗಿರಲು ಆತನು ಪ್ರಕೃತಿ ಸ್ವರೂಪವಾಗಿರ್ಪುದೆಂಬುದೀಗ, ಮರಿಹಾಲಾಗಿ ಕುಡಿಕೆಕೊತ್ತಿಯಾಗಿ ಎಂಬ ಶಬ್ದ

ಕ್ಕರ್ಥ. ದೇಹಾಧಿಪತಿಯಾಗಿರ್ದ ಆತ್ಮನು ಸಂಕಲ್ಪ ವಿಕಲ್ಪವನುಳ್ಳ ಮನೋಸ್ವ ರೂಪವಾಗಿ ತೂರ್ಯಾವಸ್ಥೆಯ ವಿಶ್ರಾಂತಿಯಿಂದ ಮಾಯೆಯ ನವಗ್ರಹಿಸಿದ ನೆಂಬುದೀಗ, ಮನೆಯೊಡೆಯ ಇಲಿಯಾಗಿ ಚಿಕ್ಕ ಗಕ್ಕನೆ ಹಿಡಿದನೆಂಬ ಶಬ್ದಕ್ಕರ್ಥ. ಇಂತಪ್ಪ ಮನಸ್ಸು ಮಲಕ್ರಿಯಂಗಳ ಆಸೆಯಲ್ಲಿ ಮಗ್ನವಾಗಿರ್ಪುದೆಂಬುದೀಗ, ಸಿಕ್ಕಿತ್ತು ಸಂಸಾರದಲ್ಲಿ ಮನವೆಂಬ ಶಬ್ದಕ್ಕರ್ಥ. ಇಂತಪ್ಪ ಆತ್ಮಂಗೆ ಸುಜ್ಞಾನೋ ದಯವಾಗಿ ಸಂಸಾರ ಪ್ರಪಂಚನಿವೃತ್ತಿಯ ಮಾಡಿ ಮುಕ್ತನ ಮಾಡೆಂದು ಗುರೋ ಪಾವಸ್ಥೆಯ ಮಾಡುತ್ತಿರಲು ಆ ಗುರೋಪದೇಶದಿಂದ ಅಂಗ—ಪ್ರಾಣಂಗಳೆಲ್ಲ ಮಹಾಘನಲಿಂಗವಾಗಿರ್ದವೆಂಬುದೀಗ, ಎನಗಪ್ಪುದ ಹೇಳು ಸಗರದ ಬೊಮ್ಮ ನೊಡೆಯ ತನು ಮನ ಘನ ಸಂಗಮೇಶ್ವರ ನಾದಾ ಎಂಬ ಶಬ್ದಕ್ಕರ್ಥ.

೮

ಹಾರುವ ಹಕ್ಕಿಯ ತಲೆಯ ಕುಳುತಿದ್ದ ಗೂಗೆಯ ಕಣ್ಣ ಕಾಗೆಯ ಮರಿ ಕುಡಿಕಿತ್ತು
ಕಾಗೆಯ ಮರಿಯ ಕೋಗಿಲ ಕಂಡು ಅದು ಬೇಡಾ ಎಂದೊಡೆ,
ಗಿಣಿ ಆಗ ಅಹುದೆಂದು ಹಾರಿ ಹೋಯಿತ್ತು,
ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರನು ಘಟ ಪಂಜರವನೊಲ್ಲದೆ.

**ಟೀಕು**:— ಆತ್ಮಾಕಾಶದಲ್ಲಿ ಸ್ವಲೀಲಾಪರನಾಗಿ ಚರಿಸುವ ಪರಮಾತ್ಮನ ವೃತ್ತಿಜ್ಞಾನವೆಂಬ ಶಿರವ ಸೂಕ್ಷ್ಮ ತನುವಿನಲ್ಲಿ ಸ್ವಸ್ಥನಾಗಿರ್ಪ ಅಂತರಾತ್ಮನು ಸಂಕಲ್ಪ ಭಾವದಿಂದ ಅವಗ್ರಹಿಸಿದನೆಂಬುದೀಗ, ಹಾರುವ ಹಕ್ಕಿಯ ತಲೆಯ ಕುಳಿತಿದ್ದ ಗೂಗೆ ನುಂಗಿತ್ತೆಂಬ ಶಬ್ದಕ್ಕರ್ಥ. ಅಲ್ಲಿ ಸ್ವಸ್ಥನಾಗಿರ್ಪ ಅಂತರಾತ್ಮನ ಭಿನ್ನ ಜ್ಞಾನ ದೃಷ್ಟಿಯ ಅಜ್ಞಾನ ಸ್ವರೂಪಿಣಿಯಪ್ಪ ಪ್ರಕೃತಿಯಿಂ ಜನಿಸಿದ ಜೀವಾತ್ಮನು ದುರ್ಭಾವದಿಂದ ಅವಗ್ರಹಿಸಿದನೆಂಬುದೀಗ, ಕುಳಿತಿದ್ದ ಗೂಗೆಯ ಕಣ್ಣ ಕಾಗೆಯ ಮರಿ ಕುಡಿಕಿತ್ತೆಂಬ ಶಬ್ದಕ್ಕರ್ಥ, ಇಂತಪ್ಪ ಜೀವಂಗೆ ಚಿಚ್ಛಕ್ತಿ ಪ್ರಸನ್ನವಾಗಿ ಪೂರ್ವಾಶ್ರಯಮಂ ಬಿಡಿಸಿ ನಿಜೋಪದೇಶವ ಮಾಡಲು ಆ ಪರಮಾತ್ಮ ನರಿದು ದೇಹ-ಸಂಸಾರ ಬಂಧವ ಹಿಂಗಿಸಿ ಪರಬ್ರಹ್ಮದತ್ತ ಜ್ಞಾನಕ್ರೀಯಿಂದೆಯ್ದಿ ದನೆಂಬುದೀಗ, ಕಾಗೆಯ ಮರಿಯ ಕೋಗಿಲು ಕಂಡು ಅದು ಬೇಡಾ ಎಂದಡೆ ಗಿಣಿ ಆಗ ಅಹುದೆಂದು ಹಾರಿಹೋಯಿತ್ತು ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರನು ಘಟಪಂಜರವ ನೊಲ್ಲದೆ ಎಂಬ ಶಬ್ದಕ್ಕರ್ಥ.

೯

ದಧಿಯ ಕಡವಾಕೆಯ ತುದಿಗಂಡವ ಕೊಯ್ದು
ಮಂತಿನ ಅಂಡಿನಲ್ಲಿ ಒರಸಿ ದಧಿ ಧರೆಗಿಳಿದು
ಅಂಡಿನವ್ವೆಯ ಹಂಗಬಿಟ್ಟು ಮಂತು ಮರಣವಾಯಿತ್ತು.
ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರ
ಲಿಂಗವು ಹುಟ್ಟಿದ ಬಟ್ಟೆಯ ಮೆಟ್ಟದ ಕಾರಣ.

**ಟೀಕು:**— ತನುವೆಂಬ ಭಾಂಡದಲ್ಲಿ ಪರಮಾಮೃತವ ತುಂಬಿ ಜ್ಞಾನಕ್ರೀಯಿಂದ ಮಥನಿಸುತ್ತಿರ್ಪ ಶರಣ ಸತಿಯು ಬಹಿರಂಗದ ಸತ್ಕ್ರಿಯಾಚಾರವ ಸ್ವಾನುಭಾವ ಬೋಧೆಯಿಂದ ಅವಗ್ರಹಿಸಿ ಅಂತರಂಗದ ನೈಷ್ಟಿಕಾಚಾರದಲ್ಲಿ ಏಕಾರ್ಥವ ಮಾಡಿದ ಜ್ಞಾನಗುರು ಎಂಬುದೀಗ, ದಧಿಯು ಕಡವಾಕೆಯು ತುದಿಗಂಡವ ಕೊಯ್ದು ಮಂತಿನ ಅಂಡದಲ್ಲಿ ಒರಸಿ ಎಂಬ ಶಬ್ದಕ್ಕರ್ಥ. ಇಂತು ಜ್ಞಾನಗುರುವಿನ ಮಹಾನುಭಾವ ಬೋಧೆಯಿಂ ಸತ್ಕ್ರಿಯಾಚಾರವು ನೈಷ್ಟಿಕಾಚಾರದಲ್ಲಿ ಏಕಾರ್ಥವಾಗಲು ಆ ಪರಮಾಮೃತ ಲಿಂಗವು ಬಹಿರಂಗವನೊಳಕೊಂಡು ಅಂತರಂಗದಲ್ಲಿ ಮನೋಮೂರ್ತಿಯಾಗಿರ್ಪುದೆಂಬುದೀಗ, ದಧಿ ಧರೆಗಿಳಿದು ಎಂಬ ಶಬ್ದಕ್ಕರ್ಥ. ಮಾರ್ಗ ಕ್ರಿಯಾಚಾರವನೊಳಕೊಂಡ ಮೀರಿದ ಕ್ರೀ ಮೀರಿಯಾಚಾರಕ್ಕೆ ನಾತ್ರಸ್ಥಾನವಾಗಿರ್ಪುದೆ ಇಚ್ಛಾಶಕ್ತಿ. ಅದೆಂತೆಂದೊಡೆ ಇಚ್ಛೆಯಿಲ್ಲದೆ ಆವುದಾನೊಂದ ಪಿಡದು ವರ್ತಿಸಬಾರದ ಕಾರಣ ಅಂತಪ್ಪ ಇಚ್ಛಾ ಶಕ್ತಿಯು ಇಚ್ಛೆಯು ಬಿಟ್ಟು ಅನೈಷ್ಟಿಕಾ ಭಾವವು ಪ್ರಾಣಲಿಂಗದಲ್ಲಿ ಅಡಗಿತ್ತೆಂಬುದೀಗ, ಅಂಡಿನವ್ವೆಯು ಹಂಗ ಬಿಟ್ಟು ಮಂತು ಮರಣವಾಯಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ಶರಣಂಗೆ ಮನೋರ್ಭವ ವಿಲ್ಲವೆಂಬುದೀಗ, ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರ ಲಿಂಗವು ಹುಟ್ಟಿದ ಬಟ್ಟೆಯು ಮೆಟ್ಟನಕಾರಣ ಎಂಬ ಶಬ್ದಕ್ಕರ್ಥ.

೧೦

ಕಂಡ ಮಂಡಲದ ರಣಭೂಮಿಯಲ್ಲಿ ಅಖಂಡಿತ ಮಯರು ಕಡಿದಾಡಿ
ಹಿಡಿಖಂಡದ ಕರುಳ ಶಿರ ತಂಡ ತಂಡದಲ್ಲಿ ದಿಂಡುರುಳಿತ್ತು
ಅಖಂಡಿತನ ಮನಕೂಡೆ ಹದ ಬೆಂಬಳಿಯ ಘಾಯದಲ್ಲಿ
ಸುಖ ತನು ರಣ ಭೂಮಿಯಲ್ಲಿ ಅಖಂಡಿತ ಗೆದ್ದ
ಸಗರದ ಬೊಮ್ಮನೊಡೆಯ ತನುಮನ ಕೂಡಿ ಸಂಗದ ಸಂಗ
ಸುಖಿಯಾದಾ.

**ಟೀಕು:**— ಸಕಲ ಭೂತೇಂದ್ರಿಯಂಗಳ ಲಯಸ್ಥಾನವಪ್ಪ ಷಟ್ ಸ್ಥಲಾಂಗವ ನೊಳಕೊಂಡ ಭಕ್ತಿಕಾಯದಲ್ಲಿ ಪರಿಪೂರ್ಣ ಜ್ಞಾನ ಸ್ವರೂಪವನುಳ್ಳ ಶರಣರು ಸಮರಸಾನುಭಾವಕ್ಕೆ ಸಾಧ್ಯವಾಗದೆ ಪ್ರಪಂಚಿನಿಂ ಮುಸುಕಿದ ಸಕಲ ತತ್ವಂಗಳ ಸಮ್ಯಜ್ಞಾನವೆಂಬ ಶಸ್ತ್ರದಲ್ಲಿ ಛೇದಿಸಿ ಸತ್ಕ್ರಿಯಾಚಾರದಲ್ಲಿ ಗಮಿಸುತ್ತಿರ್ದರೆಂಬುದೀಗ, ಕಂಡ ಮಂಡಲದ ರಣಭೂಮಿಯಲ್ಲಿ ಅಖಂಡಿತಮಯರು ಕಡಿದಾಡಿ ಎಂಬ ಶಬ್ದಕ್ಕರ್ಥ. ಅದೆಂತೆಂದೊಡೆ ಪ್ರಪಂಚ ಯುಕ್ತವಾದ ಸಕಲ ಕರಣಂಗಳ ಸಮ್ಯಜ್ಞಾನದಿಂ ಖಂಡಿಸಲು ಅವರ ಅಹಂ ಮಮತೆಗಳಳಿದು ತನುಭಾವ ನಷ್ಟವಾಯಿತ್ತೆಂಬುದೀಗ, ಹಿಡಿಖಂಡದ ಕರುಳ ಖಂಡಿಸಿ ಶಿರ ತಂಡತಂಡದಲ್ಲಿ ದಿಂಡುರುಳಿತ್ತೆಂಬ ಶಬ್ದಕ್ಕರ್ಥ. ಆ ಪರಿಪೂರ್ಣ ಭಾವಿಯಾದ ಶರಣನ ಮನವು ಜ್ಞಾನಾಚಾರದಲ್ಲಿ ಕೂಡಿ ಅಂಗವು ಸಕಲ ತತ್ವ-ಲಯಸ್ಥಾನವಪ್ಪ ಭಕ್ತಿಕಾಯದಲ್ಲಿ ಕೂಡಿ

ಇಷ್ಟ ಪ್ರಾಣಲಿಂಗಕ್ಕೆ ರೂಪು ರುಚಿಯನರ್ಪಿಸಿ ಪ್ರಸನ್ನ ಪ್ರಸಾದದಲ್ಲಿ ಸುಖಿಯಾಗಿರ್ದ ಶರಣ ಸಕಲ ಪ್ರಪಂಚ ಜಯಿಸಿದನೆಂಬುದೀಗ, ಆ ಖಂಡಿತ ತನು ಮನ ಕಂಡೆ ಹದ ಬೆಂಬಳಿಯ ಘಾಯದಲ್ಲಿ ಸುಖ ತನು ರಣಭೂಮಿ ಅಖಂಡಿತ ಗೆದ್ದನೆಂಬ ಶಬ್ದಕ್ಕರ್ಥ. ಇಂತು ಅಂಗ ಪ್ರಾಣಂಗಳು ಲಿಂಗದಲ್ಲಿ ಏಕಾರ್ಥವಾದ ಶರಣನು ಇಷ್ಟ-ಪ್ರಾಣ-ಏಕಾದ್ವೈತವಾದ ಭಾವಲಿಂಗಕ್ಕೆ ತೃಪ್ತಿಯನರ್ಪಿಸಿ ಪ್ರಸನ್ನ ಪ್ರಸಾದ ಸುಖಿಯಾಗಿರ್ದನೆಂಬುದೀಗ, ಸಗರದ ಬೊಮ್ಮನೊಡೆಯ ತನುಮನ ಕೂಡಿ ಸಂಗದ ಸಂಗ ಸುಖಿಯಾದೆನೆಂಬ ಶಬ್ದಕ್ಕರ್ಥ.

## ಗುಪ್ತ ಮಂಚಣ್ಣನವರ ವಚನಗಳು

೧

ಕಾಗೆಯ ತಿಂದವ ಕಮ್ಮಾರ, ಎಮ್ಮೆಯ ತಿಂದವ ಸಮಗಾರ
ಹಸುವ ತಿಂದವ ಪಶುಪತಿಯ ಶರಣ
ಇವರ ಮೂವರ ತಿಂದ ಅಂದವ ನೋಡಾ!
ಇದರ ಸಂಗವಾರಿಗು ಅರಿದೂ ನಿಸ್ಸಂಗ ನಿರ್ಲೇಪ ನಾರಾಯಣ
ಪ್ರಿಯ ರಾಮನಾಥಾ.

**ಟೀಕು**:— ಶಿವಜ್ಞಾನೋದಯವಾಗಿ ಸಕಲ ಮಾಯಾ ಪ್ರಪಂಚು ನಿವೃತ್ತಿಯ ಮಾಡಿ ಗುರೋಪಾವಸ್ಥೆಯ ಮಾಡುವ ಜ್ಞಾನ ಕಲಾತ್ಮಂಗೆ ದೀಕ್ಷಾಗುರು ಕರುಣಿಸಿ ಕ್ರಿಯಾದೀಕ್ಷೆಯಿಂದ ಅನುಗ್ರಹವ ಮಾಡಿ ಜೀವನಲ್ಲಿ ಹುದುಗಿರ್ದ ಅಜ್ಞಾನವನು ಸುಜ್ಞಾನ ಪ್ರಕಾಶದಿಂ ನಿವೃತ್ತಿಯ ಮಾಡಿದನೆಂಬುದೀಗ, ಕಾಗೆಯ ತಿಂದವ ಕಮ್ಮಾರನೆಂಬ ಶಬ್ದಕ್ಕರ್ಥ. ಅಂತರಂಗದಲ್ಲಿ ತಮೋರೂಪವಾಗಿರ್ದ ಮಾಯೆಯನು ಶಿಕ್ಷಾಗುರು ಶಿವಜ್ಞಾನ ಪ್ರಕಾಶದಿಂ ನಿವೃತ್ತಿಯಮಾಡಿದನೆಂಬುದೀಗ, ಎಮ್ಮೆ ತಿಂದವ ಸಮಗಾರನೆಂಬ ಶಬ್ದಕ್ಕರ್ಥ. ಜೀವನ ಜೀವಭಾವವನು ಸುಜ್ಞಾನ ಮಹಾಜ್ಞಾನುಭಾವ ಭೋಧೆಯಿಂದ ಭೋದಿಸಿ ಜೀವಭಾವವ ಛೇದಿಸಿ ಸಜ್ಜೀವ ಸ್ವರೂಪವ ಮಾಡಿದನೆಂಬುದೀಗ, ಹಸುವ ತಿಂದವ ಪಶುಪತಿಯ ಶರಣನೆಂಬ ಶಬ್ದಕ್ಕರ್ಥ. ಆ ದೀಕ್ಷಾ ಗುರುವನೆ ತನ್ನ ಆಚಾರಾಂಗದಲ್ಲಿ ಇಷ್ಟಲಿಂಗ ಸ್ವರೂಪವಾಗಿ ಒಳಕೊಂಡು ಸಿಕ್ಷಾಗುರುತತ್ವವನೆ ತನ್ನ ಸೂಕ್ಷ್ಮಾಂಗದಲ್ಲಿ ಚೈತನ್ಯಸ್ವರೂಪವಾದ ಪ್ರಾಣಲಿಂಗವಾಗಿ ಒಳಕೊಂಡು ಆ ಜ್ಞಾನ ಗುರುತತ್ವವನೆ ತನ್ನ ಕಾರಣಾಂಗದಲ್ಲಿ ಅಖಂಡ ಪರಿಪೂರ್ಣವಾದ ಭಾವಲಿಂಗವಾಗಿ ಒಳಕೊಂಡು ಆ ಗುರುತ್ರಯದಲ್ಲಿ ಭಿನ್ನವಿಲ್ಲದೆ ಕೂಡಿ ಏಕಾರ್ಥವಾಗಿರ್ದನೆಂಬುದೀಗ, ಇವರ ಮೂವರ ತಿಂದವರ ತಿಂದ ಅಂದವನೋಡಾ ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಮರಸದ ಕೂಟವು ದ್ವೈತಾದ್ವೈತಿಗಳಿಗೆ ಅಸಾಧ್ಯವೆಂಬುದೀಗ, ಇವರ

ಸಂಗವಾರಿಗೂ ಅರಿದೆಂಬ ಶಬ್ದಾರ್ಕ್ಥರ್ಥ. ಇಂತಪ್ಪ ಶರಣನ ತನುಮನ ಪ್ರಾಣೇಂದ್ರಿಯಂಗಳಲ್ಲಿ ಆ ನಿಸ್ಸಂಗಲಿಂಗಸ್ವರೂಪವಾಗಿ ನಿಜದಲ್ಲಿ ನಿರ್ವಯಲಾದವೆಂಬುದೀಗ, ನಿಸ್ಸಂಗ ನಿರ್ಲೇಪ ನಾರಾಯಣಪ್ರಿಯ್ಯ ರಾಮನಾಥಾ ಎಂಬ ಶಬ್ದಕ್ಕರ್ಥ.

೨

ಅಟ್ಟಕ್ಕೆ ನಿಚ್ಚಣಿಕೆಯ ನಿಕ್ಕಲಾಗಿ ನುಂಗಿತ್ತು ಅಟ್ಟವ ನಿಚ್ಚಣಿಕೆ
ನಿಚ್ಚಣಿಕೆಯ ಮೆಟ್ಟಿದ್ದವಳ ಆ ಮೆಟ್ಟು ನುಂಗಿತ್ತು
ಅಟ್ಟವ ನಿಚ್ಚಣಿಕೆಯ ಮೆಟ್ಟಿದ್ದವಳ ಬಟ್ಟೆ ಬಯಲು ನುಂಗಿತ್ತು
ಆ ಬಟ್ಟೆ ಬಯಲ ಮೆಟ್ಟಿ ನೋಡಿ ಕಂಡ--
ನಾರಾಯಣ ಪ್ರಿಯ್ಯ ರಾಮನಾಥ !

**ಟೀಕು:**— ಸಕಲ ತತ್ವಾಶ್ರಯವಪ್ಪ ಘನಲಿಂಗ ಪದದಲ್ಲಿ ಶಿವಾದ್ವೈತ ಭಕ್ತಿಯ ಸಂಬಂಧಿಸಲು ಆ ಲಿಂಗವನು ಆ ಭಕ್ತಿಯು ಅವಗ್ರಹಿಸಿಕೊಂಡಿತ್ತೆಂಬುದೀಗ, ಅಟ್ಟಕ್ಕೆ ನಿಚ್ಚಣಿಕೆಯನಿಕ್ಕಲಾಗಿ ನುಂಗಿತ್ತು ಅಟ್ಟ ನಿಚ್ಚಣಿಕೆ ಎಂಬ ಶಬ್ದಕ್ಕರ್ಥ. ಆ ಶಿವಾದ್ವೈತ ಭಕ್ತಿಯಲ್ಲಿ ಸದಾಚಾರ ಸಚ್ಚರಿತ್ರವೆಂಬ ಚರಣವನೂರಿ ಸ್ವಸ್ಥವಾಗಿರ್ಪ ಶರಣ ಸತಿಯ ತತ್ ಸಂಬಂಧವಾದ ಷಡ್ವಿಧ ಭಕ್ತಿಗಳ ಅವಗ್ರಹಿಸಿದವೆಂಬುದೀಗ, ನಿಚ್ಚಣಿಕೆಯ ಮೆಟ್ಟಿದ್ದವಳ ಆ ಮೆಟ್ಟು ನುಂಗಿತ್ತೆಂಬ ಶಬ್ದಕ್ಕರ್ಥ. ಆ ಲಿಂಗವ ಆ ಭಕ್ತಿಯ ಆ ಶರಣಸತಿ ಎಂಬ ಈ ತ್ರಿವಿಧವ ಚಿದಾಕಾಶಮಯವಾದ ಚಿದ್‌ಘನಲಿಂಗವ ಅವಗ್ರಹಿಸಿಕೊಂಡಿತ್ತೆಂಬುದೀಗ, ಅಟ್ಟವ ನಿಚ್ಚಣಿಕೆ ಮೆಟ್ಟಿದ್ದವಳ ಬಟ್ಟೆಬಯಲು ನುಂಗಿತ್ತೆಂಬ ಶಬ್ದಕ್ಕರ್ಥ. ಆ ನಿರವಯ ಲಿಂಗದಲ್ಲಿ ಸ್ವಸ್ಥನಾಗಿ ಸಮ್ಯಜ್ಞಾನ ದೃಷ್ಟಿಯಿಂ ತನ್ನ ತಾನರಿದ ಶರಣನೆಂಬುದೀಗ, ಆ ಬಟ್ಟೆಬಯಲ ಮೆಟ್ಟಿ ನೋಡಿ ಕಂಡ ನಾರಾಯಣಪ್ರಿಯ್ಯ ರಾಮನಾಥಾ ಎಂಬ ಶಬ್ದಕ್ಕರ್ಥ.

ಕುದುರೆಗೆ ಹುಲ್ಲು ಹಾಕಲಾಗಿ ಹುಲ್ಲು ಕುದುರೆಯ ತಿಂದಿತ್ತು
ಬಂದ ಗೋವ ಕುದುರೆಯ ನೋಡಿ ಅದರಂಗದ ಕಾಲು ಇರಲಾಗಿ
ತಿಂದವರಾರೋ ಎಂಬುವಕ್ಕೆ ಮೊದಲೇ ತಿಂದಿತ್ತು
ಆ ಕಾಲು ನಿಂದ ಗೋವನ ಈ ಮೂವರ ಅಂದವ—
ತಿಳಿಯಾ ನಾರಾಯಣ ಪ್ರಿಯ್ಯ ರಾಮನಾಥನಲ್ಲಿ !

**ಟೀಕು:**— ಸತ್ತೃಣವು ವಾಹನವೆನಿಸುವ ಸುಚೈತನ್ಯಲಿಂಗಕ್ಕೆ ತೃಣ ಪ್ರತಿಪತ್ತಾದ ಅಂಗವೆ ಸದ್ಭಕ್ತಿಯಿಂದ ಆರೋಪಿಸಲು ಆ ಅಂಗವು ಲಿಂಗವನು ಅವಗ್ರಹಿಸಿಕೊಂಡಿತ್ತೆಂಬುದೀಗ, ಕುದುರೆಗೆ ಹುಲ್ಲುಹಾಕಲಾಗಿ ಹುಲ್ಲು ಕುದುರೆಯ ತಿಂದಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ಸತ್ಪಥ ಮಾರ್ಗವಿಡಿದೆಯ್ದುವ ಶರಣನು ಲಿಂಗವ ನಿಜವ ಸುಜ್ಞಾನದೃಷ್ಟಿಯಿಂ ಪರಾಮರಿಸಲು ಆ ಲಿಂಗವನೊಳಕೊಂಡ ಅಂಗದ ಸತ್ಕ್ರಿಯಾಚಾರವವಶೇಷಿತವಾಗಿರ್ಪುದು ಎಂಬುದೀಗ, ಬಂದ ಗೋವ

ಕುದುರೆಯು ನೋಡೆ ಅದರಂಗದ ಕಾಲು ಇರಲಾಗಿ ಎಂಬ ಶಬ್ದಕ್ಕರ್ಥ. ಅಂತು ಅಂಗವು ಲಿಂಗವನು ಅವಗ್ರಹಿಸಿತ್ತೆಂಬುದರಿದಾಗವೆ ಆ ಸತ್ಕ್ರಿಯಾಚಾರ ಶರಣನ ಅವಗ್ರಹಿಸಿಕೊಂಡಿತ್ತೆಂಬುದೀಗ, ತಿಂದವರಾರೋ ಎಂಬುದಕ್ಕೆ ಮೊದಲೇ ತಿಂದಿತ್ತು ಆ ಕಾಲುನಿಂದ ಗೋವನಾ ಎಂಬ ಶಬ್ದಕ್ಕರ್ಥ. ಈ ನಾಮ-ರೂಪು-ಕ್ರೀಗಳ ಒಳಕೊಂಡಿರ್ಪುದು ಚಿದ್ ಘನಲಿಂಗವೆಂದು ನಿರೂಪಿಸುತ್ತಿರ್ದ ಜ್ಞಾನ ಗುರು ಶರಣನೆಂಬುದೀಗ, ಈ ಮೂವರ ಅಂದವ ತಿಳಿಯಾ ನಾರಾಯಣ ಪ್ರಿಯ್ಯ ರಾಮನಾಥನಲ್ಲಿ ಎಂಬ ಶಬ್ದಕ್ಕರ್ಥ.

೪

ಹಾಲನಿಕ್ಕುವಾತನ ಕೈಯ್ಯ ತೂತಿನ ಕೊಳವೆಯು ನೂಲು ನುಂಗಿತ್ತು  
ಕಡ್ಡಿಯು ಸುತ್ತುವ ಕೂಸ ರಾಟೆಯು ಕೈ ನುಂಗಿತ್ತು  
ಉಂಕೆಯು ಮಾಡುವಾತನ ಕೈಯ್ಯ ಹುಂಚಿಗೆಯು ತುಂತುರು ನುಂಗಿತ್ತು  
ನೆಯ್ವಣ್ಣನ ಕಣ್ಣ ಕೈಯು ಲಳಿಗೆ ನುಂಗಿತ್ತು  
ಹಾಸನ ಕಡ್ಡಿಯು ಉಂಕೆಯು ನೆಯ್ವಾತನ-  
ಬುದ್ಧಿಯು ಚಿತ್ತವ ಏನೆಂದರಿಯದ ಕೂಸು ನುಂಗಿತ್ತು  
ನಾರಾಯಣ ಪ್ರಿಯ್ಯ ರಾಮನಾಥನಲ್ಲಿ ಐಕ್ಯಾನುಭಾವಿಯಾದ ಶರಣಾ !

**ಟೀಕು:—** ಶಿವಾಂಶೀಕನಾದ ಆತ್ಮಂಗೆ ದೇಹ ಸಂಬಂಧವಾದಲ್ಲಿ ಶಿವಜ್ಞಾನೋದಯವಾಗಲು ತನು ತ್ರಯ ಮುಖ್ಯವಾದ ಸಕಲ ಮಾಯಾ ಪ್ರಪಂಚ ನಿವೃತ್ತಿಯ ಮಾಡಿ ಶ್ರೀ ಗುರೋಪಾವಸ್ಥೆಯ ಮಾಡಿದಲ್ಲಿ ಆ ಶ್ರೀಗುರು ಷಟ್ಸ್ಥಲ ಮಂತ್ರೋಪದೇಶವ ಮಾಡಿ ಷಡ್ವಿಧಾಂಗದಲ್ಲಿ ಷಡ್ವಿಧ ಲಿಂಗಸಂಸಂಬಂಧವಾಗಲು ಸರ್ವಾಚಾರ ಸಂಪತ್ತ ಅಳವಡಿಸಿಕೊಟ್ಟ ಶ್ರೀ ಗುರು ತತ್ವವೆಂಬುದೀಗ, ಹಾಸನಿಕ್ಕುವಾತನ ಕೈಯ್ಯ ಎಂಬ ಶಬ್ದಕ್ಕರ್ಥ. ಅಂತಪ್ಪ ಶ್ರೀ ಗುರುವಿನ ಸದ್ಭಾವ ಹಸ್ತವನು ಅಂತರಂಗದ ಸದ್ವಿವೇಕದಲ್ಲಿ ಸಂಬಂಧವಾದ ಸ್ವಾನುಭಾವ ಸೂತ್ರವ ಅವಗ್ರಹಿಸಿತ್ತೆಂಬುದೀಗ, ಹಾಸನಿಕ್ಕುವಾತನ ಕೈಯ್ಯ ತೂತಿನಕೊಳವೆಯು ನೂಲು ನುಂಗಿತ್ತೆಂಬ ಶಬ್ದಕ್ಕರ್ಥ. ಸೃಷ್ಟಿಯಿಂದ ಸಕಲ ಕಾರಣಂಗಳನು ತನ್ನೊಳಗೆ ಏಕೀಕರಿಸಲ್ಪಟ್ಟಂಥ ಚಿದ್ರೂಪವಾದ ಮಹಾಘನಲಿಂಗವೆಂಬ ಶಿಶುವನು ಶರಣನ ಆಚಾರಾಂಗದಲ್ಲಿ ಸಂಬಂಧವಾದ ಶಿವಾದ್ವೈತ ಭಕ್ತಿಯೆಂಬ ಹಸ್ತವು ಅವಗ್ರಹಿಸಿತ್ತೆಂಬುದೀಗ, ಕಡ್ಡಿಯು ಸುತ್ತುವ ಕೂಸ ರಾಟಿಯು ಕೈನುಂಗಿತ್ತೆಂಬ ಶಬ್ದಕ್ಕರ್ಥ. ದೇಹ ಪ್ರಾಣೇಂದ್ರಿಯಂಗಳ ಪ್ರವರ್ತನೆಯ ನಿತ್ಯಾನಿತ್ಯ ವಿವೇಕದಿಂ ಬೋಧಿಸಿ ನಿವೃತ್ತಿ ಮಾಡುವ ಆನಂದ ಸ್ವರೂಪವಾದ ಘನ ಚೈತನ್ಯ ಜಂಗಮದ ಸುಚಿತ್ತ ಹಸ್ತವನು ಸಮ್ಯಜ್ಞಾನ ಪ್ರಕಾಶದಲ್ಲಿ ಸಂಬಂಧವಾದ ಸದ್ವಿ

ವೇಕ ಜಲಸ್ವರೂಪವಾದ ಚಿದ್ಬಿಂದುವವಗ್ರಹಿಸಿತ್ತೆಂಬುದೀಗ, ಉಂಕೆಯು ಮಾಡುವಾತನ ಕೈಯು ಕುಂಚಿಗೆಯು ತುಂತುರು ಸುಂಗಿತ್ತೆಂಬ ಶಬ್ದಕ್ಕರ್ಥ. ಆ ಗುರು-ಲಿಂಗ-ಜಂಗಮವನು ತನ್ನ ಅಂಗ-ಮನ-ಪ್ರಾಣಂಗಳಲ್ಲಿ ಸಾಹಿತ್ಯವ ಮಾಡಿಕೊಂಡು ಸರ್ವಾಂಗಲಿಂಗ ಸಂಬಂಧಿಯಾಗಿ ಅಭಿನ್ನ ಜ್ಞಾನಕ್ರೀಯಿಂದ ಆಚರಿಸುವ ಅನಾದಿ ಶರಣನ ಶಿವಜ್ಞಾನದೃಕ್ಕನು ಶಿವಭಾವ ಹಸ್ತವವ ಗ್ರಹಿಸಿತ್ತೆಂಬುದೀಗ, ನೆಯ್ವಣ್ಣನ ಕಣ್ಣ ಕೈಯ್ಯ ಲಳಿಗೆ ಸುಂಗಿತ್ತೆಂಬ ಶಬ್ದಕ್ಕರ್ಥ. ಗುರು ಸನ್ನಹಿತವಾದ ಸರ್ವಾಚಾರ ಸಂಪತ್ತು, ಲಿಂಗಸನ್ನಹಿತವಾದ ನೈಷ್ಟಿಯು, ಜಂಗಮ ಸನ್ನಹಿತವಾದ ಸುಜ್ಞಾನಬೋಧೆಯು, ಈ ತ್ರಿವಿಧ ಲಿಂಗವಿಡಿದು ಆಚರಿಸುವ ಶರಣನ ಆಸ್ತಿಕ್ಯ ಬುದ್ಧಿಯು ನಿರ್ಮಲ ಚಿತ್ತವನು ಸಕಲ ಪ್ರಪಂಚಿನ ತೋರಿಕೆಯಿಲ್ಲದ ಅಖಂಡ ಪರಿಪೂರ್ಣವಾದ ಪರಬ್ರಹ್ಮವವಗ್ರಹಿಸಿತ್ತೆಂಬುದೀಗ, ಹಾಸಿನ ಕಡ್ಡಿಯು ಒಂಕೆಯು ನೆಯ್ವಾತನ ಬುದ್ಧಿಯು ಚಿತ್ತವ ನಿನೆಂದರಿಯುವ ಕೂಸು ಸುಂಗಿತ್ತೆಂಬ ಶಬ್ದಕ್ಕರ್ಥ. ಆ ಪರಬ್ರಹ್ಮದಲ್ಲಿ ಚೈತನ್ಯವಾದ, ಶರಣನ ಮುಪದರವು ಅವಿರಳ ಪರಬ್ರಹ್ಮದಲ್ಲಿ ಸಮರಸವಾಯಿತ್ತೆಂಬುದೀಗ, ನಾರಾಯಣ ಪ್ರಿಯ್ಯ ರಾಮನಾಥನಲ್ಲಿ ಐಕ್ಯಾನುಭಾವಿಯಾದ ಶರಣ ಎಂಬ ಶಬ್ದಕ್ಕರ್ಥ.

೫

ಎಮ್ಮಾಕೆಯು ಕೈಯ್ಯ ಮೊನೆಯು ನೀರಿನಲ್ಲಿ ನಾಮವ ತೆಯ್ಯಲಾಗಿ
ನಾಮವಳಿದು ನೀರುಳಿಯಿತ್ತು;
ಉಳಿವ ನೀರ ಹಣೆಯಲ್ಲಿಕ್ಕಲಾಗಿ, ನಿರ್ನಾಮವಾಯಿತ್ತು
ನಾರಾಯಣ ಪ್ರಿಯ್ಯ ರಾಮನಾಥನಲ್ಲಿ ನಿಶ್ಚಯವಾದ ಶರಣಂಗೆ.

**ಟೀಕು:**— ಚಿತ್ ಸ್ವರೂಪನಾದ ಶರಣಂಗೆ ಜ್ಞಾನಶಕ್ತಿಯೇ ಸತಿಯಾಗಿಹಳೆಂಬುದೀಗ, ಎಮ್ಮಾಕೆಯೆಂಬ ಶಬ್ದಕ್ಕರ್ಥ. ಅಂತಪ್ಪ ಸುಜ್ಞಾನಶಕ್ತಿಯು ಸದ್ಭಾವವೆಂಬ ಹಸ್ತದ ಚಿದ್ ಭಾಂಡವೆಂಬ ಗಡಿಗೆಯಲ್ಲಿ ಸದ್ವಿವೇಕ ಜಲವ ತುಂಬಿತ್ತಿರುಹುದೆಂಬುದೀಗ, ಎಮ್ಮಾಕೆಯು ಕೈಯ ಮೊನೆಯು ನೀರಿನಲ್ಲಿ ಎಂಬ ಶಬ್ದಕ್ಕರ್ಥ. ಆ ಸದ್ವಿವೇಕ ಜಲದಲ್ಲಿ ಸೋಹಂವೆಂಬ ಷಡಾಕ್ಷರಿಯ ಮಂತ್ರವನೇಕೀಕರಿಸಲು ಆ ಮಂತ್ರವು ಸದ್ವಿವೇಕ ಜಲದಲ್ಲಿ, ನಿಷ್ಪತಿಯಾಗಿ ಆ ಮಂತ್ರವನೊಳಕೊಂಡು ಸದ್ವಿವೇಕ ಜಲವೆ ಉಳಿಯಿತ್ತೆಂಬುದೀಗ, ನಾಮವತ್ಯೆಯ್ಯಲಾಗಿ ನಾಮವಳಿದು ನೀರುಳಿಯಿತ್ತೆಂಬ ಶಬ್ದಕ್ಕರ್ಥ. ಆ ಮಂತ್ರ ಸಂಬಂಧವಾದ ಸದ್ವಿವೇಕ ಜಲವನು ಶಿವಾದ್ವೈತ ಭಕ್ತಿಯಲ್ಲಿ ಸಾಹಿತ್ಯವ ಮಾಡಿಕೊಂಡು ಶ್ರೀಗುರು ಕಾರುಣ್ಯದಿಂದ ಲಿಂಗಾಂಗ ಸಂಬಂಧ ಘಟಿಸಿ ಜ್ಞಾನಕ್ರೀಯಿಂದ ಆಚರಿಸುತ್ತಿರಲು ಅಲ್ಲಿ ಶರಣ-ಲಿಂಗ ಸಂಬಂಧವೆಂಬ ಉಭಯನಾಮವಳಿದು ನಿರ್ನಾಮ ಸ್ವರೂಪವಾಯಿತ್ತೆಂಬುದೀಗ, ಉಳಿದ ನೀರ ಹಣೆಯಲ್ಲಿಕ್ಕಲಾಗಿ ನಿರ್ನಾಮವಾಯಿತ್ತು ನಾರಾಯಣಪ್ರಿಯ್ಯ ರಾಮನಾಥನಲ್ಲಿ ನಿಶ್ಚಯವಾದ ಶರಣಂಗೆ ಎಂಬ ಶಬ್ದಕ್ಕರ್ಥ.

೬

ಕಾಷ್ಟವ ಕಾಮರ್ಗಿಲು ನುಂಗಿತ್ತು ಹರಿವ ನೀರ ಉರಿ ಕುಡಿಯಿತ್ತು
ಬಡವ ಬಲ್ಲಿದನ ಕೊಂದು ಸತ್ತ ಸಾವಿನಲ್ಲಿ ಬಂಧುಗಳೆಲ್ಲರೂ ಕೂಡಿ
ಎತ್ತುವವರಿಲ್ಲದೆ ಅರೆ ವೆಣನಾಯಿತ್ತು !
ಮುಕ್ತಿನಾಮ ನಷ್ಟ ನಾರಾಯಣ ಪ್ರಿಯ್ಯ ರಾಮನಾಥ ಇನ್ನೇವೆ
ಇನ್ನೇವೆ.

ಟೀಕು:— ಜಡಕಾಷ್ಟ ರೂಪವಾದ ತನುವ ಅಜ್ಞಾನ ತಮೋವರ್ಣವನುಳ್ಳ ಮಿಥ್ಯ ಮಾಯಾ ಛಾಯವವಗ್ರಹಿಸಿಕೊಂಡಿರ್ಪುದೆಂಬುದೀಗ, ಕಾಷ್ಟವ ಕಾಮರ್ಗಿಲು ನುಂಗಿತ್ತೆಂಬ ಶಬ್ದಕ್ಕರ್ಥ. ಇಂತಾಗಲು ಸಂಸಾರ ವಿಷಯ ರಸೇಂದ್ರಿಯ ರೂಪಿನಿಂ ಪ್ರಕೃತಿಭಾವದಿಂ ಚರಿಸುವ ಮನವ ತಾಪತ್ರಯಾಗ್ನಿಯವಗ್ರಹಿಸಿತ್ತೆಂಬುದೀಗ, ಹರಿವ ನೀರ ಉರಿ ಕುಡಿಯಿತ್ತೆಂಬ ಶಬ್ದಕ್ಕರ್ಥ. ಆ ಮನವ ತಾಪತ್ರಯಾಗ್ನಿ ಅವಗ್ರಹಿಸಲು ಸದ್ವಿವೇಕ ಜಲಗುಂದಿ ಸತ್ವಗೆಟ್ಟ ಜೀವನು ಶಿವಾಂಶೀಕನಾದ ಜ್ಞಾನ ಕಲಾತ್ಮನ ಅರಿವನು ಅಪಹರಿಸಿ ದೇಹಮೋಹ ಭ್ರಾಂತಿಗಿಳಿದು ಮಾಡಲಲ್ಲಿಯೆ ಜ್ಞಾನ ಚೈತನ್ಯಗುಂದಿ ಜೀವನ್ಮೃತವಾಗಲು ಆ ದೇಹದಲ್ಲಿ ಸ್ವಯಾತ್ಮ ಬಂಧುಗಳಪ್ಪ ಸಕಲ ತತ್ವ ಕರಣಂಗಳು ಪ್ರಪಂಚಿನಿಂ ಬೇರ್ಪಡಿಸುವ ಸಾಮರ್ಥ್ಯವಿಲ್ಲದ ಕಾರಣ ಜ್ಞಾನಾಜ್ಞಾನ ಸಂಬಂಧಿಯಾಗಿ ಮೋಕ್ಷವೆಂಬ ಹೆಸರಡಗಿರ್ಪನೆಂಬುದೀಗ, ಬಡವ ಬಲ್ಲಿದನ ಕೊಂದ ಸಾವಿನಲ್ಲಿ ಬಂಧುಗಳೆಲ್ಲರು ಕೂಡಿ ಎತ್ತುವವರಿಲ್ಲದೆ ಅರೆವೆಣನಾಯಿತ್ತು ಮುಕ್ತಿನಾಮ ನಷ್ಟವೆಂಬ ಶಬ್ದಕ್ಕರ್ಥ. ಇಂತಪ್ಪ ಆತ್ಮನು ಭವದುಃಖಕ್ಕಲಸಿ ಜ್ಞಾನೋದಯದಿಂ ಪ್ರಪಂಚು ಕೆಡದಿರ್ಪುದ ಕಂಡು ಇದಕ್ಕೆ ಇನ್ನೇನು ಮಾಡಲೆಂದು ಶ್ರೀ ಗುರೋಪಾವಸ್ಥೆಯ ಮಾಡುತ್ತಿರ್ಪನೆಂಬುದೀಗ, ನಾರಾಯಣಪ್ರಿಯ್ಯ ರಾಮನಾಥಾ ಇನ್ನೇವೆ-ಇನ್ನೇವೆ ಎಂಬ ಶಬ್ದಕ್ಕರ್ಥ.

೭

ಕೋಣ ಎಮ್ಮೆಯ ನೀಯಿತ್ತು, ಎಮ್ಮೆ ಹೋರಿಯ ನೀಯಿತ್ತು,
ಹರಿ ಹಸುವ ನೀಯಿತ್ತು, ಹಸು ಕೋಳಿಯ ನೀಯಿತ್ತು
ಕೋಳಿ ಕೊಕ್ ಎಂದು ಕೂಗುವಾಗ ಕೋಣ ಎಮ್ಮೆಯ ನುಂಗಿತ್ತು
ಎಮ್ಮೆಯ ಕೋಣನ ಹೋರಿ ನುಂಗಿತ್ತು, ಹೋರಿ ಕೋಳಿಯ
ನುಂಗಿತ್ತು
ಅರೈವುತಿರ್ದೆ ನಾರಾಯಣ ಪ್ರಿಯ್ಯ ರಾಮನಾಥ !

ಟೀಕು:— ಆತ್ಮನ ಮೂಲಹಂಕಾರದಿಂ ಪ್ರಕೃತಿ ಸ್ವರೂಪವಾದ ದೇಹಭಾವ ಜನಿಸಿತ್ತೆಂಬುದೀಗ, ಕೋಣ ಎಮ್ಮೆಯನೀಯಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ಅಂತರಾತ್ಮವನು ಉದಯಿಸಿಹನೆಂಬುದೀಗ, ಎಮ್ಮೆ ಹೋರಿಯನೀ

ಯಿತ್ತೆಂಬ ಶಬ್ದಕ್ಕರ್ಥ. ಅಂತರಾತ್ಮನಲ್ಲಿ ಜೀವನು ಉದಯಿಸಿದನೆಂಬುದೀಗ, ಹೋರಿ ಹಸುವನೀಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಶಿವಕೃಪೆಯಿಂದ ಕುಕ್ಕಟನ ಗುಣಧರ್ಮ ಕರ್ಮವನುಳ್ಳ ಸತ್ತ್ವಗುಣವು ಜ್ಞಾನ ಸಂಜನಿತವಾಯಿತ್ತೆಂಬುದೀಗ, ಹಸು ಕೋಳಿಯನೀಯಿತ್ತೆಂಬ ಶಬ್ದಕ್ಕರ್ಥ. ಆ ಸತ್ತ್ವಗುಣವು ಜ್ಞಾನವು ಆತ್ಮಂಗೆ ಅರಿವನೆಚ್ಚರಿಸಿ ಶಿವೋಹಂ ಎಂದು ಧ್ವನಿಮಾಡಲು ಆ ಅಹಂಕಾರ ಪ್ರಕೃತಿಯುನೊಳಕೊಂಡು ಆ ದೇಹ-ಅಹಂಕಾರಗಳೆರಡು ಅಂತರಾತ್ಮನರಿದು ನಷ್ಟವಮಾಡಿದನೆಂಬುದೀಗ, ಕೋಳಿ ಕೊಕ್ ಎಂದು ಕೂಗುವಾಗ ಕೋಣ ಎಮ್ಮೆಯು ನುಂಗಿತ್ತು ಎಮ್ಮೆಯು ಕೋಣನ ಹೋರಿ ನುಂಗಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ಅಂತರಾತ್ಮನ ಆ ಸತ್ತ್ವಗುಣವು ಜ್ಞಾನದ ಶಿವೋಹಂ ಭಾವವಗ್ರಹಿಸಿಕೊಂಡಿರ್ಪುದೆಂಬುದೀಗ, ಹೋರಿಯು ಕೋಳಿ ನುಂಗಿತ್ತೆಂಬ ಶಬ್ದಕ್ಕರ್ಥ. ಈ ಭೇದವ ಜ್ಞಾನಗುರು ಮುಖದಿಂದ ಪರಾಮರಿಸುತ್ತಿರ್ದ ಶರಣನೆಂಬುದೀಗ, ಅರೈವುತ್ತಿರ್ದ ನಾರಾಯಣಪ್ರಿಯ್ಯ ರಾಮನಾಥ ಎಂಬ ಶಬ್ದಕ್ಕರ್ಥ.

೮

ಆಡು ತೋಳನ ಮುರಿವಾಗ ಮೊಲ ನಾಯಿಯು ಕಚ್ಚಿತ್ತು
ಕಚ್ಚುವದ ಕಂಡು ಹದ್ದು ಹಾರಲಾಗಿ ಆ ಹದ್ದ ಹಾವು ಕಚ್ಚಿ ಸತ್ತಿತ್ತು
ವಿಷವೇರಿ ಹೋಯಿತ್ತು; ಗಾರುಡ ನಾರಾಯಣ ಪ್ರಿಯ್ಯ—
ರಾಮನಾಥನಲ್ಲಿ ಐಕ್ಯಾನುಭಾವಿಯಾದ ಶರಣಂಗೆ.

ಟೀಕು:— ರಜೋಗುಣ ಸಂಬಂಧಿಯಾದ ದೇಹ ಭಾವವಳಿದು ಆಚಾರಾಂಗ ಸ್ವರೂಪವಾಗಿ ಭವರೋಗವ ನಷ್ಟ ಮಾಡುವಲ್ಲಿ ಮನವಳಿದು ಉನ್ಮನಿ ತತ್ವ ಸ್ವರೂಪವಾಗಿ ಇಂದ್ರಿಯಂಗಳ ನಷ್ಟವ ಮಾಡಿತ್ತೆಂಬುದೀಗ, ಆಡು ತೋಳನ ಮುರಿವಾಗ ಮೊಲ ನಾಯಿಯು ಕಚ್ಚಿತ್ತೆಂಬ ಶಬ್ದಕ್ಕರ್ಥ. ಇಂತು ಉನ್ಮನಿ ಮನ ಇಂದ್ರಿಯಂಗಳ ನಷ್ಟವ ಮಾಡುವದ ಕಂಡು ಜೀವನು ಪ್ರಪಂಚ ಕ್ರೀಡೆಯಲ್ಲಿ ಚರಿಸಲು ಆ ಜೀವನ ಪ್ರಣವೋಹಂ ಭಾವವ ಗ್ರಹಿಸಲು ಸುಜ್ಞಾನ ವಿಷವು ಆವರಿಸಿ ಜೀವನಳಿದು ಸಜ್ಜೀವ ಸ್ವರೂಪವಾಯಿತ್ತೆಂಬುದೀಗ, ಕಚ್ಚುವದ ಕಂಡು ಹದ್ದು ಹಾರಲಾಗಿ ಹದ್ದ ಹಾವ ಕಚ್ಚಿ ಸತ್ತಿತ್ತು ವಿಷವೇರಿ ಎಂಬ ಶಬ್ದಕ್ಕರ್ಥ. ಇಂತಪ್ಪ ತನು-ಮನ-ಭಾವಂಗಳು ಲಿಂಗದಲ್ಲೈಕ್ಯವಾದ ಶರಣಂಗೆ ಇನ್ನಾವಾಚಾರವ ನನುಕರಿಸಿ ನಡೆಯಲಿಲ್ಲವೆಂಬುದೀಗ, ಹೋಯಿತ್ತು ಗಾರುಡ ನಾರಾಯಣ ಪ್ರಿಯ್ಯ ರಾಮನಾಥನಲ್ಲಿ ಐಕ್ಯಾನುಭಾವಿಯಾದ ಶರಣಂಗೆಂಬ ಶಬ್ದಕ್ಕರ್ಥ.

೯

ಗಡಿಗೆ ಗುಡುವನ ನುಂಗಿತ್ತು,
ಅಡಿಯಲ್ಲಿರ್ದ ಕುಡುಕೆ ಆ ಉಭಯವ ನುಂಗಿತ್ತು,
ನುಂಗಿಹೆನೆಂಬ ಚಿತ್ತಹ ಸಂದೇಹ ನುಂಗಿತ್ತು,

ಈ ಉಭಯದ ಸಂದೇಹ ಸಂಚ ಹಿಂಗಿಯಲ್ಲದೆ ಲಿಂಗವಿಲ್ಲ,
ನಾರಾಯಣ ಪ್ರಿಯ್ಯ ರಾಮನಾಥ !

**ಟೀಕು:**— ಬಹಳ ಪ್ರಪಂಚು ರಸಕ್ಕಿಂಬಾದ ಸ್ಥೂಲ ತನುವ ಇಂದ್ರಿಯ ಜಲಕ್ಕಿಂಬಾದ ಸೂಕ್ಷ್ಮ ತನುವನೊಳಗೊಂಡಿರ್ಪುದೆಂಬುದೀಗ, ಗಡಿಗೆ ಗುಡುವನ ನುಂಗಿತ್ತೆಂಬ ಶಬ್ದಕ್ಕರ್ಥ. ಇವಕ್ಕೆ ಆಧಾರ ಚೈತನ್ಯವಾಗಿ ಕರಣ ಜಲವ ತುಂಬಿಕೊಂಡಿರ್ದ ಕಾರಣ ತನು ಆ ಉಭಯವನೊಳಕೊಂಡಿರ್ಪುದೆಂಬುದೀಗ, ಅಡಿಯಲ್ಲಿದ್ದ ಕುಡುಕೆ ಆ ಉಭಯವ ನುಂಗಿತ್ತೆಂಬ ಶಬ್ದಕ್ಕರ್ಥ. ಈ ತನುತ್ರಯಂಗಳ ನಷ್ಟವ ಮಾಡಿಹೆನೆಂದರಿವ ಆತ್ಮನ ಅಜ್ಞಾನ ಒಳಗೊಂಡಿತ್ತೆಂಬುದೀಗ, ನುಂಗಿಹೆನೆಂದ ಚಿತ್ತವ ಸಂದೇಹ ನುಂಗಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ಜ್ಞಾನಾಜ್ಞಾನಂಗಳು ನಷ್ಟವಾಗಿ ಸಮ್ಯಜ್ಞಾನ ಒಳವಟ್ಟಲ್ಲದೆ ಲಿಂಗವು ಸಾಧ್ಯವಾಗದೆಂಬುದೀಗ, ಈ ಉಭಯದ ಸಂದೇಹ ಸಂಚ ಹಿಂಗಿಯಲ್ಲದೆ ಲಿಂಗವಿಲ್ಲ ನಾರಾಯಣ ಪ್ರಿಯ್ಯ ರಾಮನಾಥ ಎಂಬ ಶಬ್ದಕ್ಕರ್ಥ.

೧೦

ಕಾಳರಾತ್ರಿಯೆಂಬ ಅಂಧಕಾರದ ಕೊಟ್ಟಿಗೆಯಲ್ಲಿ
ಕಾಳ ಎಮ್ಮೆಯ ಕರು ಹಾಳಲಾಗಿ ಹಾಳಿದ ಧನಿಗಂಜಿ ಕೊಟ್ಟಿಗೆ ಹಾಳಾದುದಿಲ್ಲ
ಎತ್ತು ಕಟ್ಟಿದಿಲ್ಲ, ಎಮ್ಮೆಯ ಕರು ಸತ್ತಲ್ಲದೆ ಕೊಟ್ಟಿಗೆ ನಷ್ಟವಲ್ಲ
ಕರುವಿನ ಕೊರಳು ಅಡಗುವದ ಕಾಣೆ
ನಾರಾಯಣ ಪ್ರಿಯ್ಯ ರಾಮನಾಥಾ !

**ಟೀಕು:**— ಅಜ್ಞಾನ ಮೋಹ ಮದಾಂಧಕಾರವನುಳ್ಳ ಜಡ ಭೌತಿಕ ದೇಹದಲ್ಲಿ ಮಿಥ್ಯ ಜಡ ಸ್ವರೂಪವಪ್ಪ ಮಾಯಾ ಸಂಭೂತವಾದ ಜೀವನು ಶಬ್ದಜಾಲಂಗಳಿಂದ ಉಲಿವುತ್ತಿರಲದೀಗ, ಕಾಳ ರಾತ್ರಿಯೆಂಬ ಅಂಧಕಾರದ ಕೊಟ್ಟಿಗೆಯಲ್ಲಿ ಕಾಳ ಎಮ್ಮೆಯ ಕರು ಹಾಳಲಾಗಿ ಎಂಬ ಶಬ್ದಕ್ಕರ್ಥ. ಆ ಜೀವನಶಬ್ದ ಜಾಲಕ್ಕಂಜಿ ದೇಹಭಾವ ನಷ್ಟವಾಗದೆ ಕಂಟಾಗಿರ್ಪುದೆಂಬುದೀಗ, ಹಾಳಿವ ಧನಿಗಂಜಿ ಕೊಟ್ಟಿಗೆ ಹಾಳಾದುದಿಲ್ಲವೆಂಬ ಶಬ್ದಕ್ಕರ್ಥ. ಜೀವ ಭಾವವಳಿದಲ್ಲದೆ ಅಂಗದಲ್ಲಿ ಲಿಂಗ ಸಂಬಂಧವಾಗದೆಂಬುದೀಗ, ಎತ್ತು ಕಟ್ಟುವದಿಲ್ಲ ಎಮ್ಮೆಯಕರು ಸತ್ತಲ್ಲದೆ ಎಂಬ ಶಬ್ದಕ್ಕರ್ಥ. ಅಂತು ಜೀವನ ಮನೋವಿಕಾರದಿಂ ತೋರುವ ಶಬ್ದಜಾಲಂಗಳು ನಷ್ಟವಾಗದ ಕಾರಣ ದೇಹ ಭಾವವಳಿಯದೆಂಬುದೀಗ, ಕೊಟ್ಟಿಗೆ ನಷ್ಟವಿಲ್ಲ ಕರುವಿನ ಕೊರಳು ಅಡಗುವದ ಕಾಣೆ ನಾರಾಯಣ ಪ್ರಿಯ್ಯ ರಾಮನಾಥ ಎಂಬ ಶಬ್ದಕ್ಕರ್ಥ.

೧೧

ಎತ್ತು ಹಸುವ ಹಾಯಲಾಗಿ ತೆಕ್ಕೆಯ ನಿಕ್ಕಿದ ಕಣ್ಣಿಯಲ್ಲಿ
ತೆಕ್ಕೆಗೆ ನಡೆಯದ ಹಸು ಕಟ್ಟುಗೊಳ್ಳದ ಹೋರಿ

ಇವೆರಡ ಸಿಕ್ಕಿಸುವ ಪರಿ ಇನ್ನೆಂತೊ
ಕಟ್ಟಿದ ಕಣ್ಣಿಯ ಕುಣಿಕೆ ಕಳಚಿ ಹೋರಿಯ ಕೊರಳಲ್ಲಿ ಹೋಯಿತ್ತು
ಹಸು ಚಿತ್ತವೆಯಾಯಿತ್ತು ನಾರಾಯಣ ಪ್ರಿಯ್ಯ ರಾಮನಾಥಾ !

**ಟೀಕು:**— ಪರಮಾತ್ಮನೆಂಬ ಲಿಂಗವು ಜೀವಾತ್ಮನೆಂಬ ಅಂಗದಲ್ಲಿ ಸಂಬಂಧವಾಗಲಾಗಿ ಎಂಬುದೀಗ, ಎತ್ತು ಹಸುವ ಹಾಯಲಾಗಿ ಎಂಬ ಶಬ್ದಕ್ಕರ್ಥ. ಆ ಉಭಯವನು ಕ್ರಿಯಾಪಾಶದಲ್ಲಿ ಬಂಧಿಸಲು ಆ ಕ್ರೀಯಲ್ಲಿ ಜೀವಹುಟ್ಟಿ ಎಂಬ ಶಬ್ದಕ್ಕರ್ಥ. ಇಂತಪ್ಪ ಜೀವನು ಚರಿಸುವದಕ್ಕೆ ಸತ್ಪಥ ಮಾರ್ಗವಿಲ್ಲದೆ ಅನುಭವಿಸುವದಕ್ಕೆ ಪರಮಾತ್ಮನು ಅಭಿನ್ನಯೋಗದಿಂ ಚರಿಸಿದ ಕಾರಣ ಭಿನ್ನಯೋಗಕ್ಕೆ ಸಿಲ್ಕದಿರ್ಪನು ಪರಮಾತ್ಮನೆಂಬುದೀಗ, ತೆಕ್ಕೆಯನಿಕ್ಕಿದ ಕಣ್ಣಿಯಲ್ಲಿ ತೆಕ್ಕೆಗೆ ನಡೆಯದೆ ಹಸು ಕಟ್ಟುಗೊಳ್ಳದೆ ಹೋರಿಯೆಂಬ ಶಬ್ದಕ್ಕರ್ಥ. ಇಂತು ಸಂಗತವಾಗಿರ್ಪ ಜೀವ ಪರಮರ ಕ್ರಿಯಾಚಾರದಲ್ಲಿ ನಡಸಿ ಮುಕ್ತಿಯನೆಯ್ದಿಸಿಹೆನೆಂದೊಡೆ ಆರಿಗೂ ಆಗದೆಂಬುದೀಗ, ಇವೆರಡ ಸಿಕ್ಕಿಸುವ ಪರಿ ಇನ್ನೆಂತೊ ಎಂಬ ಶಬ್ದಕ್ಕರ್ಥ. ಹೀಗೆ ಒಂದಕ್ಕೊಂದು ಸಂಗತವಾಗಲು ಆ ಉಭಯ ಸಂಬಂಧವಪ್ಪ ಕ್ರಿಯಂಪಾಶ ಜೀವಂಗೆ ಸಂಬಂಧಿಸದೆ ಲಿಂಗದ ಅಸಾಧ್ಯ ಕಂಠದಲ್ಲಿಯೆ ಅಡಗಿತ್ತೆಂಬುದೀಗ, ಕಟ್ಟಿದ ಕಣ್ಣಿಯ ಕುಣಿಕೆ ಕಳಚಿ ಹೋರಿಯ ಕೊರಳಲ್ಲಿ ಹೋಯಿತ್ತೆಂಬ ಶಬ್ದಕ್ಕರ್ಥ. ಇಂತಾಗಲು ಜೀವಂಗೆ ಲಿಂಗದಲ್ಲಿ ಸಮರಸ ಸಂಯೋಗ ಘಟಿಸದೆ ಭಕ್ತಿ ಬಾಹ್ಯವಾಗಿ ಮುಕ್ತಿಯಿಲ್ಲದೆ ಚಿತ್ತಲೆಯಾಗಲು ಅದೀಗ, ಹಸುಚಿತ್ತಲೆಯಾಯಿತ್ತು ನಾರಾಯಣಪ್ರಿಯ್ಯ ರಾಮನಾಥ ಎಂಬ ಶಬ್ದಕ್ಕರ್ಥ. ಈ ವಚನದ ಅರ್ಥ ಸ್ಪಷ್ಟದಲ್ಲಿ ಸಂದೇಹವಿಲ್ಲ.

೧೨

ನೀರ ನೆಳಲು ನುಂಗಿತೆಂದು ಅರೈಕೆಗೊಂಬವನ ಅರಣ್ಯ ನುಂಗಿತ್ತು
ಅರಣ್ಯವ ಶೃಂಗಿ ನುಂಗಿತ್ತು, ಶೃಂಗಿಯ ಅರಣ್ಯವ ಗುಂಗುರು ನುಂಗಿತ್ತು
ಗುಂಗುರ ಅಂಗವ ಸೇಳಲಾಗಿ ಕಂಡರು ಮೂರು ಲೋಕವ
ಈ ಗುಣವ ಕಂಡ ಕಂಡವರಿಗೆ ಹೇಳಿ ಭಂಡಾಹವರ ಕಂಡು
ನಿಂದು ನೋಡುತ್ತಿದ್ದೆ ನಾರಾಯಣ ಪ್ರಿಯ್ಯ ರಾಮನಾಥಾ !

**ಟೀಕು:**— ಮನಹ ಮರವೆಯ ಕೊಂಡಲ್ಲಿ ಸಂಕಲ್ಪ ಭಾವದಿಂದರಿವುತ್ತಿರ್ದ ಆತ್ಮನ ಭವಾರಣ್ಯವ ಅವಗ್ರಹಿಸಿತ್ತೆಂಬುದೀಗ, ನೀರ ನೆಳಲು ನುಂಗಿತ್ತೆಂದು ಅರೈಕೆಗೊಂಬವನ ಅರಣ್ಯ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಭವಾರಣ್ಯವ ಹರಿಣಿ ಎಂಬ ಲಕ್ಷಣವನುಳ್ಳ ಮಾಯೆ ಒಳಕೊಂಡಿರ್ಪಳೆಂಬುದೀಗ, ನುಂಗಿದ ಅರಣ್ಯವ ಶೃಂಗಿ ನುಂಗಿತ್ತೆಂಬ ಶಬ್ದಕ್ಕರ್ಥ. ಇಂತು ಭವಾರಣ್ಯವನು ಆ ಮಾಯೆಯನು ಅತಿ ಸೂಕ್ಷ್ಮವಾದ ಜೀವನವ ಗ್ರಹಿಸಿಕೊಂಡನೆಂಬುದೀಗ, ಶೃಂಗಿಯ ಅರಣ್ಯವ ಗುಂಗುರು ನುಂಗಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ಜೀವಭಾವವ ಖಂಡಿ

ಸಲು ತ್ರಿಪುಟಿ ಜ್ಞಾನವ ಕಂಡು ಅಹಂ ಬ್ರಹ್ಮವೆಂದು ಕಂಡ ಕಂಡವರೊಡನೆ ನುಡಿದು ಬ್ರಹ್ಮಾನುಸಂಧಾನವಿಲ್ಲದೆ ಭ್ರಷ್ಟರಪ್ಪರವರ ಕಂಡು ಶಿವಾಚಾರದಲ್ಲಿ ನಿಂದು ಸುಜ್ಞಾನ ದೃಷ್ಟಿಯಿಂ ತನ್ನ ತಾ ಪರಾಮರಿಸುತ್ತಿರ್ದ ಶರಣನೆಂಬುದೀ ವಚನದ ತಾತ್ಪರ್ಯ.

೧೩

ಕೊಳ ಕುದುರೆಯು ತಿಂದಿತ್ತು, ವೇಣು ನಾದವ ನುಂಗಿತ್ತು,
ಕೀಳು ಮೇಲ ನುಂಗುವಾಗ ಆಳದಲ್ಲಿದ್ದವ ಕಂಡು ಘೋಳು ಗುಟ್ಟಲಾಗಿ
ಘೋಳಿನ ಧನಿಯು ಕೇಳಿ ಬೇಳುವೆ ಹಾಯಿತ್ತು
ಎಲ್ಲಕ್ಕೊ ಇದು ಎನಗೆ ಅಳವಾಡಿ ಕಾಡುತ್ತಿದೆ
ನಾರಾಯಣ ಪ್ರಿಯ್ಯ ರಾಮನಾಥಾ !

**ಟೀಕು:**— ಶಿವಜ್ಞಾನ ಸಂಪನ್ನವಾದ ಶರಣನ ಅಂಗ ಸತ್ಕ್ರಿಯೆಯಿಂದ ಸತ್ಪ್ರಣವು ಸ್ವರೂಪವಾದ ಸಾಕಾರ ಲಿಂಗವನು ಅವಗ್ರಹಿಸಿತ್ತೆಂಬುದೀಗ, ಕೊಳ ಕುದುರೆಯು ತಿಂದಿತ್ತೆಂಬ ಶಬ್ದಕ್ಕರ್ಥ. ಇಂತಾಗಲು ಮನವು ಸುಜ್ಞಾನದಿಂ ಸುನಾದ ಚೈತನ್ಯ ಲಿಂಗವನವ ಗ್ರಹಿಸಿತ್ತೆಂಬುದೀಗ, ವೇಣು ನಾದವ ನುಂಗಿತ್ತೆಂಬ ಶಬ್ದಕ್ಕರ್ಥ. ಹಾಗೆ ಭೃತ್ಯನಪ್ಪ ಜೀವಾತ್ಮನು ಕರ್ತೃವಪ್ಪ ಪರಮಾತ್ಮಲಿಂಗವ ಮನಾನುಭಾವದರವಿಂದ ಅವಗ್ರಹಿಸಲಾಗಿ ಈ ತ್ರಿವಿಧ ಲಿಂಗದ ಆಚಾರದಲ್ಲಿ ಸ್ವಸ್ಥನಾದ ಶರಣನು ಸುಜ್ಞಾನದಿಂದರಿದು ಶಿವೋಹಂ-ಶಿವೋಹಂ ಎಂದು ಉಚ್ಚರಿಸಲೆಂಬುದೀಗ, ಕೀಳು ಮೇಲನುಂಗುವಾಗ ಆಳದಲ್ಲಿದ್ದವ ಕಂಡು ಘೋಳುಗುಟ್ಟಲಾಗಿ ಎಂಬ ಶಬ್ದಕ್ಕರ್ಥ. ಇಂತು ಶಿವೋಹಂ ಎಂಬ ಸತ್ಪ್ರಣವ ಘೋಷವಲಾರಿಸಿದ ಸಕಲ ಕರಣಂಗಳು ಪ್ರಕೃತಿ ಭಾವವಳಿದು ಪರಮಾನುಭಾವದಲ್ಲಿ ಪರವಶವೆಂಬುದೀಗ, ಘೋಳಿನ ದನಿಯು ಕೇಳಿ ಬೆಳುವೆ ಹಾಯಿತ್ತು ಎಲ್ಲಕ್ಕೆಂಬ ಶಬ್ದಕ್ಕರ್ಥ. ಈ ನಿಲವ ಭಿನ್ನಭಾವದಿ ಸಾಧಿಸಿಹೆನೆಂದೊಡೆ ಆರಿಗೂ ಸಾಧ್ಯವಾಗದೆ ಅಳವಾಡಿ ಕಾಡುತ್ತಿಹದೆಂಬುದೀಗ, ಇದು ಎನಗೆ ಅಳವಾಡಿ ಕಾಡುತ್ತಿದೆ ನಾರಾಯಣ ಪ್ರಿಯ್ಯ ರಾಮನಾಥಾ ಎಂಬ ಶಬ್ದಕ್ಕರ್ಥ.

೧೪

ಮಾಧವನ ಮನೆಯ ಬಾಗಿಲಿನಲ್ಲಿ ಮಹಾ ಜನಂಗಳೆಲ್ಲರು ಕೂಡಿ
ಹೋಮವ ನಿಕ್ಕಲಾಗಿ ಎದ್ದಿತ್ತು ಉರಿ, ಮೂವರ ಮಸ್ತಕವ ಮುಟ್ಟಿ
ಆ ಹೋಮದ ಹೊಗೆ ತಾಗಿ ನಾಲ್ವರ ಕಂಣು ಕೆಟ್ಟಿತ್ತು
ಆ ಹೋಮದ ದಿಕ್ಕಿನ ಕುಂಭವು ಉರುಗಿ ಹೋಗಲಾಗಿ ತೊರೆ ಹರಿಯಿತು

ಕಾಲು ಕಡಹೂ ಆರಿಗೂ ಆಗದು ಎಲ್ಲಾ ಠಾವಿನಲ್ಲಿ ಮಡುಮಯ
ವಾಗಿತ್ತು
ಮಡುವಿನ ಮೊಸಳೆ ತಡಿಯಲ್ಲಿ ಆರನು ನಿಲಲಿಸದೆ
ಕಡಿದು ನುಂಗಿಹಿದಿನ್ನೇವೆ, ಮೊಸಳೆಯ ಹಿಡಿವರ ಕಾಣೆ,
ಮಡುವ ಒಡವರ ಕಾಣೆ, ಹೋಮವ ಕೆಡಿಸುವರ ಕಾಣೆ
ಮಾಧವನ ಬಾಗಿಲವಲ್ಲಿ ನಿಂದು ಹೋದರು—
ಹೊಲಬುದಪ್ಪಿ ನಾರಾಯಣ ಪ್ರಿಯ್ಯ ರಾಮನಾಥಾ !

**ಟೀಕು:**— ಸಾತ್ವೀಕ ಗುಣ ಸಂಬಂಧವಾದ ಸೂಕ್ಷ್ಮ ತನುವಿನ ಇಂದ್ರಿಯ ದ್ವಾರದಲ್ಲಿ ಸಕಲಾತ್ಮರು ವಿಷಯಂಗಳೆಂಬ ಹವಿಸ್ಸುಗಳ ಆಶಾಗ್ನಿಯಿಂದುರುಹಲ ದೀಗ,ಮಾಧವನ ಮನೆಯ ಬಾಗಿಲಿನಲ್ಲಿ ಮಹಾಜನಂಗಳೆಲ್ಲರು ಕೂಡಿ ಹೋಮವ ನಿಕ್ಕಲಾಗಿ ಎಂಬ ಶಬ್ದಕ್ಕರ್ಥ. ಇಂತುರುಹಲು ಆಶಾಗ್ನಿ ಜೀವಕ್ರಿಯಂಗಳ ವೃತ್ತಿಯನು ಆವಗ್ರಹಿಸಿ ಪಟುತರವಾಯಿತ್ತೆಂಬುದೀಗ, ಎದ್ದಿತ್ತು ಉರಿ ಮೂವರ ಮಸ್ತಕವ ಮುಟ್ಟಿ ಎಂಬ ಶಬ್ದಕ್ಕರ್ಥ. ಆ ಆಶಾಗ್ನಿಯ ಹರುಷ—ರೋಷ-ವ್ಯಸನ-ವಿಕಾರವೆಂಬ ದೂಮ್ನ ಗ್ರಹಕದಿಂದ ಅಂತಃಕರಣವ ಚತುಷ್ಟಿಯಂಗಳ ಜ್ಞಾನದೃಷ್ಟಿ ನಷ್ಟವಾಯಿತ್ತೆಂಬುದೀಗ, ಆ ಹೋಮದ ಹೊಗೆ ತಾಗಿ ನಾಲ್ವರ ಕಣ್ಣು ಕೆಟ್ಟಿತ್ತು ಎಂಬ ಶಬ್ದಕ್ಕರ್ಥ. ಆ ಆಶಾಗ್ನಿಯು ದಿಕ್ಕಿನಲ್ಲಿರ್ದ ಸ್ಥೂಲ ತನುವೆಂಬ ಕುಂಭ ಇಂದ್ರಿಯಂಗಳ ಕ್ರಿಯವುರುಗಿ ಸಂಸಾರ ವಿಷಯ ರಸವಾಗಲಾಗಿ ಮನವೆಂಬ ತೊರೆ ಹರಿಯಿತ್ತೆಂಬುದೀಗ, ಆ ಹೋಮದ ದಿಕ್ಕಿನ ಕುಂಭ ಉರುಗಿ ಒಗಲಾಗಿ ತೊರೆ ಹರಿಯಿತ್ತೆಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ರಸಪ್ರವಾಹ ಕರ್ಮಾಚಾರ-ಜ್ಞಾನಯೋಗಂಗಳಿಂ ದಾಂಟಿಹೆನೆಂದೊಡೆ ಆರಿಗೂ ಅಸಾಧ್ಯವಾಗಿ ಸರ್ವಾಂಗದಲ್ಲಿ ತುಂಬಿ ಅಘಾತವಾಗಿರ್ಪುದೆಂಬುದೀಗ, ಕಾಲುಕಹು ಆರಿಗೂ ಆಗದು ಎಲ್ಲಾ ಠಾವಿನಲ್ಲಿ ಮಡುಮಯವಾಗಿತ್ತೆಂಬ ಶಬ್ದಕ್ಕರ್ಥ. ಆ ಅಘಾತವಾಗಿರ್ಪ ಸಂಸಾರ ವಿಷಯ ಜಲದಲ್ಲಿ ಕ್ರೀಡಿಸುತ್ತಿರ್ದ ಮಾಯೆಯೆಂಬ ಮೊಸಳೆ ತನುವೆಂಬ ತೀರದಲ್ಲಿ ನಿಂದು ಜಲವ ಸಾಧಿಸಿಹನೆಂಬ ಜ್ಞಾನಿಗಳ ನಿಲಲಿಸದೆ ಘಾಸಿ ಮಾಡಿ ಪರಿಭವದಲ್ಲಿ ಸಂಹರಿಸಲು ಜಯಸುವರಿಲ್ಲ ವೆಂಬುದೀಗ, ಮಡುವಿನ ಮೊಸಳೆ ತಡಿಯಲ್ಲಿ ಆರನು ನಿಲಲಿಸದೆ ಕಡಿದು ನುಂಗಿ ಹುದಿನ್ನೇವೆ ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆಯ ಹಿಡಿದು ಸಂಸಾರ ವಿಷಯ ರಸದ ಮಡುವನೊಡದು ಆಶಾಗ್ನಿಯ ನಷ್ಟವ ಮಾಡುವ ಜ್ಞಾನಿಗಳ ಪೂರ್ವ ವೆಂಬುದೀಗ, ಮೊಸಳೆಯ ಹಿಡಿವರ ಕಾಣೆ ಮಡುವಗೊಡುವರ ಕಾಣೆ ಹೋಮವ ಕೆಡಿಸುವರ ಕಾಣೆನೆಂಬ ಶಬ್ದಕ್ಕರ್ಥ. ಸಾತ್ವೀಕ ಗುಣಸಂಬಂಧವಾದ ಸೂಕ್ಷ್ಮ ತನುವಿನ ಇಂದ್ರಿಯದ್ವಾರದಲ್ಲಿ ನಿಂದು ವಿಷಯ ಪ್ರಪಂಚಿಗೀಡಾಗಿ ಸತ್ಪಥಮಾರ್ಗ ವನರಿಯನೆ ಭವದತ್ತ ಹೋಡರು ಸಕಲಾತ್ಮರು ಎಂಬುದೀಗ,ಮಾಧವನ ಮನೆಯ ಬಾಗಿಲಲ್ಲಿ ನಿಂದುಹೋದರು ಹೊಲಬುದಪ್ಪಿ ನಾರಾಯಣಪ್ರಿಯ್ಯ ರಾಮನಾಥಾ ಎಂಬ ಶಬ್ದಕ್ಕರ್ಥ.

೧೫

ಬಂದೆ ಹರಿಭಕ್ತನಾಗಿ ಬರುವಾಗ ನಾ ದಾಸನಾಗಿ
ಒಂಭತ್ತು ಜೋಳಿಯ ತಣ್ಣೀರ ಕಣಿತೆಯ ಹೊತ್ತು
ತಿತ್ತಿಗೆ ನೀರ ಕಾಣದೆ ಲೆಕ್ಕವಿಲ್ಲದ ನಾಮವ ನಿಕ್ಕಿದೆ
ಸುತ್ತಿ ಸುತ್ತಿ ಬಳಸಿದೆ ಹಿರಿಯಗರಿಯಹೆಕಂಣ
ಪಚ್ಚೆಯ ಕಣ್ಣ ಪಚ್ಚೆಯ ನಾಮವ ದೃಷ್ಟಿಯ ಮಧ್ಯದಲ್ಲಿಕ್ಕಿ
ಮತ್ತದರ ನಡುವೆ ನಿಶ್ಚಯದ ಬಿಳಿನಾಮವ ನಿಕ್ಕಿ
ಹೊತ್ತದಾಸಿಕೆ ಹುಸಿಯಾಯಿತ್ತು ದಾಸೋಹ ಎಂಬದ ನರಿಯದೆ,
ವೇಷ ಹುಸಿಯಾಯಿತ್ತು ನಾರಾಯಣ ಪ್ರಿಯ್ಯ ರಾಮನಾಥಾ !

**ಟೀಕು:—** ಹರಿ ಎಂದೊಡೆ ಪ್ರಾಣವಾಯು, ದೇಹಸಂಬಂಧಿಯಾದ ಆತ್ಮನು ವಾಯುವಿಂಗೆ ಆಧಾರವಾಗಿರ್ದ ಕಾರಣ ಬಂದೆ ಹರಿಭಕ್ತನಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪಾತ್ಮನು ದೇಹ ಸಂಬಂಧಿಯಾಗಿ ಬಂದಲ್ಲಿ ಆಶೆಯು ಮುಂದುಗೊಂಡಿರ್ದನೆಂಬುದೀಗ, ಬರುವಾಗ ನಾ ದಾಸನಾಗಿ ಎಂಬ ಶಬ್ದಕ್ಕರ್ಥ. ನವದ್ವಾರ ಯುಕ್ತವಾದ ದೇಹದಲ್ಲಿ ಸಂಸಾರ ವಿಷಯ ಜಲವ ತುಂಬಿಕೊಂಡು ದೇಹಭಾವ ತಾಳಿರ್ದನೆಂಬುದೀಗ, ಒಂಭತ್ತು ಜೋಳಿಯ ತಣ್ಣೀರ ಕಣಿತೆಯ ಹೊತ್ತು ಎಂಬ ಶಬ್ದಕ್ಕರ್ಥ. ಪಂಚ ಭೂತಾಶ್ರಯವಾದ ದೇಹದಲ್ಲಿ ತುಂಬಿಹೆನೆಂದೊಡೆ ಸದ್ವಿವೇಕ ಜಲವಿಲ್ಲದೆ ಹೋಯಿತ್ತೆಂಬುದೀಗ, ತಿತ್ತಿಗೆ ನೀರ ಕಾಣದೆ ಎಂಬ ಶಬ್ದಕ್ಕರ್ಥ. ಅಂತಪ್ಪಾತ್ಮನ ಆ ಮಾಯಾ-ದೇಹಂಗಳ ತಾಳಿದ್ದಲ್ಲಿ ಹಲವು ನಾಮವಾದ ಕಾರಣ ಲೆಕ್ಕವಿಲ್ಲದ ನಾಮವನಿಕ್ಕಿದೆನೆಂಬ ಶಬ್ದಕ್ಕರ್ಥ. ಎಂಭತ್ತುನಾಲ್ಕು ಲಕ್ಷ ಯೋನಿ ಚಕ್ರದಲ್ಲಿ ಹುಟ್ಟಿಬರುತ್ತಿರ್ದನೆಂಬುದೀಗ, ಸುತ್ತಿ ಸುತ್ತಿ ಬಳಸಿದೆನೆಂಬ ಶಬ್ದಕ್ಕರ್ಥ. ಅಂತು ಹುಟ್ಟಿ ಬರುತಿರ್ದ ಆತ್ಮನು ಜ್ಞಾನ ಕರ್ಮೇಂದ್ರಿಯಂಗಳಲ್ಲಿ ಸಂಬಂಧವಾದ ಅಜ್ಞಾನದೃಷ್ಟಿಯಲ್ಲಿರ್ದನೆಂಬುದೀಗ, ಹಿರಿಯಗರಿಮಹೆ ಕಣ್ಣನೆಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮಂಗೆ ಶಿವಜ್ಞಾನೋದಯವಾಗಲು, ಸಕಲ ಮಾಯಾ ಪ್ರಪಂಚ ನಿವೃತ್ತಿಯ ಮಾಡಿ ಶ್ರೀ ಗುರೋಪಾವಸ್ಥೆಯ ಮಾಡಲು ಶ್ರೀ ಗುರು ಕಾರುಣ್ಯದಿಂದ ತನ್ನಾಚಾರಾಂಗದಲ್ಲಿ ಇಷ್ಟಲಿಂಗ ಸಂಬಂಧವಾಯಿತ್ತೆಂಬುದೀಗ, ಪಚ್ಚೆಯ ಕಣ್ಣನೆಂಬ ಶಬ್ದಕ್ಕರ್ಥ. ಅಂತಪ್ಪ ಆಚಾರಾಂಗದಲ್ಲಿ ಸಂಬಂಧವಾದ ಇಷ್ಟಲಿಂಗದ ಚಿತ್ಕಳೆಯನು ಶರಣ ತನ್ನ ಸುಜ್ಞಾನ ದೃಷ್ಟಿಯಲ್ಲಿ ಪ್ರಾಣಲಿಂಗ ಸ್ವರೂಪವಾಗಿ ಧರಿಸಿದನೆಂಬುದೀಗ, ಪಚ್ಚೆಯ ನಾಮವ ದೃಷ್ಟಿಯ ಮಧ್ಯದಲ್ಲಿಕ್ಕಿ ಎಂಬ ಶಬ್ದಕ್ಕರ್ಥ. ಆ ಇಷ್ಟ-ಪ್ರಾಣ-ಏಕಾದ್ವೈತವಾದುದೆ ಭಾವಲಿಂಗ ಆ ಮಾಂಗಲ್ಯ ಸ್ವರೂಪವಾದ ಭಾವಲಿಂಗವನು ಶರಣ ತನ್ನ ಮಹಾಜ್ಞಾನ ಪ್ರಕಾಶದಲ್ಲಿ ಧರಿಸಿದನೆಂಬುದೀಗ, ಮತ್ತದರ ನಡುವೆ ನಿಶ್ಚಯದ ಬಳಿಯ ನಾಮವ ನಿಕ್ಕಿ ಎಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧ ಲಿಂಗಾಂಗ ಸಂಬಂಧ ಘಟಿಸಿದ ಶರಣನ ತನು-ಮನ-ಪ್ರಾಣೇಂದ್ರಿಯಂಗಳು ಮೊದಲಾದ ಅಜ್ಞಾನ ಪ್ರಪಂಚಿನ ವರ್ತ

ನೆಯ ಆಶೆ ನಿವೃತ್ತಿಯಾಯಿತ್ತೆಂಬುದೀಗ, ಹೊತ್ತ ದಾಸಿಕೆ ಹುಸಿಯಾಯಿತ್ತೆಂಬ ಶಬ್ದಕ್ಕರ್ಥ. ಇಂತು ಸಕಲ ಪ್ರಪಂಚ ನಿವೃತ್ತಿಯ ಮಾಡಿದ ಶರಣಂಗೆ ಸತಿ-ಪತಿ ಎಂಬುಭಯ ಭಾವವಳಿದು ಚಿತ್ ಪ್ರಕಾಶವಾದ ಚಿದ್‌ಘನಲಿಂಗದಲ್ಲಿ ಸಮರಸವನೆಯ್ದಲು ದೇಹಭಾವ ನಿವೃತ್ತಿಯಾಯಿತ್ತೆಂಬುದೀಗ, ದಾಸೋಹವೆಂಬುದನರಿಯದೆ ವೇಷ ಹುಸಿಯಾಯಿತ್ತು ನಾರಾಯಣಪ್ರಿಯ್ಯ ರಾಮನಾಥಾ ಎಂಬ ಶಬ್ದಕ್ಕರ್ಥ.

೧೬

ತುಳಸಿಯ ಗಿಡವ ಮೆಲಲಾರದೆ ಕಿವಿಯೊಳಗೆ ಇಕ್ಕಿದೆ,
ಕಲಸಿದ ನಾಮಕ್ಕೆ ಹಣೆಯ ಕಾಣದೆ ಎದೆಯೊಳಗಿಕ್ಕಿದೆ
ತಾವರೆಯ ಮಣಿಯ ತಾವಡಿಸುವದಕ್ಕೆ ಠಾವ ಕಾಣದೆ ಧಾವರಿಸುತ್ತಿದ್ದೆ
ಇದಕ್ಕಿನ್ನಾವುದು ಹದ ಎನಗೊಂದು ಭಾವವ ಹೇಳಾ—
ನಾರಾಯಣ ಪ್ರಿಯ್ಯ ರಾಮನಾಥಾ !

**ಟೀಕು:**— ಸದ್ವಾಸನಾನುಭಾವವನು ಸದ್ವಿವೇಕ ಮುಖದಿಂದ ಅವಗ್ರಹಿಸಿದ ಶರಣನು ಮತ್ತಂ ಅತ್ಮಾನುಭಾವಾಪೇಕ್ಷೆಯಿಂ ಜ್ಞಾನ ಗುರುಮುಖದಿಂದ ಸಹಿತ ಕರ್ಣದ್ವಾರದಲ್ಲಿ ಗ್ರಹಿಸುತ್ತಿರ್ದನೆಂಬುದೀಗ, ತುಳಸಿಯ ಗಿಡವ ಮೆಲಲಾರದೆ ಕಿವಿಯೊಳಗೆ ಇಕ್ಕಿದೆನೆಂಬ ಶಬ್ದಕ್ಕರ್ಥ. ಸದ್ವಿವೇಕಜಲ ಸಮ್ಮಿಶ್ರವಾದ ಮಂತ್ರಾತ್ಮಕವಪ್ಪ ಮಹಾ ಘನಲಿಂಗವು ಶಿವಾದ್ವೈತ ಭಕ್ತಿಯಲ್ಲಿ ಸಂಪೂರ್ಣವಾಗಲು ಅಂಗದಲ್ಲಿ ಅಭಿನ್ನ ಭಾವದಿಂ ಧರಿಸಿದ ಶರಣನೆಂಬುದೀಗ, ಕಲಸಿದ ನಾಮಕ್ಕೆ ಹಣೆಯ ಕಾಣದೆ ಎದೆಯೊಳಗಿಕ್ಕಿದೆನೆಂಬ ಶಬ್ದಕ್ಕರ್ಥ. ಇಂತಾಗಲು ಸರ್ವಾಚಾರ ಸಂಪತ್ತೆಂಬ ಮಣಿಮಾಲೆ ದೃಢ ಸೃಷ್ಟಿಯಲ್ಲಿ ಸಂಬಂಧವಾದ ಶರಣನು ಮತ್ತಂ ಸರ್ವಾಂಗದಲ್ಲಿ ಧರಿಸಿ ಆಚರಿಸಬೇಕೆಂದು ಅತ್ಯಂತ ಭಕ್ತ್ಯಾಪೇಕ್ಷೆಯ ಮುಂದುಗೊಂಡಿರ್ದನೆಂಬುದೀಗ, ತಾವರೆಯ ಮಣಿಯ ತಾವಡಿಸುವದಕ್ಕೆ ಠಾವಕಾಣದೆ ಧಾವರಿಸುತ್ತಿದ್ದೆನೆಂಬ ಶಬ್ದಕ್ಕರ್ಥ. ಈ ನಿರ್ಣಯವ ತಾನರಿದು ನಿರಹಂಭಾವದಿಂ ಇದರ ಕ್ರಮವಾವುದೆಂದು ಆ ಮಹಾನುಭಾವ ಎನಗೆ ನಿರೂಪಿಸೆಂದು ಜ್ಞಾನಗುರುವ ಬೆಸಗೊಳ್ಳುತ್ತಿರ್ದ ಶರಣನೆಂಬುದೀಗ, ಇದಕ್ಕಿನ್ನಾವುದು ಹದ ಎನಗೊಂದು ಹೇಳಾ ನಾರಾಯಣ ಪ್ರಿಯ್ಯ ರಾಮನಾಥಾ ಎಂಬ ಶಬ್ದಕ್ಕರ್ಥ.

೧೭

ಕೊಡಗದ ತಲೆಯ ಚಂಡಿನ ಮೇಲೆ ಮೂರು ಕವಲಿನ ಸೂಜಿ
ಮೂರರ ಮೊನೆಯಲ್ಲಿ ಐದು ಬೆಟ್ಟವಡಗಿದವು
ಬೆಟ್ಟದ ತುಟ್ಟ ತುದಿಯಲ್ಲಿ ಮೆಟ್ಟಿಲ್ಲದ ಬಾವಿ
ಬಾವಿಯೊಳಗೊಂದು ಹಾವು ಹುಟ್ಟಿತ್ತು

ಆ ಹಾವಿನ ಮೈಯೆಲ್ಲ ಬಾಯಿ, ಬಾಲದಲ್ಲಿ ಹೆಡೆ ಹುಟ್ಟಿ
ಬಾಯಲ್ಲಿ ಬಾಲಹುಟ್ಟಿ, ಹರಿವುದಕ್ಕೆ ಹಾದಿಯಿಲ್ಲದೆ,
ಕೊಂಬುದಕ್ಕೆ ಆಹಾರ ವಿಲ್ಲದೆ ಹೋಯಿತ್ತು
ಆ ಹಾವು ಬಾವಿಯ ಬಸುರಿನಲ್ಲಿ ಬಾವಿಯ ಬಸರೊಡದು
ಹಾವಿನಯಿಲು ನುಗ್ಗಿ ಬೆಟ್ಟ-ಚಿಪ್ಪು-ಬೇರಾಗಿ
ಸೂಜಿಯ ಮೊನೆಯ ಮುರಿದು ಕೊಡಗದ ಚಂಡು
ಮಂಡಿಯ ಬಿಟ್ಟು ಹಂಗು ಹರಿಯಿತ್ತು
ಆತ್ಮನೆಂಬ ಲಿಂಗ ನಾಮರೂಪು ಇಲ್ಲ
ನಾರಾಯಣ ಪ್ರಿಯ್ಯ ರಾಮನಾಥನಲ್ಲಿ ಶಬ್ದ ಮುಗ್ಧವಾದ
ಶರಣಂಗೆ !

**ಟೀಕು:—** ಸಂಕಲ್ಪ ರೂಪವಾದ ಮನೋವೃತ್ತಿಯ ಅಹಂಕಾರದಲ್ಲಿ ಗುಣ ತ್ರಯವನುಳ್ಳ ಅಜ್ಞಾನವಿರುತ್ತಿರ್ಪುದೆಂಬುದೀಗ, ಕೊಡಗದ ತಲೆಯ ಚಂಡಿನ ಮೇಲೆ ಮೂರು ಕವಲಿನ ಸೂಜಿ ಎಂಬ ಶಬ್ದಕ್ಕರ್ಥ. ಆ ಗುಣತ್ರಯಂಗಳ ಅಗ್ರ ದಲ್ಲಿ ಅಹಂಕಾರಯುಕ್ತವಾದ ಪಂಚ ಭೂತಂಗಳು ಅಡಗಿಹವೆಂಬುದೀಗ, ಮೂರರ ಮೊನೆಯಲ್ಲಿ ಐದು ಬೆಟ್ಟವಡಗಿದವೆಂಬ ಶಬ್ದಕ್ಕರ್ಥ. ಆ ಪಂಚಭೂತ ಸಮ್ಮಿಶ್ರವಾದ ದೇಹದಲ್ಲಿ ಆಚಾರಕ್ರಿಯೆಗಳಿಲ್ಲದ ಅಸಾಧ್ಯತರವಾದ ಅತಿ ವಿಷೋ ದಕದಂತಪ್ಪ ಸಂಸಾರ ವಿಷಯ ಕೂಪ ವಿಷವೆಂಬುದೀಗ, ಬೆಟ್ಟದ ತುದಿಯಲ್ಲಿ ಮೆಟ್ಟಿಲ್ಲದ ಬಾವಿ ಎಂಬ ಶಬ್ದಕ್ಕರ್ಥ. ಅಂತಪ್ಪ ವಿಷಯ ಕೂಪದಲ್ಲಿ ಶಂಕಾ ವಿಷ ಸಂಬಂಧಿಯಪ್ಪ ಜೀವನುದಯಿಸಿರುತ್ತಿಹುದೆಂಬುದೀಗ, ಭಾವಿಯೊಳಗೊಂದು ಹಾವು ಹುಟ್ಟಿತ್ತೆಂಬ ಶಬ್ದಕ್ಕರ್ಥ. ಆ ಜೀವನ ಸರ್ವಾಂಗದಲ್ಲಿ ಭಿನ್ನಾಪೇಕ್ಷೆ ಯುಂಟಾಗಿ ಭವಪಾಶದಲ್ಲಿ ದುರ್ವಿವೇಕ ಜನಿಸಿ ಆ ದುರ್ವಿವೇಕದಲ್ಲಿ ಭವಪಾಶವು ಉದಯಿಸಿ ಪ್ರಪಂಚು ಕ್ರೀಡೆಯಲ್ಲಿರುತ್ತಿಹುದೆಂಬುದೀಗ, ಆ ಹಾವಿನ ಮೈಯೆಲ್ಲ ಬಾಯಿ, ಬಾಲದಲ್ಲಿ ಹೆಡೆಹುಟ್ಟಿ ಎಂಬ ಶಬ್ದಕ್ಕರ್ಥ. ಇಂತಪ್ಪ ಜೀವನು ಚರಿಸು ವದಕ್ಕೆ ಸತ್ಪಥ ಮಾರ್ಗವಿಲ್ಲದೆ ಅನುಭವಿಸುವದಕ್ಕೆ ಪರಮಾಮೃತವಿಲ್ಲದ ಕಾರಣ ವಿಷಯಕೂಪದ ಪ್ರಪಂಚು ಗರ್ಭದಲ್ಲಿ ಜ್ಞಾನ ಚೇತನವಿಲ್ಲದೆ ಜೀವನ್ಮೃತವಾಯಿ ತ್ತೆಂಬುದೀಗ, ಹರಿವುದಕ್ಕೆ ಹಾದಿಯಿಲ್ಲದೆ ಕೊಂಬುದಕ್ಕೆ ಆಹಾರವಿಲ್ಲದೆ ಹೊಂದಿತ್ತು ಹಾವು ಬಾವಿಯ ಬಸುರಲ್ಲಿ ಎಂಬ ಶಬ್ದಕ್ಕರ್ಥ. ಈ ಭೇದ ವನರಿದು ನಿವೃತ್ತಿಮಾಡಿ ಸರ್ವಾಂಗಲಿಂಗ ಸಂಬಂಧಿಯಾದ ಶರಣಂಗೆ ವಿಷಯ ಕೂಪದ ಪ್ರಪಂಚು ಗರ್ಭವಳಿದು ಜೀವನ ಸಕಲ ಕರಣಂಗಳು ಕೆಟ್ಟು ಅಹಂಕಾರ ಯುಕ್ತವಾದ ಪಂಚಭೂತಂಗಳು ನಷ್ಟವಾಗಿ ಅಜ್ಞಾನಸ್ವರೂಪವಪ್ಪ ಗುಣತ್ರಯಂ ಗಳು ಭಗ್ನವಾಗಿ ಮನೋವೃತ್ತಿಯ ಅಹಂಕಾರ ತೊಲಗಿತ್ತೆಂಬುದೀಗ, ಬಾವಿಯ ಬಸುರೊಡೆದು ಹಾವಿನಾಯಿಲು ನುಗ್ಗಿ ಬೆಟ್ಟ ಚಿಪ್ಪು ಬೇರಾಗಿ ಸೂಜಿಯ ಮೊನೆ ಮುರಿದು ಕೊಡಗದ ಚಂಡು ಮಂಡೆಯುಬಿಟ್ಟು ಎಂಬ ಶಬ್ದಕ್ಕರ್ಥ. ಇಂತಪ್ಪ

ಶರಣಂಗೆ ಆವ ಪ್ರಪಂಚಿನ ತೋರಿಕೆ ಇಲ್ಲವೆಂಬುದೀಗ, ಹಂಗುಹರಿಯಿತ್ತೆಂಬ ಶಬ್ದಕ್ಕರ್ಥ. ಇಂತು ಸಕಲ ತತ್ವಂಗಳಳಿದು ಲಿಂಗದಲ್ಲಿ ನಿಶ್ಶಬ್ದವೇದಿಯಾದ ಶರಣಂಗೆ ಆತ್ಮನೆಂಬ ರೂಪು, ಲಿಂಗವೆಂಬ ನಾಮವಿಲ್ಲದೆ ಏಕಾರ್ಥವಾಗಿರ್ದನೆಂಬುದೀಗ, ಆತ್ಮನೆಂಬ ಲಿಂಗ ನಾಮರೂಪಿಲ್ಲದ ನಾರಾಯಣಪ್ರಿಯ್ಯ ರಾಮನಾಥನಲ್ಲಿ ಶಬ್ದಮುಗ್ಧವಾದ ಶರಣಂಗೆ ಎಂಬ ಶಬ್ದಕ್ಕರ್ಥ.

೧೮

ಐದು ಕೊಂಬಿನ ಮರನ ಏರಿ, ಮೂರು ಕಾಲಿನಲ್ಲಿ ಮೆಟ್ಟಿ ನಿಂದು
ಎಲೆಯು ಮರೆಯು ಹಣ್ಣು ಕೊಯಿದಡೆ ಕೊಂಬ ಕೊಯ್ಯಲಿಸದು
ನೋಡಾ
ಮತ್ತೆ ಇಳಿವಡೆ ಮರನಿಲ್ಲ, ಹಿಡಿವಡೆ ಕೊಂಬಿಲ್ಲ, ಹರಿವಡೆ ಹಂಣಿಲ್ಲ,
ಈ ಗುಣ ಮರದ ಮರವೆಯೊ ಇದನರಿದವಂಗಲ್ಲದೆ
ಒಡಗೂಡಲಿಲ್ಲ ನಾರಾಯಣ ಪ್ರಿಯ್ಯ ರಾಮನಾಥ !

ಟೀಕು:— ಪಂಚೇಂದ್ರಿಯವೆಂಬ ಶಾಖೆಯನುಳ್ಳ ತನುವೆಂಬ ವೃಕ್ಷವನಡರಿ ಕರ್ಮಜ್ಞಾನ ಭಾವಾಚರಣಂಗಳಿಂ ಸ್ವಸ್ಥನಾಗಿ ಆಚಾರವ ಮರೆಗೊಂಡಿರ್ಪ ಮುಕ್ತಿಫಳವ ಕೃತ ನಿಶ್ಚಯ ಹಸ್ತದಿಂದ ಇದಿರಿಟ್ಟು ಗ್ರಹಿಸಿಹೆನೆಂದೊಡೆ ಎಂಬುದೀಗ, ಐದು ಕೊಂಬಿನ ಮರನ ಏರಿ ಮೂರುಕಾಲಿನಲ್ಲಿ ಮೆಟ್ಟಿನಿಂದು ಎಲೆಯ ಮರೆಯ ಹಣ್ಣ ಕೊಯಿದಿಹೆನೆಂದೊಡೆ ಎಂಬ ಶಬ್ದಕ್ಕರ್ಥ. ಇಂತವಗ್ರಹಿಸಿಹೆನೆನಲು ಇಂದ್ರಿಯಂಗಳು ಕಂಟಕವಾಗಿಹವೆಂಬುದೀಗ, ಕೊಂಬು ಕೊಯ್ಯಲಿಸದು ನೋಡಾ ಎಂಬ ಶಬ್ದಕ್ಕರ್ಥ. ಆ ಇಂದ್ರಿಯಂಗಳು ಮುಕ್ತಿಫಳವ ಗ್ರಹಿಸಲಿಸವೆಂದು ತನುವ ನಿಗ್ರಹಿಸಿ ಕಳೆದು ಶಿವತತ್ವವ ಸಾಧಿಸಿಹೆನೆಂದೊಡೆ ಅಂಗದಿಂದಲ್ಲದೆ ಲಿಂಗವು ಸಾಧ್ಯವಾಗದೆಂಬುದೀಗ, ಇಳಿವಡೆ ಮರನಿಲ್ಲವೆಂಬ ಶಬ್ದಕ್ಕರ್ಥ. ಇಂತು ಅಂಗವ ನಿಗ್ರಹಿಸಿ ಇಂದ್ರಿಯಂಗಳ ಮುಖದಿಂದ ಲಿಂಗವ ಗ್ರಹಿಸಿಹೆನೆಂದೊಡೆ ಅನುಕೂಲವಾಗದೆಂಬುದೀಗ, ಹಿಡಿವಡೆ ಕೊಂಬಿಲ್ಲವೆಂಬ ಶಬ್ದಕ್ಕರ್ಥ. ಹೀಗೆ ಇಂದ್ರಿಯಂಗಳ ಸಂಗತವಾಗಲು ಮುಕ್ತಿ ಫಳವ ಕೃತ ನಿಶ್ಚಯ ಹಸ್ತದಿಂ ಗ್ರಹಿಸಿಹೆನೆನಲು ಅಸಾಧ್ಯವಾಗಿರ್ಪುದೆಂಬುದೀಗ, ಹರಿವಡೆ ಹಣ್ಣಿಲ್ಲವೆಂಬ ಶಬ್ದಕ್ಕರ್ಥ. ಹೀಗಿದಿರಿಟ್ಟು ಲಿಂಗವ ಗ್ರಹಿಸಿಹೆನೆಂದೊಡೆ ತನು-ಮನಂಗಳ ಅಜ್ಞಾನ ಭ್ರಾಂತಳಿದು ಸರ್ವಾಂಗಲಿಂಗ ಸಂಬಂಧವನರಿದ ಶರಣಂಗಲ್ಲದೆ ಮುಕ್ತಿಫಳ ಸಾಧ್ಯವಾಗಿ ತತ್ಸಂಗಯೋಗ ಸಮರಸಾನುಭಾವ ಘಟಿಸದೆಂಬುದೀಗ, ಈ ಗುಣದ ಮರವೆಯೊ ಮನದ ಮರವೆಯೊ ಇದನರಿದವಂಗಲ್ಲದೆ ಒಡಗೂಡಲಿಲ್ಲ ನಾರಾಯಣಪ್ರಿಯ್ಯ ರಾಮನಾಥ ಎಂಬ ಶಬ್ದಕ್ಕರ್ಥ.

೧೯

ನಾಯ ನರಿಯ ಮಧ್ಯದಲ್ಲಿ ನಾರಿವಾಳದ ಸಸಿ ಹುಟ್ಟಿತ್ತು
ಐದು ಗೇಣಿನುದ್ದ ಎಂಟು ಗೇಣಿನ ವಿಸ್ತೀರ್ಣ,

ಆದರ ಬೇರು ಪಾತಾಳಕ್ಕಿಳಿಯಿತ್ತು;
ಬೇರಿನ ಮೊನೆ ನೀರ ತಂದಿತ್ತು, ನೀರ ತಾಗಿ ಮರ ನೊಡಯಿತ್ತು,
ಮಟ್ಟೆ ಇಪ್ಪತ್ತೈದಾಗಿ ಹೊಂಬಾಳೆ ಬಿಟ್ಟಿತ್ತು,
ಹದಿನಾರು ವಲಯದಲ್ಲಿ ಕಾಯಿ ಬಲಿದವು,
ಮೂರು ದೆಸೆಯಲ್ಲಿ ಆ ಮರ ಹತ್ತಿ ಕಾಯ ಕೆಡಹುವರಿಲ್ಲ,
ವಾಯ ವಾಯಿತ್ತು ಮರಹುಟ್ಟಿ ಮರದ ಕೆಳಗಿದ್ದು ಹಣ್ಣಿನ ಹಂಬಲು—
ಹರಿವುದ ನೋಡುತ್ತಿದ್ದೇನೆ ನಾರಾಯಣ ಪ್ರಿಯ್ಯ ರಾಮನಾಥಾ !

ಟೀಕು:— ಮಾಯಾಮಲಕ್ಕೆ ಇಚ್ಛೈಸುವ ತನುವೆಂಬುದೀಗ, ನಾಯ ಎಂಬ ಶಬ್ದಕ್ಕರ್ಥ. ಸಂಕಲ್ಪ-ವಿಕಲ್ಪ-ಕುಟಿಲ-ಕುಹಕವನುಳ್ಳ ಮನವೆಂಬುದೀಗ, ನರಿ ಎಂಬ ಶಬ್ದಕ್ಕರ್ಥ. ಇಂತಪ್ಪ ತನು ಮನಂಗಳ ಮಧ್ಯದಲ್ಲಿರ್ಪ ಆತ್ಮಂಗೆ ಸುಜ್ಞಾನೋದಯವಾದಲ್ಲಿ ಇಷ್ಟಾರ್ಥ ಸಿದ್ಧಿಯನು ಕೊಟ್ಟು ರಕ್ಷಿಸುವಲ್ಲಿ ಕಲ್ಪವೃಕ್ಷ ಸ್ವರೂಪಿನಿಂದ ಒಪ್ಪುತ್ತಿರ್ದ ಇಷ್ಟಬ್ರಹ್ಮ ಕರತಳದೊಳು ಉದಯವಾಯಿತ್ತೆಂಬುದೀಗ, ನಾಯನರಿಯ ಮಧ್ಯದಲ್ಲಿ ನಾರಿವಾಳದ ಸಸಿ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಆ ಇಷ್ಟಬ್ರಹ್ಮ ಪಂಚಾಚಾರ ಅಷ್ಟಾವರಣ ಸ್ವರೂಪವಾಗಿರ್ಪುದೆಂಬುದೀಗ, ಐದು ಗೇಣಿನುದ್ದ ಎಂಟು ಗೇಣಿನ ವಿಸ್ತೀರ್ಣವೆಂಬ ಶಬ್ದಕ್ಕರ್ಥ. ಆ ಸಗುಣ ಬ್ರಹ್ಮದ ಮೂಲಜ್ಞಾನ ಶರಣನ ನಿಜಾನು ಭಾವಾಂತರಂಗದಲ್ಲಿ ಭೇದಿಸಿಹುದೆಂಬುದೀಗ, ಅದರ ಬೇರು ಪಾತಾಳಕ್ಕೆ ಇಳಿಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಮೂಲಜ್ಞಾನದ ತುರಿಯಾನುಭಾವ ಸದ್ವಿವೇಕ ಜಲವ ಬಹಿರ್ಗತವ ಮಾಡಲದರ ಪರಮಾನಂದ ರಸ ಇಷ್ಟಲಿಂಗದಲ್ಲಿ ವೇದಿಸಲಾಗಿ ಶರಣನ ಪಂಚವಿಂಶತಿ ತತ್ವಂಗಳಲ್ಲಿ ಮಂತ್ರತತ್ವ ಸ್ವರೂಪಿನಿಂ ಶಾಖೆವರಿಯಿತ್ತೆಂಬುದೀಗ, ಬೇರಿನ ಮೊನೆ ತಂದಿತ್ತು ನೀರಿನ ಸಾರತಾಗಿ ಮರನೊಡಯಿತ್ತು ಮಟ್ಟೆ ಇಪ್ಪತ್ತೈದಾಗಿ ಎಂಬ ಶಬ್ದಕ್ಕರ್ಥ. ಆ ಸದ್ವಿವೇಕ ಲಿಂಗವು ಶರಣನ-ಅಂತರಂಗ-ಬಹಿರಂಗದಲ್ಲಿ ಷೋಡಶ ಭಕ್ತಿ ಸ್ವರೂಪಿನಿಂ ಪಲ್ಲವಿಸಿ ಪ್ರಭಾವಿಸಿತ್ತೆಂಬುದೀಗ, ಹೊಂಬಾಳೆ ಬಿಟ್ಟಿತ್ತು ಹದಿನಾರು ವಳಯದಲ್ಲಿ ಎಂಬ ಶಬ್ದಕ್ಕರ್ಥ. ಇಂತಾಗಲಾ ಶರಣನ ತನು ತ್ರಯಂಗಳಲ್ಲಿ ಪ್ರಸಾದ ತ್ರಯಂಗಳು ಫಲಿಸಿದವೆಂಬುದೀಗ, ಕಾಯಿ ಬಲಿದವು ಮೂರು ದೆಸೆಯಲ್ಲಿ ಎಂಬ ಶಬ್ದಕ್ಕರ್ಥ. ಇಂತಪ್ಪ ಸದ್ವಿವೇಕ ಲಿಂಗದಲ್ಲಿ ಸತ್ಕ್ರಿಯಾರೂಢರಾಗಿ ಪ್ರಸಾದ ತ್ರಯವ ಸಾಧ್ಯವ ಮಾಡಿಕೊಳಲರಿಯದವರು ಮಿಥ್ಯ ಭಾವಿಗಳಾದರೆಂಬುದೀಗ, ಆ ಮರನ ಹತ್ತಿ ಕಾಯಕೆಡಹುವರಿಲ್ಲ ವಾಯ ವಾಯಿತ್ತೆಂಬ ಶಬ್ದಕ್ಕರ್ಥ. ಇಂತು ಲಿಂಗೋದಯವಾಗಿ ತತ್ ಶಿವಾಚಾರದಲ್ಲಿದ್ದುರ್ ಪ್ರಸಾದ ತ್ರಯದ ಅಪೇಕ್ಷೆಯಿಲ್ಲದೆ ಫಲಪದವ ಬಯಸಿ ಭವವನೆಯ್ದುವರ ಕಂಡು ಆಶ್ಚರ್ಯಬಡುತ್ತಿರ್ದ ಶರಣನೆಂಬುದೀಗ, ಮರಹುಟ್ಟಿ ಮರದ ಕೆಳಗಿದ್ದುರ್ ಹಣ್ಣಿನ ಹಂಬಲು ಹರಿವುದ ನೋಡುತ್ತಿದ್ದೇನೆ ನಾರಾಯಣ ಪ್ರಿಯ್ಯ ರಾಮನಾಥಾ ಎಂಬ ಶಬ್ದಕ್ಕರ್ಥ.

೨೦

ನೀಲ ಮೇಘದ ಭೂಮಿಯಲ್ಲಿ ಕಾಲ ಗೂಳಿ ಹುಟ್ಟಿ
ಬಾಲ ಬಿಳಿದು, ಕಾಲು ಕೆಂಪು, ಅದರ ಕೋಡು ಕಾಳಕೂಟ
ಅದರ ಬಾಯಿ ಅಸಿಯ ಬಳಗ, ಅದರ ನಾಲಗೆ ಸಾಲು ಲೋಕದ ಸಂಹಾರ,
ಅದರ ನಾಸಿಕದ ವಾಸ ಶೇಷನ ಕಮಠನ ಆಶ್ರಯಿಸಿಹ ಕ್ಷೋಣಿಯ
ಇಂತಿವು ಉಸ್ವಾಸದಲ್ಲಿ ಆಡುವ ತುಂತುರು ಬಿಂದು ಇದರಂತುಕದಲ್ಲಿ ನಿಂದು
ಹೂಂಕರಿಸಲಾಗಿ ಅಡಗಿತ್ತು ಜಗ ಉಡುಗಿತ್ತು
ಆಕಾಶ ತಮ್ಮ ತಮ್ಮ ತೊಡಿಗೆಯ ಬಿಟ್ಟರು,
ಮೂರು ಜಾತಿ ಕುಲವರ್ಗ ಇಂತಿ ಗೂಳಿಯ ದೆಸೆಯಿಂದ
ಗೊಳಕಾಕಾರ ವಾದೆ ಗೋವಳ ಪ್ರಿಯ್ಯ ರಾಮನಾಥಾ !

**ಟೀಕು:**— ಅಖಂಡ ಜ್ಞಾನಛಾಯ ಮಾತ್ರವಪ್ಪ ಚಿದ್‌ಭೂಮಿಯಲ್ಲಿ ಪರಿಪೂರ್ಣ ಜ್ಞಾನ ಸ್ವರೂಪವಾದ ಸಜ್ಜೀವನು ಉದಯವಾದನೆಂಬುದೀಗ, ನೀಲ ಮೇಘದ ಭೂಮಿಯಲ್ಲಿ ಕಾಳಗೂಳಿ ಹುಟ್ಟಿ ಎಂಬ ಶಬ್ದಕ್ಕರ್ಥ. ಅಂತಪ್ಪ ಸಜ್ಜೀವನ ಭಕ್ತಿಪಾಶವೆಂಬ ಬಲಶುದ್ಧ ಸಾತ್ವೀಕ ಜ್ಞಾನ ಸ್ವರೂಪವಾಗಿ ಕ್ರಿಯಾಜ್ಞಾನ ಯೋಗಚರ್ಯಾ ಪಾದಂಗಳು ಸತ್ಕ್ರಿಯಾ ಸಂಬಂಧವಾಗಿಹವೆಂಬುದೀಗ, ಬಾಲ ಬಿಳಿದು ಕಾಲುಕೆಂಪು ಎಂಬ ಶಬ್ದಕ್ಕರ್ಥ. ಆ ಸಜ್ಜೀವನ ಚಿದಹಂಕಾರ—ನಿರಹಂಕಾರವೆಂಬ ಶೃಂಗಗಳು ಕಾಲ-ಕಾಮ-ಮಾಯೆ-ಮೋಹಾದಿಗಳಂ ಸುಟ್ಟುರುಹುವಲ್ಲಿ ಕಾಳಕೂಟವಾಪ್ಪುದೆಂಬುದೀಗ, ಅದರ ಕೋಡು ಕಾಳಕೂಟವೆಂಬ ಶಬ್ದಕ್ಕರ್ಥ. ಅಂತಪ್ಪ ಸಜ್ಜೀವನ ಸದ್ವಿವೇಕವೆಂಬ ಮುಖದ್ವಾರ ಸಕಲ ಪ್ರಪಂಚು ಛೇದಿಸುವಲ್ಲಿ ಜ್ಞಾನಮಯವಾಗಿಪ್ಪುದೆಂಬುದೀಗ, ಅದರ ಬಾಯಿ ಅಸಿಯ ಬಳಗವೆಂಬ ಶಬ್ದಕ್ಕರ್ಥ. ಆ ಜ್ಞಾನ ಕಲಾತ್ಮನ ಪರಮಾಮೃತ ರಸನೆ ಚತುರ್ದಶೇಂದ್ರಿಯ ಸಂಹಾರ ಕಾರಣವಾಗಿಪ್ಪುದೆಂಬುದೀಗ, ಅದರ ನಾಲಗೆ ಸಾಲು ಲೋಕದ ಸಂಹಾರವೆಂಬ ಶಬ್ದಕ್ಕರ್ಥ. ಆ ಚಿದಾತ್ಮನ ಸದ್ವಾಸನಾ ಸ್ವೀಕರವೆಂಬ ನಾಸಿಕದ ವಾಸ ಸತ್ ಪ್ರಣಮಂಧಾರವಪ್ಪ ಚಿದಾತ್ಮಲಿಂಗವನು ಆಶ್ರಯಿಸಿದ ಚಿತ್ ಪೃಥ್ವಿ ಸ್ವರೂಪವಾದ ಸತ್ಕ್ರಿಯಾಚಾರವಾಗಿಪ್ಪುದೆಂಬುದೀಗ, ಅದರ ನಾಸಿಕದ ವಾಸಶೇಷನ ಕಮಠನ ಆಶ್ರಯಿಸಿಹ ಕ್ಷೋಣಿ ಎಂಬ ಶಬ್ದಕ್ಕರ್ಥ ಇಂತಪ್ಪ ಸದಾಚಾರ ಸಂಪತ್ತುಗಳು ಆ ಸಜ್ಜೀವನ ಇಡ–ಪಿಂಗಳ ದ್ವಾರದಲ್ಲಿ ಚರಿಸುವ ಪ್ರಾಣವಾಯು ವಿಕಾರವಳಿದು ಪ್ರಣಮನಾದ ಚೈತನ್ಯ ಸ್ಫುರಣೆಯಿಂ ತೋರುವ ಜ್ಞಾನಾಗಮ್ಯ ತರಳಳಿದು ಲಿಂಗದಲ್ಲಿ ಏಕಾರ್ಥವಾಗಿ ತನುಕ್ರಿಯ ಸಂಬಂಧವಾದ ಸಕಲ ತತ್ವಕರಣಂಗಳ ಪೂರ್ವಾಕ್ರಿಯವಳಿದು ಚಿದ್‌ಘನಲಿಂಗದಲ್ಲಿ ಸಮರಸೈಕ್ಯವಾದವೆಂಬುದೀಗ, ಇದರಂತುಕದಲ್ಲಿ ನಿಂದು ಹೂಂಕರಿಸಲಾಗಿ

ಅಡಗಿತ್ತು ಜಗವು ಉಡುಗಿತ್ತು ಆಕಾಶ ತಮ್ಮ ತಮ್ಮ ತೊಡಿಗೆಯು ಬಿಟ್ಟರು ಮೂರು ಜಾತಿ ಕುಲವರ್ಗವೆಂಬ ಶಬ್ದಕ್ಕರ್ಥ. ಇಂತಪ್ಪ ಸ್ವರೂಪವಾದ ಶರಣ ನಿಂದ ನಿರಾಕಾರವಾದ ನಿಷ್ಕಲ ಬ್ರಹ್ಮವು ಸಾಕಾರವಾಗಿ ಭಕ್ತಿಲೀಲೆಯ ನಟಿಸುತ್ತಿ ರ್ದುದರಿಂದ ಲಿಂಗಕ್ಕೆ ಶರಣನೆ ಅಧಿಕಾರಿ ಎಂಬುದೀಗ, ಇಂತಿ ಗೂಳಿಯ ದೆಸೆ ಯಿಂದ ಗೊಳಕಾಕಾರವಾದೆ ಗೋವಳಪ್ರಿಯ ರಾಮನಾಥಾ ಎಂಬ ಶಬ್ದಕ್ಕರ್ಥ.

೨೧

ಕೋಳಿಯ ಗಂಟಲ ನಾಯಿ ಕಡಿವುತ್ತಿರೆ,
ನಾಯ ಹಲ್ಲ ಮುರಿದ ಪರನಾಯ ಸಹೋದರವಂತ ಕೋಳಿಯ
ಕೊರಳು ಉಳಿಯಿತ್ತು
ಕೋಳಿ ಸತ್ತಿತ್ತು, ನಾಯಿ ನಾತಿತ್ತು ಇಂತಿವ ಹೇಳ ಬಂದವನ
ವಿಷಾಳಿ ನುಂಗಿತ್ತು ನಾರಾಯಣ ಪ್ರಿಯ್ಯ ರಾಮನಾಥಾ !

**ಟೀಕು:—** ಕುಕ್ಕುಟನು ಪ್ರಾತಃಕಾಲದಲ್ಲೆದ್ದು ವಿಶ್ವವೆಲ್ಲಕ್ಕು ಉದಯ ದರಿವ ನೆಚ್ಚರಿಸಿ ಧ್ವನಿಮಾಡುವ ಹಾಗೆ, ಮೂಲ ಜ್ಞಾನದಿಂದ ಎಚ್ಚತ್ತು ಸಕಲ ತತ್ವಂಗಳಿಗರಿವ ಪ್ರಭಾವಿಸಿ ಶಿವೋಽಹಂ-ಶಿವೋಽಹಂ ಎಂದು ಧ್ವನಿಗೆಯ್ವ ಜ್ಞಾನ ಕಲಾತ್ಮನ ದೃಢಕಂಠವ ಅಜ್ಞಾನ ಸ್ವರೂಪವಾದ ಜೀವನವ ಗ್ರಹಿಸುತ್ತಿರಲಾಗಿ ಅದೀಗ, ಕೋಳಿಯ ಗಂಟಲ ಕಾಳನಾಯಿ ಕಡಿವುತ್ತಿರೆ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಅಹಂ-ಮಮತೆಯನುಳ್ಳ ಕರಣ ಮಥನದಂತಂಗಳ ಪರನಾಯಿ ಎಂದೊಡೆ ಸಜ್ಜೀವನೆಂಬರ್ಥ. ಸಹೋದರನೆಂದೊಡೆ ಪರಮಾತ್ಮನೆಂಬರ್ಥ. ಅದೆಂತೆಂದೊಡೆ, ಎರಡೂ ಚಿದಾಂಶೀ ಭೂತವಪ್ಪುದರಿಂದ ದೇಹ-ಪ್ರಾಣ ಸ್ವರೂಪ ವಾದ ಕಾರಣ ಆ ಪರಮಾತ್ಮನರಿದು ನಷ್ಟವ ಮಾಡಿದನೆಂಬುದೀಗ, ನಾಯಹಲ್ಲ ಮುರಿದ ಪರನಾಯ ಸಹೋದರವಾತನೆಂಬ ಶಬ್ದಕ್ಕರ್ಥ. ಇಂತಾಗೆ ಜ್ಞಾನಕಲಾ ತ್ಮನ ಶಿವೋಽಹಂ ಎಂಬ ದೃಢಕಂಠವಳಿಯದೆ ಸತ್ಕ್ರಿಯುಳ್ಳವಶೇಷವಾದ ಕಾರಣ ಜ್ಞಾನಕಲಾತ್ಮನು ನಿಜೈಕ್ಯವಾಗಲು ಆ ಜೀವಭಾವವಳಿಯಿತ್ತೆಂಬುದೀಗ, ಕೋಳಿಯ ಕೊರಳು ಉಳಿಯಿತ್ತು, ಕೋಳಿ ಸತ್ತಿತ್ತು, ನಾಯಿನಾತಿತ್ತೆಂಬ ಶಬ್ದ ಕ್ಕರ್ಥ. ಈ ಭೇದವನರಿದು ನಿರೂಪಿಸುವವಕ್ಕೋಸ್ಕರ ಪ್ರಸನ್ನವಾದ ಜ್ಞಾನ ಗುರುವ ಶರಣನ ಮಹಾಜ್ಞಾನಾಚಾರವ ಗ್ರಹಿಸಿತ್ತೆಂಬುದೀಗ, ಇಂತಿವನ ಹೇಳ ಬಂದವನ ವಿಷಾಳಿ ನುಂಗಿತ್ತು ನಾರಾಯಣಪ್ರಿಯ್ಯ ರಾಮನಾಥಾ ಎಂಬ ಶಬ್ದಕ್ಕರ್ಥ.

೨೨

ಕಾಲವನರಿವುದಕ್ಕೆ ಕೋಳಿಯಾಯಿತ್ತು,
ರುತುಕಾಲವ ನರಿವುದಕ್ಕೆ ಕೋಗಿಲೆಯಾಯಿತ್ತು,
ಶಾಖೆಯ ಲಂಘನೆಯ ಅರಿವುದಕ್ಕೆ ಗೋಲಾಂಗೋಲವಾಯಿತ್ತು,
ಕರಣದ ಮರಣ ಅರಿವುದಕ್ಕೆ ಮಲತ್ರಯ ದೂರನಾದ ನಾರಾಯಣ
ಪ್ರಿಯ್ಯ ರಾಮನಾಥಾ !

ಟೀಕು:— ಶರಣನ ಮೂಲಜ್ಞಾನವ ನೆಚ್ಚರಿಸಿಕೊಡಲೋಸ್ಕರವಾಗಿ ಆ ಪರಬ್ರಹ್ಮವೆ ಸತ್ಪ್ರಣವು ಸ್ವರೂಪವನೆಯ್ದಿತ್ತೆಂಬುದೀಗ, ಕಾಲವನರಿವುದಕ್ಕೆ ಕೋಳಿಯಾಯಿತ್ತೆಂಬ ಶಬ್ದಕ್ಕರ್ಥ. ಚಿತ್ಸ್ವರೂಪನಾದ ಶರಣನ ಅಂತರಂಗ-ಬಹಿರಂಗದ ಒಳಹೊರಗೆ ದಶಕುಳ, ಅಕ್ಷರ ಅಧಿದೇವತೆ ಮೊದಲಾದ ಸರ್ವವನು ಮಹಾಜ್ಞಾನ ಪ್ರಕಾಶವವಗ್ರಹಿಸಿಕೊಳಲು ಶಿವೋಹಂ-ಶಿವೋಹಂ ಎಂದು ಧ್ವನಿಗೆಯ್ಯುತ್ತಿಹುದೆಂಬುದೀಗ, ಋತು ಕಾಲವನರಿವುದಕ್ಕೆ ಕೋಗಿಲೆಯಾಯಿತ್ತೆಂಬ ಶಬ್ದಕ್ಕರ್ಥ. ಅಂಗಸ್ಥಲ ನಲವತ್ತು ನಾಲ್ಕು, ಲಿಂಗಸ್ಥಲ ಐವತ್ತೇಳು, ಪಿಂಡಾದಿ ಜ್ಞಾನ ಶೂನ್ಯಾಂತವಾದ ಸ್ಥಲ-ಕುಳಾದಿಗಳ ಅರುಹಿಸಿ ಕೊಡಲೋಸ್ಕರವಾಗಿ ಷಟಸ್ಥಲ ಜ್ಞಾನಸ್ವರೂಪವಾಯಿತ್ತು ಪರಬ್ರಹ್ಮವೆಂಬುದೀಗ, ಶಾಖೆಯು ಲಂಘನೆಯ ನರಿವುದಕ್ಕೆ ಗೊಲಾಂಗೊಲವಾಯಿತ್ತೆಂಬ ಶಬ್ದಕ್ಕರ್ಥ. ಸಕಲ ಕರಣಂಗಳೆಲ್ಲ ಜ್ಞಾನಕರಣಂಗಳಾಗಿ ಅಮರ ಗಣ ತತ್ವವ ನೆಯ್ದಿ ಚಿದ್ಘನಲಿಂಗದಲ್ಲಿ ಸಮರಸೈಕ್ಯವಾಗಲು ಅಣವಾದಿ ಮಲತ್ರಯಕ್ಕೆ ದೂರವಾದನೆಂಬುದೀಗ, ಕರಣದ ಮರಣವ ನರಿವುದಕ್ಕೆ ಮಲತ್ರಯ ದೂರನಾದ ನಾರಾಯಣ ಪ್ರಿಯ್ಯ ರಾಮನಾಥಾ ಎಂಬ ಶಬ್ದಕ್ಕರ್ಥ.

## ಸುಂಕದ ಬಂಕಣ್ಣನವರ ವಚನಗಳು

೧

ಕಾಳಕೂಟದ ತತ್ತಿಯಲ್ಲಿ ಒಂದು ಕೋಳಿ ಹುಟ್ಟಿತ್ತು
ಹಾರುವದಕ್ಕೆ ಗರಿಯಿಲ್ಲ, ಓಡುವದಕ್ಕೆ ಕಾಲಿಲ್ಲ,
ನೋಡುವದಕ್ಕೆ ಕಣ್ಣಿಲ್ಲ, ಕೂಗುವದಕ್ಕೆ ಬಾಯಿಲ್ಲ
ಒಂದೇ ಅದೆ ಅದ ಕೂಗುವಾಗ ಜಾವವಳಿದು,
ದಿನಸತ್ತು ಮಾಸ ತುಂಬುವದನರಿತಲ್ಲದೆ ದಿನ ನಾಶವೆಂದು ಕೂಗುತ್ತದೆ
ಕೂಗಿನ ಧೆನಿಯ ಕೇಳಿ ಬೆಳಗಾಯಿತ್ತು,
ಜಗ ಸುಂಕದೊಡೆಯ ಬಂಕೇಶ್ವರಲಿಂಗಾ !

ಟೀಕು:— ಅಜ್ಞಾನ ಸ್ವರೂಪವಾದ ದೇಹದಲ್ಲಿ ಎಂಬುದೀಗ, ಕಾಳಕೂಟದ ತತ್ತಿಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ಶಿವ ಕೃಪೆಯಿಂದ ಸಮ್ಯಜ್ಞಾನೋದಯವಾಗಲು ಆ ಸಮ್ಯ ಜ್ಞಾನದ ಮಧ್ಯದಲ್ಲಿ ಸತ್ ಪ್ರಣವು ಉದಯವಾಯಿತ್ತೆಂಬುದೀಗ, ಒಂದು ಕೋಳಿ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಆ ಸತ್ ಪ್ರಣವಕ್ಕೆ ಪ್ರಪಂಚಿಂಬರಕ್ಕೆ ಇಲ್ಲವೆಂಬುದೀಗ, ಹಾರುವದಕ್ಕೆ ಗರಿ ಇಲ್ಲವೆಂಬ ಶಬ್ದಕ್ಕರ್ಥ. ಆ ಸತ್ಪ್ರಣಮಕ್ಕೆ ಭಿನ್ನ ಕ್ರಿಯಾಚಾರವಿಲ್ಲವೆಂಬುದೀಗ, ಓಡುವದಕ್ಕೆ

ಕಾಲಿಲ್ಲ ಎಂಬ ಶಬ್ದಕ್ಕರ್ಥ. ಅಂತಪ್ಪ ಸತ್ಪ್ರಾಣಮುಕ್ಕೆ ಭಿನ್ನ ಜ್ಞಾನದೃಷ್ಟಿ ಇಲ್ಲವೆಂಬುದೀಗ, ನೋಡುವದಕ್ಕೆ ಕಣ್ಣಿಲ್ಲವೆಂಬ ಶಬ್ದಕ್ಕರ್ಥ. ಅಂತಪ್ಪ ಸತ್ಪ್ರಾಣಮುಕ್ಕೆ ಭಿನ್ನಾಪೇಕ್ಷೆ ಇಲ್ಲವೆಂಬುದೀಗ, ಕೂಗುವದಕ್ಕೆ ಬಾಯಿಲ್ಲವೆಂಬ ಶಬ್ದಕ್ಕರ್ಥ. ಸಕಲ ಪ್ರಪಂಚು ನಾಸ್ತಿಯಾಗಿ ಶರಣನ ಒಳಹೊರಗೆ ಪರಿಪೂರ್ಣವಾಗಿ ತೊಳಗಿ ಬೆಳಗುತ್ತಿಹುದು ಚಿತ್ಪ್ರಾಣಮುವೆಂಬುದೀಗ, ಒಂದೇ ಅದೆ ಎಂಬ ಶಬ್ದಕ್ಕರ್ಥ. ಆ ಚಿತ್ ಪ್ರಾಣವು ಜ್ಞಾನವಿಡಿದು ಶಿವೋಹಂ-ಶಿವೋಹಂ ಎಂದು ಧ್ವನಿಗೈಯ್ಯುತ್ತಿರಲು ಶರಣಂಗೆ ದಿನ-ಕಾಲ-ಕಲ್ಪಿತಂಗಳೆಲ್ಲವು ನಷ್ಟವಾದವೆಂಬುದೀಗ, ಅದು ಕೂಗುವಾಗ ಜಾವವಳಿದು ದಿನ ಸತ್ತಿತ್ತೆಂಬ ಶಬ್ದಕ್ಕರ್ಥ. ಪರಿಪೂರ್ಣಜ್ಞಾನ ಸಂಪೂರ್ಣವಾದ ಭೇದವನರಿತು ಸಕಲ ಪ್ರಪಂಚ ನಿವೃತ್ತಿಯು ಮಾಡಿ ಶ್ರೀ ಗುರು ಕಾರುಣ್ಯದಿಂದ ಸರ್ವಾಂಗಲಿಂಗ ಸಂಬಂಧ ಘಟಿಸಲು ದಿನಕಲ್ಪಿತ ನಾಶವಾಗಿ ಶಿವೋಹಂ-ಶಿವೋಹಂ ಎಂಬ ಧ್ವನಿಯಿಂದ ಶರಣನ ಒಳಹೊರಗೆ ಸರ್ವಾಂಗವೆಲ್ಲವೂ ಜ್ಞಾನಪ್ರಕಾಶವಾಯಿತ್ತೆಂಬುದೀಗ, ಮಾಸತುಂಬುವದನರಿತಲ್ಲದೆ ದಿನ ನಾಶವೆಂದು ಕೂಗುತ್ತದೆ ಕೂಗಿನ ಧ್ವನಿ ಕೇಳಿ ಬೆಳಗಾಯಿತ್ತು ಜಗದ ಸುಂಕದೊಡೆಯ ಬಂಕೇಶ್ವರಾ ಎಂಬ ಶಬ್ದಕ್ಕರ್ಥ.

೨

ಕಟ್ಟಿದುದೇನು ಕಂಕುಳೊಳಗೆ, ಹೊತ್ತುದುದೇನು ಮುಂಡೆಯ ಮೇಲೆ,
ಕೈಯೊಳಗಣ ಹೊರೆಯ ಬಿಟ್ಟು ತೋರಿ ಕೆಡದಿಹರೆ,
ಜಗದೊಡೆಯನ ಬಿಟಕೊಳ್ಳಿ ಬಂಕೇಶ್ವರ ಲಿಂಗಾ !

**ಟೀಕು:**— ಕಾರಣ ತನು ಸಂಬಂಧವಾದ ಭಾವ. ಅಂತಪ್ಪ ಸದ್ಭಾವದಲ್ಲಿ ಸಂಬಂಧವಾದ ತೃಪ್ತಿಲಿಂಗದ ನಿಜಸ್ವರೂಪವನು ಮಹಾ ಜ್ಞಾನ ಗುರುಮುಖದಿಂದ ಅರಿ ಎಂಬುದೀಗ, ಕಟ್ಟಿದುದೇನು ಕಂಕುಳೊಳಗೆ ಎಂಬ ಶಬ್ದಕ್ಕರ್ಥ. ಶರಣ ತನ್ನ ಸುಜ್ಞಾನ ಪ್ರಕಾಶದ ಮಧ್ಯದಲ್ಲಿ ಚೈತನ್ಯ ಸ್ವರೂಪವಾಗಿರ್ಪ ಪ್ರಾಣಲಿಂಗದ ನಿಜಸ್ವರೂಪವನು ಶಿಕ್ಷಾ ಗುರು ಮುಖದಿಂದ ಅರಿ ಎಂಬುದೀಗ, ಹೊತ್ತುದುದೇನು ಮುಂಡೆಯ ಮೇಲೆ ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಸತ್ಕ್ರಿಯಾ ಹಸ್ತದಲ್ಲಿ ಸಂಬಂಧವಾದ ಸದಾಚಾರ ಸಂಪತ್ತಿನ ಪುತ್ರಸ್ವರೂಪಿನಿಂದೊಪ್ಪುವ ಇಷ್ಟಲಿಂಗದ ನಿಜ ಸ್ವರೂಪವನು ಕರತಲಾಮಲಕವಾಗಿ ದೀಕ್ಷಾ ಗುರು ಮುಖದಿಂದ ಅರಿದನೆಂಬುದೀಗ, ಕೈಯೊಳಗಣ ಹೊರೆಯ ಬಿಟ್ಟು ತೋರು ಎಂಬ ಶಬ್ದಕ್ಕರ್ಥ. ಇಂತಪ್ಪ ತ್ರಿವಿಧ ಲಿಂಗಾಂಗ ಸಂಬಂಧವಾದ ಭಕ್ತ ಜನಂಗಳಿಗೆ ಜನನ ಮರಣಗಳೆಂಬ ಅನಿತ್ಯ ಭಾವವಿಲ್ಲದೆ ಹೋಯಿತ್ತೆಂಬುದೀಗ, ಕೆಡದಿಹರೆ ಎಂಬ ಶಬ್ದಕ್ಕರ್ಥ. ಅಂತಪ್ಪ ನಿತ್ಯವಾದ ಸದ್ಭಕ್ತರು ನಿತ್ಯತ್ವವನೆಯ್ದುವ ಶ್ರೀಗುರುವಿನ ಬೋಧಾಮೃತ ರಸವಪ್ಪ ಪಂಚಾಕ್ಷರಿ ಮಂತ್ರ ಸಂಬಂಧವ ಸರ್ವಾಂಗದಲ್ಲಿ ತಿಳಿದನೆಂಬುದೀಗ, ಜಗದೊಡೆಯನ ಬಿಟಕೊಳ್ಳಿ ಬಂಕೇಶ್ವರ ಲಿಂಗಾ ಎಂಬ ಶಬ್ದಕ್ಕರ್ಥ.

೩

ಹೊರವಾರು ಉಭಯ ಮಾರ್ಗವಳವಾರು--
ಸ್ಥಲ ಕುಳವಿ ಸಂಚವಿಲ್ಲ ಎಂದು ಕೊಟ್ಟಾ ಚೀಟು ನಿಮ್ಮ ಕೈಯ
ಹಾಳೆಯಲದೆ
ತಡೆಯೊಡೆಯಂಗೆ ಕುರುಹ ತೋರಿ ನಿಮ್ಮ ನಿಮ್ಮ ಹೊರೆಯ
ಕೊಂಡು ಹೋಗಿ,
ಜಗ ಸುಂಕದೊಡೆಯ ಬಂಕೇಶ್ವರ ಲಿಂಗದರಿಕೆಯಾಗಿ

**ಟೀಕು:**— ಸುಜ್ಞಾನ ಸ್ವರೂಪನಾದ ವೀರಮಾಹೇಶ್ವರನು ತನ್ನ ಆಚಾರಸ್ವರೂಪವಾದ ಷಡ್ವಿಧ ಚಿದಂಗದಲ್ಲಿ ಷಡ್ವಿಧ ಲಿಂಗವ ಧರಿಸಿ ಷಟುಸ್ಥಲ ಜ್ಞಾನಕ್ರೀವಿಡಿದು ಆಚರಿಸುತ್ತಿಹನೆಂಬುದೀಗ, ಹೊರವಾರು ಉಭಯ ಮಾರ್ಗವೆಂಬ ಶಬ್ದಕ್ಕರ್ಥ. ಇಂತಪ್ಪ ಮಾರ್ಗಕ್ರೀಯಿಂದ ಆಚರಿಸುತ್ತಿರ್ಪ ಶರಣನು ಸುಚಿತ್ತಾದಿ ಸದ್ಭಾವಂತ್ಯವಾದ ಷಡ್ವಿಧ ಹಸ್ತಂಗಳಲ್ಲಿ ಚೈತನ್ಯಸ್ವರೂಪವಾದ ಪ್ರಾಣಲಿಂಗ ಷಡ್ವಿಧ ಸಂಬಂಧವಾಗಿ ಮೀರಿದ ಕ್ರೀವಿಡಿದು ಆಚರಿಸುತ್ತಿರ್ಪನೆಂಬುದೀಗ, ಒಳವಾರು ಸ್ಥಳಕುಳವೆಂಬ ಶಬ್ದಕ್ಕರ್ಥ. ಇಂತಪ್ಪ ಶರಣಂಗೆ ಶ್ರೀಗುರು ಸಂಚಲ್ಯ ವ್ಯವಹಾರವ ಸುಜ್ಞಾನ ಬೋಧೆಯಿಂದ ಛೇದಿಸಿ ಷಡಕ್ಷರಿ ಮಂತ್ರೋಪದೇಶವನು ಅನಾಹತ ಕರ್ಣದ್ವಾರದಲ್ಲಿ ಬೋಧಿಸಿದನೆಂಬುದೀಗ, ನಿಸಂಚವಿಲ್ಲಾ ಎಂದು ಕೊಟ್ಟ ಚೀಟು ಎಂಬ ಶಬ್ದಕ್ಕರ್ಥ. ನಿಮ್ಮ ಎಂದೊಡೆ ಶರಣರು. ಸದ್ಭಾವಹಸ್ತ ಹಾಳೆಯೆಂದೊಡೆ ಶರಣನ ಆಚಾರಾಂಗ. ಆ ಮಂತ್ರಂಗಳು ಶರಣಂಗವವಗ್ರವಿಸಿದವೆಂಬುದೀಗ, ನಿಮ್ಮ ಕೈಯ ಹಾಳೆಯಲದೆ ಎಂಬ ಶಬ್ದಕ್ಕರ್ಥ. ತಡಿ ಎಂದೊಡೆ ಗುರು ಮಾರ್ಗಾಚಾರ. ಅಂತಪ್ಪ ಆಚಾರಕ್ಕೆ ಕರ್ತೃವಾದ ಶ್ರೀಗುರುವಿನಿಂದ ಇಷ್ಟಲಿಂಗದ ನಿಜಸ್ವರೂಪನ ನರಿ ಎಂಬುದೀಗ, ತಡಿಯೊಡೆಯಂಗೆ ಕುರುಹ ತೋರಾ ಎಂಬ ಶಬ್ದಕ್ಕರ್ಥ. ಜ್ಞಾನಕ್ರೀ ಆಚಾರ ಮುಂತಾದ ಸಕಲ ತತ್ವಂಗಳನು ಮಹಾಘನಲಿಂಗದಲ್ಲಿ ಏಕಾರ್ಥವ ಮಾಡಿ ಎಂಬುದೀಗ, ನಿಮ್ಮ ನಿಮ್ಮ ಹೊರೆಯ ಕೊಂಡುಹೋಗಿ ಜಗಸುಂಕದೊಡೆಯ ಬಂಕೇಶ್ವರ ಲಿಂಗದರಿಕೆಯಾಗಿ ಎಂಬ ಶಬ್ದಕ್ಕರ್ಥ.

೪

ಎಲ್ಲರ ಸುಂಕ ಎತ್ತು ತೊತ್ತು ಬಂಡಿ ಬಲ್ಲೆತ್ತು
ಎನ್ನ ಸುಂಕ ಎಲ್ಲರ ಪರಿಯಲ್ಲ ಕಟ್ಟಿದ ಕುರುಹಿಂಗೆ ಹಿಡಿದ
ವ್ರತನೇಮ ನಿತ್ಯಕ್ಕೆ ತಪ್ಪಲಿಲ್ಲ, ಎಂದು ಕೊಟ್ಟ ಚೀಟು ಸಿಕ್ಕಿಯವೆ
ನಿಮ್ಮಂಗದಲ್ಲಿ
ಭಕ್ತರಾಗಿ ಕಳವು ಹಾದರ ಮಿಕ್ಕಾದ ಒಂದು ಬೇಡಾ ಎಂದು
ಕೊಟ್ಟ ಚೀಟು
ವಿಶುದ್ಧಿ ಜಗ ಸುಂಕದೊಡೆಯ ಬಂಕೇಶ್ವರ ಲಿಂಗನೂ.

ಟೀಕು:— ಎಲ್ಲರ ಸುಂಕ ಜೀವ ಮಾಯಾಶಕ್ತಿ, ಅಂತರಾತ್ಮಾವೇಷ. ಇಂತಪ್ಪ ತತ್ವಂಗಳೊಡನೆ ತಾವು ಕೂಡಿರ್ದು ಲಿಂಗಕ್ಕೆ ಭಿನ್ನವಿಟ್ಟು ಕ್ರೀಗಳ ಮಾಡುತ್ತಿಹರೆಂಬುದೀಗ, ಎಲ್ಲರ ಸುಂಕ ಎತ್ತು ತೊತ್ತು ಬಂದಿ ಬಳ್ಳಿತ್ತು ಎಂಬ ಶಬ್ದಕ್ಕರ್ಥ. ಇದೀಗ ಭಿನ್ನ ಜ್ಞಾನಿಗಳ ವರ್ತನೆಯಂತಪ್ಪವಲ್ಲ ಶರಣನ ಚರಿತ್ರವೆಂತೆಂದೊಡೆ-ಶ್ರೀಗುರು ಕಾರುಣ್ಯದಿಂದ ಇಷ್ಟಲಿಂಗವ ಕರಸ್ಥಲದಲ್ಲಿ ಧರಿಸಿ ಆ ಲಿಂಗಕ್ಕೆ ಸತ್ಕ್ರೀಗಳ ಅನುಸರಣೆಯಿಲ್ಲದೆ ಹಿಡಿದ ವ್ರತನೇಮಂಗಳ ತಪ್ಪದೆ ಮಾಡಿ ಎಂಬುದೀಗ, ಎನ್ನ ಸುಂಕ ಎಲ್ಲರ ಪರಿಯಲ್ಲ ಕಟ್ಟಿದ ಕುರುಹಿಂಗೆ ಹಿಡಿದ ವ್ರತ ನೇಮ ನಿತ್ಯಕ್ಕೆ ತಪ್ಪಲಿಲ್ಲ ಎಂದು ಎಂಬ ಶಬ್ದಕ್ಕರ್ಥ. ಶ್ರೀಗುರು ಸರ್ವಾಂಗದಲ್ಲಿ ಸಂಬಂಧವ ಮಾಡಿದ ಮಂತ್ರ ಸ್ವರೂಪದ ತಿಳಿ ಎಂಬುದೀಗ, ಕೊಟ್ಟ ಚೀಟು ಸಿಕ್ಕಿಯದೆ ನಿಮ್ಮಂಗದಲ್ಲಿ ಎಂಬ ಶಬ್ದಕ್ಕರ್ಥ. ಸುಜ್ಞಾನಿಯಾದ ಬಳಿಕ ಪರರೊಡವೆ ಪರಸ್ತ್ರೀಯರು ಮುಂತಾದ ಪಂಚಮಹಾ ಪಾತಕಂಗಳ ಬಿಡೆಂದು ಶ್ರೀಗುರು ಬೋಧಿಸಿದನೆಂಬುದೀಗ, ಭಕ್ತರಾಗಿ ಕಳವು-ಹಾದರ ಬಿಕ್ಷಾನ್ನ ಒಂದು ಬೇಡ ಎಂದು ಕೊಟ್ಟ ಚೀಟು ವಿಶುದ್ಧಿಜನ ಸುಂಕದೊಡೆಯ ಬಂಕೇಶ್ವರಲಿಂಗನೂ ಎಂಬ ಶಬ್ದಕ್ಕರ್ಥ.

೫

ಮುತ್ತು ಮೊಲೆಯ ನುಂಗಿತ್ತು, ಮೊಲೆ ಅಬಲೆಯ ನುಂಗಿತ್ತು,
ಅಬಲೆಯ ಬಲೆಯಲ್ಲಿ ಬಲವಂತರೆಲ್ಲರೂ ಸಿಕ್ಕಿದರು,
ಸುಂಕಕ್ಕಡಹಿಲ್ಲ ಬಂಕೇಶ್ವರ ಲಿಂಗಾ !

ಟೀಕು:— ಪರಶಿವ ತತ್ವದಲ್ಲಿ ಬೆರಸಿ ಬೇರಿಲ್ಲದೆ ಒಂದೇ ಪರಬ್ರಹ್ಮ ಸ್ವರೂಪವಾಗಿರ್ಪುದೀಗ, ಮುಕ್ತಿ. ಅಂತಪ್ಪ ಮುಕ್ತಿಯು ಚಿದಾಮೃತ ರಸ ನಿಂದೊಪ್ಪುತ್ತಿರ್ದ ಕರಸ್ಥಲದ ಇಷ್ಟಲಿಂಗವ ಸಮಗ್ರಹಿಸಿತ್ತೆಂಬುದೀಗ, ಮುತ್ತು ಮೊಲೆಯ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಅಮೃತ ಕುಂಭ ಸ್ವರೂಪದಿಂದೊಪ್ಪುತ್ತಿರ್ದ ಇಷ್ಟಲಿಂಗವು ಚಿದ್ರೂಪವಾದ ಶರಣ ಸತಿಯು ಸಮಗ್ರಹಿಸಿತ್ತೆಂಬುದೀಗ, ಮೊಲೆ ಅಬಲೆಯ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಶರಣ ಸತಿ ಆಚರಿಸುವ ಭಕ್ತಿಮಾರ್ಗವೆಂಬುದೇ ಬಲೆ. ಆ ಬಲೆಯಲ್ಲಿ ನೈಷ್ಠಿಕಾಸಂಪನ್ನರಾದ ವೀರ ಮಾಹೇಶ್ವರರೆಲ್ಲರೂ ವಶೀಕೃತರಾಗಿಹರೆಂಬುದೀಗ, ಅಬಲೆಯ ಬಲೆಯಲ್ಲಿ ಬಲವಂತರೆಲ್ಲರು ಸಿಕ್ಕಿದರು ಎಂಬ ಶಬ್ದಕ್ಕರ್ಥ. ಅಂತಪ್ಪ ಭಕ್ತಿಯಿಂದ ಸಕಲ ಪದಾರ್ಥಂ ಲಿಂಗಾರ್ಪಿತವಾಗಿ ಬೀಗಿದ ಬಳಿಕ ಇನ್ನೇರದಿಟ್ಟು ಅರ್ಪಿಸುವದಕ್ಕೆ ತೆರಹಿಲ್ಲವೆಂಬುದೀಗ, ಸುಂಕಕ್ಕಡಹಿಲ್ಲ ಬಂಕೇಶ್ವರಲಿಂಗಾ ಎಂಬ ಶಬ್ದಕ್ಕರ್ಥ.

೬

ಕ್ರೀ ಎಂಬ ವ್ಯವಹಾರವ ಮಾಡುವಾಗ ಆಚಾರವೆಂಬ ಶೆಟ್ಟಿ ಕೊಂಬಲ್ಲಿ
ಆರವೆಂಬ ಸುಂಕ ಹುಟ್ಟಿತ್ತು; ತಲೆವಿಡಿ ಕೊಳುವಿಡಿ ಬಂದಿತ್ತು,

ಕ್ರಿಯೆ ಮಾರಿದವಂಗೆ, ಆಚಾರವ ಕೊಟ್ಟವಂಗೆ
ಉಭಯದ ಸುಂಕ ಸಿಕ್ಕಿತ್ತು ಬಂಕೇಶ್ವರ ಲಿಂಗದಲ್ಲಿ !

**ಟೀಕು:—** ಶ್ರೀಗುರು ಕಾರುಣ್ಯವ ಪಡೆದ ಶರಣನು ತನ್ನ ಆಚಾರಾಂಗ ದಲ್ಲಿರ್ದ ಇಷ್ಟಲಿಂಗಕ್ಕೆ ತ್ರಿಕಾಲಂಗಳಲ್ಲಿ ಅಷ್ಟ ವಿಧಾರ್ಚನೆ ಷೋಡಶೋಪಚಾರವ ಮಾಡುತ್ತಿರ್ದನೆಂಬುದೀಗ, ಕ್ರಿಯೆ ಎಂಬ ವ್ಯವಹಾರವ ಮಾಡುವಾಗವೆಂಬ ಶಬ್ದ ಕ್ಕರ್ಥ. ಸರ್ವಾಚಾರ ಸಂಪತ್ತಿನ ಪಾತ್ರ ಸ್ವರೂಪವಾದ ಇಷ್ಟಲಿಂಗವು ಚಿತ್ ಸ್ವರೂಪನಾದ ಶರಣ ಮಾಡುವ ಸತ್ಕ್ರಿಯೋಪಚಾರಂಗಳ ಭಕ್ತಿ ಮುಖದಿಂದ ಕೈಕೊಳ್ಳುತ್ತಿಹುದೆಂಬುದೀಗ, ಆಚಾರವೆಂಬ ಶೆಟ್ಟಿ ಕೊಂಬಲ್ಲಿ ಎಂಬ ಶಬ್ದಕ್ಕರ್ಥ. ಅಲ್ಲಿ ಲಿಂಗಾಂಗ ಸಂಬಂಧದ ಏಕಾರ್ಥವನರಿವ ಸುಜ್ಞಾನ ಪ್ರಭಾವಿಸಿತ್ತೆಂಬು ದೀಗ, ಅರಿವೆಂಬ ಸುಂಕ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಚಿದ್ರೂಪನಾದ ಶರಣನ ಪರಿಪೂರ್ಣಜ್ಞಾನ ಪ್ರಕಾಶದ ಮಧ್ಯದಲ್ಲಿ ಚಿದ್ರೂಪವಾದ ಪ್ರಾಣಲಿಂಗವ ಮೂರ್ತಿ ಗೊಂಡು ಶರಣನ ಅಭಿನ್ನ ಕ್ರಿಯಾಚಾರದಲ್ಲಿ ಸದ್ರೂಪವಾದ ಇಷ್ಟಲಿಂಗವು ಸಾಹಿತ್ಯ ವಾಯಿತ್ತೆಂಬುದೀಗ, ತಲೆ ಏದಿ ಕೊಳು ಏದಿ ಬಂದಿತ್ತೆಂಬ ಶಬ್ದಕ್ಕರ್ಥ. ತ್ರಿಸಂಧ್ಯಾಕಾಲದಲ್ಲಿ ಕಾಯದ ಕರಸ್ಥಲದೊಳಗೆ ತೊಳಗಿ ಬೆಳಗುವ ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳ ಮಾಡುತ್ತಿಹ ಶರಣನೆಂಬುದೀಗ, ಕ್ರಿಯಾಮಾರಿದವಂಗೆ ಎಂಬ ಶಬ್ದಕ್ಕರ್ಥ. ಆಚಾರ ಸನ್ನಹಿತವಾದ ಶರಣನ ಶರೀರಾದಿಪದಾರ್ಥಂಗಳನು ಭಕ್ತಿ ಮುಖದಲ್ಲಿ ಕೈಕೊಂಡು ಸ್ವೀಕರಿಸುತ್ತಿಹುದು ಮಹಾಘನಲಿಂಗವೆಂಬುದೀಗ, ಆಚಾರಕೊಂಡವಂಗೆ ಎಂಬ ಶಬ್ದಕ್ಕರ್ಥ. ಚಿದ್ರೂಪನಾದ ಶರಣನ ಜ್ಞಾನ ಕ್ರಿಯಾಚಾರವೆರಡು ಇಷ್ಟ- ಪ್ರಾಣಲಿಂಗದಲ್ಲಿ ನಿಷ್ಪತಿಯಾದವೆಂಬುದೀಗ, ಉಭಯದ ಸುಂಕ ಸಿಕ್ಕಿತ್ತು ಬಂಕೇಶ್ವರ ಲಿಂಗದಲ್ಲಿ ಎಂಬ ಶಬ್ದಕ್ಕರ್ಥ.

೭

ಸಾಗರದ ತಡಿಯಲ್ಲಿ ಒಂದಾರವೆ ಆರವೆಯ ಬೇರಿನಲ್ಲಿ
ಮೂರು ಲೋಕ- ಲೋಕದೊಳಗೆ ಹೊತ್ತು ವ್ಯವಹಾರವ ಮಾಡುವ ಅಣ್ಣಗಳೆಲ್ಲರು
ಬೇರಿನ ಮೂಲೆಗೆ ತೋಳಕೊಟ್ಟು ಅಳಿವ ಕೊಳಗಕ್ಕೆ ಕೈಯನಿಕ್ಕಿದರು
ಗಡಿವಾಡದ ಸುಂಕವ ಕದ್ದು ಹೋಗಲರಿಯದೆ ಬಂಕೇಶ್ವರ ಲಿಂಗವ ಅರಿಯಿರಣ್ಣಾ !

**ಟೀಕು:—** ಸಂಸಾರ ವಿಷಯ ರಸಪ್ರವಾಹವನುಳ್ಳ ಭವ ಸಮುದ್ರದ ತೀರದಲ್ಲಿ ಇಂದ್ರಿಯಂಗಳೆಂಬ ಶಾಖೋಪಶಾಖೆಗಳಿಂದೊಪ್ಪುತ್ತಿರ್ದ ಅಂಗವೆಂಬವೃಕ್ಷವೆಂಬು ದೀಗ, ಸಾಗರದ ತಡಿಯಲ್ಲಿ ಒಂದಾರವೆ ಎಂಬ ಶಬ್ದಕ್ಕರ್ಥ. ಅಂತಪ್ಪ ತನುವಿನ ಮೂಲ ಅಹಂಕಾರದಿಂ ಜ್ಞಾತೃ-ಜ್ಞಾನ-ಜ್ಞೇಯಂಗಳು ತೋರುತ್ತಿಹುದೆಂಬು

ದೀಗ, ಆರವೆಯು ಬೇರಿನಲ್ಲಿ ಮೂರು ಲೋಕವೆಂಬ ಶಬ್ದಕ್ಕರ್ಥ. ಆ ತ್ರಿಪುಟಿ ಜ್ಞಾನದಲ್ಲಿ ನಿಂದು ಆತ್ಮೋಹಂ ಭಾವವ ಧರಿಸಿ ಬಹು ವಿಧ ಕರ್ಮವನು ಆಚರಿಸುವ ಜ್ಞಾನಿಗಳೆಲ್ಲರೂ ಅದೀಗ, ಲೋಕದೊಳಗೆ ಹೊತ್ತು ವ್ಯವಹಾರವ ಮಾಡುವ ಅಣ್ಣಗಳೆಲ್ಲರು ಎಂಬ ಶಬ್ದಕ್ಕರ್ಥ. ಇಂತಪ್ಪ ಭಿನ್ನ ಜ್ಞಾನಿಗಳೆಲ್ಲರು ಅಂತರ್ಬಾಹ್ಯ ಪ್ರಪಂಚುವ ವಿಹರಿಸಿ ಶಿವತತ್ವದತ್ತಿಯ್ದಲರಿಯದೆ ಸಕಲ ಪ್ರಪಂಚು ತುಂಬಿಕೊಂಡಿರ್ದ ದೇಹವಿಕಾರಕ್ಕೆ ಭಾವವನೀಡು ಮಾಡಿ ತತ್ ಪ್ರಪಂಚುವ ಪ್ರಮಾಣಿಸುವ ಮನೋವಿಕಾರಕ್ಕೆ ಜ್ಞಾನವನೊಳಗುಮಾಡುತ್ತಿಹರೆಂಬುದೀಗ, ಹೇರಿನ ಮೂಲೆಗೆ ತೋಳ ಕೊಟ್ಟು ಅಳಿವ ಕೊಳಗಕ್ಕೆ ಕೈಯ್ಯ ನಿಕ್ಕಿದರು ಗಡಿವಾಡದ ಸುಂಕವ ಕದ್ದು ಹೋಗಲರಿಯದೆ ಎಂಬ ಶಬ್ದಕ್ಕರ್ಥ. ಈ ಭೇದವನರಿದು ನಿವೃತ್ತಿಯು ಮಾಡಿ ಸಾಕಾರ-ನಿರಾಕಾರವಾದುದೊಂದೆ ವಸ್ತುವೆಂದಾಚರಿಸಿ ಮುಕ್ತರಾಗಿ ಎಂದು ನಿರೂಪಿಸುತ್ತಿರ್ದನ್ಯೋಪದೇಶವಾಗಿ ಶರಣನೆಂಬುದೀಗ, ಬಂಕೇಶ್ವರಲಿಂಗವ ನರಿಯಿರಣ್ಣಾ ಎಂಬ ಶಬ್ದಕ್ಕರ್ಥ.

೮

ಹಿರಿಯಹ ಅಂಬುಧಿಯಲ್ಲಿ ಹಡಗ ಬರುತ್ತಿರಲಾಗಿ
ಹಡಗಿನ ಕುಕ್ಕೊಂಬಿನ ಮೇಲೆ ಒಂದು ಕರಡಿ ಬಂದಿತ್ತು
ಆ ಕರಡಿಗೆ ಕಾಲು ಮೂರು, ಕಣ್ಣೊಂದು, ಬಾಲಕಡೆಯಿಲ್ಲ,
ಬಂಕೇಶ್ವರ ಲಿಂಗಕ್ಕೆ ಹಡಗಿನ ಸುಂಕ ಕಡೆನಡುವಿಲ್ಲ !

**ಟೀಕು:**— ಆರೂ ಜಯಿಸಬಾರದ ಭವ ಸಮುದ್ರದಲ್ಲಿ ಸಕಲ ತತ್ವಾಶ್ರಯವಪ್ಪ ತನುವೆಂಬ ಚೈತ್ರ ಪ್ರಾಣವಾಯು ವಿಕಾರದಿಂ ಚರಿಸುತ್ತಿರಲಾಗಿ ಎಂಬುದೀಗ, ಹಿರಿದಹ ಅಂಬುಧಿಯಲ್ಲಿ ಹಡಗು ಬರುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಆ ತನುವಿನ ಮೂಲ ಅಹಂಕಾರದ ಅಗ್ರದಲ್ಲಿ ರೌದ್ರೋದ್ರೇಕ ಭಯಂಕರ ರೂಪದಿಂ ಹಿಡಿದು ಬಿಡದ ಸ್ವಭಾವವನುಳ್ಳ ಮಾಯಾ ಭಲ್ಲೂಕ ನೆಯ್ದಿತ್ತೆಂಬುದೀಗ, ಹಡಗಿನ ಕುಕ್ಕೊಂಬಿನ ಮೇಲೆ ಒಂದು ಕರಡಿ ಬಂದಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆಗೆ ಪ್ರಪಂಚಕ್ರೀಡೆಯಿಂ ಚರಿಸುವದಕೆ! ಅವಸ್ಥಾ ಕ್ರಿಯಂಗಳೆ ಚರಣಂಗಳಾಗಿ ದೃಶ್ಯವಾದ ಸಕಲ ವ್ಯಾಪಾರವ ಕಾಣುವ ಅಜ್ಞಾನ ದೃಷ್ಟಿ ಒಂದೇ ಆಗಿ ಜಗದೊಳ್ ಪಸರಿಸಿಕೊಂಡಿರ್ಪ ಸಂಸಾರಪಾಶವೆಂಬ ಬಾಲಕ್ಕೆ ಪ್ರಮಾಣವಿಲ್ಲದ ಕಾರಣ ದೇಹ-ಮೋಹ. ಭ್ರಾಂತಿಯನುಳ್ಳ ಜೀವನ ಜನ್ಮಾಂತರವ ನೆಯ್ದಿಸುವದಕ್ಕೆ ಶಿವನ ಸೃಷ್ಟಿಗೆ ಕಡೆ ನಡುವಿಲ್ಲವೆಂಬುದೀಗ, ಆ ಕರಡಿಗೆ ಕಾಲು ಮೂರು, ಕಣ್ಣೊಂದು ಬಾಲ ಕಡೆಯಿಲ್ಲ ಬಂಕೇಶ್ವರ ಲಿಂಗಕ್ಕೆ ಹಡಗಿನ ಸುಂಕ ಕಡೆನಡುವಿಲ್ಲ ಎಂಬ ಶಬ್ದಕ್ಕರ್ಥ.

೯

ಊರ ಹೊರಗಣ ಹೊಲೆಯರ ಮನೆಯಲ್ಲಿ ಈರೈದು ಮುಗ್ಗ
ಆ ಮುಗ್ಗಕ್ಕೆ ಒಬ್ಬನೇ ಹಾರವ ನೆಯ್ವಾತ !

ಆ ಮಗ್ಗದೊಳಗಿದ್ದು ಸುಂಕ ಕಂಜಿ ಹೊಲೆಯನಾದ ಬಂಕೇಶ್ವರ
ಲಿಂಗವನರಿಯದೆ.

**ಟೀಕು:**— ಮೋಕ್ಷಗ್ರಾಮಕ್ಕೆ ಹೊರಗಾದ ಸರ್ವ ಸೂತಕ ಯುಕ್ತವಪ್ಪ ಸಕಲೇಂದ್ರಿಯ ವಾಸವೆನಿಸುವ ಪ್ರಪಂಚಗೃಹದಲ್ಲಿ ಎಂಬುದೀಗ, ಊರಹೊರಗಣ ಹೊಲೆಯರ ಮನೆಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ದಶವಾಯು ಸೂತ್ರಂಗಳ ಪಸರಿಸಿಕೊಂಡಿರ್ಪ ದಶನಾಳಂಗಳೇ ಮಗ್ಗವಾಗಿರ್ಪ ಅದೀಗ, ಈರೈದು ಮಗ್ಗವೆಂಬ ಶಬ್ದಕ್ಕರ್ಥ. ಆ ದಶನಾಳಾಂಗಗಳಲ್ಲಿ ದಶವಾಯು ವಿಕಾರವಿಡಿದು ಸಕಲೇಂದ್ರಿಯ ವ್ಯಾಪಾರಿಯಾಗಿ ವಿಷಯಾನಂದ ಸುಖಕ್ಕೆ ಹಾರುತ್ತಿರ್ಪ ನಿರ್ಮಲವಪ್ಪ ಜ್ಞಾನ ಕಲಾತ್ಮನೋರ್ವನೆ ತನ್ನ ನಿಜವಂ ಮರೆದು ಎಂಬುದೀಗ, ಆ ಮಗ್ಗಕ್ಕೆ ಒಬ್ಬನೇ ಹಾರುವ ನೆಯ್ವಾತನೆಂಬ ಶಬ್ದಕ್ಕರ್ಥ. ದಶನಾಳಂಗಳವಾಯು ವಿಕಾರದಲ್ಲಿರ್ದ ಲಿಂಗಾಂಗ ಸಂಬಂಧವನರಿಯದೆ ಸಕಲೇಂದ್ರಿಯ ಸುಖವಂಟಿಸಿಕೊಂಡು ಭುಂಜಿಸಿದ ಕಾರಣ ನಿರ್ಮಲವಪ್ಪ ಜ್ಞಾನಕಲಾತ್ಮನು ಸರ್ವಸೂತಕ ಸಂಬಂಧಿಯಪ್ಪ ಜೀವನಾದನೆಂಬುದೀಗ ಮಗ್ಗದೊಳಗಿರ್ದ ಸುಂಕಕ್ಕಂಜಿ ಹೊಲೆನಾದ ಬಂಕೇಶ್ವರ ಲಿಂಗನರಿಯದೆ ಎಂಬ ಶಬ್ದಕ್ಕರ್ಥ.

೧೦

ಹಡಗಿನ ಮನೆ ಮೂರು, ಸುರೆಯ ಗಡಿಗೆಯ
ಹೊತ್ತು ಮಾರುವ ಅಸುವಿನ ಘಟ ಸುಂಕ ತೆರಿಗೆಯ ಭೇದ
ಅರಿದು ನಡೆ,
ಪಥ ಶುದ್ಧವಾಗಿ ಬಂಕೇಶ್ವರ ಲಿಂಗದ ಒಪ್ಪದ ಚೀಟಕೊಂಡೂ.

**ಟೀಕು:**—ಭವಸಮುದ್ರದಲ್ಲಿ ಪ್ರಾಣಾನಿಹಂದದಿಂ ಗಮಿಸುವ ತನು ತ್ರಯಂಗಳೆಂಬ ಭೈತ್ರಾಲಯವೆಂಬುದೀಗ, ಹಡಗಿನ ಮನೆ ಮೂರೆಂಬ ಶಬ್ದಕ್ಕರ್ಥ. ಅಂತಪ್ಪ ತನು ತ್ರಯಂಗಳಲ್ಲಿ ಅಷ್ಟಮದ ಅಹಂ ಮಮತಿಗೆ ಕಾರಣವಾದ ಸಂಸಾರ ರಸ ಸಂಬಂಧವಪ್ಪ ಅಪಾತ್ರ ಕುಂಭವ ದುರ್ವೃತ್ತಿಯಲ್ಲಿ ಧರಿಸಿ ಅಸುರ ಕರ್ಮ ಸಂಬಂಧಿಗಳಪ್ಪ ಸಕಲ ತತ್ವಕರಣಂಗಳಿಗೆ ಸಂಬಂಧಿಸುತ್ತಿಹ ಜೀವನೆಂಬುದೀಗ, ಸುರೆಯ ಗಡಿಗೆ ಹೊತ್ತು ಮಾರುವ ಅಸುವಿನ ಎಂಬ ಶಬ್ದಕ್ಕರ್ಥ. ಇಂತು ಜೀವನು ತನುವಿಡಿದಾದ ಕಾರಣ ಅದರಿಂ ಶಿವನ ದೃಷ್ಟಿಗೊಳಗಾಗಿ ಬರುತ್ತಿಹನೆಂಬುದೀಗ, ಘಟ ಸುಂಕ ತೆರಿಗೆಯ ಭೇದವೆಂಬ ಶಬ್ದಕ್ಕರ್ಥ. ಇಂತು ಜೀವನು ತನುವಿಡಿದು ಆಡಿದ ಕಾರಣ ಭಯವುಂಟೆಂದರಿದು ನಿವೃತ್ತಿಮಾಡಿ ಶ್ರೀ ಗುರೋಪದೇಶದಿಂದ ಪ್ರಣವಾತ್ಮಕವಪ್ಪ ಭಾಷಾ ಪತ್ರಮಂ ಕೊಂಡು ಅಭಿನ್ನ ಜ್ಞಾನ ಕ್ರಿಯಾ ಮಾರ್ಗವಿಡಿದು ಆಚರಿಸಬೇಕೆಂದು ನಿರೂಪಿಸುತ್ತಿರ್ದ ಅನ್ಯೋಪದೇಶವಾಗಿ ಶರಣನೆಂಬುದೀಗ, ಅಂದು ನಡೆ ಪಥ ಶುದ್ಧವಾಗಿ ಬಂಕೇಶ್ವರ ಲಿಂಗದ ಒಪ್ಪದ ಚೀಟು ಕೊಂಡು ಎಂಬ ಶಬ್ದಕ್ಕರ್ಥ.

೧೧

ಕಣ್ಣಿನ ಕಡೆಯ ಕಾಡಿಗೆ ಇಕ್ಕಿದವಳ ಅಣ್ಣನ ಕಣ್ಣಿನಲ್ಲಿ ಮೂರು
ಕಣ್ಣು ಹುಟ್ಟಿದವು
ಒಂದು ಕಣ್ಣು ಕುಂಭಕ್ಕೆ ಕುಣಿಕೆ, ಒಂದು ಕಣ್ಣು ಎರಡರ ತಲಪ
ಕೂಡಿದ ಕುಣಿಕೆ
ಮತ್ತೊಂದು ಕಣ್ಣು ಕುಣಿಕೆಗೆ ಮೊಸ ಮೂರು ಕಣ್ಣು ಮುಪ್ಪುರಿ
ಗೂಡಬೇಕು
ಅವು ಹುರಿವಿಟ್ಟಂದ ಇವಾರಿಗೂ ಅಸಾಧ್ಯ ಬಂಕೇಶ್ವರ ಲಿಂಗವ
ಅರಿವವರಿಗಲ್ಲದಾಗದು !

ಟೀಕು:— ಸುಜ್ಞಾನ ದೃಷ್ಟಿಯಲ್ಲಿ ಸದ್ವಿವೇಕಾಂಜನವ ಧರಿಸಿದ ಶರಣಸತಿಗೆ ಅಜ್ಞಾನಪ್ಪ ಶ್ರೀಗುರುವಿನ ಮಹಾಜ್ಞಾನಾಕ್ಷಿಯಲ್ಲಿ ಕರ್ಮಜ್ಞಾನ ಭಾವ ಸೂತ್ರಂಗಳು ಉದಯಿಸಿದವೆಂಬುದೀಗ, ಕಣ್ಣಿನ ಕಡೆಯ ಕಾಡಿಗೆ ಇಕ್ಕಿದವಳ ಅಣ್ಣನ ಕಣ್ಣಿನಲ್ಲಿ ಮೂರು ಕಣ್ಣು ಹುಟ್ಟಿದವು ಎಂಬ ಶಬ್ದಕ್ಕರ್ಥ. ಪರಮಾನಂದ ಜಲವ ಪ್ರಭಾವಿಸಿಕೊಡುವ ಚಿತ್ ಕುಂಭಕ್ಕೆ ಪ್ರಥಮವಾದ ಸತ್ಕ್ರಿಯಾಚಾರವೆ ಕುಣಿಕೆಯಾಗಿಹುದೆಂಬುದೀಗ, ಒಂದು ಕಣ್ಣು ಕುಂಭಕ್ಕೆ ಕುಣಿಕೆ ಎಂಬ ಶಬ್ದಕ್ಕರ್ಥ. ಎರಡನೆಯ ಜ್ಞಾನಾಚಾರ ಸಕಲ ನಿಷ್ಕಲ ಸಂಬಂಧವಾಗಿಹುದೆಂಬುದೀಗ, ಒಂದು ಕಣ್ಣು ಎರಡರ ತಲಪು ಕೂಡಿದ ಕುಣಿಕೆಯೆಂಬ ಶಬ್ದಕ್ಕರ್ಥ. ಮೂರನೆಯ ಭಾವಾಚಾರವು ಉಭಯವನೊಳಕೊಂಡು ನಿಜದಲ್ಲಿ ನಿಷ್ಪತ್ತಿಯಾಗಿರ್ಪುದೆಂಬುದೀಗ, ಮತ್ತೊಂದು ಕಣ್ಣು ಕುಣಿಕೆಗೆ ಮೊಸವೆಂಬ ಶಬ್ದಕ್ಕರ್ಥ. ಈ ತ್ರಿವಿಧಾಚಾರ ಒಂದಾಗಿ ಆಚರಿಸಬೇಕೆಂದು ಶರಣಂಗೆ ನಿರೂಪಿಸುತ್ತಿರ್ಪ ಜ್ಞಾನಗುರುವೆಂಬುದೀಗ, ಈ ಮೂರೂ ಕಣ್ಣಿಂದ ಮುಪ್ಪುರಿಗೂಡಬೇಕೆಂಬ ಶಬ್ದಕ್ಕರ್ಥ. ಈ ತ್ರಿವಿಧಾಚಾರ ಒಂದಾದ ನಿರ್ಣಯ ಶಿವಜ್ಞಾನ ಸಂಪನ್ನರಾದ ಶರಣರಿಗೆ ಸಾಧ್ಯವಹುದಲ್ಲದೆ ಇತರ ಮತಾದಿಗಳಿಗಸಾಧ್ಯವೆಂಬುದೀಗ, ಅವು ಹುರಿವಿಟ್ಟಂದ ಇವಾರಿಗೂ ಅಸಾಧ್ಯ ಬಂಕೇಶ್ವರ ಲಿಂಗವನರಿದವರಿಲ್ಲಗದಾಗದು ಎಂಬ ಶಬ್ದಕ್ಕರ್ಥ.

೧೨

ಅಪ್ಪು ಉತ್ಪತ್ತ್ಯವಾಗಿ ಜಗವ ಕದಡುವಾಗ ಇರುವೆಯ ಮೊಟ್ಟೆ
ಹೆಪ್ಪಳಿದುದಿಲ್ಲ;
ಇರುವೆಯ ಗೂಡಿನ ಗುಹೆಗೆ ಅಪ್ಪು ಮುಟ್ಟಿದುದಿಲ್ಲ,
ಇದೇನು ಚೋದ್ಯ ? ಬಂಕೇಶ್ವರ ಲಿಂಗದಲ್ಲಿ ಆರಡಿಗೊಂಬ ಬನ್ನಿ.

ಟೀಕು:— ಶ್ರುತಜ್ಞಾನವೆಂಬ ಜಲಮುಸದಲ್ಲಿ ಉತ್ಕೃಷ್ಟವಾಗಿ ಜಗವೆಂಬ ನಾಮವನುಳ್ಳ ತನುವ ದಂಡಿಸುತ್ತಿಹರು ಯೋಗಿಗಳೆಂಬುದೀಗ, ಅಪ್ಪು ಉತ್ಪತ್ತ್ಯವಾಗಿ ಜಗವ ಕದಡುವಾಗಲೆಂಬ ಶಬ್ದಕ್ಕರ್ಥ. ಮಾಯಾ ಸಂಬಂಧವಪ್ಪ

ಸೂಕ್ಷ್ಮ ತನುವಿನ ಅಂತರಂಗಕ್ಕೆ ಆ ಕೃತಜ್ಞಾನ ಸ್ವವೇದಿಸದೆ ಬಹಿರಾವರಣವಾದ ಕಾರಣ ಆ ಮಾಯಾ ಸಂಭೂತವಾದ ಇಂದ್ರಿಯ ಕರಣಂಗಳ ಪ್ರಪಂಚು ನಷ್ಟವಾಗದೆಂಬುದೀಗ, ಇರುವೆಯ ಮೊಟ್ಟೆ ಹೆಪ್ಪಳಿದುದಿಲ್ಲ ಇರುವೆಯ ಗೂಡಿನ ಗುಹೆಗೆ ಅಪ್ಪು ಮುಟ್ಟಿದುದಿಲ್ಲವೆಂಬ ಶಬ್ದಕ್ಕರ್ಥ. ಇಂತು ತನುವ ದಂಡಿಸಿದಲ್ಲಿ ಮಾಯಾ ಪ್ರಪಂಚು ನಷ್ಟವಾಗದಿಪ್ಪುದೆಂದು ಆಶ್ಚರ್ಯಬಟ್ಟ ಶರಣನು ಇದು ನಿರ್ಣಯವಲ್ಲ ನಿಜವಜ್ಞಾನ ಗುರುಮುಖದಿಂ ಬೆಸಗೊಂಬ ಬನ್ನಿ ಎಂದು ಶರಣ ಜನಂಗಳಿಗೆ ನಿರೂಪಿಸುತ್ತಿರ್ದನೆಂಬುದೀಗ, ಇದೇನು ಚೋದ್ಯ ಬಂಕೇಶ್ವರ ಲಿಂಗದಲ್ಲಿ ಆರಡಿಗೊಂಬ ಬನ್ನಿ ಎಂಬ ಶಬ್ದಕ್ಕರ್ಥ.

೧೩

ಮಹಿಮಾ ಪರದಲ್ಲಿ ಒಂದು ಮನೋಹರದ ಪಟ್ಟಣ,
ಪಟ್ಟಣದ ಸುತ್ತ ವಳಯದಲ್ಲಿ ಇಕ್ಕಿದ ಕೋಟೆ,
ರಸಮಂದಿರದ ಮಣ್ಣು ನಿರಂಜನಪದಗಳು ತತ್ವಾರ್ಥದ ಆಳು
ವೇರಿ ಮುಂಡಿಗೆ ಮರಿಕೆನೆ ಮುಕ್ತಿ ನಿಶ್ಚಯವಾದ ದೃಷ್ಟಿ ಪಟ
ಅದರೊಳಗಾದ ಎಂಭತ್ತು ನಾಲ್ಕು ಲಕ್ಷ ಮನೆಯಲ್ಲಿ ಹೊಂದುವ
ರೊಬ್ಬರೂ ಇಲ್ಲ
ಪಟ್ಟಣವಾರಿಗೂ ಸಾಧ್ಯವಲ್ಲ, ಬಂಕೇಶ್ವರ ಲಿಂಗವ ನರಿವವರಿಗಲ್ಲದೆ!

**ಟೀಕು:**— ಲಯ-ಗಮನಂಗಳಿಗೆ ಆಶ್ರಯವಪ್ಪ ಘನಲಿಂಗದಲ್ಲಿ ಸದಾಚಾರ ಸಂಪತ್ತನೊಳಕೊಂಡ ಭಕ್ತಿಕಾಯವೆಂಬ ಶಿವಪುರವೆಂಬುದೀಗ, ಮಹಿಮಾ ಪದದಲ್ಲಿ ಒಂದು ಮನೋಹರದ ಪಟ್ಟಣವೆಂಬ ಶಬ್ದಕ್ಕರ್ಥ. ಆ ಭಕ್ತಿಕಾಯವೆಂಬ ಪಟ್ಟಣವ ಪರಿವೇಷ್ಟಿಸಿ ಇಕ್ಕಿದ ಆಚಾರವೆಂಬ ಕೋಟೆ ಜ್ಞಾನಾನಂದ ರಸಮಂದ್ಯದ ಲ್ಲಿರ್ದ ಸತ್ತ್ವಮರ್ಣವೆಂಬ ಚಿತ್ತ ಪೃಥ್ವಿ ಮಾಯಾ ಪ್ರಪಂಚು ಹೊದ್ದದ ಪರಮ ವೈರಾಗ್ಯವೇ ಅಗುಳು, ತ್ರಿತತ್ವಜ್ಞಾನವೇ ಆಳುವೇರಿ ಶರಣನ ಶುದ್ಧ ಜ್ಞಾಪ್ತಿಯೆಂಬ ಮುಂಡಿಗೆ ಮರಿಯಾಗಿ ಕರ್ಮಜ್ಞಾನ ಭಾವಂಗಳೆ ಕೆನೆ ಇದರಿಂ, ಮೋಕ್ಷ ನಿಶ್ಚಯವೆಂದು ದೃಢೀಕರಿಸುವ ಸ್ಥಿತಿಯೇ ದೃಢಿಪಟವೆಂಬ ಭಿತ್ತಿಯಾಗಿಹುದೆಂಬುದೀಗ, ಪಟ್ಟಣದ ಸುತ್ತುವಳಯದಲ್ಲಿ ಇಕ್ಕಿದ ಕೋಟೆ ರಸಮಂದಿರದ ಮಣ್ಣು ನಿರಂಜನ ಪದಗಳು ತತ್ವಾರ್ಥದಾಳು ವೇರಿ ಮುಂಡಿಗೆ ಮರಿಕೆನೆ ಯುಕ್ತಿ ನಿಶ್ಚಯವಾದ ದೃಢ್ಧಿ ಪಟವೆಂಬ ಶಬ್ದಕ್ಕರ್ಥ. ಅಂತಪ್ಪ ಭಕ್ತಿಕಾಯವೆಂಬ ಶಿವಪುರದಲ್ಲಿ ಪರಮ ಪರಿಣಾಮಿಗಳಾದ ಷಟ್ಸ್ಥಲ ಬ್ರಹ್ಮಿಗಳು ಎಂಭತ್ತುನಾಲ್ಕುಲಕ್ಷ ಶರೀರಾಲಯದಲ್ಲಿ ಹುಟ್ಟಿ ಹೊಂದಲಿಲ್ಲವೆಂಬುದೀಗ, ಅದರೊಳಗಾದ ಎಂಭತ್ತುನಾಲ್ಕು ಲಕ್ಷ ಮನೆಯಲ್ಲಿ ಹೊಂದುವರೊಬ್ಬರೂ ಇಲ್ಲವೆಂಬ ಶಬ್ದಕ್ಕರ್ಥ. ಇಂತಪ್ಪ ಭಕ್ತಿಕಾಯವೆಂಬ ಶಿವಪುರ-ಶಿವಜ್ಞಾನ ಸಂಪನ್ನರಾದ ಶರಣರಿಗಲ್ಲದೆ ಉಳಿದವರಿಗೆ ಅಸಾಧ್ಯವೆಂಬುದೀಗ, ಪಟ್ಟಣ ಆರಿಗೂ ಸಾಧ್ಯವಲ್ಲ ಬಂಕೇಶ್ವರ ಲಿಂಗವನು ಅರಿತವರಿಗಲ್ಲದೆ ಎಂಬ ಶಬ್ದಕ್ಕರ್ಥ.

೧೪

ಕಾಯದ ಜೀವದ ಮಧ್ಯದಲ್ಲಿ ಒಂದೂರ ಮಧ್ಯದಲ್ಲಿ ಹೊಲೆಯರ ಕಾವಲು

ಒಬ್ಬ ಜಾತಿ ಸೂತಕ; ಒಬ್ಬ ಜನನ ಸೂತಕ; ಒಬ್ಬ ಪ್ರೇತ ಸೂತಕ;

ಇಂತಿ ಗ್ರಾಮದ ಹೊಲೆಯರು ಕೊಂಡಾಡುತ್ತಿದ್ದರು

ಒಬ್ಬರಿಗೆ ಅಂಡೊಡದು, ಒಬ್ಬಂಗೆ ಅಂಗ ಭಿನ್ನವಾಗಿ, ಒಬ್ಬಂಗೆ ಶಿರ ಛೇದನವಾಗಿ,

ಗ್ರಾಮದ ಬಾಗಿಲು ಬಟ್ಟ ಬಯಲಾಯಿತ್ತು, ಬಂಕೇಶ್ವರ ಲಿಂಗವನು ಅರಿಯಿರಣ್ಣಾ !

ಟೀಕು: — ದೇಹಾತ್ಮರ ಮಧ್ಯದ ಸೂಕ್ಷ್ಮ ತನುವಿನ ಇಂದ್ರಿಯ ದ್ವಾರದ ಸರ್ವ ಸೂತಕ ಸಂಬಂಧಿಗಳಪ್ಪ ಜೀವ ತ್ರಯಂಗಳು ಜ್ಞಾನ-ವೈರಾಗ್ಯ-ಭಕ್ತಿಗಳೆಂಬ ಸುಜನ ಪ್ರವೇಶವಾಗದ ಹಾಗೆ, ವಿಷಯಾರ್ಥದಿಂ ಕಾಯ್ದುಕೊಂಡಿರ್ಪವೆಂಬುದೀಗ, ಕಾಯದ ಜೀವದ ಮಧ್ಯದಲ್ಲಿ ಒಂದೂರ ಬಾಗಿಲಲ್ಲಿ ಮೂವರು ಹೊಲೆಯರ ಕಾವಲೆಂಬ ಶಬ್ದಕ್ಕರ್ಥ. ವಿಶ್ವ ಜೀವನು ಜನನ ಸೂತಕ ಸಂಬಂಧಿ, ತೈಜಸ ಜೀವನು ಜಾತ್ಯಾಭಿಮಾನ ಮೊದಲಾದ ಸಕಲೇಂದ್ರಿಯ ಭೋಕ್ತ್ರ ಸೂತಕ ಸಂಬಂಧಿ, ಪ್ರಾಜ್ಞ ಜೀವನು ಮರಣ ಸೂತಕ ಸಂಬಂಧಿ ಎಂಬುದೀಗ, ಒಬ್ಬ ಜಾತಿ ಸೂತಕ, ಒಬ್ಬ ಜನನ ಸೂತಕ, ಒಬ್ಬ ಪ್ರೇತ ಸೂತಕವೆಂಬ ಶಬ್ದಕ್ಕರ್ಥ. ಇಂತು ದೇಹವನಾಶ್ರಯಿಸಿದ ಸೂತಕ ಸಂಬಂಧಿಗಳಪ್ಪ ಜೀವತ್ರಯಂಗಳು ವಿಷಯಾನಂದ ಸುಖವ ಮೆಚ್ಚಿ ಕರಣ-ಮಥನ-ಕರ್ಕಶ ಬೆಂದುಲಿವುತ್ತಿಹರೆಂಬುದೀಗ, ಇಂತಿ ಗ್ರಾಮದ ಹೊಲೆಯರು ಕೊಂಡಾಡುತ್ತಿದ್ದರು ಎಂಬ ಶಬ್ದಕ್ಕರ್ಥ. ಇಂತಪ್ಪ ಜೀವತ್ರಯಂಗಳಲ್ಲಿ ಸುಜ್ಞಾನೋದಯವಾಗಿ ಶ್ರೀಗುರುವನರಿದು ಉಪಾವಸ್ಥೆಯ ಮಾಡಿದ ಕಾರಣ ಆ ಶ್ರೀಗುರುವಿನ ಕ್ರಿಯಾ ದೀಕ್ಷೆಯಿಂ ವಿಶ್ವನ ಉತ್ಪತ್ತ್ಯವಳಿದು ಇಷ್ಟಲಿಂಗ ಸಂಬಂಧವಾಗಿ ಮಂತ್ರ ದೀಕ್ಷೆಯಿಂ ತೈಜಸನ ಸ್ಥಿತಿಯಳಿದು ಪ್ರಾಣಲಿಂಗ ಸಂಬಂಧಿಯಾಗಿ ವೇದ ದೀಕ್ಷೆಯಿಂ ಪ್ರಾಜ್ಞನ ಲಯವಳಿದು ಭಾವಲಿಂಗ ಸಂಬಂಧವಾಗಿ ಕರ್ಮಜ್ಞಾನ ಭಾವವಿಡಿದು ಆಚರಿಸಲು ಸೂಕ್ಷ್ಮ ತನು ಸಂಬಂಧವಾದ ಇಂದ್ರಿಯಂಗಳಳಿದು ಲಿಂಗೇಂದ್ರಿಯಂಗಳಾದವೆಂಬುದೀಗ, ಒಬ್ಬಂಗೆ ಅಂಡೊಡದು ಒಬ್ಬಂಗೆ ಅಂಗ ಭಿನ್ನವಾಗಿ ಒಬ್ಬಂಗೆ ಶಿರ ಛೇದನವಾಗಿ ಗ್ರಾಮದ ಬಾಗಿಲು ಬಟ್ಟಬಯಲಾಯಿತ್ತು ಬಂಕೇಶ್ವರ ಲಿಂಗವನರಿಯಿರಂಣಾ ಎಂಬ ಶಬ್ದಕ್ಕರ್ಥ.

೧೫

ಕಾಳೆಯ ಮೊಗಪಿನಲ್ಲಿ ಒಂದು ಬೇರುಂಡ ಹುಟ್ಟಿ,

ಅದು ಆರ ಮಾತನೂ ಕೇಳಲಿಸದು; ಅದು ಕಾಳೆಯ ಮೊಗಪಿನ ಸತ್ವ

ಆ ಕಹಳೆ ಳೋಧರ ಕಮ್ಮಟಕ್ಕೆ ಈಡೆಂದು ಹೇಳುತ್ತಿಪ್ಪುದು,
ಆ ಭೇರುಂಡೆಯ ಭೇದವ ಕಾಳೆಯ ಘಟ ಬಂಕೇಶ್ವರ ಲಿಂಗವ
ಕೇಳಿಯಲ್ಲದೆ ಅರಿಯ ಬಾರದು.

**ಟೀಕು:**— ಆಕಾಶ ವಿಷಯ ಸಂಬಂಧವಹ ಶಬ್ದಜಾಲಕ್ಕೆ ಆಸ್ಪದವಪ್ಪ ಅಂಗ ಪ್ರಕೃತಿಯಿಂ ನಾಹಂ ಭಾವದಿಂದುಲಿವ ಜೀವನು ಉದಯಿಸಿದನೆಂಬುದೀಗ, ಕಾಳಿಯ ಮೊಗಸಿನಲ್ಲಿ ಒಂದು ಬೇರುಂಡೆ ಹುಟ್ಟಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹಭಾವದಿಂ ಸಪ್ತ ಜನ್ಮಂಗಳಲ್ಲಿ ಆತ್ಮನು ತತ್ತದ್ದೇಹ ಸಂಬಂಧಿಯಾಗಿ ಭವವನೆಯ್ದುವ ಪ್ರಾಪ್ತಿಯುಂಟೆಂದು ಹೇಳುವ ಕೃತಗುರು ವಾಕ್ಯಂಗಳ ಕೇಳಲಿಸದಾಜೀವನು ಶಬ್ದ ಜಾಲಂಗಳಿಂದ ದಂತೆಂದೊಡೆ–ಅದು ದೇಹಭಾವದ ಸತ್ವವೆಂಬುದೀಗ, ಅದು ಆರಮಾತನೂ ಕೇಳಲಿಸದು ಅದು ಕಾಳೆಯ ಮೊಗಸಿನ ಸತ್ವ, ಆ ಕಹಳೆಳೋಧರ ಕಮ್ಮಟಕ್ಕೆ ಈಡೆಂದು ಹೇಳುತ್ತಿರ್ಪುದೆಂಬ ಶಬ್ದಕ್ಕರ್ಥ. ಇಂತಪ್ಪ ಜೀವನ ಶಬ್ದಜಾಲಂಗಳು ದೇಹದ ಪ್ರಕೃತಿ ಶ್ರೀಗುರುವಿನ ನಿಜೋಪದೇಶದಿಂದಲ್ಲದೆ ನಿವೃತ್ತಿಮುಖವನೆಯ್ದಿ ಲಿಂಗಸ್ವರೂಪವೆಂದರಿಯಬಾರವೆಂಬುದೀಗ, ಆ ಬೇರುಂಡೆಯ ಭೇದ ಕಾಳೆಯ ಘಟ ಬಂಕೇಶ್ವರ ಲಿಂಗವ ಕೇಳಿಯಲ್ಲದೆ ಅರಿಯಬಾರದೆಂಬ ಶಬ್ದಕ್ಕರ್ಥ.

೧೬

ಮಾಧವನ ಪಟ್ಟಣದಿಂದ ಓಡಿದರು ಮೂವರು ಸೂಳೆಯರು,
ಅವರು ಹೋದ ಹಾದಿಯಲ್ಲದೆ ಬೇರೊಂದು ಹಾದಿಯಲ್ಲಿ ಅರಸಿ
ಕಂಡರು ಸೂಳೆಯರು

ಅವರ ಮೂವರ ಸೆರೆಯ ವಿವರ :
ಬಾಯಿಗೆ ಕೋಳ, ಕಾಲಿಗೆ ನೂಲೆಳೆಯ ಕಟ್ಟು, ಕೈ ಹೊಗದಂತೆ
ಕೂರಲಗಿನ ಸಂಘದ ಕಟ್ಟು,
ಮೂವರ ಅಗಡ ಹಿಂಗಿತ್ತು ಇನ್ನೈವರ ಕೇಳಿ ಬಂಕೇಶ್ವರ ಲಿಂಗವಾ!

**ಟೀಕು:**— ಸಾತ್ವಿಕ ಗುಣಸಂಬಂಧವಾದ ಸೂಕ್ಷ್ಮತನುವಿನತ್ತಣಂ ಪರಮಾತ್ಮನೆಂಬ ಸ್ವಭರ್ತೃ ಸಂಗವನೊಲ್ಲದೆ ಜೀವನೆಂಬ ಪರಪುರುಷನ ಸಂಪರ್ಕವ ಮಾಡುವ ಪುಣ್ಯಾಂಗನೆಯರೆಂಬ ಶಕ್ತಿತ್ರಯಂಗಳು ಪರಮಾರ್ಥಕ ವಂಚಕರಾಗಿ, ಪ್ರಪಂಚು ಮಾರ್ಗದಲ್ಲಿ ಚರಿಸುತ್ತಿರ್ದರೆಂಬುದೀಗ, ಮಾಧವನ ಪಟ್ಟಣದಿಂದ ಓಡಿದರು ಮೂವರು ಸೂಳೆಯರೆಂಬ ಶಬ್ದಕ್ಕರ್ಥ. ಆ ಶಕ್ತಿತ್ರಯಂಗಳು ಚರಿಸುವ ಪ್ರಪಂಚು ಮಾರ್ಗವಲ್ಲದ ಸತ್ಪಥ ಮಾರ್ಗದಲ್ಲಿ ಆಚರಿಸಿ ಶಕ್ತಿತ್ರಯಂಗಳಂ ಕಂಡು ನಿಜದಿಂ ವಿವೇಕಿಸುತ್ತಿರ್ದ ಶರಣನೆಂಬುದೀಗ, ಅವರು ಹೋದ ಹಾದಿಯಲ್ಲವೆ ಬೇರೊಂದು ಹಾದಿಯಲ್ಲಿ ಆರಸಿ ಕಂಡರು ಸೂಳೆಯರ ಎಂಬ ಶಬ್ದಕ್ಕರ್ಥ. ಆ ಶಕ್ತಿತ್ರಯಂಗಳ ಪ್ರಪಂಚು ವರ್ತನೆಯಂ ಬಿಡಿಸಿ ಶಿವಾಚಾರದಲ್ಲಿ ಸಂಬಂಧಿಸುವ ಪರಿಶ್ರಮವೆಂತೆಂದೊಡೆ ಎಂಬುದೀಗ, ಅವರ ಮೂವರ

ಸೆರೆಯ ವಿವರವೆಂಬ ಶಬ್ದಕ್ಕರ್ಥ. ಇಚ್ಛಾಶಕ್ತಿಯು ಭಿನ್ನಾಪೇಕ್ಷೆಯುಂ ಬಾಯಿಂಗೆ ಶಿವಾದ್ವೈತ ಭಕ್ತಿಯು ಸಂಬಂಧಿಸಲು ಕ್ರಿಯಾಶಕ್ತಿ ದುಶ್ಚರಿತ್ರವೆಂಬ ಚರಣವ ಸತ್ಕ್ರಿಯಾ ಸೂತ್ರದಿಂ ಸಂಬಂಧಿಸಲು ಜ್ಞಾನಶಕ್ತಿಯು ಕುಭಾವ ಹಸ್ತವ ಸುಜ್ಞಾನದಿಂ ಬಂಧಿಸಲು ಆ ಶಕ್ತಿತ್ರಯಂಗಳ ಇಚ್ಛೆ ದುರ್ವರ್ತನೆ ಪ್ರಪಂಚು ಗೃಹಕತ್ವವಳಿದು ಶಿವಸದ್ವರ್ತನೆಯುಳ್ಳಿರ್ದರೆಂಬುದೀಗ, ಬಾಯಿಗೆ ಕೋಳ ಕಾಲಿಗೆ ನೂಲೆಳೆಯ ಕಟ್ಟು ಕೈ ಹೋಗದಂತೆ ಕೂರಲಗಿನ ಸಂಭವ ಕಟ್ಟು ಮೂವರ ಅಗಡ ಹಿಂಗಿತ್ತೆಂಬ ಶಬ್ದಕ್ಕರ್ಥ. ಇಂತಾಗಲು ಮುಂದೆ ಪಂಚಶಕ್ತಿಯರ ಪ್ರಪಂಚು ಭಾವವನಳಿವ ಭೇದವ ಜ್ಞಾನ ಗುರುಮುಖದಿಂ ಬೆಸಗೊಳ್ಳುತ್ತಿರ್ದ ಶರಣನೆಂಬುದೀಗ, ಇನ್ನೈವರ ಕೇಳಿ ಬಂಕೇಶ್ವರ ಲಿಂಗವಾ ಎಂಬ ಶಬ್ದಕ್ಕರ್ಥ.

೧೭

ಬಂದವರಿವರಾರು ಅಂದಗೇಡಿಯು ಮೂಳಿಯು ಮಕ್ಕಳು!
ಅವರ ಸಂದು ಸಂದಿಗೆಲ್ಲಕ್ಕೂ ಕೊಂಡಾಡುತ್ತಿಪ್ಪರು,
ಕಂಡವನೊಲ್ಲರು, ಹಿಡಿಕಂಡವ ತಿಂಬರು, ಅವರೆಂದಿಗೂ ಮೂಳಿಯ ಮಕ್ಕಳು.
ಇದು ಸಂದೇಹವಲ್ಲ ಬಂಕೇಶ್ವರಲಿಂಗವಾ!

**ಟೀಕು:—** ವಿಧಿ-ನಿಷೇಧಂಗಳಿಂ ಭವರಾಟಾಳದೋಳ್ ಬೆರಸಿ ಪ್ರಪಂಚು ವರ್ತನೆಯುಳ್ಳಿ ಚರಿಸುವ ಸಕಲಾತ್ಮರು ಶಿವಾಚಾರವೆಂಬ ನಾಸಿಕ, ಶಿವಜ್ಞಾನವೆಂಬ ನೇತ್ರ ಪಶ್ಚಿಮ ಜ್ಞಾನವೆಂಬ ತುರುಂಬು, ನಿಜಾಶ್ರುತವೆಂಬ ಕರ್ಣ ಮೊದಲಾದ ಅವಯವ ಸಲ್ಲಕ್ಷಣ ವಿಹೀನವಾದ ಮಾಯಾಸಂಭೂತರೆಂಬುದೀಗ, ಬಂದವರಿವರಾರು ಅಂದಗೇಡಿಯು ಮಕ್ಕಳು ಎಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮರೆಲ್ಲರು ಮಾಯಾ ಸ್ವರೂಪಮಪ್ಪ ಮಲತ್ರಯಂಗಳಿಗೆ ಮಥನಿಸುತ್ತಿಹರೆಂಬುದೀಗ, ಅವರ ಸಂದು ಸಂದಿಗೆಲ್ಲಕ್ಕೂ ಕೊಂಡಾಡುತ್ತಿರ್ಪರೆಂಬ ಶಬ್ದಕ್ಕರ್ಥ. ಸಕಲ ಸುಖವ ಲಿಂಗಕ್ಕರ್ಪಿಸಿ ಆ ಶಿವ ಸುಖ ಪ್ರಸನ್ನ ಪ್ರಸಾದವ ಸ್ವೀಕರಿಸದೆ ಇಂದ್ರಿಯ ವಿಷಯ ಸುಖವ ಜೀವಭಾವದಿಂ ಭುಂಜಿಸುತ್ತಿಹರೆಂಬುದೀಗ, ಕಂಡವನೊಲ್ಲರು ಹಿಡಿ ಕಂಡವ ತಿಂದರೆಂಬ ಶಬ್ದಕ್ಕರ್ಥ. ಇಂತಪ್ಪ ಸಕಲಾತ್ಮರು ಎಂದೆಂದೂ ಮಾಯಾ ಸಂಭೂತರೆಂಬುದಕ್ಕೆ ಶೃತ-ಗುರು ವಾಕ್ಯಗಳಲ್ಲಿ ಸತ್ಯವೆಂಬುದೀಗ, ಅವರೆಂದೆಂದಿಗೂ ಮೂಳಿಯ ಮಕ್ಕಳು ಇದು ಸಂದೇಹವಲ್ಲ ಬಂಕೇಶ್ವರಲಿಂಗಾ ಎಂಬ ಶಬ್ದಕ್ಕರ್ಥ.

೧೮

ಕೊಡಗ ಬಲಿದು ಕೋಣನಾಗಿ, ಕೋಣನ ಕೋಡಿನಲ್ಲಿ ಈರಾರುಸೇನೆ
ಸೇನೆಗೊಬ್ಬ ಭಟ, ಭಟಗೆ ಮೂವರು ಸತಿಯರು
ಸತಿಯರ ಕುಚದ ನಡುವೆ ಒಂದು ಕಸ ಹಾವು ಕಚ್ಚಿ, ಭಟರೆಲ್ಲರೂ ಸತ್ತರು
ನಿರ್ಭೀತಿವಂತರು ಕೇಳಿ ಬಂಕೇಶ್ವರ ಲಿಂಗವಾ!

**ಟೀಕು:**— ಸಂಕಲ್ಪ ರೂಪವಾದ ಮನಸ್ಸು ಪ್ರಪಂಚ ವರ್ಧನದಿಂ ಜೀವನೆನಿಸಿತ್ತು ಆ ಜೀವನ ಅಹಂ-ಮಮತೆಗಳಲ್ಲಿ ದ್ವಾದಶೇಂದ್ರಿಯಂಗಳು ಇರುತ್ತಿಹವೆಂಬುದೀಗ, ಕೊಡಗ ಬಲಿದು ಕೋಣನಾಗಿ ಕೋಣನ ಕೋಡಿನಲ್ಲಿ ಈರಾರು ಸೇನೆಯೆಂಬ ಶಬ್ದಕ್ಕರ್ಥ. ಆ ಇಂದ್ರಿಯಂಗಳಿಗೆ ಕರ್ತೃವೆ ಆತ್ಮ ಆ ಆತ್ಮಂಗೆ ಶಕ್ತಿ ತ್ರಯಂಗಳೆ ಸತಿಯರಾಗಿಹರೆಂಬುದೀಗ, ಸೇನೆಗೊಬ್ಬ ಭಟ ಭಟಗೆ ಮೂವರು ಸತಿಯರೆಂಬ ಶಬ್ದಕ್ಕರ್ಥ. ಅಂತಪ್ಪ ಶಕ್ತಿತ್ರಯಂಗಳ ಸಂಸಾರ ವಿಷಯರಸ ಸ್ವರೂಪಿನ ತನುಮಧ್ಯದಲ್ಲಿ ತೃಣ-ಪ್ರತಿ-ಪತ್ತಾದ ಶಂಕಾ-ವಿಷ ಸಂಬಂಧಿಯಪ್ಪ ಕುಂಡಲಿಯ ಗೃಹಕತ್ವದಿಂದ ಆತ್ಮ ಮೊದಲಾದ ಇಂದ್ರಿಯಂಗಳು ತದ್ದೇಹದಲ್ಲಿ ಜೀವನ್ಮೃತವಾದವೆಂಬುದೀಗ, ಸತಿಯರ ಕುಚದ ನಡುವೆ ಒಂದು ಕಸ ಹಾವು ಕಚ್ಚಿ ಭಟರೆಲ್ಲರೂ ಸತ್ತರೆಂಬ ಶಬ್ದಕ್ಕರ್ಥ. ಇಂತಪ್ಪ ಭವ ಭಯಕ್ಕಂಜದ ಪರಮ ಮಾಹೇಶ್ವರರು ಜ್ಞಾನ ಗುರುಮುಖದಿಂ ಮಹಾನುಭಾವವ ಕೇಳುತ್ತಿರಬೇಕು ಎಡೆಬಿಡುವಿಲ್ಲದೆ ಎಂಬುದೀಗ, ನಿರ್ಭೀತಿವಂತರು ಕೇಳಿ ಬಂಕೇಶ್ವರ ಲಿಂಗವಾ ಎಂಬ ಶಬ್ದಕ್ಕರ್ಥ.

೧೯

ಪೃಥ್ವಿಯ ಸಾರಗೆಟ್ಟ ಹೊಲದಲ್ಲಿ ಅರವೆಯಿಲ್ಲದ ಮರಹುಟ್ಟಿ
ಕಣ್ಣಿಗೆ ತೋರಲಿಲ್ಲದ ಬಿತ್ತಾಯಿತ್ತು;
ಅದು ಈ ಧರೆಯಲ್ಲಿ ಬಿತ್ತಿದರೆ ಆ ಧರೆಯಲ್ಲಿ ಹುಟ್ಟಿತ್ತು,
ಅದರಿಂದಾಚೆ ಫಲವಾಯಿತ್ತು, ಕೊಂಬಿಂದೀಚೆ ಹಣ್ಣಾಯಿತ್ತು
ಹಣ್ಣು ಮೆಲುವ ಬಾಯಿಗೆ ಹಣ್ಣಿತ್ತು ಈ ಹಣ್ಣಿನ ಸವಿಯ ಹೇಳು
ಚನ್ನ ಬಂಕೇಶ್ವರಲಿಂಗಾ !

**ಟೀಕು:**— ದೇಹ ಸಂಸಾರ ರಸವರಿತ ಭಕ್ತಿಕ್ಷೇತ್ರದಲ್ಲಿ ಅವಿವೇಕ ಸ್ವರೂಪಲ್ಲದ ಸದ್ವಿವೇಕ ವೃಕ್ಷ ಪ್ರಾದುರ್ಭೂತವಾಯಿತ್ತೆಂಬುದೀಗ, ಪೃಥ್ವಿಯ ಸಾರಗೆಟ್ಟ ಹೊಲದಲ್ಲಿ ಅರವೆಯಿಲ್ಲದ ಮರಹುಟ್ಟಿ ಎಂಬ ಶಬ್ದಕ್ಕರ್ಥ. ಆ ಸದ್ವಿವೇಕ ವೃಕ್ಷದಲ್ಲಿ ವೇದಾಗಮಂಗಳ ಅರಿವಿಂಗೆ ಗೋಚರವಾದ ನಿರ್ವಿಜ ಸ್ಥಲವಪ್ಪ ಮಹಾಘನ ಲಿಂಗ ಜನಿಸಿತ್ತೆಂಬುದೀಗ, ಕಣ್ಣಿಗೆ ತೋರಲಿಲ್ಲದ ಬಿತ್ತಾಯಿತ್ತೆಂಬ ಶಬ್ದಕ್ಕರ್ಥ. ಆ ನಿರ್ವಿಜ ಸ್ಥಲವಪ್ಪ ಮಹಾಘನಲಿಂಗದ ಸಂಗವ ಸತ್ಕ್ರಿಯಾಚಾರದಲ್ಲಿ ನಿಕ್ಷೇಪಿಸಲು ಮನದಜ್ಞಾನದಲ್ಲಿ ಅಂಕುರಿಸಿ ಆತ್ಮನರಿವಿನಲ್ಲಿ ಫಲಿಸಿತ್ತೆಂಬುದೀಗ, ಅದು ಈ ಧರೆಯಲ್ಲಿ ಬಿತ್ತಿದರೆ ಆ ಧರೆಯಲ್ಲಿ ಹುಟ್ಟಿತ್ತು ಅದರಿಂದಾಚೆ ಫಲವಾಯಿತ್ತು ಎಂಬ ಶಬ್ದಕ್ಕರ್ಥ. ಸಕಲ ತತ್ವಂಗಳ ನೊಳಕೊಂಡು ಪರಿಪಕ್ವವಾಯಿತ್ತೆಂಬುದೀಗ, ಕೊಂಬಿಂದೀಚೆ ಹಣ್ಣಾಯಿತ್ತೆಂಬ ಶಬ್ದಕ್ಕರ್ಥ. ಆ ಮೋಕ್ಷ ಫಳವ ಸ್ವೀಕರಿಸುವ ಶರಣನ ಶಿವಾಪೇಕ್ಷೆಯೆಂಬ ಬಾಯಿಗೆ ಸಾಧ್ಯವಾಗಿರ್ಪುದಾಲಿಂಗವೆಂಬುದೀಗ, ಹಣ್ಣು ಮೆಲುವ ಬಾಯಿಗೆ ಹಣ್ಣಿತ್ತು ಎಂಬ ಶಬ್ದಕ್ಕರ್ಥ. ಇಂತಪ್ಪ ಮೋಕ್ಷಫಳದ ಪರಮಾಮೃತ ರಸವ ಸ್ವೀಕರಿಸಿ ಪರಮ ಪರಿಣಾಮವನೆಯ್ದುವ

ತದ್ರುಚಿ ಭೇದವನು ಅರುಹಿಕೊಡೆಂದು ಬಿನ್ನೈಸುತ್ತಿರ್ದ ಶರಣ ಜ್ಞಾನ ಗುರು ವಿಂಗೆ ಎಂಬುದೀಗ, ಈ ಹಣ್ಣಿನ ಸವಿಯ ಹೇಳು ಚನ್ನ ಬಂಕೇಶ್ವರ ಲಿಂಗಾ ಎಂಬ ಶಬ್ದಕ್ಕರ್ಥ.

೨೦

ದಬ್ಬಳ ಧರೆಯು ಚುಚ್ಚಲಾರದಿಹಾಗ ಮುಳ್ಳು ಮೂರು ಲೋಕವ
ಚುಚ್ಚಿತ್ತು
ಕಟ್ಟಿ ಬಲಿದ ಹಕ್ಕಿ ಹಾರಲಾರದೆ ಆ ಕೊಂಬಿಂದ ಈ ಕೊಂಬಿನಲ್ಲಿ
ಉಳಿಯಿತ್ತು
ತುಪ್ಪಳ ಬಾರದ ಮರಿ ಮಹದಾಕಾಶವ ಸುತ್ತಿತ್ತು
ಹೆತ್ತವಳರಿಯದ ಮುದ್ದ ಆಗ ಹುಟ್ಟಿದ ಶಿಶು ಅರಿಯಿತ್ತು;
ತಮ್ಮವ್ವೆಗೆ ಮುದ್ದ ಕೊಟ್ಟು ತಾ ಸತ್ತಿತ್ತು ಬಂಕೇಶ್ವರ ಲಿಂಗದಲ್ಲಿ.

**ಟೀಕು:—** ಸ್ಥೂಲವಾದ ಶೃತಜ್ಞಾನ ದೇಹಭಾವವ ನಷ್ಟವ ಮಾಡಲರಿಯದಾಗಿ ಶರಣನ ಸೂಕ್ಷ್ಮವಾದ ಸ್ವಾನುಭಾವ ಜ್ಞಾನ ತನು ತ್ರಯಂಗಳ ನಷ್ಟವ ಮಾಡಿತ್ತೆಂಬುದೀಗ, ಪಬ್ಬಳ ಧರೆಯು ಚುಚ್ಚಲಾರದಿಹಾಗ ಮುಳ್ಳು ಮೂರು ಲೋಕವ ಚುಚ್ಚಿತ್ತೆಂಬ ಶಬ್ದಕ್ಕರ್ಥ. ಮನ ಪವನಂಗಳೆಂಬದಕ್ಕೆ ದೃಢ ಸಿಧ್ಧಾರವಾಗಿ ಬಲಿದ ಜೀವಹಂಸನು ಸಕಲ ಪ್ರಪಂಚ ದಾಂಟಿ ಪರಶಿವ ತತ್ವದತ್ತೆಯ್ದಲಾರದೆ ಅಂತರಂಗದಿಂ ಬಹಿರ್ ಪ್ರಪಂಚಿನಲ್ಲಿ ಉಳಿಯಲು ಸಕಲ ತತ್ವಂಗಳ ತೋರಿಕೆ ಏನೂ ಇಲ್ಲದ ಜ್ಞಾನ ಕಲಾತ್ಮನಪ್ಪ ಪರಮಹಂಸನು ಚಿದಾಕಾಶಮಯವಾದ ಮಹಾ ಘನಲಿಂಗವ ಧರಿಸಿ ಅನ್ವೃತವಾಗಿ ಆಚರಿಸುತ್ತಿಹನೆಂಬುದೀಗ, ರಟ್ಟೆ ಬಲಿತ ಹಕ್ಕಿ ಆ ಕೊಂಬಿಂದ ಈ ಕೊಂಬಿನಲ್ಲಿ ಉಳಿಯಿತ್ತು ತುಪ್ಪಳು ಬಾರದ ಮರಿ ಮಹದಾಕಾಶವ ಸುತ್ತಿತ್ತೆಂಬ ಶಬ್ದಕ್ಕರ್ಥ. ಜ್ಞಾನ ಜನನಿಯಪ್ಪ ಆತ್ಮನೆಂಬ ಸತಿಯರಿಹ ಭವರೋಗಹರದೆಂಬ ಪರಮೌಷಧಿಯ ಆತ್ಮಂಗೆ ಶಿವಕೃಪೆಯಾದಾಕ್ಷಣವೆ ಜನಿಸಿದ ಸುಜ್ಞಾನವೆಂಬ ಶಿಶು ತದ್ವಸ್ತುವ ಅರಿಯಿತ್ತೆಂಬುದೀಗ, ಹೆತ್ತವಳರಿಯದ ಮುದ್ದು ಆಗ ಹುಟ್ಟಿದ ಶಿಶು ಅರಿಯಿತ್ತೆಂಬ ಶಬ್ದಕ್ಕರ್ಥ. ಆ ಸುಜ್ಞಾನ ತನಗೆ ಮಾತೃಸ್ಥಾನವಾದ ಆತ್ಮಂಗೆ ಪರಬ್ರಹ್ಮವೆಂಬ ಔಷಧಿಯ ಸದ್ಭಕ್ತಿಯ ಮುಖದಿಂ ಕುದಿಹ ಕೊಟ್ಟು ಭವರೋಗಮಂ ಪರಿಹರಿಸಿ ತಾ ಚಿತ್‌ಪ್ರಭಾ ಚೈತನ್ಯಲಿಂಗದಲ್ಲಿ ತಲ್ಲಿಯ್ಯವಾಯಿತ್ತಾಗಿ, ತಮ್ಮವ್ವೆಗೆ ಮುದ್ದು ಕೊಟ್ಟು ತಾ ಸತ್ತಿತ್ತು ಬಂಕೇಶ್ವರ ಲಿಂಗದಲ್ಲಿ ಎಂಬ ಶಬ್ದಕ್ಕರ್ಥ.

೨೧

ಹಾವ ಕೊಂದು ತಿಂದ ಹದ್ದವ ತಿಂದರೆ ಸ್ವಾನುಭಾವ—
ಜ್ಞಾನಿ ಹುಲಿಯಕೊಂದ ನಾಯ ಕೊಲ್ಲದೆ ತಿಂದಡೆ ಆತ
ಪರಂಜೋತಿ ಪ್ರಕಾಶ

ಇಂತಿ ಹಾವಿನ ಹಗೆ ಹುಲಿಯ ವಿರೋಧ ಇಂತಿ ಉಭಯವ
ತಿಂದವನ
ತಿಂದು, ವಿಚ್ಛಂದ ವಿಲ್ಲದೆ ಬದುಕು ಬಂಕೇಶ್ವರ ಲಿಂಗವ ನರಿವುದಕ್ಕೆ!

**ಟೀಕು:—** ಶಂಕಾ ವಿಷ ಸಂಬಂಧಿಯಪ್ಪ ಮನೋಕುಂಡಲಿಯ ನಷ್ಟವ ಮಾಡಿ ಉನ್ಮನಿ ಸ್ವರೂಪಿನಿಂದ ಅವಗ್ರಹಿಸಿಕೊಂಡ ಪರಮಾತ್ಮನ ಸುಜ್ಞಾನಮುಖದಿಂದ ಅವಗ್ರಹಿಸಿಕೊಂಡ ಶರಣನೆ ಸ್ವಾನುಭಾವ ಜ್ಞಾನಿ ಎಂಬುದೀಗ, ಹಾವ ಕೊಂದು ತಿಂದ ಪದ್ದವ ತಿಂಪರೆ ಸ್ವಾನುಭಾವ ಜ್ಞಾನ ಎಂಬ ಶಬ್ದಕ್ಕರ್ಥ. ಕಾಲ ವ್ಯಾಘ್ರನ ಭಯವ ಸತ್ಕ್ರಿಯಾ ಮುಖದಿಂ ನಷ್ಟವ ಮಾಡಿದಂಗವ ಕರ್ಮಯೋಗಂಗಳಿಂ ನಿಗ್ರಹಿಸಪೆ ಸದ್ಭಕ್ತಿ ಮುಖದಿಂದ ಅವಗ್ರಹಿಸಿಕೊಂಡ ಶರಣನೆ ದಿವ್ಯ ತೇಜೋ ಪ್ರಕಾಶಮಯನೆಂಬುದೀಗ, ಹುಲಿಕೊಂದ ನಾಯಕೊಲ್ಲದೆ ತಿಂದಡೆ ಆತ ಪರಂಜೋತಿ ಪ್ರಕಾಶನೆಂಬ ಶಬ್ದಕ್ಕರ್ಥ. ಮನೋಪ್ರಕೃತಿಯ ನಷ್ಟವಮಾಡಿದ ಪರಮಾತ್ಮನ ಕಾಲಿವ್ಯಾಘ್ರನ ಭಯನಿವಾರಿಸಿದ ಆಚಾರಾಂಗವೆಂಬ ಉಭಯವನು ಭಕ್ತಿ ಜ್ಞಾನ ಮುಖದಿಂದ ಅವಗ್ರಹಿಸಿಕೊಂಡ ಶರಣನಪ್ಪ ಶ್ರೀಗುರುವೆಂಬುದೀಗ, ಇಂತಿ ಹಾವಿನ ಹಗೆ, ಹುಲಿಯ ವಿರೋಧ ಇಂತೀ ಉಭಯವ ತಿಂದವನ ಎಂಬ ಶಬ್ದಕ್ಕರ್ಥ. ಇಂತಪ್ಪ ಶ್ರೀಗುರುವ ಜ್ಞಾನ ಕಲಾತ್ಮನು ನಿಜವನೆಯ್ದುವಡೆ ಸದಾಚಾರ ಸನ್ಮಾರ್ಗ ಭಕ್ತಿ ಮುಖದಿಂದ ಅವಗ್ರಹಿಸಿ ಭವವಳಿದು ಮುಕ್ತರಾಗಿ ಬಾಳೆಂದು ನಿರೂಪಿಸುತ್ತಿರ್ದ ಅನ್ಯೋಪದೇಶವಾಗಿ ಶರಣನೆಂಬುದೀಗ, ತಿಂದು ವಿಚ್ಛಂದವಿಲ್ಲದೆ ಬದುಕು ಬಂಕೇಶ್ವರಲಿಂಗವ ನರಿವುದಕ್ಕೆ ಎಂಬ ಶಬ್ದಕ್ಕರ್ಥ.

೨೨

ಹೊಲದೊಳಗೊಂದು ಹುಲ್ಲೆಯ ಮರಿಯ ನೀದು ಲಲ್ಲೆಯಿಂದ
ನೆಕ್ಕುತ್ತಿರಲಾಗಿ,
ಅದು ಹುಲಿಯ ಮರಿಯಂತಾಯಿತ್ತು ಎಂದು ತನ್ನ ಹೊಲಬಿಗೆ
ತೋರಿ ಲಲ್ಲೆಯ ಬಿಟ್ಟಿತ್ತು
ಬಿಟ್ಟುದನರಿದು ಆ ಮರಿ ಹುಲಿಯಾಗಿ ಹುಲ್ಲೆಯ ತಿಂದಿತ್ತು
ಬಂಕೇಶ್ವರಲಿಂಗ ಎನ್ನಯ ಶಂಕೆಯ ಹೇಳಯ್ಯಾ !

**ಟೀಕು:—** ತನುವೆಂಬ ಕ್ಷೇತ್ರದಲ್ಲಿ ಮಾಯೆಂಬ ಹರಿಣಿ ಜೀವನೆಂಬ ಮರಿಯನೀದು ಸಂಸಾರ ವಿಷಯ ಸುಖವ ಕೊಟ್ಟು ಲೀಲೋಲ್ಲಾಸತೆಯಿಂ ಲಾಲಿಸುತ್ತಿರಲಾಗಿ ಎಂಬುದೀಗ, ಹೊಲದೊಳಗೊಂದು ಹುಲ್ಲೆ ಮರಿಯನೀದು ಲಲ್ಲೆಯಿಂದ ನೆಕ್ಕುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಇಂತಪ್ಪ ಜೀವಂಗೆ ಸುಜ್ಞಾನೋದಯವಾಗಿ ಸರ್ವಭವಾಪಹಾರಿಯಾದ ಚಿದಾಂಶೀಕನಾಗಲದನರಿದು ಮಾಯೆಯಂಜಲೊಲ್ಲಾ ಸತಿಯಂ ಬಿಟ್ಟು ತೊಲಗಿತ್ತೆಂಬುದೀಗ, ಅದು ಹುಲಿಯ ಮರಿಯಂತಾಯಿತ್ತೆಂದು ತನ್ನ ಹೊಲಬಿಗೆ ತೋರಿ ಲಲ್ಲೆಯ ಬಿಟ್ಟಿತ್ತೆಂಬ ಶಬ್ದಕ್ಕರ್ಥ. ಇಂತು ಮಾಯೆ ಕೆಲಸಾರಲದ ನರಿದ ಜ್ಞಾನ ಕಲಾತ್ಮನು ನಿಜೋಪದೇಶದಿಂ

ಸರ್ವ ಭವಾಪಹರಿಯಪ್ಪ ಚಿತ್ ಸ್ವರೂಪನಾಗಿ ಮಾಯೆಯ ನಷ್ಟವ ಮಾಡಿದ ನೆಂಬುದೀಗ, ಬಿಟ್ಟುವನರಿವು ಮರಿ ಹುಲಿಯಾಗಿ ಹುಲ್ಲೆಯ ತಿಂದಿತ್ತೆಂಬ ಶಬ್ದಕ್ಕರ್ಥ. ಈ ನಿರ್ಣಯವನರಿದ ಶರಣನು ತನ್ನ ನಿಜವಜ್ಞಾನ ಗುರುಮುಖದಿಂ ಬೆಸಗೊಳುತ್ತಿರ್ದನೆಂಬುದೀಗ, ಬಂಕೇಶ್ವರ ಲಿಂಗ ಎನ್ನಯ ಶಂಕೆಯ ಹೇಳಯ್ಯ ಎಂಬ ಶಬ್ದಕ್ಕರ್ಥ.

೨೩

ರಕ್ಕಸಿಯ ಕೋರದಾಡೆಯಲ್ಲಿ ತಪ್ಪು ಹಲ್ಲಿನ ಮಧ್ಯದಲ್ಲಿ
ಒಂದು ಒಪ್ಪದ ಶಿಶು ಹುಟ್ಟಿತ್ತು ಅವಳು ಕಚ್ಚುವ ಜೀವನ ತಪ್ಪಲಿಕ್ಕುವದು
ಅವಳು ಅಡಗ ಕಡಿವಲ್ಲಿ ದಾಡೆಯಲ್ಲಿ ಅಡಗಿ ಅಗಿಯಲಿಸದು
ಅವಳು ಶಿಶುವನಗಿದೆಹೆನೆಂದಡೆ ದಾಡೆಯೊಳಗಡಗಿ, ಉಗುಳುವದಕ್ಕೆ ಅಸಾಧ್ಯ,
ತನ್ನ ತಲೆಯುಳಿದಲ್ಲದೆ ಶಿಶುವಿನ ಹಗೆ ಬಿಡದು,
ಬಂಕೇಶ್ವರಲಿಂಗ ನೀ ಮಾಡಿದ ಮಾಯೆ ಇದಾರಿಗೂ ಅಸಾಧ್ಯ.

ಟೀಕು— ಚತುರ್ದಶ ಭವನಂಗಳ ಮುರಿದು ನುಂಗುತ್ತಿಹ ಮಾಯೆಂಬ ರಾಕ್ಷಸಿಯ ಸಕಲ ಕರಣಂಗಳ ಮಧ್ಯದ ಸಂಕಲ್ಪ-ವಿಕಲ್ಪಂಗಳಲ್ಲಿ ಜ್ಞಾನವೆಂಬ ಶಿಶು ಉದಯವಾಯಿತ್ತೆಂಬುದೀಗ, ರಕ್ಕಸಿಯ ಕೊರದಾಡೆಯಲ್ಲಿ ತಪ್ಪು ಮಧ್ಯದಲ್ಲಿ ಒಂದು ಒಪ್ಪದ ಶಿಶು ಹುಟ್ಟಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಮಾಯಾ ಸಂಹರಿಸುವ ಜೀವನ ಕರಣ ಮಥನ ಘಾಸಿಗೆ ಹೊರಗು ಮಾಡುವದು ಆ ಜ್ಞಾನವೆಂಬುದೀಗ, ಅವಳು ಕಟ್ಟುವ ಜೀವವ ತಪ್ಪಲಿಕ್ಕುವದೆಂಬ ಶಬ್ದಕ್ಕರ್ಥ. ಆ ಮಾಯೆಯ ವಿಷಯ ಸುಖವನನುಭವಿಸುವಲ್ಲಿ ಕರಣಂಗಳ ಮಧ್ಯದಲ್ಲಿ ಅಡಗಿ ಅವ ತನ್ನನುಜ್ಞೆಯಲ್ಲಿ ತಡದು ಕಂಟಕವಾಗಿರ್ಪುದು ಆಯುರವೆಂಬುದೀಗ, ಅವಳು ಅಡಗ ಕಡಿವಲ್ಲಿ ದಾಡೆಯಲ್ಲಿ ಅಡಗಿ ಅಗಿಯಲಿಸದೆಂಬ ಶಬ್ದಕ್ಕರ್ಥ. ಆ ವಿದ್ಯಾಶಕ್ತಿ ಜ್ಞಾನವನು ಅಪಹರಿಸಿಹೆನೆನಲು ಆ ಜ್ಞಾನ ಕರಣಂಗಳ ಮಧ್ಯದಲ್ಲಿ ಅಡಗಿ ಅದನೊಯಿಸಲುದ್ಗಾರಿಸಿಹೆನೆಂದೊಡೆ ಅಸಾಧ್ಯವಾಗಿರ್ಪದೆಂಬುದೀಗ, ಅವಳು ಶಿಶುವನಗಿದೆಹೆನೆಂದಡೆ ದಾಡೆಯೊಳಡಗಿ ಉಗುಳುವದಕ್ಕೆ ಅಸಾಧ್ಯವೆಂಬ ಶಬ್ದಕ್ಕರ್ಥ. ಆ ಮಾಯೆಯ ಅಹಂ ಮಮತೆ ದುರ್ವೃತ್ತಿ ಛೇದನವಾಗಿ ಅಭೇದ್ಯವಸ್ತು ಸಾಧ್ಯವಾದಲ್ಲದೆ ಜ್ಞಾನದ ದ್ವೇಷವ ಬಿಟ್ಟು ಕ್ರಿಯಾಶಕ್ತಿ ಸ್ವರೂಪಿನಿಂದ ಅಂಗವಾಗದೆಂಬುದೀಗ, ತನ್ನ ತಲೆಯುಳಿದಲ್ಲದೆ ಶಿಶುವಿನ ಹಗೆ ಬಿಡದೆಂಬ ಶಬ್ದಕ್ಕರ್ಥ. ಅದು ಕಾರಣ ಶಿವನುಂಟುಮಾಡಿದ ಪ್ರಕೃತಿಯ ಬರಿಯ ಜ್ಞಾನದಿಂ ಜಯಿಸಿಹೆನೆಂದೊಡೆ ಹರಿಸುರ ಬ್ರಹ್ಮಾದಿಗಳಿಗಸಾಧ್ಯವೆಂಬುದೀಗ, ಬಂಕೇಶ್ವರಲಿಂಗ ನೀಮಾಡಿದ ಮಾಯೆ ಇದಾರಿಗೂ ಅಸಾಧ್ಯವೆಂಬ ಶಬ್ದಕ್ಕರ್ಥ.

೨೪

ಸುಧೆಯ ಸುಮಾನದ ಗಿರಿಯಲ್ಲಿ ಒಂದು ಮಲೆಯಜದ ಮರ ಹುಟ್ಟಿತ್ತು—
ಬೇರಿಲ್ಲದೆ, ನೀರಿಲ್ಲದೆ ಭೂಮಿಯೊಳದಲ್ಲದೆ ಬೆಳವುತ್ತದೆ ನೋಡಾ !
ಅದಕ್ಕೆ ಬೇರಿನೊಳಗಣ ಹಣ್ಣು ಮರದ ಮಧ್ಯದಲ್ಲಿ—
ಕಾಯಿ ತುದಿಯಲ್ಲಿ, ಹೂ ಕುಸುಮವಂ ಬಲಿದು ಮರನ ಮಧ್ಯದಲ್ಲಿ ಕಾಯಿ ಬಲಿಹು
ರಸ ಬೇರಿಗಿಳಿಯಿತ್ತು ಬೇರಿನ ಹಂಣು ಬಂಕೇಶ್ವರ ಲಿಂಗಕ್ಕೆ ಆರೋಗಣೆಯಾಯಿತ್ತು.

ಟೀಕು:— ಶರಣನ ಜ್ಞಾನಾಮೃತಮಯವಾದ ಉನ್ಮನಿಯ ಚಿದಹಂಕಾರದಲ್ಲಿ ಸದ್ವಾಸನಾ ಸ್ವರೂಪವಪ್ಪ ಸದ್ವಿವೇಕ ವೃಕ್ಷ ಜನಿಸಿತ್ತೆಂಬುದೀಗ, ಸುಧೆಯ ಸುಮಾನದ ಗಿರಿಯಲ್ಲಿ ಒಂದು ಮತಿಯದ ಮರ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಆ ಸದ್ವಿವೇಕವೃಕ್ಷ ಮೂಲಹಂಕಾರ ಪ್ರಕೃತಿ-ಮನೋಪ್ರಕೃತಿಯಲ್ಲದೆ ದೇಹ ಪ್ರಕೃತಿಯೊಳಗಲ್ಲದೆ ಮೂಲಜ್ಞಾನದಿಂ ಪರಮಾನಂದ ರಸವನುಂಡು ಚಿದ್‌ಭೂಮಿಯಲ್ಲಿ ಸದಾಚಾರ ಸಂಪತ್ತಿನ ಶಾಖೋಪಶಾಖೆಗಳಿಂ ವರ್ಧನವಾಗುತ್ತಿಹುದೆಂಬುದೀಗ, ಬೇರಿಲ್ಲದೆ ನೀರಿಲ್ಲದೆ ಭೂಮಿಯೊಳಗಲ್ಲದೆ ಬೆಳವುತ್ತಿದೆ ನೋಡಾ ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ ವೃಕ್ಷದ ಮೂಲಜ್ಞಾನದಲ್ಲಿ ತೃಪ್ತಿಲಿಂಗವೆಂಬ ಹಣ್ಣು ಅವಿವೇಕದಲ್ಲಿ ಜ್ಞಾನಲಿಂಗವೆಂಬ ಫಲ ಸದಾಚಾರದಲ್ಲಿ ಕ್ರಿಯಾಲಿಂಗವೆಂಬ ಪುಷ್ಪ ಫಲಿಸುತ್ತಿರ್ಪುದು ಶರಣಂಗೆಂಬುದೀಗ, ಅದಕ್ಕೆ ಬೇರಿನೊಳಗಣ ಹಣ್ಣು ಮರದ ಮಧ್ಯದಲ್ಲಿ ಕಾಯಿ ತುದಿಯಲ್ಲಿ ಹೂವೆಂಬ ಶಬ್ದಕ್ಕರ್ಥ. ಅದೆಂತೆಂದೊಡೆ: ಸದಾಚಾರವೆಂಬ ಶಾಖೆಗಳಲ್ಲಿ ಕ್ರಿಯಾಲಿಂಗವೆಂಬ ಪುಷ್ಪವಿಕಸಿತವಾಗಿ ಸದ್ವಿವೇಕ ವೃಕ್ಷದಲ್ಲಿ ಸುಜ್ಞಾನ ಲಿಂಗವೆಂಬ ಫಲ ಬಲಿದು ಅದರ ಚಿದ್ರಸಮೂಲ ಜ್ಞಾನವೆಂಬ ಬೇರಿಗಿಳಿದು ಭಾವಲಿಂಗವೆಂಬ ಹಣ್ಣು ಪರಿಪಕ್ವವಾಯಿತ್ತು ಎಂಬುದೀಗ, ತುದಿಯಲ್ಲಿ ಕುಸುಮ ಬಲಿದು ಮರದ ಮಧ್ಯದಲ್ಲಿ ಕಾಯಿ ಬಲಿದು ರಸ ಬೇರಿಗಿಳಿಯಿತ್ತು ಎಂಬ ಶಬ್ದಕ್ಕರ್ಥ. ಆ ಮೂಲಜ್ಞಾನದಲ್ಲಿ ಪರಿಪಕ್ವವಾದ ಮೋಕ್ಷವೆಂಬ ಹಣ್ಣ ಶರಣ, ಮಹಾನುಭಾವ ವಿವೇಕದಿಂ ಸ್ವೀಕರಿಸಿ ನಿತ್ಯತೃಪ್ತನಾದನೆಂಬುದೀಗ, ಬೇರಿನ ಹಣ್ಣು ಬಂಕೇಶ್ವರ ಲಿಂಗಕ್ಕೆ ಆರೋಗಣೆಯಾಯಿತ್ತೆಂಬ ಶಬ್ದಕ್ಕರ್ಥ.

೨೫

ಕಾಲ ಸಂಹಾರವ ಮಾಡುವಲ್ಲಿ ಕಾಳಗತ್ತಲೆಯ ಕೋಣೆಯೊಳಗೊಂದು—
ಬಾಲ ಲೀಲೆಯ ಶಿಶು ಉಳಿಯಿತ್ತು;

ಬಾಲಲೀಲೆ ಹಿಂಗಿ ವಿಷಯದ ಏಳಿಗೆಯಾಯಿತ್ತು
ಕಣ್ಣಿನಲ್ಲಿ ಮೊಲೆ ಹುಟ್ಟಿ, ಎದೆಯಲ್ಲಿ ಯೋನಿಹುಟ್ಟಿ ಕೈಯಲ್ಲಿ
ಬೆಸಲಾಯಿತ್ತು
ಅದು ಗಂಡೋ-ಹೆಣ್ಣೋ ಎಂದು ಅಂಡವ ಹಿಡಿದು ನೋಡಿ,
ಅಂಡಜ ಮುಗ್ಧೆಯ ಮಕ್ಕಳಿರಾ ಎಂದರವರು !
ಅದರಂದವ ನೋಡಿ ಹೆಣ್ಣೂ ಅಲ್ಲ-ಗಂಡೂ ಅಲ್ಲ ನಡುವೆ ಒಂದು
ಕೆಂಡದಂತಿದೆ
ಬಂಕೇಶ್ವರ ಲಿಂಗಕ್ಕೆ ತೋರಿ ಕುರುಹಿಟ್ಟು ಕೊಂಬಾ !

**ಟೀಕು:**— ಮನಜ್ಞಾನೋದಯದಿಂ ಇಂದ್ರಿಯ ಕರಣಂಗಳ ಪ್ರಪಂಚು ನಷ್ಟವ ಮಾಡುತ್ತಿರಲು ತಮೋಗುಣ ಸಂಬಂಧವಾದಕಾರಣ ತನುವಿನಲ್ಲಿ ಭ್ರಾಂತು ಕ್ರೀಡೆಯಿಂದಿರ್ಪ ಜೀವನೆಂಬ ಶಿಶು ಉಳಿದಿಹನೆಂಬುದೀಗ, ಕಾಲಸಂಹಾರವ ಮಾಡುವಲ್ಲಿ ಕಾಳಗತ್ತಲೆಯ ಕೋಣೆಯೊಳಗೊಂದು ಬಾಲಲೀಲೆಯ ಶಿಶು ಉಳಿಯಿತ್ತೆಂಬ ಶಬ್ದಕ್ಕರ್ಥ. ಇಂತು ಮನ ಜ್ಞಾನೋದಯದಿಂ ಇಂದ್ರಿಯಂಕರಣಂಗಳ ಪ್ರಪಂಚು ನಷ್ಟವಾಗಲು ಆ ಜೀವನ ಭ್ರಾಂತುಭಾವ ಹಿಂಗಿ ಸುಜ್ಞಾನ ದೃಷ್ಟಿಯಲ್ಲಿ ಪರಮಾಮೃತ ಕುಂಭ ಸ್ವರೂಪಿನಿಂ ಒಪ್ಪುತ್ತಿರ್ಪ ಭಾವವೆಂಬ ಸ್ತನ ಜನಿಸಿ ಅಂಗದಲ್ಲಿ ಪರಮಾನಂದ ಸುಖಕ್ಕೆ ಕಾರಣವಾದ ಆಚಾರವೆಂಬ ಯೋನಿ ಜನಿಸಿ ಭಕ್ತಿಯೆಂಬ ಜವ್ವನ ಪರಿಪಕ್ವವಾದ ಸಜ್ಜೀವ ಸ್ವರೂಪವಪ್ಪ ಶರಣಸತಿ ಶ್ರೀಗುರುವಿನ ಸಂಗ ಅತ್ಯಂತ ಶ್ರದ್ಧೆಯಿಂ ಬಯಸಿ ಕಾಮಾತುರಿಯಾಗಿರ್ಪಳೆಂಬುದೀಗ, ಬಾಲಲೀಲೆ ಹಿಂಗಿ ವಿಷಯದ ಏಳಿಗೆಯಾಯಿತ್ತು ಕಣ್ಣಿನಲ್ಲಿ ಮೊಲೆ ಹುಟ್ಟಿ ಎದೆಯಲ್ಲಿ ಯೋನಿ ಹುಟ್ಟಿ ಎಂಬ ಶಬ್ದಕ್ಕರ್ಥ. ಇಂತು ಕಾಮಾತುರಿಯಾಗಿರ್ಪ ಶರಣಸತಿಯಲ್ಲಿ ಶ್ರೀಗುರು ಅವಿರಳ ಸಂಪರ್ಕವ ಮಾಡಲು ಚಿದ್‌ಗರ್ಭಚಿಹ್ನದೋರಿ ಕರಸ್ಥಲದಲ್ಲಿ ಲಿಂಗವೆಂಬ ಶಿಶು ಜನಿಸಿತ್ತೆಂಬುದೀಗ, 'ಕೈಯಲ್ಲಿ ಬೆಸಲಾಯಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನಲಿಂಗವ ಕರಸ್ಥಲದಲ್ಲಿ ಹಿಡಿದು ಗಂಡೋ ಹೆಣ್ಣೋ ಎಂದೊಡೆ ಶಿವಭಕ್ತಿ ಸ್ವರೂಪ ಶಿವಶಕ್ತಿಗಳಿಂದೊಡನಾದ- ಬಿಂದು ಸ್ವರೂಪನಾದ ಬಿಂದುಗಳೆಂದೊಡೆ ಸಕಲ ನಿಷ್ಕಳವಾದ ಕಾರಣ ಸಕಲ ನಿಷ್ಕಳವೆಂದು ಸಂಕಲ್ಪಿಸುತ್ತಿಹರು ಖಂಡಿತ ಭಾವಿಗಳೆಂಬುದೀಗ, ಅದು ಗಂಡೋ-ಹೆಣ್ಣೋ ಎಂದು ಅಂಡವ ಹಿಡಿದು ನೋಡಿ ಎಂಬ ಶಬ್ದಕ್ಕರ್ಥ. ಇಂತಪ್ಪ ಖಂಡಿತ ಜ್ಞಾನಿಗಳೆಲ್ಲರು, ಅಂಡವೆಂದೊಡೆ ಚಿದ್ ಬ್ರಹ್ಮಾಂಡ; ಜಎಂದೊಡೆ ಅಲ್ಲಿ ಹುಟ್ಟಿದ ಮಾಯಾ ಸಂಭೂತರಪ್ಪ ಜೀವರಿಂದಲೆ ಶ್ರಮಿಸಿ ನುಡಿವುತ್ತಿಹರು ಮಹಾಜ್ಞಾನಿಗಳಪ್ಪ ಶರಣರೆಂಬುದೀಗ, ಅಂಡಜ ಮುಗ್ಧೆಯ ಮಕ್ಕಳಿರಾ ಎಂದವರೆಂಬ ಶಬ್ದಕ್ಕರ್ಥ. ಇಂತಪ್ಪ ಶರಣರು ಆ ಸುಜ್ಞಾನ ಲಿಂಗದ ನಿಜಸ್ವರೂಪವಂ ಜ್ಞಾನದೃಷ್ಟಿಯಿಂದ ನೋಡಿ ಸಕಲವೆಂದೊಡೆ ನಿಷ್ಕಲವಾಗಿರ್ಪುದಾಗಿ ಸಕಲವಲ್ಲ ನಿಷ್ಕಲವೆಂದೊಡೆ ಸಕಳವಾಗಿರ್ಪುದಾಗಿ ನಿಷ್ಕಲವಲ್ಲ ಈ ಉಭಯವನೊಳಕೊಂಡು

ಪರಂಜ್ಯೋತಿ ಪ್ರಕಾಶಮಯವಾಗಿರ್ಪುದೆಂದರಿದು ಮಹಾಜ್ಞಾನ ಗುರುವಿಂಗೆ ತೋರಿ ತೋರಿ ಕುರುಹಿಟ್ಟರೆದು ಕೂಡುತ್ತಿಹರೆಂಬುದೀಗ, ಅದರಂದವ ನೋಡಿ ಹೆಣ್ಣೂ ಅಲ್ಲ ಗಂಡೂ ಅಲ್ಲ ನಡುವೆ ಒಂದು ಕೆಂಡದಂತಿದೆ ಬಂಕೇಶ್ವರ ಲಿಂಗಕೆ ತೋರಿ ಕುರುಹಿಟ್ಟುಕೊಂಬಾ ಎಂಬ ಶಬ್ದಕ್ಕರ್ಥ.

೨೬

ಘಟ ದೀಪಾಂತರ ಮಾರುತ ಮಾವಿಂದ ಬಂದಿತ್ತೊಂದು
ವಿಕಟಾಂಗದ ಕುದುರೆ,
ಬಾಯಿಗೆ ಹಲ್ಲಣ, ತಿಕಕ್ಕೆ ಕಡಿವಾಣ, ಹಲ್ಲಿಗೆ ಹಕ್ಕರಿಕೆ
ಅದರ ಮೇಲಿದ್ದ ಬಲ್ಲಿಹಂಗೆ ಬಲ್ಲೆಹ ಟಾಳಿಸು ಲಲಿತ ತರಕಸ--
ಸಂಗಾಡಿಗತ್ತಿ ಜವದಾಡೆ ಅಲ್ಲಿ ಅದೆ ಅವನುಡಿಯಲ್ಲಿ,
ರಾವುತನ ತಲೆ ಕುದುರೆಯ ಕಾಲು ಬಲ್ಲೆಹದ ಮೊನೆ ಅಲ್ಲಿಯೆ
ಅಡಗಿತ್ತು
ಬಂಕೇಶ್ವರ ಲಿಂಗವನರಿದ ಅಸುವಾಹಕಂಗೆ !

**ಟೀಕು:**— ಸ್ಥೂಲ ತನು ಮಧ್ಯಸ್ಥವಾದ ಪ್ರಾಣವಾಯು ವಿಕಾರವನುಳ್ಳ ಸೂಕ್ಷ್ಮ ತನುವಿನಲ್ಲಿ ದುರ್ಲಕ್ಷಣ ಸಂಬಂಧಿಯಪ್ಪ ಜೀವನೆಂಬ ಹಯವು ದೇಹ-ಮೋಹ-ಭ್ರಾಂತಿನಿಂ ಚರಿಸುತ್ತಿಹುದೆಂಬುದೀಗ, ಘಟದೀಪಾಂತರ ಮಾರುತ ಮಾವಿಂದ ಬಂದಿತ್ತೊಂದು ವಿಕಟಾಂಗದ ಕುದುರೆಯೆಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಅಪೇಕ್ಷೆ ಭಾವದಲ್ಲಿ ಲಿಂಗದಲ್ಲಾಚಾರ ಕರಣಂಗಳಲ್ಲಿ ಜ್ಞಾನವ ಸಂಬಂಧಿಸಿ ನಿತ್ಯಾನಿತ್ಯ ವಿವೇಕದಿಂ ಸಾಧಿಸಿ ಸಜ್ಜೀವನ ಸ್ವರೂಪನ ಮಾಡಿ, ಸತ್ಪಥದಲ್ಲಿ ನಡಸುತ್ತಿಹ ಪರಮಾತ್ಮನಪ್ಪ ಶರಣನೆಂಬುದೀಗ, ಬಾಯಿಗೆ ಹಲ್ಲಣ, ತಿಕಕ್ಕೆ ಕಡಿವಾಣ ಹಲ್ಲಿಗೆ ಹಕ್ಕರಿಕೆ ಎಂಬ ಶಬ್ದಕ್ಕರ್ಥ. ಆ ಸಜ್ಜೀವನೆಂಬ ಅಸುವಾಹಕನ ಕಾಲ-ಕಾಮ-ಮಾಯೆ-ಮೋಹಾದಿಗಳು ಜಯಿಸಲ್ಪಟ್ಟ ಪರಮಾತ್ಮನೆಂಬ ರಾವುತಂಗೆ ಭಕ್ತಿಯೆಂಬ ಬಲ್ಲೆಹ, ಸೃಷ್ಟಿಯೆಂಬ ಟಾಳಿ, ಸಕಲಕ್ರೀಯಾಧಾರವುಪ್ಪ ಆಧಾರವೆಂಬ ತರಗಸ, ಭಾವವೆಂಬ ಸಂಗಾಡಿ, ಸುಜ್ಞಾನವೆಂಬ ಕತ್ತಿ, ಮಹಾಧರೆಯೆಂಬ ಜವದಾಡೆ, ಆ ಶರಣನಂಗದಲ್ಲಿ ತತ್ಸಂಬಂಧವಾಗಿಹವೆಂಬುದೀಗ, ಅದರ ಮೇಲಿದ್ದ ಬಲ್ಲ ಹಾಗೆ ಬಲ್ಲೆಹ ಟಾಳಿಸು ಲಲಿತ ತರಕಸ ಸಂಗಾಡಿಗತ್ತಿ ಜವದಾಡೆ ಅಲ್ಲಿ ಅದೆ ಅವನುಡಿಯಲ್ಲಿ ಎಂಬ ಶಬ್ದಕ್ಕರ್ಥ. ಹೀಗೆ ಮಹಾಲಿಂಗದ ನಿಜವನರಿದು ಆಚರಿಸುವ ಜೀವಾತ್ಮಂಗೆ ಚೇತನವಪ್ಪ ಪರಮಾತ್ಮಂಗೆ ಆಚರಣಂತ್ಯದಲ್ಲಿ ಆ ಪರಮಾತ್ಮನ ಜ್ಞಾನ ಆ ಸಜ್ಜೀವನ ಸತ್ಕ್ರಿಯಾಚಾರ ಭಕ್ತಿಯ ತೂರ್ಯವೆಂಬ ತ್ರಿವಿಧವ ಆ ಪರಬ್ರಹ್ಮದಲ್ಲಿ ಏಕಾರ್ಥವಾದವೆಂಬುದೀಗ, ರಾವುತನ ತಲೆ, ಕುದುರೆಯ ಕಾಲು, ಬಲ್ಲೆಹದ ಮೊನೆಯಲ್ಲಿ ಅಲ್ಲಿಯೇ ಅಡಗಿತ್ತು ಬಂಕೇಶ್ವರ ಲಿಂಗವನರಿದ ಅಸುವಾಹಕಂಗೆ ಎಂಬ ಶಬ್ದಕ್ಕರ್ಥ.

೨೭

ಐಮುಕ್ತಿ ಕ್ಷೇತ್ರದ ವಾಸದ ರಜತಗಿರಿಯು ಮಧ್ಯದಲ್ಲಿ ಕುರುಕ್ಷೇತ್ರ
ಅದರೊಳಗಿಬ್ಬರು ಧೊರೆಗಳು, ಅರಿ-ರಿಪುಗಳಾದರು
ಅವರ ಹೆಸರು ಕಾಳಾಂಧರ-ಕಮ್ಮಟಹತ ಅಸುಗತನೆಂಬವ
ಬೇರೊಬ್ಬ
ಸುರಿಪುಕುಲ ತಮನಾಶಗತಿ ಮಂಡಲ ವಿರಹಿತ ರಾಜಕುಲ
ಅಸುನಾಥ
ಇವರಿಬ್ಬರೂ ಮುಸಕಲಿಕೆ ಮೊನೆಯಾಯಿತ್ತು
ಅಸು ಭಟರೆಲ್ಲರೂ ಹುಸಿ ಭಟರಾದರು—
ಬಂಕೇಶ್ವರ ಲಿಂಗವ ನಹುದಲ್ಲ ಎಂದ ಕಾರಣ !

ಟೀಕು:— ಮುಕ್ತಿ ಕ್ಷೇತ್ರವೆಂಬ ಭಕ್ತಿಕಾಯದ ನಿರ್ಮಲವಪ್ಪ ಚಿದಹಂಕಾರದಲ್ಲಿ ಮಹಾನುಭಾವಾಂತರಂಗ ಒಪ್ಪುತ್ತಿಹುದೆಂಬುದೀಗ, ಐಮುಕ್ತಿ ಕ್ಷೇತ್ರದ ವಾಸ ರಜತಗಿರಿಯು ಮಧ್ಯದಲ್ಲಿ ಕುರುಕ್ಷೇತ್ರವೆಂಬ ಶಬ್ದಕ್ಕರ್ಥ. ಅಂತಪ್ಪ ಮಹಾನುಭಾವಾಂತರಂಗದಲ್ಲಿ ಇಂದ್ರಿಯಾದಿ ಪತಿಯಪ್ಪ ಜೀವನು ಶಿವ ಸಾಮ್ರಾಜ್ಯವನಾಳುವ ಪರಮನೆಂಬೀರ್ವರು ದ್ವೇಷಿಗಳಾದರೆಂಬುದೀಗ, ಅದರೊಳಗಿಬ್ಬರು ಧೊರೆಗಳು ಅರಿ-ರಿಪುಗಳಾದರೆಂಬ ಶಬ್ದಕ್ಕರ್ಥ. ಅ ಜ್ಞಾನ ಸ್ವರೂಪಿನಿಂ ವಿಶ್ವ ಪ್ರಪಂಚನಲ್ಲಿ ಹತವಾಗಿ ಪ್ರಾಣವಾಯು ವಿಕಾರದಲ್ಲಿ ಗತವಹ ಇಂದ್ರಿಯಾದಿ ಪತಿಯೋರ್ವ ಅರಿಷಡ್ವರ್ಗಂಗಳ ಅಜ್ಞಾನ ತನುವ ಛೇದಿಸಿ ಪ್ರಪಂಚುವರ್ತನೆಯನುಳ್ಳ ದೇಹಭಾವ ರಹಿತವಾಗಿ ಉತ್ತಮೋತ್ತಮವಪ್ಪ ಶಿವಸತ್ಕುಲಜನಾದ ಪ್ರಾಣನಾಥನೋರ್ವ, ಇಂತಿವರ ನಾಮಜೀವ ಪರಮರೆಂಬುದೀಗ, ಅವರ ಹೆಸರು-ಕುಳಾಂಧರ—ಕುಮ್ಮಟಹತ-ಅಸುವಾಹಕನೆಂಬವ ಬೇರೊಬ್ಬರ ಸುರಿಪು ಕುಲತಮ ನಾಶಗತಿ ಮಂಡಲವಿರಹಿತ ರಾಜಕುಲ ಅಸುನಾಥನ ಎಂಬ ಶಬ್ದಕ್ಕರ್ಥ. ಇಂತಪ್ಪ ಜೀವ ಪರಮರು ಅವಿರಳ ಶಿವ ತತ್ವಾನುಭಾವವನು ಅಹುದಲ್ಲವೆಂದು ಜ್ಞಾನಾಜ್ಞಾನದಿಂ ಮಥನಿಸಿ ಕಾದಲು ಜೀವನ 'ಸಕಲ ತತ್ವಕರಣಂಗಳು ಮಿಥ್ಯಕರಣಂಗಳಾಗಿ ಅಳಿಯಲು ಪರಮಾತ್ಮನು ಪರಬ್ರಹ್ಮದಲ್ಲಿ ಏಕಾರ್ಥವಾದನೆಂಬುದೀಗ, ಇವರಿಬ್ಬರೂ ಮುಸಕಲಿಕೆ ಮೊನೆಯಾಯಿತ್ತು ಅಸುಭಟರೆಲ್ಲರೂ ಹುಸಿಭಟರಾದರು ಬಂಕೇಶ್ವರ ಲಿಂಗವನಹುದಲ್ಲವೆಂದ ಕಾರಣ ಎಂಬ ಶಬ್ದಕ್ಕರ್ಥ.

೨೮

ಸೂಜಿಯು ಹಿನ್ನಿಯಲ್ಲಿ ಮುಗಿಲ ತೊರದ ದಾರ ಹಿಡಿಯಿತ್ತು
ಸೂಜೆಯು ಮೊನೆ ಹಳೆಯು ಅರಿವೆಯು ಚುಚ್ಚಲಾರದು,
ಹಿನ್ನಿ ಹಿಡಿದ ಭೇದವ ನೋಡಾ !

ಮೊನೆಗೆಲ್ಲದು, ಹಿನ್ನಿಯ ಭಾರಕ್ಕಂಜಿ, ಹಿನ್ನಿಯ ನನ್ನಿಯ ಮಾಡಿ
ಚನ್ನಾಗಿ ಚುಚ್ಚಲಾಗಿ ಹಿನ್ನಿ ಕಿತ್ತು ಮೊನೆ ಹಾಯಿತ್ತು
ಹಚ್ಚಡ ಎಣೆಗೂಡಿತ್ತು ಬಂಕೇಶ್ವರ ಲಿಂಗದಲ್ಲಿ

**ಟೀಕು:**— ಮಹಾನುಭಾವದ ಸತ್ಕ್ರಿಯಾ ದ್ವಾರದಲ್ಲಿ ಫಲಪದಕಾಂಕ್ಷೆ ಬಹಳತರವಾಗಲು ಆ ಮಹಾನುಭಾವ ವಿವೇಕವಾಯಾ ಭ್ರಾಂತುಪಟಲವೆನಿಸುವ ಆ ಸಂಸ್ಕಾರ ದೇಹಭಾವವ ನಷ್ಟವಮಾಡಲಾರದದೇನು ಕಾರಣವೆಂದೊಡೆ : ಕ್ರೀಯಲ್ಲಿ ಅಪೇಕ್ಷೆಯ ಮುಂದುಗೊಂಡ ನಿಮಿತ್ಯವೆಂಬುದೀಗ, ಸೂಜಿಯ ಹಿನ್ನಿಯಲ್ಲಿ ಮುಗಿಲತೊರದ ದಾರಹಿಡಿಯಿತ್ತು ಸೂಜಿಯ ಮೊನೆ ಹಳೆಯ ಅರಿವೆಯ ಚುಚ್ಚಲಾರದು ಹಿನ್ನಿ ಹಿಡಿದ ಭೇದವನೋಡಾ ಎಂಬ ಶಬ್ದಕ್ಕರ್ಥ. ಕ್ರಿಯಾ ಜಡತತ್ವದಿಂ ಸಂಕಲ್ಪ ಭಾವವನೆಯ್ದಿದ ಜ್ಞಾನ ದೇಹಭಾವವ ನಷ್ಟವ ಮಾಡಿ ಶಿವತತ್ವದತ್ತಲೆಯ್ದಲಾರದೆಂಬುದೀಗ, ಮೊನೆಗೆಲ್ಲದು ಹಿನ್ನಿಯ ಭಾರಕ್ಕಂಜಿ ಎಂಬ ಶಬ್ದಕ್ಕರ್ಥ. ಇಂತು ಪಾಧಿಯಿಂ ಬಿಟ್ಟು ನಿರುಪಾಧಿಕ್ರಿಯಾ ನಿರ್ಧರಿಸಿ ಮಹಾನುಭಾವ ವಿಡಿದಾಚರಿಸಲು ಕ್ರೀ ನಿಷ್ಪತಿಯಾಗಿ ಜ್ಞಾನಬ್ರಹ್ಮದಲ್ಲಿ ಗೆಯ್ದಿತ್ತೆಂಬುದೀಗ, ಹಿನ್ನಿಯ ನನ್ನಿಯಮಾಡಿ ಚನ್ನಾಗಿ ಚುಚ್ಚಲಾಗಿ ಹಿನ್ನಿ ಕಿತ್ತು ಮೊನೆಹಾಯಿತ್ತೆಂಬ ಶಬ್ದಕ್ಕರ್ಥ. ಹೀಗೆ ಕ್ರಿಯನೊಳಕೊಂಡು ಜ್ಞಾನ ಲಿಂಗದಲ್ಲಿಗೆಯ್ದಲು ದೇಹದ ಪ್ರಕೃತಿ ಪ್ರಾಣದ ಧರ್ಮವಳಿದು ಉಭಯವೇಕಾರ್ಥವಾದವು ಶಿವತತ್ವದಲ್ಲಿ ಎಂಬುದೀಗ, ಹಚ್ಚಡ ಎಣೆಗೂಡಿತ್ತು ಬಂಕೇಶ್ವರ ಲಿಂಗದಲ್ಲಿ ಎಂಬ ಶಬ್ದಕ್ಕರ್ಥ.

೨೯

ಬಲುಗಲ್ಲಿನ ಮಣಿಯ ಬೆಗಡವ ನಿಕ್ಕುವದಕ್ಕೆ ಹುಲ್ಲ ಸೂಜಿ
ತಾವರೆಯ ನೂಲಿನ ಬಿಲ್ಲು ದಳ್ಳುರಿಯ ನೇಣು
ಇವೆಲ್ಲವ ಕೂಡಿ ಕಲ್ಲಿನ ಮೇಲಿರಿಸಿ ಮಣ್ಣಿನ ಮುಖಕ್ಕಿರಿಸಿ
ತೆಗೆಯಲಾಗಿ
ಮಣಿ ವಿರಾಳವಾಯಿತ್ತು; ಹುಲ್ಲು-ಬಿಲ್ಲು-ದಳ್ಳುರಿಯ ನೇಣು—
ಬಂಕೇಶ್ವರ ಲಿಂಗದಲ್ಲಿ ಅಡಗಿತ್ತು ಇದ ಬಲ್ಲವರಾರು ಹೇಳಾ !

**ಟೀಕು:**— ಶಿವಜ್ಞಾನ ಸಂಪನ್ನನಾದ ಶರಣನು ಸತ್ತು ಚಿತ್ತಾನಂದ ಘನಘಟ್ಟಿ ಸ್ವರೂಪದಿಂದ ಭೇದ್ಯವಾದ ವಿರಳಪರಬ್ರಹ್ಮವ ಮಹಾನುಭಾವ ವಿವೇಕದಿಂ ಭೇದಿಸಿ ಸರ್ವಾಂಗದಲ್ಲಾವರಣವ ಮಾಡುವದಕ್ಕೆ ಉದ್ಯೋಗಿಸುತ್ತಿರ್ದನೆಂಬುದೀಗ, ಬಲುಗಲ್ಲಿನ ಮಣಿಯ ಬೆಗಡವನಿಕ್ಕುವದಕ್ಕೆ ಎಂಬ ಶಬ್ದಕ್ಕರ್ಥ. ಸತ್ಕ್ರಿಯಾಚಾರವೆಂಬುದೀಗ, ಹುಲ್ಲು ಸೂಜಿ ಎಂಬ ಶಬ್ದಕ್ಕರ್ಥ. ಮಹಾನುಭಾವ ಸನ್ನಹಿತವಾದ ಸದ್ಭಾವವೆಂಬುದೀಗ, ತಾವರೆಯ ನೂಲಿನ ಬಿಲ್ಲೆಂಬ ಶಬ್ದಕ್ಕರ್ಥ. ಸಮ್ಯಜ್ಞಾನಾಗ್ನಿ ಸ್ವರೂಪವಾದ ಸ್ವಾನುಭಾವವೆಂಬುದೀಗ, ದಳ್ಳುರಿಯ ನೇಣೆಂಬ ಶಬ್ದಕ್ಕರ್ಥ. ಅಂತಪ್ಪ ಕ್ರಿಯಾಜ್ಞಾನಭಾವವೆಂಬ ತ್ರಿವಿಧವು ಚಿದ್

ಘನಲಿಂಗದಲ್ಲಿ ಆ ಅಭೇಧ್ಯ ವಸ್ತು ಮುಖದಿಂ ಮಥನಿಸಲು ಆ ಅವಿರಳ ಲಿಂಗ ಶರಣನ ಕರಮನ ಭಾವಕ್ಕೆ ಸಾಧ್ಯವಾಯಿತ್ತೆಂಬುದೀಗ ಇಂತಿವೆಲ್ಲವ ಕೂಡಿ ಕಲ್ಲಿನ ಮೇಲಿರಿಸಿ ಮಣಿಯು ಮುಖಕ್ಕಿಕ್ಕಿ ತೆಗೆಯಲಾಗಿ ಮಣಿ ವಿರಳವಾಯಿತ್ತೆಂಬ ಶಬ್ದಕ್ಕರ್ಥ. ಇಂಥ ಭೇಧ್ಯ ವಸ್ತುವ ಶರಣಂಗೆ ಸಾಧ್ಯವಾಗಿ ಕ್ರಿಯಾ—ಜ್ಞಾನ-ಭಾವಂಗಳು ತಲ್ಲಿಯ್ಯವಾದ ಭೇದವ ಇತರ ಮತವಾದಿಗಳಾರೂ ಅರಿಯರೆಂಬುದೀಗ, ಹುಲ್ಲು—ಬಿಲ್ಲು-ದಳ್ಳುರಿಯು ನೇಣು ಬಂಕೇಶ್ವರಲಿಂಗದಲ್ಲಿ ಅಡಗಿತ್ತು ಇದ ಬಲ್ಲವರಾರು ಹೇಳಾ ಎಂಬ ಶಬ್ದಕ್ಕರ್ಥ.

೩೦

ಇರುವೆಯ ಕಾಲಿನಲ್ಲಿ ಮೂರು ಮೊರಡಿ ಹುಟ್ಟಿದವು
ಒಂದು ಗಡಿಗೆಯ ರೂಪು, ಒಂದು ಅಡಿಗಲ್ಲಿನ ಅಂದ, ಒಂದು ಕೊಡಗೂಸಿನ ಚಂದ
ಗಡಿಗೆಯ ಅಡಿಗಲ್ಲ ಕೊಡಗೂಸು ಕುಡಿದಳು
ಆ ಇರುವೆಯ ಕಾಲು ಕೊಡಗೂಸಿನಲ್ಲಿ ಅದೆ, ಬಂಕೇಶ್ವರ ಲಿಂಗವು ಎಲ್ಲಿ ಹೋದನೆಂದರಿಯೆ.

**ಟೀಕು**:— ಅತಿ ಸೂಕ್ಷ್ಮವಾದ ಮಾಯೆಯ ದುಶ್ಚರಿತ್ರವೆಂಬ ಚರಣದಲ್ಲಿ ಮಲಕ್ರಿಯಂಗಳು ಉದಯಿಸಿದವೆಂಬುದೀಗ, ಇರುವೆಯ ಕಾಲಿನಲ್ಲಿ ಮೂರು ಮೊರಡಿ ಹುಟ್ಟಿದವು ಎಂಬ ಶಬ್ದಕ್ಕರ್ಥ. ಗಡಿಗೆ ಎಂಬುದು ಸಕಲ ಸಾಧನದ್ರವ್ಯಂಗಳಿಗೆ ಆಸ್ಪದವಾದಂತೆ, ಮಣ್ಣೆಂಬುದು ಎಲ್ಲ ಕಾರ್ಯಂಗಳಿಗೆ ಆಧಾರವಾಗಿರ್ಪುದೆಂಬುದೀಗ, ಒಂದು ಗಡಿಗೆಯ ರೂಪೆಂಬ ಶಬ್ದಕ್ಕರ್ಥ. ಅಡಿಗಲ್ಲೆಂಬುದು ಮೋಹಬಾಧ್ಯಕ್ಕೆ ಕಾರಣವಾದಂತೆ, ಹೊನ್ನೆಂಬುದು ತಸ್ಕರಾದಿ ಬಾಧೆಗೆ ಕಾರಣವಾಗಿಹುದೆಂಬುದೀಗ, ಒಂದು ಅಡಿಗಲ್ಲಿನ ಅಂದವೆಂಬ ಶಬ್ದಕ್ಕರ್ಥ. ಕೊಡಗೂಸೆಂಬುದು ಎಲ್ಲರ ವಿಷ ಸಂಗಕ್ಕೆ ಇಚ್ಛೆಯುಳ್ಳಯಿದ್ದುಸುವಂತೆ ಹೆಣ್ಣೆಂಬುದು ಎಲ್ಲಕ್ಕೆ ಮೋಹವ ಹುಟ್ಟಿಸುತ್ತಿಹಳೆಂಬುದೀಗ, ಒಂದು ಕೊಡಗೂಸಿನ ಛಂದವೆಂಬ ಶಬ್ದಕ್ಕರ್ಥ. ಆ ಮಣ್ಣು ಹೊನ್ನೆಂಬೆರಡು ಹೆಣ್ಣು ಒಳಕೊಂಡಿರ್ಪಳಾಗಿ ಆ ಮಾಯಾ ದುಶ್ಚರಿತ್ರವು ಹೆಣ್ಣಿನಲ್ಲಿಹುದೆಂಬುದೀಗ, ಗಡಿಗೆಯ ಅಡಿಗಲ್ಲ ಕೊಡಗೂಸು ಕುಡಿದಳು ಆ ಇರುವೆಯ ಕಾಲು ಕೊಡಗೂಸಿನಲ್ಲಿ ಅದೆ ಎಂಬ ಶಬ್ದಕ್ಕರ್ಥ. ಇಂತಪ್ಪ ಸತಿ ಸಂಗಕ್ಕೊಳದಾವರಲ್ಲಿ ಶಿವನಿಲ್ಲವೆಂಬುದೀಗ, ಬಂಕೇಶ್ವರ ಲಿಂಗವು ಎಲ್ಲಿ ಹೋದನೆಂದರಿಯೆನೆಂಬ ಶಬ್ದಕ್ಕರ್ಥ.

೩೧

ಗೂಗೆ ಹಂಸಿಯು ಕಚ್ಚಿದ ಭೇದದಿಂದ ಕಾಗೆಯಾಯಿತ್ತು
ಕಾಗೆ ಹಾರುವ ಲಾಗಿನಿಂದ ಕೋಗಿಲೆಯಾಯಿತ್ತು,
ಕೋಗಿಲೆ ಸರದಿಂದ ನಾಗ ಫಣಿಯಾಯಿತ್ತು,
ನಾಗ ಫಣಿ ಹೋಹ ಪಥದಿಂದ ನಾದ ಶೂನ್ಯವಾಯಿತ್ತು
ಬಂಕೇಶ್ವರ ಲಿಂಗದಲ್ಲಿ.

ಟೀಕು:— ಅರಿವನೆ ಮರಮು ಮರವೆಯುನೆ ಅರಿವ, ಅವಲಕ್ಷಣ, ಅಜ್ಞಾನ, ಜಡಸ್ವರೂಪವಾದ ಮಾಯೆ, ತನು–ಕರಣೇಂದ್ರಿಯುಗಳಿಂ ನಿರ್ಮಲವಪ್ಪ ಜ್ಞಾನ ಕಲಾತ್ಮನವಗ್ರಹಿಸಲು ಅಜ್ಞಾನ ಸ್ವರೂಪವನುಳ್ಳ ಜೀವನಾದನೆಂಬುದೀಗ, ಗೂಗೆ ಹಂಸಿಯು ಕಚ್ಚಿದ ಭೇದದಿಂದ ಕಾಗೆಯಾಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಸುಜ್ಞಾನೋದಯುವಾಗಿ ಸಕಲ ಪ್ರಪಂಚುವನತಿಗಳೆವ ವಿವೇಕದಿಂ ಚಿತ್ಸ್ವರೂಪನಾದನೆಂಬುದೀಗ, ಕಾಗೆ ಹಾರುವ ಲಾಗಿನಿಂದ ಕೋಗಿಲೆಯಾಯಿತ್ತೆಂಬ ಶಬ್ದಕ್ಕರ್ಥ. ಇಂತು ಚಿತ್ ಸ್ವರೂಪನಪ್ಪ ಶರಣನು ಶಿವೋಹಂಭಾವವ ಮುಂದುಗೊಂಡಿರ್ದಲ್ಲಿ ಸತ್ಪ್ರಾಣವು ಲಿಂಗವಾಗಿರ್ದನೆಂಬುದೀಗ, ಕೋಗಿಲೆ ಸರದಿಂದ ನಾಗಫಣಿಯಾಯಿತ್ತು ಎಂಬ ಶಬ್ದಕ್ಕರ್ಥ. ಅಂತು ಶರಣ, ಪ್ರಾಣವು ಬ್ರಹ್ಮ ಲಿಂಗವೆ ತಾನಾಗಿ ಆಚರಿಸುವವರಿಂದ ಆ ಶಿವೋಹಂ ಭಾವಲಿಂಗದಲ್ಲಿ ನಿಷ್ಪತಿಯಾಯಿತ್ತೆಂಬುದೀಗ, ನಾಗಫಣಿ ಹೋಹ ಪಥದಿಂದ ನಾದ ಶೂನ್ಯವಾಯಿತ್ತು ಅರ್ಕೇಶ್ವರ ಲಿಂಗದಲ್ಲಿ ಎಂಬ ಶಬ್ದಕ್ಕರ್ಥ.

೩೨

ಹಿಂಡುಗಟ್ಟಿಯು ಕಟ್ಟುವವನ ಅಂಡಿನ ಕೂಡಿರಿನಲ್ಲಿ ಮೂರು
ಸಂದು ಹುಟ್ಟಿದವು
ಮೂರು ಸಂದಿನಿಂದ ಬಂದ ಸಂದೇಹವೆಲ್ಲವು ಜಗದಲ್ಲಿ ಹೊಂದುತ್ತಿದೆ
ಆ ಹೊಂದುವ ಅಂದವ ಹೇಳು ಬಂಕೇಶ್ವರ ಲಿಂಗಾ !

ಟೀಕು:— ಸಕಲೇಂದ್ರಿಯು ವ್ಯಾಪಾರದಲ್ಲಿ ಚರಿಸುವ ಜೀವನ ದೇಹಭಾವದ ಅಜ್ಞಾನದಲ್ಲಿ ಆಣವಾದಿ ಮಲತ್ರಯುಂಗಳು ಉದಯಿಸಿದವೆಂಬುದೀಗ, ಹಿಂಡುಗಟ್ಟಿಯು ಕಟ್ಟುವವನ ಅಂಡಿನ ಕೂಡಿರಿನಲ್ಲಿ ಮೂರು ಸಂದು ಹುಟ್ಟಿದವೆಂಬ ಶಬ್ದಕ್ಕರ್ಥ. ಆ ಮಲ ತ್ರಯುಂಗಳ ಪ್ರಪಂಚಿನಲ್ಲಿ ವರ್ತಿಸುವ ಜಡ ದುಷ್ಕರ್ಮ ಭ್ರಾಂತು ಜೀವರು ಜಗದುತ್ಪತ್ತ್ಯ ಸ್ಥಿತಿ ಲಯುಕ್ಕೊಳಗಾದರೆಂಬುದೀಗ, ಮೂರು ಸಂದಿನಿಂದ ಬಂದ ಸಂದೇಹವೆಲ್ಲವು ಜಗದಲ್ಲಿ ಹೊಂದುತ್ತಿದೆ ಎಂಬ ಶಬ್ದಕ್ಕರ್ಥ. ಹೀಗೆ ಮಲತ್ರಯುಂಗಳಿಗೊಳಗಾಗಿ ಕರ್ಮತ್ರಯುಂಗಳಿಗೆ ಈಡಾಗುತ್ತಿಹರು ಜೀವರು, ಅದನಳಿದು ಲಿಂಗತ್ರಯುದಲ್ಲಿ ಭಕ್ತಿರತಿಯಿಂ ಕೂಡುವ ಭೇದವ ನಿರೂಪಿಸೆಂದು ಚಿದ್ ಗುರುವಿಂಗೆ ಬಿನ್ನೈಸುತ್ತಿರ್ದ ಶರಣನೆಂಬುದೀಗ, ಆ ಹೊಂದುವ ಅಂದವ ಹೇಳು ಬಂಕೇಶ್ವರ ಲಿಂಗಾ ಎಂಬ ಶಬ್ದಕ್ಕರ್ಥ.

೩೩

ಮುಕ್ತ್ಯಾಂಗನೆಯು ಕೊಟ್ಟಿಗೆಯಲ್ಲಿ ಮೂರು ಎತ್ತು ಕಟ್ಟಿದವು
ಉಳುವುದಕ್ಕೆ ಹೆಗಲಿಲ್ಲ, ನಡೆವುದಕ್ಕೆ ಕಾಲಿಲ್ಲ, ಮೇವುದಕ್ಕೆ ಬಾಯಿಲ್ಲ
ಎರಡಾರಿಂಗೆಣೆಯಿಲ್ಲ ಎತ್ತು ವಿಚ್ಛಿಂದವಾಯಿತ್ತು
ಎತ್ತ ಕಾವ ಹೈದ ಎತ್ತ ಹೋದನೆಂದರಿಯೆ,
ಕೊಟ್ಟಗೆ ಬಚ್ಚ ಬಯಲಾಯಿತ್ತು ಬಂಕೇಶ್ವರ ಲಿಂಗಾ !

ಟೀಕು:— ಮುಕ್ತ್ಯಂಗನೆ ಎಂಬುದೇ ಶಿವನ ಸಮೇತವಾದ ಚಿಚ್ಛಕ್ತಿ ಎಂಬುದೇ ಭಕ್ತಿಯಾದ ಕಾರಣ ಅಂತಪ್ಪ ಭಕ್ತಿಕಾಯದಲ್ಲಿ ಜೀವ ತ್ರಯಂಗಳು ಲಿಂಗ ತ್ರಯದಲ್ಲಿ ಕರ್ಮ-ಜ್ಞಾನ-ಭಾವಂಗಳಿಂ ಬದ್ಧಕರವಾಗಿರ್ಪವೆಂಬುದೀಗ, ಮುಕ್ತ್ಯಂಗನೆಯು ಕೊಟ್ಟಿಗೆಯಲ್ಲಿ ಮೂರು ಎತ್ತು ಕಟ್ಟಿದ ವೆಂಬ ಶಬ್ದಕ್ಕರ್ಥ. ಇಂತಪ್ಪ ಜೀವ ತ್ರಯಂಗಳಿಗೆ ನಾನಾ ದುಷ್ಕರ್ಮವ ಸಾಗಿಸುವದಕ್ಕೆ ದೇಹಭಾರ ವಿಲ್ಲ, ಪ್ರಪಂಚಿನಲ್ಲಿ ವರ್ತಿಸುವದಕ್ಕೆ ದುಶ್ಚರಿತ್ರವಿಲ್ಲ, ವಿಷಯ ಸುಖವನು ಅನು ಭವಿಸುವದಕ್ಕೆ ಭಿನ್ನಾಪೇಕ್ಷೆಯಿಲ್ಲವೆಂಬುದೀಗ, ಹೂಡುವದಕ್ಕೆ ಹೆಗಲಿಲ್ಲ, ನಡೆ ವುದಕ್ಕೆ ಕಾಲಿಲ್ಲ, ಮೇವುದಕ್ಕೆ ಬಾಯಿಲ್ಲವೆಂಬ ಶಬ್ದಕ್ಕರ್ಥ. ಆ ಜೀವ ತ್ರಯಂ ಗಳ ದ್ವೈತ—ಅದ್ವೈತ ಜ್ಞಾನಕ್ಕೆ ಅಸಂಗತವಾಗಿ ಲಿಂಗತ್ರಯದಲ್ಲಿ ಏಕಾರ್ಥವಾದ ವೆಂಬುದೀಗ, ಎರಡಾರಿಂಗೆಣೆಯಿಲ್ಲ ಎತ್ತು ವಿಚ್ಛಂದವಾಯಿತ್ತೆಂಬ ಶಬ್ದಕ್ಕರ್ಥ. ಹೀಗೆ ಜೀವತ್ರಯಂಗಳು ಲಿಂಗದಲ್ಲಿ ಏಕಾರ್ಥವಾಗಲು ಅವ ತನ್ನಾಜ್ಞೆಯಲ್ಲಿ ತಡೆದು ತ್ರಿವಿಧ ಪ್ರಸಾದ ಪಾದಾಂಬುವನಿತ್ತು ರಕ್ಷಿಸುವ ಜ್ಞಾನ ಕಲಾತ್ಮನಪ್ಪ ಶರಣ ಲಿಂಗದಲ್ಲಿ ನಿಷ್ಪತಿಯಾಗಲು ಆ ಭಕ್ತಿಕಾಯ ನಿರ್ಮಯವಾಯಿತ್ತೆಂಬು ದೀಗ, ಎತ್ತ ಕಾವ ಹೈದ ಎತ್ತ ಹೋದನೆಂದರಿಯೆ, ಕೊಟ್ಟಗೆ ಬಚ್ಚ ಬಯ ಲಾಯಿತ್ತು ಬಂಕೇಶ್ವರ ಲಿಂಗಾ ಎಂಬ ಶಬ್ದಕ್ಕರ್ಥ.

೩೪

ಶುಕ್ಲ ಪರ್ವತದಲ್ಲಿ ಒಂದು ಮತ್ತಗಜ ಬಿಟ್ಟಾಡುತಿದೆ,
ಕಪ್ಪಿಗೆ ಸಿಕ್ಕದು, ಪ್ರತಿಗಜದೊತ್ತಿಗೆ ಬಾರದು, ಅದು ಚಿತ್ತಜನ
ಮತಂಗ
ಹೇಮ ಕೂಟದ ರಸ ಮೊತ್ತದ ಕೋಲುಮೆ ಗಣಿಕೆಯರ
ಏಕಾಂತದವಾಸ ಚಿತ್ರಜ್ಞಾನ ಚಿತ್ತದ ಲೆಕ್ಕಣಿಕೆಯ ಕಡ್ಡಿ
ಇಂತಿ ಭಿತ್ತಿಯನರಿದ ಚಿತ್ರದ ಮತ್ತ ಮತಂಗವನೊತ್ತಿ ಮುರಿ
ಬಂಕೇಶ್ವರ ಲಿಂಗವನರಿವುದಕ್ಕೆ.

ಟೀಕು— ಶುಕ್ಲ ಶ್ರೋಣಿತಾತ್ಮಕವಹ ತನುವೆಂಬ ಅದ್ರಿಯಲ್ಲಿ ಜೀವನೆಂಬ ಎಂಟು ವಿಧದ ಮದವನುಳ್ಳ ವೈಕಾರಿಕಾ ಗಜವು ತನ್ನ ಮತ್ತ ವಿಡಂಬದಿಂ ಮೈಮ ರೆದು ಪ್ರಪಂಚು ಕ್ರೀಡೆಯಿಂ ಭ್ರಮಿಸುತ್ತಿಹುದೆಂಬುದೀಗ, ಶುಕ್ಲ ಪರ್ವತದಲ್ಲಿ ಒಂದು ಮತ್ತ ಗಜ ಬಿಟ್ಟಾಡುತ್ತಿದೆ ಎಂಬ ಶಬ್ದಕ್ಕರ್ಥ. ಇಂತಪ್ಪ ಜೀವನೆಂಬ ಮದಕರಿ ಕರ್ಮಜ್ಞಾನಯೋಗಕ್ಕೆ ಅಸಾಧ್ಯ ಚಿದಹಂಕಾರ ಸ್ವರೂಪವಾದ ಚಿಚ್ಛ ಕ್ತಿಯ ಮಹಾನುಭಾವ ಮೋಹಾನುಬಂಧ ವಿಷಯಕ್ಕೆಯ್ದುದೆಂಬುದೀಗ, ಕಪ್ಪಿಗೆ ಸಿಕ್ಕದು ಪ್ರತಿಗಜದೊತ್ತಿಗೆ ಬಾರದೆಂಬ ಶಬ್ದಕ್ಕರ್ಥ. ಇಂತಿರ್ದ ಜೀವನು ಕಾಮನ ವಾಹನವೆನಿಸುವ ಮೋಹಮದ ವಿಭ್ರಾಂತಿ ಗಜವೆಂಬುದೀಗ, ಅದು ಚಿತ್ತಜನ ಮತಂಗವೆಂಬ ಶಬ್ದಕ್ಕರ್ಥ. ಇಂತಪ್ಪ ಜೀವನ ಘನತರವಾದ ಸಂಸಾರ ವಿಷಯ ರಸೋದಕದಲ್ಲಿ ಮುಳುಗುವ ತಾಪತ್ರಯಾಗ್ನಿಯಲ್ಲಿ ಉರಿವ ಪ್ರಪಂಚು-ಶಕ್ತಿಯ

ರೆಂಬ ಪಾಣ್ಬೆಯರ ಸಂಗದಲ್ಲಿ ಲೋಲಭಾಗಿಹನೆಂಬುದೀಗ, ಹೇಮ ಕೂಟದ ರಸ ವೊತ್ತದ ಕೊಲುಮೆ ಗಣಿಕೆಯರ ಏಕಾಂತವಾಸವೆಂಬ ಶಬ್ದಕ್ಕರ್ಥ. ಚಿತ್ರಜ್ಞನ ಮನದಿಚ್ಛೆಗೆ ಪೃಥ್ವಿ ಪಟದಲ್ಲಿ ಜಾತಿ ಉತ್ತರಂಗಳ ಲೆಕ್ಕಣಿಕೆಯ ಕಡ್ಡಿಗೆ ಸ್ವತಂತ್ರ ವಿಲ್ಲವೆಂಬಂತೆ ಬ್ರಹ್ಮನೆಂಬ ಚಿತ್ರಜ್ಞನ ಮನದಿಚ್ಛೆಗೆ, ಬ್ರಹ್ಮಾಂಡವೆಂಬ ಭಿತ್ತಿ ಯಲ್ಲಿ ಎಂಭತ್ತು ನಾಲ್ಕು ಲಕ್ಷ ಘಟಂಗಳೆಂಬ ಜಾತಿ ಉತ್ತರ ಧರ್ಮಂಗಳನು ಉಂಟು ಮಾಡುತ್ತಿಹ ಜೀವಂಗೆ ಸ್ವತಂತ್ರವಿಲ್ಲವೆಂಬುದೀಗ, ಚಿತ್ರಜ್ಞನ ಚಿತ್ತದ ಲೆಕ್ಕಣಿಕೆಯ ಕಡ್ಡಿಯೆಂಬ ಶಬ್ದಕ್ಕರ್ಥ. ಇಂತು ವಿವೇಕ ಹೀನವಾದ ಜೀವನೆನಿ ಸುವ ಸದಮದವೆಂಬ ತಮಂಧವನುಳ್ಳ ಮದಕರಿಯ ಸತ್ಕ್ರಿಯಾಚರಣದಿಂ ಮೆಟ್ಟಿ ಸಮ್ಯಜ್ಞಾನದಿಂದ ಅಹಂಕಾರವ ನಷ್ಟವ ಮಾಡಬೇಕು ಬ್ರಹ್ಮಕ ಸಂಧಾನವ ನರಿವುದಕ್ಕೆಂದು ನಿರೂಪಿಸುತ್ತಿರ್ದ ಜ್ಞಾನ ಗುರು ಶರಣಂಗೆಬುದೀಗ, ಇಂತಿ ಭಿತ್ತಿಯನರಿದ ಚಿತ್ತದ ಮತ್ತ ಮತಂಗವನೊತ್ತಿ ಮುರಿ ಬಂಕೇಶ್ವರ ಲಿಂಗವ ನರಿವುದಕ್ಕೆ ಎಂಬ ಶಬ್ದಕ್ಕರ್ಥ.

೩೫

ಅಕ್ಕನ ಮೂಲೆಯ ಮೊದಲಿನಲ್ಲಿ ಮೂವರು ತಮ್ಮಂದಿರು ಬಂದರು
ತಮ್ಮ-ತಮ್ಮ ಅಂಗ ತೋರಿ ಅಕ್ಕನ ಮುಂದೆ ಬೆತ್ತಲೆ ಆಡುತ್ತಿದ್ದಾರೆ
ಬೆತ್ತಲೆಯು ಮುಟ್ಟಿ ಕಂಡು ತಮ್ಮನದ ತನ್ನದರಲ್ಲಿ ಇಟ್ಟು
ಕೊಂಡಳು
ಅಕ್ಕ ತಮ್ಮನ ಕೂಡಿ ಒಪ್ಪವಾಗಿ ಬಾಳುತ್ತಿದ್ದರು
ಬಂಕೇಶ್ವರ ಲಿಂಗವನು ಅರಿತ ಕಾರಣಾ !

**ಟೀಕು:—** ಸಕಲ ತತ್ವಂಗಳ ತೋರಿಕೆ ಏನೂ ಇಲ್ಲದ ನಿಷ್ಕಲ ಬ್ರಹ್ಮದ ಲೀಲಾ ವಿನೋದದ ನೆನಹುಮಾತ್ರದಿಂ ಚಿತ್ತು-ಸತ್ತುಗಳೆಂದು ಉಭಯ ಜನಿಸಿದ ವದರೊಳಗೆ ಚಿತ್ತ ಮೊದಲಾದ ಕಾರಣ ಆದಿಲಿಂಗ ಅನಾದಿಶರಣನೆನಿಸಿದುದರಿಂ ಲಿಂಗಕ್ಕೆ ಬಿಚ್ಛಕ್ತಿ ಸ್ವರೂಪವಾದ ಶರಣ ಸತಿ ಅಗ್ರಜೆ ಎನಿಸಿದಳೆಂಬುದೀಗ, ಅಕ್ಕನ ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣ ಸತಿಯ ನಿಜ ಶುಷುಪ್ತಿಸ್ಥಾನವೆನಿಸುವ ಮಹಾ ನುಭಾವಾಂತರಂಗದಿಂ ಲಿಂಗಕ್ರಿಯಂಗಳು ಉದಯಿಸಿದವೆಂಬುದೀಗ, ಅಕ್ಕನ ಮೂಲೆಯ ಮೊದಲಿನಲ್ಲಿ ಮೂವರು ತಮ್ಮಂದಿರು ಬಂದರು ಎಂಬ ಶಬ್ದಕ್ಕರ್ಥ. ಆ ಶರಣ ಸತಿಯ ಸುಜ್ಞಾನದೃಷ್ಟಿಯ ಮುಂದೆ ಲಿಂಗಕ್ರಿಯಂಗಳು ತಮ್ಮ ನಿಜ ಸ್ವರೂಪವನು ಅರುಹಿಸಿ ಕರ್ಮಜ್ಞಾನ ಭಾವಾಂಬರಗಳಂ ತೊರೆದು ಸ್ವಲೀಲಾ ನಂದ ಭಕ್ತಿಯಲ್ಲಿ ನಟಿಸುತ್ತಿಹರೆಂಬುದೀಗ, ತಮ್ಮ ತಮ್ಮ ಅಂಗವ ತೋರಿ ಅಕ್ಕನ ಮುಂದೆ ಬೆತ್ತಲೆ ಆಡುತ್ತಿರ್ದರೆಂಬ ಶಬ್ದಕ್ಕರ್ಥ. ಇಂತು ತ್ರಿವಿಧಾಚಾರವ ತೊರೆದು ಸ್ವಲೀಲಾನಂದ ಭಕ್ತಿಯಲ್ಲಿ ನಟಿಸುತ್ತಿರ್ಪ ಭೇದವ ಶರಣ ಸತಿ ಅರಿದು ಆ ಲಿಂಗ ಕ್ರಿಯ ಸಂಬಂಧವಾದ ಮಹಾಜ್ಞಾನವ ತನ್ನ ಶುಷುಪ್ತಿಜ್ಞಾನದಲ್ಲಿ ಅಡಗಿಸಿಕೊಂಡ ಳೆಂಬುದೀಗ, ಬೆತ್ತಲೆಯ ಮುಟ್ಟಿಕಂಡು ತಮ್ಮನದ ತನ್ನದರಲ್ಲಿ ಇಕ್ಕಿಕೊಂಡಳೆಂಬ

ಶಬ್ದಾರ್ಥ: ಈ ಹೀಗೆ ಅಕ್ಕನಪ್ಪ ಶರಣಸತಿ, ತಮ್ಮನಪ್ಪ ಲಿಂಗವೆಂಬ ಪುರುಷನಲ್ಲಿ ಅವಿರಳ ಸಂಗವ ಮಾಡಿ ಸತಿ-ಪತಿ ಭಾವದಿಂ ಮಹಾನುಭಾವ ಗುರುವುಖದಿಂ ಅರಿದು ಮುಕ್ತರಾಗಿ ಬಾಳುತ್ತಿರ್ದರೆಂಬುದೀಗ, ಅಕ್ಕ ತಮ್ಮನ ಕೂಡಿ ಒಪ್ಪವಾಗಿ ಬಾಳುತ್ತಿರ್ದರು ಬಂಕೇಶ್ವರ ಲಿಂಗವನರಿತಕಾರಣ ಎಂಬ ಶಬ್ದಾರ್ಥ.

೩೬

ಬ್ರಹ್ಮಾಂಡ ಮಂಡಲದಲ್ಲಿ ಒಬ್ಬ ನಾರಿ ಹುಟ್ಟಿದಳು
ಅವಳಿಗೆ ಐವರು ಗಂಡಂದಿರು, ಮೂವರು ಮಿಂಡಂದಿರು,
ಗಂಡಂಗೆ ಕಾಲಕೊಟ್ಟು, ಮಿಂಡಂಗೆ ಮಂಡೆಯ ಕೊಟ್ಟು
ಗಂಡ-ಮಿಂಡರ ಒಡಗೂಡಿಕೊಂಡಿಪ್ಪ ನಾರಿಯ ಅಂಗೈಯಲ್ಲಿ
ಒಂದು ನಾರಿವಾಳದ ಸಸಿ ಹುಟ್ಟಿತ್ತು
ಅದು ಕಂಗಳ ನೀರ ಕುಡಿದು, ಅಂಗದ ಮರೆಯ ನೆಳಲಿನಲ್ಲಿ
ಬಲಿದು, ಸಸಿ ಮರನಾಯಿತ್ತು
ಮರ, ಮಹದೊಡಗೂಡಿ ತೆಂಗಿನಕಾಯಿ ಆಕಾಶದಲ್ಲಿ ನಿಂದಿತ್ತು
ಮುಟ್ಟಿಯನೊಡದು ಕಾಯ ನಿಶ್ಚಯದಲ್ಲಿ ನೋಡಲಾಗಿ--
ಕಾಯಿಗೆ ಕಣ್ಣಿಲ್ಲ, ಅಲಿಕಿದೊಡೆ ಜಲವಿಲ್ಲ,
ಅಂಗ ಭಿನ್ನವ ಮಾಡಿ ನೋಡಲಾಗಿ ಕಾಯಿ ಕರ್ರಗಾಯಿತ್ತು
ನೀರು ಬೆಳ್ಳಗಾಯಿತ್ತು, ಒಡದಾತನ ಬಾಯಿ ಬೆತ್ತಲೆಯಾಯಿತ್ತು
ಬ್ರಂಹ್ಮಾಂಡ ಮಂಡಲದ ಶಕ್ತಿ ಗಂಡನ ಕೊಂದು, ಮಿಂಡನ ವಂಚಿಸಿ
ಬಂಧುಗಳ ಹಿಂಗಿ ತನ್ನ ಹಿಂಡನೊಡಗೂಡಿದಳು
ಇಂತಿವರೆಲ್ಲರ ಬಲ್ಲತನ ಅವಳಲ್ಲಿಯೇ ಹೋಯಿತ್ತು
ಶಕ್ತಿ ಉಮಾಪತಿ ನಿಃಶಕ್ತಿ ಪರಜ್ಞಾನ ಕಾಯ ಭ್ರಮೆಜೀವ ಬಯಲು
ಅರಿವು ರೂಪು ಬಂಕೇಶ್ವರ ಲಿಂಗವ ನರಿದೆನೆಂಬುದು ಸರ್ವಮಾಯೆ!

**ಟೀಕು:** — ಜಗದ್ಬ್ರಹ್ಮಾಂಡದಲ್ಲಿ ಜೀವನೆಂಬ ಮಾಯಾ ಶಕ್ತಿ ದೇಹವಿಡಿದು ಕರ್ಮವಾಸನೆಯಿಂ ಜನ್ಮಾಂತರವನೆಯ್ದಿ ಇರುತ್ತಿಹಳೆಂಬುದೀಗ, ಬ್ರಹ್ಮಾಂಡ ಮಂಡಲದಲ್ಲಿ ಒಬ್ಬ ನಾರಿ ಹುಟ್ಟಿದಳೆಂಬ ಶಬ್ದಾರ್ಥ. ಅಂತಪ್ಪ ಜೀವನೆಂಬ ಮಾಯಾ ಶಕ್ತಿಗೆ ಪಂಚಕರಣಂಗಳು ದೇಹವಿಡಿದು ಹುಟ್ಟುವಲ್ಲಿ ಸಹವಾಗಿ ಜನಿಸಿದ ಕಾರಣ ಗಂಡರೆನಿಸಿದರು. ಬಳಿಕ ಆತ್ಮ ತ್ರಯಂಗಳ ಕೂಡಿಕೊಂಡು ಚರಿಸಿದುದರಿಂದ ಮಿಂಡರೆನಿಸಿದರೆಂಬುದೀಗ, ಅವಳಿಗೆ ಐವರು ಗಂಡಂದಿರು ಮೂವರು ಮಿಂಡಂದಿರೆಂಬ ಶಬ್ದಾರ್ಥ. ಆ ಜೀವನೆಂಬ ಅವಿದ್ಯಾಶಕ್ತಿ ತನ್ನ ಪಂಚೇಂದ್ರಿಯ ಸುಖವ ಅನುಭವಿಸುವ ಪಂಚಕರಣಂಗಳಲ್ಲಿ ದುಶ್ಚರಿತ್ರವ ಕೂಡಿ ತನು ತ್ರಯಂಗಳ ಸುಖವನು ಅನುಭವಿಸುವ ಆತ್ಮ ತ್ರಯಂಗಳಲ್ಲಿ ದುರ್ವಿವೇ

ಕವ ಸಂಬಂಧಿಸಿಕೊಂಡಿಹಳೆಂಬುದೀಗ, ಗಂಡಂಗೆ ಕಾಲು ಕೊಟ್ಟು ಮಿಂಡಂಗೆ
ಮಂಡೆಯು ಕೊಟ್ಟು ಎಂಬ ಶಬ್ದಕ್ಕರ್ಥ. ಇಂತು ಕರಣ ಪಂಚಕ ಆತ್ಮ ತ್ರಯಂ
ಗಳೊಡನೆ ವರ್ತಿಸುವ ಜೀವನೆಂಬ ಸತಿಗೆ ಶಿವಜ್ಞಾನೋದಯವಾಗಿ ಶ್ರೀ ಗುರೋ
ಪದೇಶದಿಂ ಚಿಚ್ಛಕ್ತಿ ಸ್ವರೂಪವಾದಲ್ಲಿ ಕರಸ್ಥಲದೊಳಿಪ್ಪ ಅರ್ಥ-ಸಿದ್ಧಿಯಂ
ಕೊಟ್ಟು ರಕ್ಷಿಸುವಲ್ಲಿ ಕಲ್ಪವೃಕ್ಷ ಸ್ವರೂಪಿನಿಂದೊಪ್ಪುತ್ತಿರ್ದ ಇಷ್ಟಲಿಂಗ ಜನಿಸಿ
ತ್ತೆಂಬುದೀಗ, ಗಂಡ-ಮಿಂಡರ ಒಡಗೂಡಿಕೊಂಡಿಪ್ಪ ನಾರಿಯ ಅಂಗೈಯಲ್ಲಿ
ಒಂದು ನಾರಿವಾಳದ ಸಸಿ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ
ಲಿಂಗವು ಸುಜ್ಞಾನ ದೃಷ್ಟಿಯು ಹರುಷಾನಂದ ಜಲವ ಸ್ವೀಕರಿಸಿ ಲಿಂಗದ ಸತ್ಕ್ರಿ
ಯಾಚಾರದ ಪರಮಶಾಂತಿಯಿಂ ಬಲಿದು ಸರ್ವಾಚಾರ ಸಂಪತ್ತಿನ ಶಾಖೋಪ
ಶಾಖೆಗಳಿಂ ಸಗುಣ ಬ್ರಹ್ಮವೆನಿಸಿತ್ತೆಂಬುದೀಗ, ಅದು ಕಂಗಳ ನೀರು ಕುಡಿದು
ಅಂಗದ ಮರೆಯ ನೆಳಲಿನಲ್ಲಿ ಬಲಿದು ಸಸಿ ಮರನಾಯಿತ್ತೆಂಬ ಶಬ್ದಕ್ಕರ್ಥ.
ಆ ಪರಬ್ರಹ್ಮ ವೃಕ್ಷ ಶರಣನ ಅಂಗದಲ್ಲಿ ಏಕಾರ್ಥವಾಗಲು ಅದರ ಚಿತ್ಕಳೆ ಎಂಬ
ಫಲ ಹೃದಯಾಕಾಶದಲ್ಲಿ ನೆಲೆಸಿತ್ತೆಂಬುದೀಗ, ಮರ ಮುಹದೊಡಗೂಡಿ ತೆಂಗಿನ
ಕಾಯಿ ಆಕಾಶದಲ್ಲಿ ನಿಂದಿತ್ತೆಂಬ ಶಬ್ದಕ್ಕರ್ಥ. ಇಂತಾಗೆ ಶರಣ ಸತ್ಕ್ರಿಯಾ
ಚಾರವನೊಳಗೊಂಡು ಚಿತ್ ಫಳದ ಪರಮಾರ್ಥಜ್ಞಾನದಿಂದ ಈಕ್ಷಿಸಲು ತದ್ವಸ್ತು
ವಿಂಗೆ ಆ ಶರಣನ ಇದಿರಿಟ್ಟು ನೋಡುವ ದೃಕ್ಕಿಲ್ಲವೆಂಬುದೀಗ, ಮುಟ್ಟಿಯು
ನೊಡದು ಕಾಯ ನಿಶ್ಚಯದಲ್ಲಿ ನೋಡಲಾಗಿ ಕಾಯಿಂಗೆ ಕಣ್ಣಿಲ್ಲವೆಂಬ ಶಬ್ದಕ್ಕರ್ಥ.
ಇಂತಪ್ಪ ನಿಜದ ಮಹಾನುಭಾವದಿಂ ವಿವೇಕಿಸಲು ಪರಮಾಮೃತ ರಸದ ಇದಿ
ರಿಟ್ಟು ತೋರಲಿಲ್ಲ ಶರಣಂಗೆಂಬುದೀಗ, ಅಲಕಿದಡೆ ಜಲವಿಲ್ಲ ಎಂಬ ಶಬ್ದಕ್ಕರ್ಥ.
ಮೀರಿದ ಕ್ರಿಯಾಚಾರದ ನಿಷ್ಪತ್ತಿಯು ನೆಯ್ದಿಸಿ ಅವಿರಳ ಜ್ಞಾನದಿಂ ಈಕ್ಷಿಸುವ
ಶರಣನ ಸರ್ವಾಂಗವನೊಳಕೊಂಡು ಪರಿಪೂರ್ಣವಾಗಿರ್ಪುದು ಆ ಪರವಸ್ತು
ವೆಂಬುದೀಗ, ಅಂಗ ಭಿನ್ನವ ಮಾಡಿ ನೋಡಲಾಗಿ ಕಾಯುಕರ್ರಗಾಯಿತ್ತೆಂಬ
ಶಬ್ದಕ್ಕರ್ಥ, ಇಂತಾಗಲು ತತ್ಪರಮಾನಂದ ಜಲವಲ್ಲಿಯೇ ಅರಿತು ಚಿತ್ಪ್ರಕಾಶ
ಮಯವಾಗಿರ್ಪುದೆಂಬುದೀಗ, ನೀರುಬೆಳ್ಳಗಾಯಿತ್ತು ಎಂಬ ಶಬ್ದಕ್ಕರ್ಥ.
ಇಂತು ಉಭಯಾಚಾರ ಏಕಾರ್ಥವ ಮಾಡಿದ ಶರಣನು ಶಿವಾಪೇಕ್ಷೆಯಲ್ಲಿಯೆ
ನಿಷ್ಪತ್ತಿಯಾಯಿತ್ತೆಂಬುದೀಗ, ಒಡದಾತನ ಬಾಯಿ ಬೆತ್ತಲೆಯಾಯಿತ್ತೆಂಬ ಶಬ್ದ
ಕ್ಕರ್ಥ. ಇಂತಾಗಲು ಬ್ರಹ್ಮಾಂಡಾದಿ ನಾನಾ ಲೋಕಂಗಳೊಳ್ವರ್ದ ವಾಸನೆ
ಯಿಂದೆಯ್ದುವ ಜೀವನೆಂಬ ಮಾಯಾಶಕ್ತಿ ಪೂರ್ವಾಶ್ರಯವಳಿದು ಚಿಚ್ಛಕ್ತಿ
ಸ್ವರೂಪವಾಗಿ ಐಕ್ಯಾನುಭಾವ ಘಟಿಸಿದ ಕಾರಣ ಪಂಚಕರಣಂಗಳ ನಷ್ಟವಮಾಡಿ
ಆತ್ಮ ತ್ರಯವ ಹಿಂಗಿ ಸಕಲೇಂದ್ರಿಯಂಗಳಂ ತ್ಯಜಿಸಿ ತನ್ನ ನಿಜವಪ್ಪ ನಾದಿ
ಸಂಸಿದ್ಧವಾದ ಶಿವತತ್ವದಲ್ಲಿ ಏಕಾರ್ಥವಾದಳೆಂಬುದೀಗ, ಬ್ರಹ್ಮಾಂಡದ ಮಂಡ
ಲದ ಶಕ್ತಿ ಗಂಡನ ಕೊಂದು, ಮಿಂಡನ ವಂಚಿಸಿ ಬಂಧುಗಳ ಹಿಂಗಿ ತನ್ನ ಹಿಂಡ
ನೊಡಗೂಡಿದಳು ಎಂಬ ಶಬ್ದಕ್ಕರ್ಥ. ಇಂತಿ ಸಕಲ ತತ್ವಂಗಳ ಸಾಮರ್ಥ್ಯತ್ವದ
ಶರಣ ಸತಿಯಲ್ಲಿಯೆ ಅಳಿಯಿತ್ತೆಂಬುದೀಗ, ಇಂತಿವರೆಲ್ಲರು ಬಲ್ಲತನ ಅವಳಲ್ಲಿಯೆ
ಹೋಯಿತ್ತೆಂಬ ಶಬ್ದಕ್ಕರ್ಥ. ಇಂತಾದುದು ಶಿವನು ಲೀಲಾಶಕ್ತಿಯು ಮುಂದು

ಗೊಂಡಿರ್ದಲ್ಲಿ ಉಮಾಪತಿಯಾಗಿರ್ಪ ಲೀಲಾ ಶಕ್ತಿನಿಂದಲ್ಲಿ ಸ್ವಯಂಭುವಾಗಿರ್ಪ ನೆಂಬುದೀಗ, ಶಕ್ತಿ ಉಮಾಪತಿ ನಿಃಶಕ್ತಿ ಪರಮಜ್ಞಾನವೆಂಬ ಶಬ್ದಕ್ಕರ್ಥ. ಈ ಭೇದವನರಿಯದೆ ಅಂಗವೆ ಮಲ ಮಾಯಾ ಕರ್ಮಯುಕ್ತವಾದುದೆಂಬ ಜೀವನೆ ಶಿವನೆಂಬ ತ್ರಿಪುಟಿ ಜ್ಞಾನದಿಂದ ಅರಿದ ಅರಿವೆ ಬ್ರಹ್ಮವೆಂಬ ಕರ್ಮಜ್ಞಾನ ಯೋಗ ಕಾಂಡಿಗಳೆಲ್ಲರು ಲಿಂಗವನರಿದಿಹೆನೆಂಬುದು ಮಿಥ್ಯ ಎಂಬುದೀಗ, ಕಾಯ ಭ್ರಮೆ ಜೀವ ಬಯಲು ಅರಿವು ರೂಪು ಬಂಕೇಶ್ವರ ಲಿಂಗವನು ಅರಿವೆನೆಂಬುದು ಸರ್ವ ಮಾಯೆಯೆಂಬ ಶಬ್ದಕ್ಕರ್ಥ.

---

## ಹಡಪದಪ್ಪಣ್ಣನವರ ವಚನಗಳು

೧

ಅಯ್ಯ ! ಹಳೆಯ ಹುತ್ತದೊಳಗೊಂದು ಎಳೆಯ ಸರ್ಪನ ಕಂಡೆ
ಆ ಎಳೆಯ ಸರ್ಪ ಹೊರಟು ಬೆಳಗು-ಕತ್ತಲೆ ಎರಡೂ ನುಂಗಿತ್ತು
ಆ ಎಳೆಯ ಸರ್ಪನ ಕಂಡು ಅಲ್ಲಿರ್ದ ತಳಿರ ಮರ ನುಂಗಿತ್ತು
ಆ ತಳಿರ ಮರನ ಕಂಡು ಮಹಾ ಬೆಳಗು ನುಂಗಿತ್ತು
ಆ ಮಹಾ ಬೆಳಗ ಕಂಡು ನಾ ಒಳಹೊಕ್ಕು ನೋಡಿದಡೆ, ಒಳ
ಹೊರಗೆ
ತೊಳಗಿ ತೊಳಗಿ ಬೆಳಗುತ್ತಿದ್ದಿತ್ತಯ್ಯ ಬಸವಣ್ಣ ಪ್ರಿಯ ಕೂಡಲ
ಚನ್ನ ಸಂಗಮದೇವಾ !

**ಟೀಕು:—** ಶುಕ್ಲ ಶ್ರೋಣಿತಾತ್ಮಕ ಸಂಗದಿಂ ನವದ್ವಾರ ಯುಕ್ತವಾದ ಜಡದೇಹ ತೋರಿತ್ತಾತ್ಮಂಗೆ ಎಂಬುದೀಗ, ಅಯ್ಯಾ ಹಳೆಯ ಹುತ್ತವೆಂಬ ಶಬ್ದಕ್ಕರ್ಥ. ಅಂತಪ್ಪ ದೇಹಾತ್ಮರ ಸಂಗುಷ್ಟದಿಂ ಶಂಕಾವಿಷ ಸಂಬಂಧಿಯಪ್ಪ ಮನೋವರ್ತನೆ ತೋರಿತ್ತೆಂಬುದೀಗ, ಒಳಗೊಂದು ಎಳೆಯ ಸರ್ಪನೆಂಬ ಶಬ್ದಕ್ಕರ್ಥ. ಆ ಸಂಕಲ್ಪ-ವಿಕಲ್ಪ ರೂಪವಾದ ಮನೋವರ್ತನೆಯ ಸುಜ್ಞಾನೋದಯವಾದ ಶರಣ ಕಂಡನೆಂಬುದೀಗ, ಕಂಡೆನೆಂಬ ಶಬ್ದಕ್ಕರ್ಥ. ಅಂತು ಸುಜ್ಞಾನ ದೃಷ್ಟಿಯಿಂ ನೋಡಲಾಗಿ ಆ ಮನೋವರ್ತನೆಯಳಿದು ಉನ್ಮನಿ ತತ್ವ ಸ್ವರೂಪವನೆಯ್ದಿದ ಮನೋ ಮಧ್ಯದಲ್ಲಿ ಚಿದ್ಬಿಂದು ಪ್ರಕಾಶವಾಯಿತ್ತೆಂಬುದೀಗ, ಆ ಎಳೆಯ ಸರ್ಪ ಹೊರಟು ಎಂಬ ಶಬ್ದಕ್ಕರ್ಥ. ಅಂತು ಅಖಂಡ ಚಿದ್ಬಿಂದು ಪ್ರಕಾಶವನುಳ್ಳ ಮಹಾಜ್ಞಾನವೆ ಜ್ಞಾನಾಜ್ಞಾನಂಗಳ ಅವಗ್ರಹಿಸಿತ್ತೆಂಬುದೀಗ, ಬೆಳಗು-ಕತ್ತಲೆ ಎರಡೂ ನುಂಗಿತ್ತೆಂಬ ಶಬ್ದಕ್ಕರ್ಥ. ಆ ಉನ್ಮನಿ ತತ್ವ ಸ್ವರೂಪವಾದ ಮನಸ್ಸು ಶರಣನ ನಿಜಾಂತರಂಗದ ಸದ್ವಿವೇಕ ವೃಕ್ಷವ ಅವಗ್ರಹಿಸಿತ್ತೆಂಬುದೀಗ, ಆ ಎಳೆಯ ಸರ್ಪನ ಕಂಡು ಅಲ್ಲಿರ್ದ ತಳಿರಮರ ನುಂಗಿತ್ತೆಂಬ ಶಬ್ದಕ್ಕರ್ಥ.

ಅಂತಪ್ಪ ಸದ್ವಿವೇಕ ವೃಕ್ಷವನು ಅಖಂಡ ನಿರವಯ ಪರಿಪೂರ್ಣವಾದ ಪರಬ್ರಹ್ಮವು ಅವಗ್ರಹಿಸಿತ್ತೆಂಬುದೀಗ, ಆ ತಳಿರ ಮರನ ಕಂಡು ಮಹಾಬೆಳಗು ನುಂಗಿತ್ತೆಂಬ ಶಬ್ದಕ್ಕರ್ಥ. ಅಖಂಡ ನಿರವಯ ಪರಿಪೂರ್ಣವಾದ ಪರಬ್ರಹ್ಮವು ಆ ಸದ್ವಿವೇಕ ವೃಕ್ಷವನು ಅವಗ್ರಹಿಸಿದ ಭೇದವ ಅವಿರಳ ಜ್ಞಾನದೃಕ್ಕಿಂದ ಶರಣ ಕಂಡನೆಂಬುದೀಗ, ಆ ಮಹಾಬೆಳಗ ಕಂಡು ಎಂಬ ಶಬ್ದಕ್ಕರ್ಥ. ಅಂತು ಶಿವ ಜ್ಞಾನದೃಕ್ಕಿಂದ ನೋಡುತ್ತಿರಲಾಗಿ ಅಖಂಡ ಚಿತ್ ಪ್ರಕಾಶವನುಳ್ಳ ಪರಬ್ರಹ್ಮವೆ ಶ್ರೀಗುರು ಕಾರುಣ್ಯದಿಂ ಪ್ರತ್ಯಕ್ಷವಾಗಿ ಬಂದು ಶರಣನ ಜ್ಞಾನಕ್ರಿಯನೊಳಕೊಂಡು ಪ್ರಕಾಶಿಸುತ್ತಿಹುದೆಂಬುದೀಗ, ನಾನೊಳಹೊಕ್ಕು ನೋಡಿದಡೆ ಒಳಹೊರಗೆ ತೊಳತೊಳಗಿ ಬೆಳಗುತ್ತಿದ್ದಿತ್ತಯ್ಯಾ ಬಸವಣ್ಣಪ್ರಿಯ ಕೂಡಲ ಚನ್ನ ಸಂಗಮದೇವಾ ಎಂಬ ಶಬ್ದಕ್ಕರ್ಥ.

೨

ಅಯ್ಯಾ ! ಮರದೊಳಗಣ ಕಿಚ್ಚು ಮರನ ಸುಡುತ್ತಿದ್ದಿತ್ತಯ್ಯ !
ಮರ ಬೆಂದು ನಿಂದುರಿಯಿತ್ತು, ಮಣ್ಣು ಜರಿದು ಬಿದ್ದಿತ್ತು,
ಉರಿ ಹೊಗೆ ನುಂಗಿತ್ತು ಸ್ವಯಂಪ್ರಕಾಶವಾಗಿರ್ಪ ಉರಿ
ಉಳಿಯಿತ್ತು
ಆ ಉರಿ ಬಂದು ಎನ್ನ ಕರಸ್ಥಲವಲ್ಲಡಗಿತ್ತು,
ಇದ ಕಂಡು ನಾ ಬೆರಗಾಗಿ ನೋಡುತ್ತಿರ್ದೆನಯ್ಯ ಬಸವಣ್ಣ
ಪ್ರಿಯ ಕೂಡಲ ಚನ್ನ ಸಂಗಮದೇವಾ !

**ಟೀಕು:—** ಶಿವಜ್ಞಾನಾನಂದ ರಸವರತ ಅಜ್ಞಾನ-ಮಾಯಾ ಸಂಬಂಧವಾದ ತನುವೆಂಬ ಶುಷ್ಕವೀಗ, ಅಯ್ಯಾ ಮರನೆಂಬ ಶಬ್ದಕ್ಕರ್ಥ. ಅಂತಪ್ಪ ತನು ಮಧ್ಯದಲ್ಲಿ ಚಿತ್ ಪ್ರಕಾಶವಾದ ಚಿದಗ್ನಿ ಇರುತ್ತಿಹುದೆಂಬುದೀಗ, ಮರದೊಳಗಣ ಕಿಚ್ಚು ಆ ಚಿತ್ ಪ್ರಕಾಶ ಜ್ಞಾನವೆ ಪ್ರಭಾವಿಸಿ ಶರಣನ ಸರ್ವಾಂಗವ ದಗ್ಧವ ಮಾಡಿತ್ತೆಂಬುದೀಗ, ಮರನ ಸುಡುತ್ತಿದ್ದಿತ್ತಯ್ಯಾ ಎಂಬ ಶಬ್ದಕ್ಕರ್ಥ. ಅಂತಪ್ಪ ಶಿವಜ್ಞಾನಾಗ್ನಿ ಪ್ರಕಾಶದಲ್ಲಿ ಶರಣನ ಸರ್ವಾಂಗ ಸಮರಸವಾಗಲು ಪೃಥ್ವಿಯಾಂಶದ ತತ್ವಂಗಳೆಲ್ಲ ನಷ್ಟವಾದವೆಂಬುದೀಗ, ಮಣ್ಣು ಜರಿದು ಬಿದ್ದಿತ್ತು ಎಂಬ ಶಬ್ದಕ್ಕರ್ಥ. ಅಂತು ತನುಭಾವ ನಷ್ಟವಾಗಲು ಆ ಶಿವಜ್ಞಾನ ಪ್ರಕಾಶದಿಂ ಜ್ಞಾನಾಜ್ಞಾನಗಳೆರಡು ನಿವೃತ್ತಿಯಾದವೆಂಬುದೀಗ, ಉರಿ ಹೊಗೆ ನುಂಗಿತ್ತು ಎಂಬ ಶಬ್ದಕ್ಕರ್ಥ. ಅಜ್ಞಾನಾಜ್ಞಾನಂಗಳೆರಡು ನಷ್ಟವಾದಲ್ಲಿ ತನ್ನಿಂದ ತಾನೆ ಸ್ವಯಂ ಪ್ರಕಾಶವಾಗಿ ಬೆಳಗುತ್ತಿರ್ದ ಅಖಂಡ ಜ್ಞಾನಪ್ರಕಾಶವೆ ಉಳಿಯಿತ್ತೆಂಬುದೀಗ, ಸ್ವಯಂ ಪ್ರಕಾಶವಾಗಿರ್ಪ ಉರಿ ಉಳಿಯಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಅಖಂಡ ಜ್ಞಾನ ಪ್ರಕಾಶದಿಂದ ಆತ್ಮಾಂತರ್ಗತವಾಗಿರ್ದ ಚಿತ್ ಪ್ರಭಾಲಿಂಗವೇ ಗುರುಮುಖದಿಂ ಪ್ರತ್ಯಕ್ಷವಾಗಿ ಕರಸ್ಥಲದಲ್ಲಿ ಇಷ್ಟಲಿಂಗವಾಗಿ ಮೂರ್ತಿಗೊಂಡಿತ್ತೆಂಬುದೀಗ, ಆ ಉರಿ ಬಂದು ಎನ್ನ ಕರಸ್ಥಲದಲ್ಲಡಗಿತ್ತು ಎಂಬ ಶಬ್ದಕ್ಕರ್ಥ.

ಅಂತಪ್ಪ ನಿರವಯ ಪರಬ್ರಹ್ಮವೆ ಭಕ್ತಿಕಾರಣವಾಗಿ ಸಾಕಾರವಾಗಿ ಬಂದುದ ಕಂಡುಪಮಿಸಲಮ್ಮದೆ ಶರಣನು ಆಶ್ಚರ್ಯಪಡುತ್ತಿರ್ದನೆಂಬುದೀಗ ಇದ ಕಂಡ ನಾ ಬೆರಗಾಗಿ ನೋಡುತ್ತಿರ್ದೆನಯ್ಯ ಬಸವಪ್ರಿಯ ಕೂಡಲ ಚನ್ನ ಸಂಗಮದೇವಾ ಎಂಬ ಶಬ್ದಕ್ಕರ್ಥ.

೩

ಅಯ್ಯಾ ! ಎನ್ನ ಹಲ್ಲ ಮರೆಯಲ್ಲಿಪ್ಪ ಬೆಲ್ಲವ ಕಂಡು ಎಲ್ಲರೂ
ಮೊಲ ಬಂದರು
ಬೆಲ್ಲಗಳಿದ್ದಡೆ ನಿಲಲಿಸದೆ ಎನ್ನ ಕಾಡುತ್ತಿದ್ದಾರೆ ಎಂದು ಆ
ಬೆಲ್ಲವನು ಅಲ್ಲಿಯೆ ನುಂಗಿದಡೆ
ಹಲ್ಲು ಮುರಿದವು, ಮೊಲ ಬಂದವರೆಲ್ಲ ಅಲ್ಲಿಯೆ ಬಯಲಾದರು
ನಾ ನಿಮ್ಮಲ್ಲಿ ಕೂಡಿ ಸುಖಿಯಾದೆ ಬಸವಪ್ರಿಯ ಕೂಡಲ ಚನ್ನ
ಸಂಗಮದೇವಾ !

**ಟೀಕು:—** ಸುಜ್ಞಾನೋದಯವಾದ ಶರಣನ ಸಕಲ ಕರಣಂಗಳ ಮರೆಯಲ್ಲಿರ್ಪ ಚಿತ್ ಸುಖ ಸ್ವರೂಪವಾದ ನಿಷ್ಕಲ ಪರಬ್ರಹ್ಮವೆಂಬುದೀಗ, ಅಯ್ಯಾ ಎನ್ನ ಹಲ್ಲ ಮರೆಯಲ್ಲಿರ್ಪ ಬೆಲ್ಲವೆಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣನ ಸುಜ್ಞಾನ ಪ್ರಕಾಶದಲ್ಲಿ ತೊಳಗಿ ಬೆಳಗುವ ಪರಬ್ರಹ್ಮವ ಖಂಡಿತ ಜ್ಞಾನಿಗಳಪ್ಪ ಭಿನ್ನ ಭಾವಿಗಳು ಬಯಸುತ್ತಿರ್ಪರೆಂಬುದೀಗ, ಬೆಲ್ಲವ ಕಂಡು ಎಲ್ಲರೂ ಮೊಲಬಂದರು ಎಂಬ ಶಬ್ದಕ್ಕರ್ಥ. ಅನೇಕ ತತ್ವಂಗಳನೊಳಕೊಂಡಿರ್ಪ ನಿಷ್ಕಲ ಪರಬ್ರಹ್ಮದ ನಿಜ ಸ್ವರೂಪನು ಸುಜ್ಞಾನ ಬೋಧೆಯಿಂದ ಅರುಹಿಕೊಡಿ ಎಂದು ಇಚ್ಛಿಸುತ್ತಿಹರು ಭಿನ್ನ ಜ್ಞಾನಿಗಳೆಂಬುದೀಗ, ಬೆಲ್ಲಗಳಿದ್ದಡೆ ನಿಲಲಿಸದೆ ಎನ್ನ ಕಾಡುತ್ತಿದ್ದಾರೆ ಎಂದು ಎಂಬ ಶಬ್ದಕ್ಕರ್ಥ. ಆ ನಿಷ್ಕಲ ಪರಬ್ರಹ್ಮದಲ್ಲಿ ನಿಜ ಸ್ವರೂಪವನು ಭಿನ್ನ ಜ್ಞಾನಿಗಳಿಗರುಹದೆ ಶರಣ ತನ್ನ ನಿಜಾನುಭಾವಾಂತರಂಗದ ಮಧ್ಯದಲ್ಲಿ ಅವಗ್ರಹಿಸಿದನೆಂಬುದೀಗ, ಆ ಬೆಲ್ಲವನಲ್ಲಿಯೆ ನುಂಗಿದಡೆ ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವ ತನ್ನರಿವಿನ ಮಧ್ಯದಲ್ಲಿ ಅವಗ್ರಹಿಸಿದ ಶರಣನ ಸಕಲ ಕರಣಂಗಳೆಲ್ಲವು ಭಗ್ನವಾದವೆಂಬುದೀಗ, ಹಲ್ಲು ಮುರಿದವು ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವ ಖಂಡಿತಜ್ಞಾನದಿಂದರಿದು ಸುಖಿಸಿಹೆನೆಂಬ ದ್ವೈತಾದ್ವೈತಿಗಳೆಲ್ಲರು ಆ ಸಂಕಲ್ಪ ಜ್ಞಾನದಲ್ಲಿಯೆ ಲಯವಾದರೆಂಬುದೀಗ, ಮೊಲಬಂದವರೆಲ್ಲ ಅಲ್ಲಿಯೆ ಬಯಲಾದರು ಎಂಬ ಶಬ್ದಕ್ಕರ್ಥ. ಸುಜ್ಞಾನೋದಯವಾದ ಶರಣ ಸಂಕಲ್ಪ ಜ್ಞಾನವ ಹೊದ್ದದೆ ಶ್ರೀಗುರು ಕಾರುಣ್ಯಮಂ ಪಡದು ಸರ್ವಾಂಗಲಿಂಗ ಸಂಬಂಧಿಯಾಗಿ ಜ್ಞಾನಕ್ರೀವಿಡಿದಾಚರಿಸಿ ಮಹಾಘನ ಲಿಂಗದಲ್ಲಿ ಸಮರಸೈಕ್ಯವಾದನೆಂಬುದೀಗ, ನಾ ನಿಮ್ಮಲ್ಲಿ ಕೂಡಿ ಸುಖಿಯಾದೆನಯ್ಯ ಬಸವಪ್ರಿಯ ಕೂಡಲ ಚನ್ನ ಸಂಗಮದೇವಾ ಎಂಬ ಶಬ್ದಕ್ಕರ್ಥ.

೪

ನಾನೊಂದೂರಿಗೆ ಹಾದಿಯ ಕೇಳಿಕೊಂಡು ಹೋಗುತ್ತಿರಲಾಗಿ,
ಮುಂದೆ ಅರಣ್ಯದೊಳಗೆ ಮೂರು ಬಟ್ಟೆಯಾಯಿತ್ತು;
ಎರಡು ಪಥವ ಬಿಟ್ಟು ಒಂದು ಪಥವಿಡಿದು ಬರಲಾಗಿ—
ಮುಂದೆ ಮೂರು ಬಟ್ಟೆಯೂ ಒಂದಾದುವು
ಆ ಮೂರು ಬಟ್ಟೆ ಕೂಡಿದ ಬಳಿ ಒಂದು ಬೆಟ್ಟ ಹುಟ್ಟಿತ್ತು
ಆ ಬೆಟ್ಟವನೇರ ಬಾರದು, ಇಳಿಯ ಬಾರದು,
ಆ ಬೆಟ್ಟವ ಬಿಟ್ಟು ಹೋದಡೆ ಎನಗೆ ಪಥವಿಲ್ಲ ಎಂದು ಸುತ್ತಿ ಸುತ್ತಿ ನೋಡುತ್ತಿರಲಾಗಿ,
ಆರು ಮೆಟ್ಟಿನ ಒಂದು ಏಣಿ ಹಾಕಿರುವದ ಕಂಡೆ !
ಆ ಏಣಿಯ ಮೆಟ್ಟಿ ಮೆಟ್ಟಿ ಆ ಬೆಟ್ಟದ ತುಟ್ಟ ತುದಿಯನೇರಿ ನೋಡಲಾಗಿ,
ಬಟ್ಟ ಬಯಲಾಗಿದ್ದಿತ್ತು, ಆ ಬಟ್ಟ ಬಯಲೊಳಗೆ ಹತ್ತಿ ಹೋಗುತ್ತಿರಲಾಗಿ
ನಾನೆತ್ತ ಹೋದೆನೆಂದರಿಯೆನಯ್ಯ ! ಬಸವ ಪ್ರಿಯ ಕೂಡಲ ಚನ್ನ ಸಂಗಮದೇವಾ !

**ಟೀಕು**:— ಶಿವಜ್ಞಾನೋದಯವಾಗಲು ಸಕಲ ಪ್ರಪಂಚ ನಿವೃತ್ತಿ ಮಾಡಿ ಪರಶಿವ ತತ್ವದತ್ತಲೆಯ್ದುವ ಮೋಕ್ಷ ಮಾರ್ಗದ ಸತ್ಪಥವ ತ್ರಿವಿಧ ಲಿಂಗಾಂಗ ಭಾವಿಗಳಿಂದ ಕೇಳುತ್ತಿರ್ದ ಶರಣನೆಂಬುದೀಗ, ನಾನೊಂದೂರಿಗೆ ಹಾದಿಯ ಕೇಳಿಕೊಂಡು ಹೋಗುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಆ ಮೋಕ್ಷ ಮಾರ್ಗದಲ್ಲಿ ಸ್ವಸ್ಥಿರ ಭಾವಿಯಾಗಿರ್ದ ಶರಣನ ಷಡಾಧಾರ ಚಕ್ರಂಗಳೆಲ್ಲ ಸದ್ವಿವೇಕ ವೃಕ್ಷ ಸ್ವರೂಪವನೆಯ್ದಿ ಚಿದಾರಣ್ಯಮಯವಾಗಿಹುದು ಸುಜ್ಞಾನ ದೃಷ್ಟಿಯಿಂ ಕಂಡನೆಂಬುದೀಗ, ಮುಂದೆ ಆ ಅರಣ್ಯದೊಳಗೆ ಎಂಬ ಶಬ್ದಕ್ಕರ್ಥ. ಆ ಸದ್ವಿವೇಕ ವೃಕ್ಷ ಸ್ವರೂಪವನೆಯ್ದಿದ ಶರಣನ ನಿಜಾಂತರಂಗದಲ್ಲಿ ಕರ್ಮ-ಭಕ್ತಿ-ಜ್ಞಾನವೆಂಬ ತ್ರಿವಿಧ ಮಾರ್ಗರೂಪವಾಯಿತ್ತೆಂಬುದೀಗ, ಅರಣ್ಯದೊಳಗೆ ಮೂರು ಬಟ್ಟೆಯಾಯಿತ್ತು ಎಂಬ ಶಬ್ದಕ್ಕರ್ಥ. ಅಭಿನ್ನ ಜ್ಞಾನ ಕರ್ಮಕ್ರೀಗಳ ವಿಸರ್ಜಿಸಿ ಶಿವಾದ್ವೈತ ಭಕ್ತಿಯೊಂದರಲ್ಲಿ ಸಮರಸವಾಯಿತ್ತೆಂಬುದೀಗ, ಮುಂದೆ ಮೂರು ಬಟ್ಟೆ ಒಂದಾದವು ಎಂಬ ಶಬ್ದಕ್ಕರ್ಥ. ಆ ತ್ರಿವಿಧ ಭಕ್ತಿಯು ಏಕಾರ್ಥವಾದ ಶರಣನ ನಿಜಾಂತರಂಗದಲ್ಲಿ ಚಿದಹಂಕಾರ ಸ್ವರೂಪವಾದ ಗಿರಿ ಹುಟ್ಟಿತ್ತೆಂಬುದೀಗ, ಆ ಮೂರು ಬಟ್ಟೆ ಕೂಡಿದ ಬಳಿಯಲ್ಲಿ ಒಂದು ಬೆಟ್ಟ ಹುಟ್ಟಿತ್ತೆಂಬ ಶಬ್ಧಕ್ಕರ್ಥ, ಆ ಚಿದಹಂಕಾರ ಸ್ವರೂಪವಾದ ಪರಬ್ರಹ್ಮವು ಅಹ್ವಾನ ವಿಸರ್ಜನಕ್ಕೆ ಬಾರದೆಂಬುದೀಗ, ಆ ಬೆಟ್ಟವನೇರಬಾರದು, ಇಳಿಯಬಾರದು ಎಂಬ ಶಬ್ದಕ್ಕರ್ಥ. ಆ

ಚಿದಹಂಕಾರ ಸ್ವರೂಪವಪ್ಪ ಪರಬ್ರಹ್ಮವ ತನ್ನಿಂದ ಭಿನ್ನವ ಮಾಡಿದೊಡೆ ಸತ್ಪಥ ಮಾರ್ಗವ ತಪ್ಪುವದೆಂದರಿದು ಆ ಪರಬ್ರಹ್ಮದಲ್ಲಿಯೇ ಪ್ರವೇಶವಾದನೆಂಬುದೀಗ, ಆ ಬೆಟ್ಟವ ಬಿಟ್ಟು ಹೋದಡೆ ಎನಗೆ ಪಥವಿಲ್ಲ ಎಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮವ ಶ್ರೀಗುರು ಕಾರುಣ್ಯದಿಂ ಪ್ರತ್ಯಕ್ಷವ ಮಾಡಿಕೊಂಡು ಸುಜ್ಞಾನ ಕ್ರೀವಿಡಿದು ಆಚರಿಸುತ್ತ ಅವಿರಳ ಜ್ಞಾನದೃಕ್ಕಿಂದ ನೋಡುತ್ತಿರ್ದನೆಂಬುದೀಗ, ಸುತ್ತಿ ಸುತ್ತಿ ನೋಡುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಅಂತು ಶಿವಜ್ಞಾನದೃಕ್ಕಿಂದ ನೋಡುತ್ತಿರ್ದ ಶರಣಂಗೆ ಷಟ್‌ಸ್ಥಲಂಗಳನೊಳಕೊಂಡು ಶಿವಾದ್ವೈತ ಭಕ್ತಿಯೊಂದೇ ತೋರುತ್ತಿಹುದೆಂಬುದೀಗ, ಆರು ಮೆಟ್ಟಿನದೊಂದು ಏಣಿ ಹಾಕಿರುವದ ಕಂಡೆನೆಂಬ ಶಬ್ದಕ್ಕರ್ಥ. ಅಂತಪ್ಪ ಶಿವಾದ್ವೈತ ಭಕ್ತಿಯೊಂದರಲ್ಲಿ ನಿರ್ಭರವಾದ ಶರಣನೆಂಬುದೀಗ, ಆ ಏಣಿಯ ಮೆಟ್ಟಿ ಮೆಟ್ಟಿ ಎಂಬ ಶಬ್ದಕ್ಕರ್ಥ. ಅಂತು ಶಿವಾದ್ವೈತ ಭಕ್ತಿಯಲ್ಲಿ ನಿರ್ಭರವಾದ ಶರಣನು ಚಿದಹಂಕಾರದ ತೂರ್ಯಾವಸ್ಥೆಯ ಭಾವದಲ್ಲಿ ಸಮರಸವಾದನೆಂಬುದೀಗ, ಆ ಬೆಟ್ಟದ ತುತ್ತತುದಿಯನೇರಿ ಎಂಬ ಶಬ್ದಕ್ಕರ್ಥ. ಆ ತೂರ್ಯಾವಸ್ಥೆಯ ಭಾವದಲ್ಲಿ ಸಮರಸವಾದ ಶರಣನು ತನ್ನ ನಿಜಸ್ವರೂಪವನು ಸುಜ್ಞಾನ ದೃಷ್ಟಿಯಿಂದ ನೋಡುತ್ತಿರ್ದನೆಂಬುದೀಗ, ತುಟ್ಟತುದಿಯನೇರಿ ನೋಡಲಾಗಿ ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವು ನಿರವಯಲಾಗಿದ್ದಿತು ಶರಣನ ಸುಜ್ಞಾನ ದೃಷ್ಟಿಗೆಂಬುದೀಗ, ಬಟ್ಟಬಯಲಾಗಿದ್ದಿತು ಎಂಬ ಶಬ್ದಕ್ಕರ್ಥ. ಆ ನಿರವಯ ಪರಬ್ರಹ್ಮದಲ್ಲಿ ಸಮರಸೈಕ್ಯವಾಗಿ ಬೆರಸಿದ ಶರಣನು ನಾನು ಲಿಂಗದಲ್ಲಿ ಬೆರೆಸಿದೆನೆಂಬ ಚಿದಹಂತೆ ನಷ್ಟವಾಯಿತ್ತೆಂಬುದೀಗ, ಆ ಬಟ್ಟಬಯಲೊಳಗೆ ಹತ್ತಿ ಹೋಗುತ್ತಿರಲಾಗಿ ನಾನೆತ್ತ ಹೋದೆನೆಂದರಿಯೆನಯ್ಯಾ ಬಸವಪ್ರಿಯ ಕೂಡಲ ಚನ್ನ ಸಂಗಮದೇವಾ ಎಂಬ ಶಬ್ದಕ್ಕರ್ಥ.

## ಪ್ರಭುದೇವರ ವಚನಗಳು

೧

ಅನುಭಾವ-ಅನುಭಾವವೆಂಬಣ್ಣಗಳು ನೀವು ಕೇಳಿರೆ !
ಅನುಭಾವದೊಂದೆತ್ತು ಕೆಟ್ಟಿತ್ತು, ಎತ್ತುಗೇಣುದ್ದ ಕೊಂಬು ಮೊಳದುದ್ದ,
ಕೆಟ್ಟೆಂಟು ದಿನ ಕಂಡು ಹದಿನಾರುದಿನ ನಿನ್ನೆ ಮೆಟ್ಟಿದನಾಟಿಯ—
ಮೊನ್ನೆ ಮೇವುದ ಕಂಡೆ, ಗುಹೇಶ್ವರಾ ! ಅರಸುವ ಬಾರೈ ಕಡೆಯ ಹೊಲಕೆ !

**ಟೀಕು:**— ಶಿವಜೀವೈಕ್ಯರ ಸಂಬಂಧವೀಗ, ಅನುಭಾವ ಇಂತಪ್ಪ ಅನುಭಾವ ಪ್ರತಿಸಾಧಕರಾದ ಆತ್ಮ-ವಿತ್ತುಗಳು ಅಧ್ಯಾತ್ಮನ ನಿಲವು ನಿಜವನೆಯ್ದಲರಿ

ಯುದೆ ಮರವೆಯಿಂ ಗತಿಗೆಟ್ಟು ನಿಂದಿತ್ತೆಂಬುದೀಗ, ಅನುಭಾವ-ಅನುಭಾವವೆಂಬ ಣ್ಣಗಳು ನೀವು ಕೇಳಿರೆ, ಅನುಭಾವವೆಂಬುದೊಂದೆತ್ತು ಕೆಟ್ಟಿತ್ತೆಂಬ ಶಬ್ದಕ್ಕರ್ಥ. ಅಂತು ನಿಜವನೆಯ್ದಲರಿಯದೆ ಜಡಭಾವದಿಂದ ದೇಹಾಭಿಮಾನಿಯಾದ ಜೀವನ ಸೂಕ್ಷ್ಮವಾಗಿದ್ದರೂ ಅದಕ್ಕೆ ಅಹಂ-ಮಮತೆಗಳೆಂಬ ಕೋಡುಗಳು ಅತ್ಯುನ್ನತ ಮಾಗಿರ್ಪವೆಂಬುದೀಗ, ಎತ್ತು ಗೇಣುದ್ದ ಕೊಂಬು ಮೊಳದುದ್ದವೆಂಬ ಶಬ್ದಕ್ಕರ್ಥ. ಆದಿ ಸಂಬಂಧವಾದ ಅಷ್ಟತನು ಗುಣವಿಡಿದು ಜಡಭಾವವನೆಯ್ದಿದ ಜೀವನ ನಿಲವು ಅನಾದಿ ಸಂಬಂಧವಾದ ಷೋಡಶಮುಖವಾಗಿರ್ಪ ಚಿದಂಶಿಕನೆಂದರಿಯಲೊಡನೆ ಎಂಬುದೀಗ, ಕೆಟ್ಟೆಂಟು ದಿನಕಂಡು ಹದಿನಾರು ದಿನವೆಂಬ ಶಬ್ದಕ್ಕರ್ಥ. ಇಂತಿ ಜ್ಞಾನೋದಯವಾದ ಶರಣನು ತನುಗುಣವಳಿದ ಬಳಿಕ ಪೂರ್ವಾಶ್ರಯವ ನಿವೃತ್ತಿಯಾಗಿ ಪುನರ್ಜಾತನಾದ ಕಾರಣ ತನುಗುಣವಳಿದುದೀಗ, ನಿನ್ನೆಯೊಂದಾಯಿತ್ತು ಅಂತಪ್ಪ ಅಂಗದಲ್ಲಿ ಇಷ್ಟಲಿಂಗ ಸಂಬಂಧವಾಗಿರಲದೀಗ, ನಿನ್ನೆ ಮೆಟ್ಟಿದ ನಾಟಿಯೆಂಬ ಶಬ್ದಕ್ಕರ್ಥ. ಆ ಜ್ಞಾನೋದಯದಿಂ ತನುಗುಣವಳಿಯದ ಮುನ್ನವೆ ಪ್ರಾಣನ ಧರ್ಮವಳಿದ ಕಾರಣವದೀಗ, ಮೊನ್ನೆಯೊಂದಾಯಿತ್ತು ಆ ಪ್ರಾಣನ ಸದ್ವಿವೇಕ ಮುಖದಿಂದ ಆ ಇಷ್ಟಲಿಂಗವನು ಆವ ಗ್ರಹಿಸುತ್ತಿರಲದೀಗ, ಮೊನ್ನೆ ಮೇವುದ ಕಂಡೆನೆಂಬ ಶಬ್ದಕ್ಕರ್ಥ. ಇಂತಿ ಪ್ರಾಣಲಿಂಗ ಗ್ರಾಹಕನಾದ ಸಜ್ಜೀವನ ನಿಲವು ಮೀರಿದ ಸ್ಥಲವನೆಯ್ದಿರ್ಪುದೆಂದು ಸ್ವಾನುಭಾವ ಮುಖದಿಂ ವಿವರಿಸುತಿರ್ಪುದೆ ಅನುಭಾವವೆಂಬುದೀಗ, ಗುಹೇಶ್ವರಾ! ಅರಸುವ ಬಾರ್ಕೈ ಕಡೆಯ ಹೊಲಕೆ ಎಂಬ ಶಬ್ದಕ್ಕರ್ಥ.

೨

ಈಶ್ವರನ ದ್ರೋಣವ ಮಾಡಿ ಪದ್ಮನಾಭನ ನಾರಿಯ ಮಾಡಿ
ಕಮಲಜನೆಂಬುವ ಬಾಣವ ತೊಟ್ಟು, ತ್ರಿಭುವನವ ನೆಚ್ಚವನಾರೋ!
ಚಂದ್ರ-ಸೂರ್ಯರ ಚಿನ್ನ ಮೆಟ್ಟಿ, ಸುವರ್ಣದ ಮಳೆಯ
ಕರಸಿದವರಾರೋ !
ದೇವ-ದಾನವ-ಮಾನವರೆಲ್ಲರು ಬಾಣಕ್ಕೆ ಗುರಿಯಾಗಿ ಬಿದ್ದರು
ಗುಹೇಶ್ವರಾ, ಶೂನ್ಯ ನಿಃಶೂನ್ಯದೊಳಗೆ.

ಟೀಕು:— ತಮೋ ಗುಣವೆ ಬಿಲ್ಲಾಗಿ ಅದಕ್ಕೆ ಸಾತ್ವಿಕ ಗುಣವೆ ನಾರಿಯಾಗಿ ಅಲ್ಲಿ ರಜೋ ಗುಣವೆಂಬ ಶರವ ಹೂಡಿ ಮೂರು ಲೋಕವೆಲ್ಲವನು ಗುರಿಮಾಡಿ ಭವಬಾಧೆಗೊಳಗು ಮಾಡುತ್ತಿಹನು ಶಿವನೆಂಬುದೀಗ, ಈಶ್ವರನ ದ್ರೋಣವ ಮಾಡಿ, ಪದ್ಮನಾಭನ ನಾರಿಯ ಮಾಡಿ ಕಮಲಜನೆಂಬ ಬಾಣವ ತೊಟ್ಟು ತ್ರಿಭುವನವ ನೆಚ್ಚವನಾರೋ ಎಂಬ ಶಬ್ದಕ್ಕರ್ಥ. ಇಂತಿ ಭವಬಾಧೆಗೊಳಗಾದ ಜಗದಲ್ಲಿ ಜ್ಞಾನಾಜ್ಞಾನ ಕಲ್ಪಿತ ವಿಡಿದಿರ್ಪ ಪ್ರಕೃತಿ ಪುರುಷರನು ಅಧೋಮುಖವಪ್ಪಂತಡಿಗೊತ್ತಿ ಮೆಟ್ಟಿ ಮದಮುಖದ ವೃಷ್ಟಿಯಂ ಕರೆದು ಸಂಸಾರ ಜಲದಲ್ಲಿ ತಲೆ ಎತ್ತಲಿಯ್ಯದು ಶಿವನ ಶಕ್ತಿಯೆಂಬುದೀಗ, ಚಂದ್ರ-ಸೂರ್ಯರ ಬೆನ್ನ ಮುಟ್ಟಿ ಸುವ

ಣ೯ದ ಮುಳಿಯು ಕರಸಿವವರಾರೋ ಎಂಬ ಶಬ್ದಕ್ಕರ್ಥ. ಇಂತಿ ಭವ ಕಲ್ಪಿತಕ್ಕೆ ಗುರಿಯಾಗಿ ಸಂಸಾರ ಮುಃಖಿಗಳಾದ ಸಕಲಾತ್ಮರೆಲ್ಲರು ಜೀವ ಪರಮುನ ಗುಣವಿಡಿದಿರ್ಪರೆಂಬುದೀಗ, ದೇವ-ದಾನವ-ಮಾನವರೆಲ್ಲ ಈ ಬಾಣಕ್ಕೆ ಗುರಿಯಾಗಿ ಬಿದ್ದರು ಗುಹೇಶ್ವರಾ ಶೂನ್ಯ-ನಿಶ್ಶೂನ್ಯದೊಳಗೆ ಎಂಬ ಶಬ್ದಕ್ಕರ್ಥ.

೩

ಉದಕದ ಕೊಡನ ಹೊತ್ತಾಡುವ ಗೊರವತಿಯು ಕೈಯಲ್ಲಿ ಕಂಕಣ
ಉಲಿವಗೆಜ್ಜೆ—
ಚರಣದಲ್ಲಿ; ಉರಿಯುಗೊರವನ ನೆರವ ಭರವಶದಿಂ ಬರಲು
ಬಹಳ ಮುಳ್ಳಡ್ಡಲಾದವಲ್ಲಾ, ಕಂಕಣ ದುಲಹು ನಂದಿ,
ಕಣ್ಣುದೆರೆದಾ ಮುಳ್ಳಳಿಯಲು ಕಾಡುಗಿಚ್ಚಿದ್ದು ಕರಡವ ಸುಟ್ಟಂತೆ
ಪ್ರಾಣ ಗುಣ ಪ್ರಧ್ವಂಶಕಂಗೆ ಅನ್ಯೋನ್ಯ ಭಾವ ತ್ರಯವುಂಟೆ ?
ಶರಣ ಲಿಂಗಕ್ಕೆ ಸಂದಿಲ್ಲ ಗುಹೇಶ್ವರಾ.

**ಟೀಕು:**— ಪರಮಾನಂದ ರಸಭರಿತವಾದ ಚಿದ್ಘಟವ ಧರಿಸಿಕೊಂಡು ಪರಮ ಲೀಲಾವಿಲಾಸದಿಂ ನಟಿಸುತ್ತಿರ್ಪ ಶರಣ ಸತಿಯು ಕೃತ ನಿಶ್ಚಯ ಕರದಲ್ಲಿ ದೃಢ ನಿಷ್ಠೆ ಕರಿಗೊಂಡಿರ್ಪುದೆಂಬುದೀಗ, ಉದಕದ ಕೊಡನ ಹೊತ್ತಾಡುವ ಗೊರವತಿಯು ಕೈಯಲ್ಲಿ ಕಂಕಣವೆಂಬ ಶಬ್ದಕ್ಕರ್ಥ. ಸಚ್ಚರಿಯದಲ್ಲಿ ದಾಸೋಹಂಭಾವ ವಿಹುದೆಂಬುದೀಗ, ಉಲಿವ ಗೆಜ್ಜೆ ಚರಣದಲ್ಲಿ ಎಂಬ ಶಬ್ದಕ್ಕರ್ಥ. ಇಂತಪ್ಪ ಶರಣ ಸ್ವಯಂ ಜೋತಿರ್ಲಿಂಗವೆಂಬ ಪುರುಷನ ಕೂಡುವ ಭಕ್ತ್ಯಾವಸ್ಥೆಯ ಮುಂದುಗೊಂಡು ಚರಿಸುತ್ತಿರಲದೀಗ, ಉರಿಯ ಗೊರವನ ನೆರವ ಭರವಶದಿಂ ಬರಲು ಎಂಬ ಶಬ್ದಕ್ಕರ್ಥ. ಇಂತು ಲಿಂಗವಿಕಳಾವಸ್ಥೆಯ ಮುಂದುಗೊಂಡು ಚರಿಸುತ್ತಿರ್ಪ ಶರಣ ಸತಿಗೆ ವಿಷಯಾದಿ ಕಂಠಕಂಗಳು ಬಹುಮುಖವಾಗಿ ಮುಂದೊರಲದೀಗ, ಬಹಳ ಮುಳ್ಳು ಅಡ್ಡಲಾದವಲ್ಲಾ ಎಂಬ ಶಬ್ದಕ್ಕರ್ಥ. ಆ ಬಹುಮುಖವಾದ ವಿಷಯಾದಿ ಕಂಡಕಂಗಳ ಶಿವೋಹಮೆಂಬ ಪರಮಾನಂದ ಭಾವ ಮಹಾಜ್ಞಾನದೃಷ್ಟಿಯ ಪ್ರಭಾವಲೋಕನ ಮಾತ್ರದಿಂ ನಷ್ಟವ ಮಾಡಲದೀಗ, ಕಂಕಣದುಲುಹು ನಂದಿಕಣ್ಣುದೆರೆದಾ ಮುಳ್ಳಳಿಯಲು ಎಂಬ ಶಬ್ದಕ್ಕರ್ಥ. ಇಂತಿ ಸ್ವಾನುಭಾವ ಜ್ಞಾನದಿಂ ವಿಷಯಾದಿ ದುರ್ಗುಣಂಗಳಳಿದು ಕಾಡಗಿಚ್ಚು ಕರಡನ ಸುಟ್ಟಲ್ಲಿ ಹಿಂದು ಮುಂದಿಲ್ಲವೆಂಬಂತೆ ಪ್ರಾಣವಿಕಾರವ ಹಿಂಗಿ ಪರಮ ಚೈತನ್ಯನಾದ ಶರಣನು ತಾನಿಡಿರೆಂಬ ತ್ರಿಪುಟಿ ಭಾವರಹಿತನಾಗಿ ಅವಿರಳಾತ್ಮಕನಾಗಿರ್ಪನೆಂಬುದೀ ವಚನದ ತಾತ್ಪರ್ಯವು.

೪

ತಿಳಿದಿರ್ದ ಮಡುವಿನೊಳಗೆ ಸುಳಿ-ಸುಳಿದಾಡುತ್ತ ಒಂದು
ಸುವರ್ಣದ ಬಿಂದು
ಅದು ಹಿಂದು-ಮುಂದಾಗಿ ನೋಡಿದವರಿಗಲ್ಲದೆ ಕಾಣಬಾರದು

ಮಡುವ ತುಳುಕದೆ, ದಡವ ಸೋಂಕದೆ ಹಿಡಿಯ ಬಲ್ಲಡೆ
ಗುಹೇಶ್ವರನೆಂಬ ಲಿಂಗವು ಈಗಳೆ ಸಾಧ್ಯ !

**ಟೀಕು:—** ನಿರ್ಮಲವಾದ ಮನೋ ಜಲಧಿಯಲ್ಲಿ ಚಿತ್ ಪ್ರಕಾಶ ಬಿಂದು ಸಂಚರಿಸುತ್ತಿರಲದೀಗ, ತಿಳಿದಿರ್ದ ಮಡುವಿನೊಳಗೆ ಸುಳಿ-ಸುಳಿದಾಡುತ್ತದೆ ಒಂದು ಸುವರ್ಣದ ಬಿಂದು ಎಂಬ ಶಬ್ದಕ್ಕರ್ಥ. ಆ ಚಿದ್ಬಿಂದು ಪ್ರವೃತ್ತಿ ಮುಖ ವಳಿದು ನಿವೃತ್ತಿ ಮುಖವಾಗಿ ಕಂಡವರಿಗಲ್ಲದೆ ಗೋಚರಿಸದೆಂಬುದೀಗ, ಅದು ಹಿಂದು-ಮುಂದಾಗಿ ನೋಡಿದವರಿಗಲ್ಲದೆ ಕಾಣಬಾರದೆಂಬ ಶಬ್ದಕ್ಕರ್ಥ. ಇಂತಪ್ಪ ಶರಣನು ಆ ಮನೋ ಶರಧಿಯ ಕಲಕದೆ ದೇಹಧರ್ಮವ ಹೊರ್ದದೆ ಆ ಮಹಾ ಜ್ಞಾನ ಬಿಂದುವ ಗ್ರಹಿಸಲು ಪರವು ಸಾಧ್ಯವಹುದೆಂಬುದೀಗ, ಮಡುವ ತುಳಕದೆ ದಡವ ಸೋಂಕದೆ ಹಿಡಿಯ ಬಲ್ಲಡೆ ಗುಹೇಶ್ವರ ಲಿಂಗವು ಈಗಳೆ ಸಾಧ್ಯವಾಗ ದೆಂಬ ಶಬ್ದಕ್ಕರ್ಥ.

೫

ಕಲಿ ತನ್ನ ತಲೆಯ ನರಿದು ಕೈಯಲ್ಲಿ ಹಿಡಿದು—
ಹಲವು ದ್ವೀಪಕ್ಕೆ ಹೋಗಿ ತೊಳಲುತ್ತಿದ್ದಾನೆ;
ಕಂಡವರು ತೋರಿ, ಕೇಳಿದವರು ಹೇಳಿ ಬುದ್ಧಿಗೆಟ್ಟವ ಶುದ್ಧಿಯ
ಬೆಸಗೊಳ್ಳುತ್ತಿದ್ದಾನೆ;
ತಲೆ, ತಲೆಯನೆ ನುಂಗಿ ಹಲವುದೇಶಕ್ಕೆ ಹೋಯಿತ್ತು ಗುಹೇಶ್ವರಾ,
ತಲೆ ಮೊದಲಿಲ್ಲ !

**ಟೀಕು:—** ದೃಢ ಬುದ್ಧಿ ಕರಿಗೊಂಡ ಶರಣನು ತನ್ನಲ್ಲಿ ತಲೆದೋರಿದ ಭಿನ್ನ ವಿವೇಕದ ತಾನೆ ಮಹಾ ಜ್ಞಾನದಿಂ ಛೇದಿಸಿ ಸದ್ಭಾವ ಕರದಿಂ ಪಿಡಿದು ನಾನಾಸ್ಥಲ ಪರಿಕ್ರಮದಲ್ಲಿ ವರ್ತಿಸುತ್ತಿರಲದೀಗ, ಕಲಿ ತನ್ನ ತಲೆಯ ನರಿದು ಕೈಯಲ್ಲಿ ಹಿಡಿದು ಹಲವು ದ್ವೀಪಕ್ಕೆ ಹೋಗಿ ತೊಳಲುತ್ತಿದ್ದಾನೆ ಎಂಬ ಶಬ್ದಕ್ಕರ್ಥ. ಇಂತಪ್ಪ ಶರಣ ಚಾರಿತ್ರವ ಶೃತ ಮುಖದಿಂ ಕಂಡು ಗುರು ಮುಖದಿಂ ಕೇಳಿದ ಸ್ವಾನುಭಾವರ ಮುಖದಿಂ ಪರಾಮರಿಸುತ್ತಿರ್ದಾತ್ಮನೆ ಭಿನ್ನ ವಿಚಾರ ವರಿತ ಅಭಿನ್ನ ವಿಚಾರ ಸಂಬಂಧಿ ಎಂಬುದೀಗ, ಕಂಡವರು ತೋರಿರೆ ಕೇಳಿದವರು ಹೇಳಿರೆ ಬುದ್ಧಿಗೆಟ್ಟವ ಸುದ್ದಿಯ ಬೆಸಗೊಳ್ಳುತ್ತಿದ್ದಾನೆ ಎಂಬ ಶಬ್ದಕ್ಕರ್ಥ. ಇಂತಿ ನಿವೃತ್ತಿ ಮುಖವಾದ ಸದ್ವಿವೇಕವು ಮಹಾನುಭಾವ ವಿವೇಕವನು ಅವಗ್ರಹಿಸಿ ನಾನಾ ಸ್ಥಳ-ಕುಳವನೆಯ್ದಿ ಜಡ ಭಾವರಹಿತವಾಗಿ ನಿಜದಲ್ಲಿ ನಿರ್ವಯಲನೆಯ್ದಿರ್ಪುದೆಂಬುದೀಗ, ತಲೆ, ತಲೆಯನೆ ನುಂಗಿ ಹಲವು ದ್ವೀಪಕ್ಕೆ ಹೋಯಿತ್ತು ಗುಹೇಶ್ವರಾ ! ತಲೆಯ ಮೊದಲಿಲ್ಲವೆಂಬ ಶಬ್ದಕ್ಕರ್ಥ.

೬

ತಲೆಯಿಲ್ಲದ ಮೃಗ ಒಡಲಿಲ್ಲದೆ ಆಹಾರವ ಕೊಂಡಿತ್ತು
ಹಜ್ಜೆಯಿಲ್ಲದೆ ಹರಿಯಿತ್ತು, ಅದ ಶುದ್ಧಿಯ ಮಾಡ ಹೋದಾತ
ನಿನ್ನು ಮರಳನು

ವೆಜ್ಜವಿಲ್ಲದ ಮಣಿಯು ದಾರವಿಲ್ಲದೆ ಪವಣಿಸುವ
ಗುಹೇಶ್ವರಾ, ನಿಮ್ಮ ಶರಣನ ಪರಿಯನೋಡಾ !

**ಟೀಕು:**— ವೃತ್ತಿಜ್ಞಾನವಿಲ್ಲದ ಸಜ್ಜೀವಾತ್ಮನೆಂಬುದೀಗ, ತಲೆಯಿಲ್ಲದ ಮೃಗವೆಂಬ ಶಬ್ದಕ್ಕರ್ಥ. ಆ ಸಜ್ಜೀವನು ತನುಗುಣರಹಿತನಾಗಿ ಶಿವಸುಖಾನಂದವ ಸವಿಯುತ್ತ ಅಭಿನ್ನ ಕ್ರಿಯಾಚರಿತ್ರವಿಡಿದು ಗಲದಿಸುತ್ತಿರವಿೀಗ, ಒಡಲಿಲ್ಲದೆ ಆಹಾರವ ಕೊಂಡಿತ್ತು ಹಜ್ಜೆಯಿಲ್ಲದೆ ಹರಿಯಿತ್ತೆಂಬ ಶಬ್ದಕ್ಕರ್ಥ. ಇಂತಿ ಸಜ್ಜೀವನ ನಿಲವನು ಅರಸುತ್ತಿರ್ದ ಶರಣ ಮರಳಿ ಪುನರಪಿವಿಡಿದು ವರ್ತಿಸನೆಂಬುದೀಗ, ಅವ ಸುದ್ದಿಯು ಮಾಡಹೋದಾಗ ನಿನ್ನು ಮರುಳನೆಂಬ ಶಬ್ದಕ್ಕರ್ಥ. ಇಂತಪ್ಪ ಶರಣನು ಅಭೇದ್ಯ ಜ್ಞಾನ ಸ್ವರೂಪವಾದ ಅವಿರಳ ಪರವಸ್ತುವ ಪ್ರಾಣವಾಯು ಸೂತ್ರವಳಿದ ಸ್ವಾನುಭಾವ ಸೂತ್ರದಲ್ಲಿ ಸಂಬಂಧಿಸಿದ ದೃಢಕಂಠದೊಳು ಅಲಂಕರಿಸುತ್ತಿರಲೀಗ, ವೆಜ್ಜವಿಲ್ಲದ ಮಣಿಯು ದಾರವಿಲ್ಲದೆ ಪವಣಿಸುವ ಗುಹೇಶ್ವರಾ ನಿಮ್ಮ ಶರಣನ ಪರಿಯನೋಡಾ ಎಂಬ ಎಂಬ ಶಬ್ದಕ್ಕರ್ಥ.

೭

ನೀರಲೊಗೆದ ಮರಕ್ಕೆ ಕಾಣಬಾರದ ನೆಳಲು ಬೀಜವಿಲ್ಲದ ಮರದ
ಹೆಸರೆನೆಲ
ಒಯಿದನೇನ ಬಲ್ಲಿರಿ, ಇದನೇನ ಬಲ್ಲಿರಿ,
ಅರಿದವ ಮರೆಯ ಘನಕ್ಕೆ ಘನವಾದುದು
ಕಾಸಲಿಲ್ಲದ ತುಪ್ಪ ವಾಸನೆಯಿಲ್ಲದ ಪರಿಮಳ ಗುಹೇಶ್ವರನಿಪ್ಪ
ನಿರಾಳವ ನೋಡಯ್ಯ !

**ಟೀಕು:**—ಮನೋಮಧ್ಯದಲ್ಲಿ ಉದಯವಾದ ಸದ್ವಿವೇಕ ವೃಕ್ಷದ ಚಿಚ್ಛಾಯೆ ಎಂಬುದು ಭಿನ್ನವಿಟ್ಟು ತೋರದೆ ಅಲ್ಲಿಯೆ ನಿರ್ಲೇಪವಾಗಿರ್ಪುದೆಂಬುದೀಗ, ನೀರಲೊಗೆದ ಮರಕ್ಕೆ ಕಾಣಬಾರದ ನೆಳಲೆಂಬ ಶಬ್ದಕ್ಕರ್ಥ. ಬೀಜವೆಂದೊಡೆ ಜನನಸ್ಥಲ. ಅಂತಪ್ಪ ಜನನಸ್ಥಲ ರಹಿತವಾಗಿರ್ಪ ಅಜಾತ ಸ್ವಯಂಭುವಾದ ಕಾರಣ ಆ ಸದ್ವಿವೇಕ ವೃಕ್ಷ ನಿರ್ನಾಮವಾಗಿರ್ಪುದೆಂಬುದೀಗ, ಬೀಜವಿಲ್ಲದ ಮರದ ಹೆಸರೆನೆಲವಾ ಎಂಬ ಶಬ್ದಕ್ಕರ್ಥ. ಈ ನಿರ್ಣಯವ ಖಂಡಿತ ಭಾವಿಗಳರಿಯರೆಂಬುದೀಗ, ಇದನೇನ ಬಲ್ಲಿರಿ, ಎಂಬ ಶಬ್ದಕ್ಕರ್ಥ. ಆ ಸದ್ವಿವೇಕ ತಾನೆ ಮಹಾಘನವಸ್ತು ಅದೆ ತನ್ನ ನಿಜದ ನಿಲವೆಂದರಿದ ಶರಣ ಮರಳಿ ಇದಿರಿಟ್ಟರಸುವ ಮರವೆಗೊಳಗಾಗನೆಂಬುದೀಗ, ಅರಿದವ ಮರೆಯ ಘನಕ್ಕೆ ಘನವಾದುದೆಂಬ ಶಬ್ದಕ್ಕರ್ಥ. ಇಂತಪ್ಪ ಅರಿವು ತಾನೆ ಶೃತಿ ಮತವಲ್ಲದ ಸ್ವಯಂಭು ಜ್ಞಾನವಾದ ಕಾರಣ ಕಾಸಲಿಲ್ಲದ ತುಪ್ಪವೆಂಬ ಶಬ್ದಕ್ಕರ್ಥ. ಆ ಸ್ವಯಂಭು ಜ್ಞಾನವೆಂಬುದು ಕರ್ಮವಾಸನೆಯಿಲ್ಲವೆ ಸ್ವಾನುಭಾವ ಸದ್ವಾಸನೆಯಿಂದೆರೆವುತ್ತಿಹುದೆಂಬುದೀಗ, ವಾಸನೆಯಿಲ್ಲದ ಪರಿಮಳವೆಂಬ ಶಬ್ದಕ್ಕರ್ಥ. ಇಂತಪ್ಪ ಶಿವ ಸದ್ವಾಸನ ಜ್ಞಾನಿಯೆ ನಿರಾಳ ನಿಜಪದಸ್ಥನೆಂಬುದೀಗ, ಗುಹೇಶ್ವರನಿಪ್ಪ ನಿರಾಳನೋಡಯ್ಯ ಎಂಬ ಶಬ್ದಕ್ಕರ್ಥ.

೮

ಹುಟ್ಟು ಬಂಜೆಯ ಮಗನೊಬ್ಬ ಈನದೆಮ್ಮೆಯ ಗಿಣ್ಣ ಬೇಡಿದನು
ಕೊಂಬಿಲ್ಲದ ಮರನನೇರಿ ಹೊಟ್ಟೆ ತುಂಬ ಹಣ್ಣ ಮೆಲಿದನು
ಗುಹೇಶ್ವರಾ, ಗುಹೇಶ್ವರಾ ಇಳಿ ಇಳಿ ಎಂದೊಡೆ ಅಳುತ್ತಿದ್ದಾನೆ.

**ಟೀಕು:—** ಜನನ ಕರ್ಮಂಗಳಿಲ್ಲದ ಚಿದಂಶಿಭೂತನಾದ ಆತ್ಮನು ನಿಜವಂ ಮರದು ಜೀವ-ಭವ-ಭ್ರಾಂತಿಯಿಂ ಜ್ಞಾನೋತ್ಪತ್ತಿ ಇಲ್ಲದ ಮಾಯಾ ಸುಖವ ನಿಶ್ಚಯಿಸುತ್ತಿರಲದೀಗ, ಹುಟ್ಟು ಬಂಜೆಯ ಮಗನೊಬ್ಬ ಈನದೆಮ್ಮೆಯ ಗಿಣ್ಣ ಬೇಡಿದನೆಂಬ ಶಬ್ದಕ್ಕರ್ಥ. ಇಂತು ಮಾಯಾಸುಖವ ನಿಶ್ಚಯಿಸುತ್ತಿರ್ದ ಜೀವನ, ಕೊಂಬಿಲ್ಲದ ಮರನೆಂದೊಡೆ, ತಾಳಮರ ಅಂತಪ್ಪ ಮರದ ಗುಣಧರ್ಮವನುಳ್ಳ ದೇಹವೆಂಬ ವೃಕ್ಷವನಾಶ್ರಯಿಸಿ ತತ್ಕರ್ಮ ಫಲಂಗಳನು ಅನುಭವಿಸುತ್ತಿರಲದೀಗ, ಕೊಂಬಿಲ್ಲದ ಮರನೇರಿ ಹೊಟ್ಟೆತುಂಬು ಹಣ್ಣ ಮೆಲಿದನೆಂಬ ಶಬ್ದಕ್ಕರ್ಥ. ಇಂತಿ ದೇಹ ಸುಖಗಳಂ ಮುಚ್ಚಿ ಬಿಡಲಾರದೆ ಸಂಸಾರ ದುಃಖಕ್ಕೊಳಗಾಗಿ ಮರುಗುತ್ತಿರ್ದ ಜೀವನೆಂಬುದೀಗ, ಗುಹೇಶ್ವರಾ ಗುಹೇಶ್ವರಾ ಇಳಿ ಇಳಿ ಎಂದಡೆ ಅಳುತ್ತಿದ್ದಾನೆ ಎಂಬ ಶಬ್ದಕ್ಕರ್ಥ.

೯

ಸುತ್ತಲಿಲ್ಲದ ವ್ಯಾಧನು ಸುಳಿಯಲಿಲ್ಲದ ಮೃಗವು,
ಒತ್ತಿದನಾ ಮೃಗವ ನಿರುಬಿನಲ್ಲಿಗೆಯಯ್ಯಾ,
ಸೋವವಾಸೊ ತೋವಾ ಎಂದೆನುತ್ತ ಎತ್ತಿದ ಮೃಗವು ಇರುಬು
ಗೊಂಡಿತ್ತು
ಇರುಬಿನ ಕುಳಿಯೊಳಗೆ ಕೊಲ್ಲದೆ ಕೊಂದನಲ್ಲ
ಮೃಗವನು ಅಳಿಯದೆ ಅಳಿದುದಲ್ಲ ! ಮಾಡಲಿಲ್ಲದ ಸ್ವೈದಾಗ—
ನೀಡಲಿಲ್ಲದ ಬೋನ ಅರ್ಪಿತವಿಲ್ಲದ ತೃಪ್ತಿ ಗುಹೇಶ್ವರ ಲಿಂಗಕ್ಕೆ

**ಟೀಕು:—** ಭ್ರಾಂತ ವ್ಯಾಪಾರವಳಿದ ಶರಣನೆಂಬುದೀಗ, ಸುತ್ತಲಿಲ್ಲದ ವ್ಯಾಧನೆಂಬ ಶಬ್ದಕ್ಕರ್ಥ. ದುಸ್ಸಂಚಲ ಪ್ರವರ್ತನೆಯಿಲ್ಲವೆ ಸಜ್ಜಿವನೆಂಬುದೀಗ, ಸುಳಿಯಲಿಲ್ಲದ ಮೃಗವೆಂಬ ಶಬ್ದಕ್ಕರ್ಥ. ಆ ಸಜ್ಜೀವನ ಅವಿರಳಭಾವದತ್ತಭಿಮುಖವ ಮಾಡಲದೀಗ, ಒತ್ತಿದನಾ ಮೃಗವ ನಿರುಬಿನಲ್ಲಿಗೆಯಯ್ಯಾ ಎಂಬ ಶಬ್ದಕ್ಕರ್ಥ. ಇಂತಭಿಮುಖವಾದ ಜೀವನು ದಾಸೋಹ-ಶಿವೋಹಂ ಎನುತ್ತ ಅವಿರಳ ಭಾವದಲ್ಲಿ ನಿಲಲದೀಗ, ಸೋಹಂ ವಾಸೋ ತೋವಾ ಎಂದೆನುತ ಎತ್ತಿದ ಮೃಗವು ಇರುಬುಗೊಂಡಿತ್ತೆಂಬ ಶಬ್ದಕ್ಕರ್ಥ. ಆ ಅವಿರಳ ಭಾವದ ಚಿತ್ ಕೂಪದಲ್ಲಿ ಆ ಜೀವನ ನಿರ್ಬಂಧದಿಂದ ಬಂಧಿಸದೆ ಸುವಿವೇಕ ಬೋಧೆಯಿಂ ಶಿಕ್ಷಿಸುತ್ತಿರಲದೀಗ, ಇರುಬಿನ ಕುಳಿಯೊಳಗೆ ಕೊಲ್ಲದ ಕೊಂದನಲ್ಲಾ ಮೃಗವನೆಂಬ ಶಬ್ದಕ್ಕರ್ಥ. ಇಂತಾಗಲಾ ಜೀವನು ತಾನಿರ್ದು ತನ್ನ ಪ್ರಕೃತಿಗುಣ ನಷ್ಟವಾಗಿರ್ಪನಾಗಿ ಅದೀಗ, ಅಳಿಯದೆ ಅಳಿದುದಲ್ಲಾ ಎಂಬ ಶಬ್ದಕ್ಕರ್ಥ. ಇಂತಿ ಪ್ರಕೃತಿ

ವಿಕಾರವಳಿದ ಶುದ್ಧಾತ್ಮನ ನಿರುಪಾಧಿಕವಹ ಶುದ್ಧ ಸುಪಕ್ವಕ್ಕೆ ತಂದು ಅಪರಮಾನಂದ ಪದಾರ್ಥನನು ಇದಿರಿಟ್ಟು ಅರ್ಪಿಸಲಿಲ್ಲದ ಕಾರಣ ಎರಡಿಟ್ಟು ಕೈಕೊಳ್ಳದೆ ಲಿಂಗವು ಪರಮಾನಂದವನೆಯ್ದು ಶರಣಂಗೆ ಪ್ರಸನ್ನ ಸುಖವ ಕರುಣಿಸುತ್ತಿಹುದೆಂಬುದೀಗ, ಮಾಡಲಿಲ್ಲದ ಸೈದಾನನೀಡಲಿಲ್ಲದ ಬೋನ ಅರ್ಪಿತವಿಲ್ಲದ ತೃಪ್ತಿ ಗುಹೇಶ್ವರ ಲಿಂಗಕ್ಕೆ ಎಂಬ ಶಬ್ದಕ್ಕರ್ಥ.

೧೦

ಗಂಗಾದೇವಿ ಮುಂಡೆಯಾದಳು, ಗೌರಿದೇವಿ ಒಲೆಯ ಕಳದಳು
ಚಂದ್ರ ಸೂರ್ಯರಿಬ್ಬರೂ ನರಳಿದರು ವಾಯುದೇವ ವಿಮಾನವ ಹೊತ್ತು,
ವಾಸುದೇವ ತಲೆಗೊಳ್ಳಿಯ ನಿರಿಸಿದ,
ಅಲ್ಲಿಂವತ್ತ ಗುಹೇಶ್ವರಾ ಸತ್ತನೆಂಬ ಸುದ್ದಿ !

**ಟೀಕು:—** ಶರಣನ ಕರಸ್ಥಲದ ಲಿಂಗ ಮನಸ್ಥಲಕ್ಕೆ ವೇದಿಸಿ ನಿಜೈಕ್ಯವಾಗಲು ಜ್ಞಾನ ಶಕ್ತಿ ಸತಿ ಪತಿಭಾವ ನಿಷ್ಪತಿಯಾಗಿರ್ಪಳೆಂಬುದೀಗ, ಗಂಗಾದೇವಿ ಮುಂಡೆಯಾದಳು ಎಂಬ ಶಬ್ದಕ್ಕರ್ಥ. ಇಂತಾಗಲು ಕ್ರಿಯಾಶಕ್ತಿ ಆಚಾರವಳಿದುಳಿದಿರ್ಪಳೆಂಬುದೀಗ, ಗೌರಿದೇವಿ ನಿಲೆಯ ಕಳದಳು ಎಂಬ ಶಬ್ದಕ್ಕರ್ಥ. ಇಂತಾಗಲು ಚಂದ್ರ-ಸೂರ್ಯ ಸ್ವರಂಗಳು ಧ್ಯಾನಾನಂದ ಜಲದಲ್ಲಿ ಸೂತಕವಳಿದಿರ್ಪವೆಂಬುದೀಗ, ಚಂದ್ರ ಸೂರ್ಯರಿಬ್ಬರು ನರಳಿದರೆಂಬ ಶಬ್ದಕ್ಕರ್ಥ. ಇಂತಿವು ನಿವೃತ್ತಿಸುಖವನೆಯ್ದಲು ಆ ಲಿಂಗೈಕ್ಯ ಪದವ ಪ್ರಾಣವಾಯು ಧರಿಸಿಕೊಂಡು ಪರಮ ವಿಶ್ರಾಂತಿಯಲ್ಲಿ ಇರಲು ಅದು ಪರಮ ಚೈತನ್ಯಾತ್ಮಕನು ಮಹಾ ಜ್ಞಾನ ಸಂಪರ್ಕದಿಂದ ನಿರೂಪಿಸಿದನೆಂಬುದೀಗ, ವಾಯುದೇವ ವಿಮಾನವ ಹೊತ್ತ ವಾಸುದೇವ ತಲೆಗೊಳ್ಳಿಯ ನಿರಿದನೆಂಬ ಶಬ್ದಕ್ಕರ್ಥ. ಇಂತಾಗಲು ಆ ಲಿಂಗೈಕ್ಯ ಪದವು ನಿರ್ವಾಮನೆನಿಸಿರ್ಪುದೆಂಬುದೀಗ, ಅಲ್ಲಿಂದತ್ತ ಗುಹೇಶ್ವರ ಸತ್ತನೆಂಬ ಸುದ್ದಿ ಎಂಬ ಶಬ್ದಕ್ಕರ್ಥ.

೧೧

ಗಂಗೆಯ ತಡಿಯ ಲೊಂದ್ಯೆವಾಗಿಲ ಪಟ್ಟಣದ ಕಾಲು ವಳಿಯಲ್ಲಿ ಹುಟ್ಟಿ ಬೆಳದೆ
ತರುವಕ್ಕಳ ಕೂಡಿ ನೀರಾಟವ ಹೊಕ್ಕುವುಟ್ಟದ ಹೋಗಾಡಿಹಳೆಂದು—
ಬಾಯ ಬಾಯ ಕುಟ್ಟಿ ಬ್ರಹ್ಮಪಾಶವೆಂಬ ಕಿರುಗೆಯನುಗಿದು—
ಕೊಂದಳು ನಮ್ಮವ್ವೆ............ಗುಹೇಶ್ವರಾ !

**ಟೀಕು:—** ಆತ್ಮನು ಅವಿಚಾರದಿಂದಿರ್ಪ ಕರಣವೃತ್ತಿಗಳಿಂ ಸಂಸಾರ ಜಲದಲ್ಲಿ ಕ್ರೀಡಿಸಲು ಜನ್ಮ ಸಫಲವಾಗದೆಂದು ದುರ್ಬುದ್ಧಿಯ ಮಾಣಿಸಿ ರಜೋಗುಣ

ವೆಂಬ ಪಾಶವ ಕಳದುಕೊಂಡು ನಿರ್ಲಜ್ಜೆಯೆನಿಸುವಡಿಸಿದಳು ನಿಜಜನನಿಯಪ್ಪ ಚಿಚ್ಛಕ್ತಿ; ಇಂತು ರಜೋಗುಣವನಡಗಿಸಿಕೊಂಡ ಚಿನ್ಮಾತೆಯು ತಾನೇ ನಿಜೋಪದೇಶ ಕರ್ತೃವಾದಾತ್ಮ ಜನಕನಾದುದರಿಂದ ಶ್ರೀಗುರುವಿನೊಡನೆ ಮಹಾನುಭಾವ ವಿವೇಕ ಮಥನವ ಮಾಡಿ ನಿವೃತ್ತಿಮುಖವಡೆಯ್ದಿ ಲಿಂಗ ಶರಣನೆನಿಸಿ ನಿರ್ಭವನಾಗಿರ್ಪ ಶರಣ ಎಂಬುದು ಈ ವಚನದ ತಾತ್ಪರ್ಯ.

೧೨

ಸೆರಗ ಹಿಡಿದನು, ಸೀರೆಯ ಹರಿದನು, ಹುಟ್ಟ ಮುರಿದನು
ಕಂದಲನೊಡದನು ಭಂಡನವ್ವಾ, ಲಜ್ಜೆ ಭಂಡನವ್ವಾ !
ಕಂಡಡೆ ನುಡಿಸದಿರೆಲೆ ಮಾಯಾದೇವಿ ಆಯುಷ್ಯ ಹಿರಿದು
ಭೌಷ್ಟ ಕಿರಿದು ಭವಗೆಟ್ಟು ಹೋದ ಗುಹೇಶ್ವರನಲ್ಲಯ್ಯಂಗೆ ಮೂಗಿಲ್ಲ
ತಂಗಿ !

ಟೀಕು:— ಶರಣ ಸತಿಯಲ್ಲಿ ಲಿಂಗಾನುಗ್ರಹವಾಗಿ ಪೂರ್ವಾಚಾರವ ಬಿಡಿಸಿ ಕರ್ಮಪಾಶವ ಹರಿಯಲದೀಗ, ಸೆರಗ ಹಿಡಿದನು ಸೀರೆಯ ಹರಿದನು ಎಂಬ ಶಬ್ದಕ್ಕರ್ಥ. ಇಂತಾಗೂ ಶರಣಂಗೆ ಜನ್ಮ ಕರ್ಮ–ದೇಹ ಧರ್ಮ ನಷ್ಟವಾಯಿತ್ತೆಂಬುದೀಗ, ಹುಟ್ಟ ಮುರಿದನು ಕಂದಲನೊಡದನೆಂಬ ಶಬ್ದಕ್ಕರ್ಥ. ಇಂತೊಪ್ಪುವ ಶರಣ ಸತಿಯಲ್ಲಿ ಲಿಂಗವು ಭಿನ್ನ ಭಾವದ ಲಜ್ಜೆಯಳಿದು ನಿರಾಭಿಮಾನ ಕ್ರಿಯೆಯಿಂದಿರಲೀಗ, ಭಂಡನವ್ವಾ, ಲಜ್ಜೆ ಭಂಡನವ್ವಾ ಎಂಬ ಶಬ್ದಕ್ಕರ್ಥ. ಇಂತಿ ಲಿಂಗದ ನಿಜಸ್ವರೂಪವನರಿದ ಶರಣ ಸತಿ–ಜ್ಞಾನ ಶಕ್ತಿಯ ಮುಖದಿಂದುಲಿವ ಸೋಹಂ ಭಾವವಳಿದು ಶಬ್ದ ಮುಗ್ಧವಾಲವೀಗ, ಕಂಡಡೆ ನುಡಿಸದಿರಲೆ ಮಾಯಾದೇವಿ ಎಂಬ ಶಬ್ದಕ್ಕರ್ಥ. ಇಂತು ನಿಶ್ಶಬ್ದವೇದಿಯಾದ ಶರಣ ಭರಿತ ಲಿಂಗದ ನಿಲವು ನಿತ್ಯವಾಗಿ, ನಿರ್ಮುಕ್ತವಾಗಿ, ನಿರ್ಭಾವವಾಗಿ ನಿರ್ಲಜ್ಜಭಾವವಾಗಿಹುದೆಂಬುದೀಗ, ಆಯುಷ್ಯ ಹಿಂದು ಭೌಷ್ಟ ಕಿರಿದು ಭವಗೆಟ್ಟುಹೋದ ಗುಹೇಶ್ವರಲ್ಲಯ್ಯಂಗೆ ಮೂಗಿಲ್ಲ ತಂಗಿ ಎಂಬ ಶಬ್ದಕ್ಕರ್ಥ.

## ಭೋಗಣ್ಣನವರ ವಚನಗಳು

೧

ಕಂಗಳು ತಿರುಳು ನುರುಹಿ ಅಡಿಯ ಬೀಜವ ವೇದವರಿಯಲಿ
ಸುಟ್ಟು ಆ ಭಸ್ಮವ ಹಣೆಯಲ್ಲಿ ಧರಿಸಿ
ಅರಳಿಯ ಮರದೊಳಗಾಡುವ ಗಿಳಿಯ ಎಲೆ ನುಂಗಿದ್ದ ಕಂಡೆ
ಅರಳಿ ಹುವ್ವ ಇತ್ತು ಫಲ ನಷ್ಟವಾಯಿತ್ತು ನೋಡಾ !

ಎಲೆ ಉದುರಿತ್ತು, ಆ ಮರದ ಮೊದಲಿಂಗೆ ಕಿಚ್ಚನಿಕ್ಕಿ
ಬ್ರಹ್ಮನ ತಲೆಯಲ್ಲಿ ಬೆರಣೆಯ ಬೆಟ್ಟಿ, ರುದ್ರಲೋಕಕ್ಕೆ ದಾಳಿಮಾಡಿ
ಗ್ರಾಮ ಮಧ್ಯದೊಳೊಂದು ಕೊಂಡವ ಸುಟ್ಟು
ಯಜ್ಞ ಪುರುಷನ ಹಿಡಿದು ಕೈ ಸಂಕಲೆಯ ನಿಕ್ಕಿ
ಗಂಗೆವಾಳುಕರಿಗೆ ಕೈಲಾಸವನಿತ್ತು ಅಷ್ಟ ಮೂರ್ತಿಯೆಂಬ ನಾಮವ
ನಷ್ಟಮಾಡಿ,
ವಿಶ್ವ ಮೂರ್ತಿಯ ಪಾಶಮಂ ಪರಿದು ಮುಕ್ತಿ ರಾಜ್ಯಕ್ಕೆ ಪಟ್ಟವಂ
ಕಟ್ಟಿ,
ಆ ಮೂರ್ತಿ ಗಣೇಶ್ವರರಿಗೆ ಐಕ್ಯಪದವನಿತ್ತು
ಬಟ್ಟ ಬಯಲ ಕಟ್ಟಕಡೆ ಎನಿಸಿದ ನಿಜಗುರು ಭೋಗಸಂಗನಲ್ಲಿ,
ಸಯವಾದ ಅಲ್ಲಮ, ಅಜಗಣ್ಣ, ಚನ್ನ ಬಸವರಾಜ ಮುಖ್ಯವಾದ
ಲಿಂಗಾಂಗಿಗಳ ಪಾದಕ್ಕೆ ನಮೋ ನಮೋ ಎಂದು ಬದುಕಿದೆನು.

ಟೀಕು:— ಶೃತಿಮತವಹ ಸಮ್ಯಜ್ಞಾನಾಗ್ನಿಯಲ್ಲಿ ಅರವಿನ ಮರವೆಯ ದಹಿಸಲು ಆ ಅಹಂಕಾರದ ಭಸ್ಮೀಕೃತ ಮಾಡಲದೀಗ, ಕಂಗಳ ತಿರುಳನುರುಹಿ ಅಡಿಯ ಬೀಜವ ವೇದವರಿಯಲ್ಲಿ ಸುಟ್ಟು ಎಂಬ ಶಬ್ದಕ್ಕರ್ಥ. ಆ ಮೂಲಹಂಕಾರವ ದಹಿಸಿದ ಚಿದ್ ವಿಭೂತಿಯ ಸದ್ವಿವೇಕ ಮುಖಕ್ಕೆ ಅಲಂಕರಿಸಲದೀಗ, ಆ ಭಸ್ಮವ ಹಣೆಯಲ್ಲಿ ಧರಿಸಿ ಎಂಬ ಶಬ್ದಕ್ಕರ್ಥ. ಇಂತಪ್ಪ ಶರಣನು ಶರೀರವೆಂಬ ವೃಕ್ಷದಲ್ಲಿ ಸಂಚರಿಸುತ್ತಿರ್ದ ಜೀವಹಂಸನು ಪ್ರಪಂಚು ದಶಗತವಾಗಿರ್ಪುದ ನರಿದು ಚೋದ್ಯವ ಮಾಡಿತ್ತಿರಲದೀಗ, ಅರಳಿಯ ಮರದೊಳಗಾಡುವ ಗಿಳಿಯ ಎಲೆ ನುಂಗಿದ್ದ ಕಂಡೆನೆಂಬ ಶಬ್ದಕ್ಕರ್ಥ. ಇಂತಪ್ಪ ಪ್ರಪಂಚುದಳಗತವಾದ ಜೀವನ ಗುಣವರಿವಿನ ಭೇದದಿಂದ ಅಳಿಯಲು ಆ ಶರೀರವೆಂಬ ವೃಕ್ಷದಲ್ಲಿ ಸತ್ಕ್ರಿಯಾ ಕುಸುಮ ವಿಕಸಿತವಾಗಿ ಕರ್ಮಫಲವಿಲ್ಲದಿರಲದೀಗ, ಅರಳೆ ಹೂವಾಯಿತ್ತು ಫಲನಷ್ಟವಾಯಿತ್ತೆಂಬ ಶಬ್ದಕ್ಕರ್ಥ. ಇಂತಾಗಲಾ ಪ್ರಪಂಚು ದಳಂಗಳು ನಾಸ್ತಿಯಾದವೆಂಬುದೀಗ, ಎಲೆ ಉದುರಿತ್ತೆಂಬ ಶಬ್ದಕ್ಕರ್ಥ. ಇಂತು ಪ್ರಪಂಚು ರಹಿತವಾದ ಶರೀರವೆಂಬ ವೃಕ್ಷವ ಜ್ಞಾನಾಗ್ನಿಯಿಂ ಮೂಲನಾಶವ ಮಾಡಿದ ಶರಣನೆಂಬುದೀಗ, ಆ ಮರದ ಮೊದಲಿಂಗೆ ಕಿಚ್ಚನಿಕ್ಕಿ ಎಂಬ ಶಬ್ದಕ್ಕರ್ಥ. ಇಂತಿ ತನುಗುಣವ ಜ್ಞಾನಾಗ್ನಿಯಿಂ ದಹಿಸದ ಶರಣನು ರಜೋಗುಣವ ಭಂಗಿಸಿ ತಮೋಗುಣ ಸಂಬಂಧವಾದ ಕಾರಣ ತನುವ ಸೂರೆಗೊಳಲದೀಗ, ಬ್ರಹ್ಮನ ತಲೆಯಲ್ಲಿ ಚಿಕಣಿಯ ಬೆಟ್ಟಿ ರುದ್ರಲೋಕಕ್ಕೆ ದಾಳಿ ಮಾಡಿ ಎಂಬ ಶಬ್ದಕ್ಕರ್ಥ. ಇಂತಪ್ಪ ಸಮುಗ್ರಹಕನಾದ ಶರಣನು ಸೂಕ್ಷ್ಮಾಂತರಂಗ ಮಧ್ಯಸ್ಥವಾಗಿ ಆಶಾಗ್ನಿಯಿಂದ ಉರಿವುತ್ತಿರ್ದ ಮನವೆಂಬ ಯಜ್ಞಕೂಪವ ಜ್ಞಾನಾಗ್ನಿಯಿಂ ಸುಟ್ಟು ಆ ವಿಷಯ ಹವಿಸ್ಸುಗಳಿಂ ಬೆಳುವ ಅಂತರಾತ್ಮನ ಭಾವವ ಶಿವಧ್ಯಾನದಲ್ಲಿ ನಿಲಿಸಲದೀಗ, ಗ್ರಾಮಮಧ್ಯದೊಳೊಂದು ಕೊಂಡವ ಸುಟ್ಟು ಯಜ್ಞಪುರುಷನ

ಹಿಡಿದು ಕೈ ಸಂಕಲೆಯನಿಕ್ಕಿ ಎಂಬ ಶಬ್ದಕ್ಕರ್ಥ. ಅಂತರಾತ್ಮ—ಭಾವ-ಧ್ಯಾನಾನು ಸಂಧಾನವ ಮಾಡಿದ ಶರಣನು ಸಕಲ ಕರಣಂಗಳ ಜೀವನ್ಮುಕ್ತಿಯನೆಯ್ದಿಸ ಲದೀಗ, ಗಂಗೆ ಮುಳುಕರಿಗೆ ಕೈವಲ್ಯಪದವನಿತ್ತು ಎಂಬ ಶಬ್ದಕ್ಕರ್ಥ, (ವಚನ ದಲ್ಲಿ ಇದು ಕೈಲಾಸಪದವನಿತ್ತು ಎಂದಿದೆ.) ಇಂತು ಸಕಲ ಕರಣಂಗಳ ನಿಜಪದ ದಲ್ಲಿ ನಿಲಿಸಿದ ಶರಣನು ಅಸ್ಪತನು ಗುಹಾತ್ಮನೆಂಬ ನಾಮುವನಡಗಿಸಿ ವಿಶ್ವಾತ್ಮನ ಭವಬಂಧವ ತೊಲಗಿಸಲದೀಗ, ಅಷ್ಟಮೂರ್ತಿಯೆಂಬ ನಾಮುವ ನಷ್ಟವ ಮಾಡಿ ವಿಶ್ವಮೂರ್ತಿಯ ಪಾಶವಂ ಪರಿದು ಎಂಬ ಶಬ್ದಕ್ಕರ್ಥ. ಇಂತಿ ನಿವೃತ್ತಿಮುಖ ವಾದ ಆತ್ಮಂಗೆ ಮೋಕ್ಷ ಸಾಮ್ರಾಜ್ಯಕ್ಕೆ ಅಧಿಕಾರವನಿತ್ತು ಸರ್ವಾಚಾರ ಸಂಪತ್ತಿನ ಸಕಲ ಕರಣಂಗಳ ನಿಜಪದದಲ್ಲಿರಿಸಿದ ಶರಣನೆಂಬುದೀಗ, ಮುಕ್ತಿರಾಜ್ಯಕ್ಕೆ ಪಟ್ಟವಂ ಕಟ್ಟಿ ಆ ಮೂರ್ತಿ ಗಣೇಶ್ವರರಿಗೆ ಐಕ್ಯಪದವನಿತ್ತು ಎಂಬ ಶಬ್ದಕ್ಕರ್ಥ. ಇಂತಪ್ಪ ನಿರ್ಣಯುವನರಿದು ನಿರಾಕಾರ ಪರತತ್ವದಲ್ಲಿ ನಿಂದು ನಿತ್ಯ ಮುಕ್ತರಾದ ಶರಣರೆ ನಿಜಮುಹಿಮರೆಂಬುದು ಈ ವಚದದ ತಾತ್ಪರ್ಯವು.

೨

ಅಂಗದ ಕೈಯ್ಯಲ್ಲೊಂದು ಅಂಗವದೆ ನೋಡಾ !
ಲಿಂಗದ ಕೈಯ್ಯಲ್ಲೊಂದು ಲಿಂಗವಿದೆ ನೋಡಾ !
ಈ ಉಭಯದ ಮಧ್ಯದಲ್ಲಿ ಅರಿದ ತಲೆಯ
ಕೈಯಲ್ಲಿ ಹಿಡಿದುಕೊಂಡು ಮುಂಡ ಉದಯವಾಯಿದ್ದ ಕಂಡೆ.
ಅದಕ್ಕೆ ತಲೆಯಲ್ಲಿ ಓಲೆ, ಮುಂಡದಲ್ಲಿ ಮೂಗುತಿ
ಮೂಗಿನ ಕಣ್ಣು ಕಿವಿ ತೋರಣನಂಗಳ ಮುತ್ತಸರವ-
ಪವಣಿಸುವ ಜಾಣೆಯ ಕಣ್ಣ ಕೈಯ್ಯ ಲಿಂಗಕ್ಕೆ
ಮದುವೆಯ ಮಾಡಿದರೆಮ್ಮವರು, ಆ ಲಿಂಗದಿಂದ ರೂಪಿಲ್ಲದ,
ನಿರೂಪಿಲ್ಲದ,
ಸೋಂಕಿಲ್ಲದ, ಸೊಬಗಿನ ಅಭಿನವ ಶಿಷ್ಯ ಹುಟ್ಟಿದ್ದಿತ್ತು ನೋಡಾ !
ಆ ನಾಮುವ ಹಿಡಿದು ಕರೆದಡೆ ಕೈಸನ್ನೆ ಮಾಡಿತ್ತು
ನೋಡಿದಡೆ ಮುಂದೆ ಬಂದು ನಿಂದಿತ್ತು.
ಅಪ್ಪಿದಡೆ ಸೋಂಕಿಲ್ಲದೆ ಹೋಯಿತ್ತು
ಅರಸ ಹೋದಡೆ ಅವಗವಿಸಿತ್ತು ನಿಜಗುರು ಭೋಗೇಶ್ವರ
ಇದರ ಕೌತುಕದ ಕಾರಣವೇನು ಹೇಳಯ್ಯಾ ?

**ಟೀಕು**:— ಅಂಗ ಭಾವದಲ್ಲಿ ಅಂಗ ಪ್ರಕೃತಿ ಲಿಂಗಭಾವದಲ್ಲಿ ಲಿಂಗಾವಧಾನ ವಿದಿರಿಟ್ಟು ತೋರುತ್ತಿರಲದೀಗ, ಕಾಣಬಂದರ್ಥ. ಇಂತು ಭಯ ಭಾವದಲ್ಲಿ ಭಿನ್ನ ಜ್ಞಾನವ ಸಂಕಲ್ಪ ಹಸ್ತದಿಂ ಹಿಡಿದು ಕರ್ಮಕಾಂಡ ಉದಯವಾಗಲದೀಗ ಈ ಉಭಯದ ಮಧ್ಯದಲ್ಲಿ ಅರಿದ ತಲೆಯ ಕೈಯಲ್ಲಿ ಹಿಡಿದುಕೊಂಡು ಮುಂಡ

ಉದಯವಾಗಿದ್ದ ಕಂಡೆನೆಂಬ ಶಬ್ದಕ್ಕರ್ಥ. ಇಂತುದಯವಾದ ಭಿನ್ನ ಜ್ಞಾನದಲ್ಲಿ ಆಗಮಾಚಾರವ ಕರ್ಮಕಾಂಡದಲ್ಲಿ ವಾಸನಾ ಸಂಬಂಧವಾದ ಮುಕ್ತಿಯಲಂಕಾರಮಾಗಿ ತೋರುತ್ತಿರಲದೀಗ, ಅದಕ್ಕೆ ತಲೆಯಲ್ಲಿ ಓಲೆ ಮುಂಡದಲ್ಲಿ ಮೂಗುತಿ ಎಂಬ ಶಬ್ದಕ್ಕರ್ಥ. ಇಂತಿದ ನಿವೃತ್ತಿ ಮುಖಕ್ಕೆ ತಂದು ಅರಿವಿನ ದೃಷ್ಟಿಯ ನಿಜಾಶ್ರಿತದಲ್ಲಿ ಮಹಾಜ್ಞಾನ ಪ್ರಭಾಮಯವಪ್ಪ ಮುಕ್ತಾಫಲಂಗಳ ಸ್ವಾನುಭಾವ ಸೂತ್ರದಿಂ ಬಂಧಿಸುವ ಚಿಚ್ಛಕ್ತಿಯ ಕೃತ ನಿಶ್ಚಯ ಕರದಿಂ ಸ್ವಾಯತವಾದ ಚಿದ್ಘನಲಿಂಗವೆಂಬ ಪುರುಷಂಗೆ ಕ್ರಿಯಾಶಕ್ತಿ ಸ್ವರೂಪಿನಿಂ ಕೈಗೂಡಿಸಿದರು ಸದ್ಭಾವಾದಿ ಸದ್ಗುಣಗಳೆಂಬುದೀಗ, ಕಣ್ಣು-ಕಿವಿಯಲ್ಲಿ ತೋರಣಗಂಗಳ ಮುಕ್ತಾಸರವ ಪವಣಿಸುವ ಜಾಣೆಯ ಕೈಯ ಲಿಂಗಕ್ಕೆ ಮದುವೆಯ ಮಾಡಿದರೆಮ್ಮವರೆಂಬ ಶಬ್ದಕ್ಕರ್ಥ. ಆ ಲಿಂಗ ಸಂಯೋಗಾನುಭಾವದಿಂ ಜಡಾಜಡ ಕಲ್ಪಿತವಿಲ್ಲದ ನಿರ್ಲೇಪಮಯವಪ್ಪ ಚಿತ್ಪ್ರಭಾ ಲಿಂಗವು ಉದಯವಾಗಲದೀಗ, ಆ ಲಿಂಗದಿಂದ ರೂಪಲ್ಲದ ನಿರೂಪಲ್ಲದ ಸೋಂಕಿಲ್ಲದ ಸೊಬಗಿನ ಅಭಿನವ ಶಿಶು ಹುಟ್ಟಿತ್ತೆಂಬ ಶಬ್ದಕ್ಕರ್ಥ. ಆ ಶಿವಲಿಂಗ ನಾಮವ ಬಿಡದೆ ಸ್ಮರಿಸಲೊಡನೆ ಮನೋಮುಖದಿಂ ಸೂಚಿಸುತ್ತಿಹುದೆಂಬುದೀಗ, ಆ ನಾಮವ ಹಿಡಿದು ಕರೆದಡೆ ಕೈಸನ್ನೆ ಮಾಡಿತ್ತೆಂಬ ಶಬ್ದಕ್ಕರ್ಥ. ಇಂತು ಮನೋಮುಖದಿಂ ನೆನಹು ರೂಪವಾಗಿ ಕುರುಹುದೋರುವ ಲಿಂಗವನರಿವುತ್ತಿರಲು ಭಾವ ದೃಷ್ಟಿಯ ಮುಂದೆ ಪ್ರಸನ್ನವಾಗಿರ್ಪುದೆಂಬುದೀಗ, ನೋಡಿದಡೆ ಮುಂದೆ ಬಂದು ನಿಂದಿತ್ತೆಂಬ ಶಬ್ದಕ್ಕರ್ಥ. ಆ ಲಿಂಗ ಸಂಯೋಗದಿಂದ ಅದ್ವೈತ ಭಾವ ಅಳಿಯಿತ್ತೆಂಬುದೀಗ, ಅಪ್ಪಿದಡೆ ಸೋಂಕಿಲ್ಲದೆ ಹೋಯಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ನಿಜಟ ನಿಲವು ಅರಿವವರ ಭಾವಭರಿತವಾಗಿರ್ಪುದೆಂಬುದೀಗ, ಅರಸ ಹೋದಡೆ ಅವಗನಿಸಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ನಿರ್ಣಯವ ಸಾಧ್ಯತರವಾಗಿರ್ಪುದೆಂಬುದೀಗ, ನಿಜಗುರು ಭೋಗೇಶ್ವರ ಇದರ ಕೌತುಕದ ಕಾರಣವೇನು ಹೇಳಯ್ಯ ಎಂಬ ಶಬ್ದಕ್ಕರ್ಥ.

೩

ಕುರುಡನ ಮುಂಡಕ್ಕೆ ಹೆಳವನ ಶಿರಸ್ಸ ಸ್ಥಾಪ್ಯವ ಮಾಡಿದರಯ್ಯ !
ಅದಕ್ಕೆ ಮೋಟನು ಪರಿಚಾರಕನು ನೋಡಾ !
ಮೂಗ ಹೇಳುವ ಮಾತ ಬಧಿರನು ಕೇಳಿ
ಅತ್ತೆಯನಳಿಯ ಮದುವೆಯಾಗಿ,
ಅವರಿಬ್ಬರ ಸಂಗದಿಂದ ಹುಟ್ಟಿತ್ತೊಂದು ಮಗುವು,
ಮೊರೆಗಟ್ಟು ತಂದೆ ತಾ ಮಗಳ ಮದುವೆಯಾಗಿ-
ತ್ರಿಪುರದ ಮಧ್ಯದೊಳಗೆ ದೇಗುಲವಿದ್ದಿತ್ತು.
ದೇಗುಲವರ ನೋಡಹೋದರೆ ದೇವರು ದೇಗುಲವ ನುಂಗಿದರು
ಇದ ಕಂಡು ಆನು ಬೆರಗಾದೆನು ನಿಜಗುರು ಭೋಗೇಶ್ವರನಲ್ಲಿ !

**ಟೀಕು:**— ಜ್ಞಾನಹೀನವಾದ ಸಿದ್ಧಾಂತಿಯು ಕರ್ಮಕಾಂಡದಲ್ಲಿ ಕ್ರಿಯಾಹೀನವಾದ ವೇದಾಂತಿಯು ಜ್ಞಾನ ಕಾಂಡವ ಸಂಬಂಧಿಸಿ ಉಭಯ ಗುಣವಳಿದು ಉಭಯ ಗುಣ ಸಂಪನ್ನನಾಗಿರ್ಪ ಶರಣನೆಂಬುದೀಗ ಕುರುಡನ ಮುಂದಕ್ಕೆ ಹೆಳವನ ಶಿರಸ್ಸ ಸ್ಥಾಪ್ಯವ ಮಾಡಿದರಯ್ಯ ಎಂಬ ಶಬ್ದಕ್ಕರ್ಥ. ಆ ಜ್ಞಾನಯುಕ್ತವಾದ ಸತ್ಕ್ರಿಯೆಯಲ್ಲಿ ಸತ್ಕರ್ಮರಹಿತವಾದ ಭಿನ್ನಭಾವಿಯು ಯೋಗ ಕಾಂಡ ವಿಡಿದು ಸತ್ಕೃತ್ಯವ ನಡಿಸುತ್ತಿರಲದೀಗ, ಅದಕ್ಕೆ ಮೋಟನು ಪರಿಚಾರಕನು ನೋಡಾ ಎಂಬ ಶಬ್ದಕ್ಕರ್ಥ. ಇಂತಾಗಲು ನಿಶ್ಶಬ್ದ ವೇದಿಯು ನಿಯಮವಂತ ಗರ್ತವಾಗಿರ್ಪ ಮಹಾನುಭಾವಿಯು ಬೋಧೆಯನೆಂಬುದೀಗ, ಮೂಗ ಹೇಳುವ ಮಾತನೆಂಬ ಶಬ್ದಕ್ಕರ್ಥ. ಚಿದಾಕಾಶ ವಿಷಯ ರಹಿತವಾದ ವಾಗ್ ವ್ಯವಹಾರಿಯ ಶಬ್ದಾಡಂಬರವಳಿದು ನಿಜಂಶ್ರುತ ಮುಖದಿಂ ಕೇಳಲದೀಗ, ಬಧಿರ ಕೇಳಿ ಎಂಬ ಶಬ್ದಕ್ಕರ್ಥ. ಇಂತಿ ಸರ್ವಗುಣ ಸಂಪನ್ನನಾದ ಶರಣನು ಇಚ್ಛಾಶಕ್ತಿಯಿಂದ ಉದಯವಾದ ಜ್ಞಾನಶಕ್ತಿ ವಲ್ಲಭವಾದ ಕಾರಣ ಆ ಇಚ್ಛಾಶಕ್ತಿಗೂ ಶರಣಂಗೂ ಅತ್ತೆ ಅಳಿಯನೆಂಬ ನಾಮವಾಯಿತ್ತು ಅದು ಕಾರಣ ಆ ಇಚ್ಛಾಶಕ್ತಿಯು ಶರಣ ಕೈವಿಡಿದನೆಂಬುದೀಗ, ಅತ್ತೆಯನಳಿಯ ಮದುವೆಯಾಗಿ ಎಂಬ ಶಬ್ದಕ್ಕರ್ಥ. ಆ ಇಚ್ಛಾ ಶಕ್ತಿಯು ಶರಣನ ಸಮರಸ ಸಂಗದಿಂದಿರಲಲ್ಲಿ ಕ್ರಿಯಾಶಕ್ತಿ ಜನಿಸಲದೀಗ, ಅವರಿಬ್ಬರ ಸಂಗದಿಂದ ಹುಟ್ಟಿತ್ತೊಂದು ಮಗು ಎಂಬ ಶಬ್ದಕ್ಕರ್ಥ. ಆ ಕ್ರಿಯಾಶಕ್ತಿಯು ಶರಣ ಉಭಯ ಭಾವದ ನೀತಿಬಿಟ್ಟು ಕೈವಿಡಿಯಲದೀಗ, ಮೊರೆಗೆಟ್ಟು ತಂದೆ ಮಗಳ ಮದುವೆಯಾದನೆಂಬ ಶಬ್ದಕ್ಕರ್ಥ. ಆ ಕ್ರಿಯಾ ಶಕ್ತಿಯು ಸಂಗದಿಂ ಸರ್ವಗುಣ ಸಂಪನ್ನನಾದ ಶರಣ ತ್ರಿಕೂಟ ಮಧ್ಯದ ಚಿದಾಕಾಶವೆಂಬ ಶಿವಾಲಯದ ಚಿತ್ ಪ್ರಭಾಲಿಂಗವ ಕಾಬ ತೂರ್ಯಾವಸ್ಥೆಯಿಂ ಶಿವಯೋಗ ಮಾರ್ಗ ವಿಡಿದು ಗಮಿಸುತ್ತಿರಲದೀಗ, ತ್ರಿಪುರದ ಮಧ್ಯದೊಳಗೆ ದೇಗುಲವಿದ್ದಿತು ದೇವರ ನೋಡ ಹೋದಡೆ ಎಂಬ ಶಬ್ದಕ್ಕರ್ಥ. ಇಂತಾಗಲಾ ಚಿದಾಕಾಶ ಮಂಟಪವೆಲ್ಲ ಚಿತ್ತ್ರಭಾಲಿಂಗವಾಗಿ ತೋರುತ್ತಿಹುದಾ ಶಿವಯೋಗಿಗೆಂಬುದೀಗ, ದೇವರು ದೇಗುಲವ ನುಂಗಿದರು ಎಂಬ ಶಬ್ದಕ್ಕರ್ಥ. ಇದನರಿದ ಶಿವಯೋಗಿ ಪರವಸ್ತುವಿನಲ್ಲಿ ಪರವಶನಾದನೆಂಬುದೀಗ, ಇದ ಕಂಡು ಆನು ಬೆರಗಾದೆನು ನಿಜಗುರು ಭೋಗೇಶ್ವರನಲ್ಲಿ ಎಂಬ ಶಬ್ದಕ್ಕರ್ಥ.

೪

ಬೀಜವಿಲ್ಲದ ವೃಕ್ಷ ಎಲೆಯಿಲ್ಲದ ಉಲುಹು, ಹೂವಿಲ್ಲದ ಪರಿಮಳ
ಕಾಯಿಲ್ಲದ ಹಣ್ಣು, ರಸವಿಲ್ಲದ ಸವರುಚಿ ಮೊಲ ಬಲ್ಲವರಾರೋ !
ಕಾಲು-ಕೈ ಇಲ್ಲದ, ಕಿವಿ-ಮೂಗಿಲ್ಲದ ಹುಟ್ಟು ಕುರುಡನು ಆ ಹಣ್ಣ
ಮೂಗಿನಲ್ಲಿ ಮೊದ್ದನು
ಕಂಗಳಲ್ಲಿ ತೃಪ್ತಿಯಾಗಿ, ಕಿವಿಯಲ್ಲಿ ತೇಗಿ, ತಲೆಯಲ್ಲಿ ಲಿಂಗಕ್ಕರ್ಪಿಸಿ
ಆ ಪ್ರಸಾದವು ಬಾಯಿಂದ ಉಂಡು ನಿಜ ಗುರು ಭೋಗ
ಸಂಗನೊಳು,

ಒಚ್ಚತ ಹೋದ ಶರಣರ ಇರವು ಅರಳೆಲೆಯ ಸಿಂಗಾರದ—
ಸರ ಮಾಲೆಯ ಸರಕನವ ಪಸರವನಿಕ್ಕಿ ಮಾರುವ
ಬಹುಭಾಷಿಗಳಿಗೆಂತು ಸಾಧ್ಯವಪ್ಪುದು ಹೇಳಯ್ಯಾ !

**ಟೀಕು:**— ಮೂಲಹಂಕಾರವಿಲ್ಲದ ಚಿದ್ ಪಿಂಡವೆಂಬ ವೃಕ್ಷದಲ್ಲಿ ಪ್ರಪಂಚು ದಳಂಗಳಿಲ್ಲದೆ ಉಲಿವುತ್ತಿಹ ಮಂತ್ರ ತತ್ವಂಗಳೆಂಬುದೀಗ, ಬೀಜವಿಲ್ಲದ ವೃಕ್ಷ ಎಲೆಯಿಲ್ಲದ ಉಲುಹೆಂಬ ಶಬ್ದಕ್ಕರ್ಥ. ಅಲ್ಲಿ ಇಂದ್ರಿಯ ಗುಣರಹಿತವಾದ ಶಿವ ಸದ್ವಾಸನೆ ಎಸೆಯುತ್ತಿಹುದೆಂಬುದೀಗ, ಹೂವಿಲ್ಲದ ಪರಿಮಳವೆಂಬ ಶಬ್ದಕ್ಕರ್ಥ. ಅಲ್ಲಿ ಕರ್ಮಫಲರಹಿತವಾದ ಮುಕ್ತಿ ಫಲವು ಪರಮಾಮೃತರಸ ತೊಟ್ಟಿಡಲದೀಗ, ಕಾಯಿಲ್ಲದ ಹಣ್ಣೆಂಬ ಶಬ್ದಕ್ಕರ್ಥ. ಅಲ್ಲಿ ವಿಷಯರಸವರತ ಪರಮ ಸೌಖ್ಯವಿಹುದೆಂಬುದೀಗ, ರಸವಿಲ್ಲದನವದ ರುಚಿ ಎಂಬ ಶಬ್ದಕ್ಕರ್ಥ. ಇಂತಪ್ಪ ಪರಮಾಮೃತ ಫಲವನು ಆಸ್ವಾದಿಸುವರ ಪೂರ್ವವೆಂಬುದೀಗ, ಮೊಲ ಬಲ್ಲವರಾರೋ ಎಂಬ ಶಬ್ದಕ್ಕರ್ಥ. ದುರ್ಭಾವ-ದುಶ್ಚರಿತ್ರ-ದುರಹಂಕಾರ-ದುರಭಿಮಾನವಿಲ್ಲದ ಅಭಿನ್ನ ಜ್ಞಾನಿಯಾದ ಶರಣನು ಸದ್ವಾಸನ ವಿಷಯವಹ ಸ್ವಾನುಭಾವಮುಖದಿಂದ ಮುಕ್ತಿಫಲವ ಸ್ವೀಕರಿಸಲದೀಗ, ಕಾಲು ಕೈ ಇಲ್ಲದ, ಕಿವಿ-ಮೂಗಿಲ್ಲ ಹುಟ್ಟುಗುರುಡು ಆ ಹಣ್ಣಮೂಗಿನಲ್ಲಿ ಮೆದ್ದನೆಂಬ ಶಬ್ದಕ್ಕರ್ಥ. ಇಂತು ಅನುಭವಿಸಿದ ಶರಣನು ಅರಿವಿನ ದೃಷ್ಟಿಯಿಂ ದಣಿದು ಅನುಭಾವಾಶ್ರುವಿನಿಂದ ನಂದಿಸುತ್ತಿರಲೀಗ, ಕಂಗಳಲ್ಲಿ ದಣಿದು ಕಿವಿಯಲ್ಲಿ ತೇಗಿ ಎಂಬ ಶಬ್ದಕ್ಕರ್ಥ. ಆ ಪರಮಾನಂದ ಸುಖವ ಸದ್ವಿವೇಕ ಮುಖದಿಂ ಭಾವಲಿಂಗಾರ್ಪಿತವ ಮಾಡಲದೀಗ, ತಲೆಯಲ್ಲಿ ಲಿಂಗಕ್ಕರ್ಪಿಸಿ ಎಂಬ ಶಬ್ದಕ್ಕರ್ಥ. ಪ್ರಸನ್ನ ಪರಿಣಾಮವ ಚಿದ್ವಾರದಿಂ ಸ್ವೀಕರಿಸಿ ನಿಜದಲ್ಲಿ ನಿಷ್ಪತ್ತಿಯಾದ ಶರಣನ ನಿಲವು ಶೃತಜ್ಞಾನವನಲಂಕರಿಸಿಕೊಂಡು ನುಡಿಗಣವನೊಪ್ಪವಿಟ್ಟು ವಾಗಾದ್ವೈತವೆಂಬ ಭಂಡವ ಪೊಸತೆನಿಸಿ ಪವಸರಕ್ಕಿಕ್ಕಿ ಮಾರುವ ಭಾಷ್ಕಳರಿಗೆ ಸಾಧ್ಯವಾಗದೆಂಬುದೀ, ವಚನದರ್ಥವು.

೫೫

ಮೂಗಿನಲ್ಲಿ ಕಂಡ ಮೂರ್ತಿಯ ಕಂಗಳಲ್ಲಿ ಮಾತಾಡಿಸಿ
ಕಿವಿಯಲ್ಲಿ ಸೊಬಗ, ತಲೆಯಲ್ಲಿ ಕೈಗೂಡಿ ಕಣ್ಣ ಕಾಡಿನ ತಲೆ
ಒಲದಲ್ಲಿ ಸತ್ತ ದೇವರಕಂಡು ಹುಟ್ಟದ ಗಿಡುವಿನ ಪತ್ರೆಯ ಕೈ ಮುಟ್ಟದೆ ಕೊಯ್ದು
ಬತ್ತಿದ ಕೆರೆಯ ಜಲವ ತುಂಬಿಕೊಂಡು ಬಂದು ಮುಟ್ಟಿ ಪೂಜಿಸ ಹೋದಡೆ
ಸತ್ತ ದೇವರೆದ್ದು ಪೂಜಾರಿಯ ನುಂಗಿದರು ನೋಡಾ !
ತಲೆಯಲ್ಲಿ ನಡದು ನೆಲೆಗೆಟ್ಟು ನಿರಾಳವಾದ ನಿಜಗುರು ಭೋಗೇಶ್ವರಾ !

ನಿಮ್ಮ ಶರಣರಿಗಲ್ಲದೆ ಸತ್ತ ದೇವರನು ಸಾಯುವವರು
ಪೂಜಿಸ ಹೋದಡೆ ಸತ್ತವರೆದ್ದು ಯವೋ !

**ಟೀಕು:**— ಸ್ವಾನುಭಾವ ಮುಖದಿಂದರಿದ ವಸ್ತುವ ಜ್ಞಾನದೃಷ್ಟಿಯಿಂ ಕಂಡು ಶಿವೋಹಂ–ಶಿವೋಹಂ ಎನುತ್ತಿರ್ದ ಶರಣನೆಂಬುದೀಗ, ಮೂಗಿನಲ್ಲಿ ಕಂಡ ಮೂರ್ತಿಯು ಕಂಗಳಲ್ಲಿ ಮಾತಾಡಿಸಿ ಎಂಬ ಶಬ್ದಕ್ಕರ್ಥ. ಆ ನಿಜವಸ್ತುವಿನ ಮಹಾನುಭಾವವ ನಿಜಾಶ್ರಿತದಲ್ಲಿ ಪ್ರಕಟಿಸುತ್ತಿರಲದೀಗ, ಕಿವಿಯಲ್ಲಿ ಸೊಬಗವೆಂಬ ಶಬ್ದಕ್ಕರ್ಥ. ಆ ವಸ್ತುವಿನ ಸದ್ವಿವೇಕದಲ್ಲಿ ಸದ್ಭಾವದಿಂ ಸಾಗಿಸಲದೀಗ, ತಲೆಯಲ್ಲಿ ಕೈಗೂಡಿ ಎಂಬ ಶಬ್ದಕ್ಕರ್ಥ. ಆ ವಸ್ತು ಗೋಪ್ಯಾಂತರಂಗದರಿವಿನಾಚಾರದಲ್ಲಿ ನಿಜೈಕ್ಯವಾಗಲದೀಗ, ಕಣ್ಣು ಕಾಡಿನ ತಲೆ ಒಲದಲ್ಲಿ ಸತ್ತದೇವರು ಕಂಡು ಎಂಬ ಶಬ್ದಕ್ಕರ್ಥ. ಜನನ ರಹಿತವಾದ ಸದ್ವಿವೇಕ ವೃಕ್ಷದ ಶುದ್ಧ ಸಾತ್ವಿಕವೆಂಬುದೀಗ, ಹುಟ್ಟದ ಗಿಡುವಿನ ಪತ್ರೆಯನೆಂಬ ಶಬ್ದಕ್ಕರ್ಥ. ಆ ಶುದ್ಧ ಸಾತ್ವಿಕವ ಭಿನ್ನಭಾವದಿಂ ಹಿಡಿಯದೆ ಅಭಿನ್ನ ಹಸ್ತದಿಂದತ್ತಲದೀಗ, ಕೈಮುಟ್ಟದೆ ಕೊಯ್ದು ಎಂಬ ಶಬ್ದಕ್ಕರ್ಥ. ಆ ವಿಷಯ ರಸವಿರತ ಉನ್ಮನಿಯು ಮನದ ಪರಮ ಶಾಂತಿ ಜಲವ ಚಿದ್ಘಟದಲ್ಲಿ ತುಂಬಿ ಅಂತರ್ಮುಖಕ್ಕಿಕ್ಕಿ ತರಲದೀಗ, ಬತ್ತಿದ ಕೆರೆಯ ಜಲವ ತುಂಬಿಕೊಂಡು ಬಂದು ಎಂಬ ಶಬ್ದಕ್ಕರ್ಥ. ಇಂತಿದ ಶಿಕೃತ ನಿಶ್ಚಯದಿಂ ಹಿಡಿದು ಭಜಿಸುವ ಭಾವನೆಯಿಂದಿರ್ದ ಶರಣನ ಆ ಸತ್ತುವೆನಿಸಿದ ನಿಜವಸ್ತು ಚಿಚ್ಚೈತನ್ಯ ಸ್ವರೂಪವಾಗವಗವಿಸಿ ತೋರುತ್ತಿರಲದೀಗ, ಮುಟ್ಟಿ ಪೂಜಿಸಹೋದಡೆ ಸತ್ತದೇವರೆದ್ದು ಪೂಜಾರಿಯ ನುಂಗಿದರು ನೋಡಾ ಎಂಬ ಶಬ್ದಕ್ಕರ್ಥ. ಇದನರಿದು ಅರಿವಿನ ಮುಖದಿಂದಾಚರಿಸಿ ಸ್ಥಲ–ಕುಳ ಸರ್ವ ನಿರ್ವಾಹವಾಗಿ ನಿಂದ ಶರಣರಿಗಲ್ಲದೆ ನಿಜ ದೊರಕೊಳ್ಳದೆಂಬುದೀಗ, ತಲೆಯಲ್ಲಿ ನಡದು ನೆಲೆಗಟ್ಟು ನಿರಾಳವಾದ ನಿಜಗುರು ಭೋಗೇಶ್ವರ ನಿಮ್ಮ ಶರಣರಿಗಲ್ಲದೆ ಎಂಬ ಶಬ್ದಕ್ಕರ್ಥ. ಇಂತಲ್ಲದೆ ಆ ನಿಜವಸ್ತುವ ಜೀವನ ಗುಣವುಳ್ಳವರು ಭಜಿಸಿ ಭಾವಿಸಿ ಮುಕ್ತರಾದೆವೆಂಬುದೆಲ್ಲವು ಮಿಥ್ಯವೆಂಬುದೀಗ, ಸತ್ತದೇವರನು ಸಾಯದವರು ಪೂಜಿಸಿ ನಿತ್ಯವ ಹಡಿದೆಹೆವೆಂಬ ಮಾತೆಲ್ಲಿಯದೋ ಎಂಬ ಶಬ್ದಕ್ಕರ್ಥ.

೬

ಅಂಗೈಯಗಲದ ಪಟ್ಟಣದೊಳಗೆ ಆಕಾಶದುದ್ದ ಎತ್ತು ತಪ್ಪಿತ್ತು
ಅರಸ ಹೋಗಿ ಹಲಬರು ಹೊಲಬುದಪ್ಪಿ ತೊಳಲಿ ಬಳಲುತ್ತಿದ್ದಾರೆ
ಆರಿಗೆ ಮೊರೆ ಇಡುವೆ ಅಗುಸೆಯ ನಿಕ್ಕುವೆ ಜಲಗರ ಕರಯಿಸಿ
ಜಲವ ತೊಳಯಿಸಿ
ಅಘಟಿತ ಘಟಿತ ನಿಜಗುರು ಭೋಗೇಶ್ವರ ಅರಸಿಕೊಂಡು ಬಾರಯ್ಯಾ!

**ಟೀಕು:**— ಸರ್ವಾಭಿಮಾನಿಯಾದ ಜೀವನು ಅಂತರಂಗದಲ್ಲಿ ನೆಲೆಯನರಿಯದೆ ಕುರುಹುಗೆಟ್ಟಿರಲದೀಗ, ಅಂಗಯ್ಯಗಲದ ಪಟ್ಟಣದೊಳಗೆ ಆಕಾಶದುದ್ದ ಎತ್ತು ತಪ್ಪಿತ್ತು ನೋಡಾ ಎಂಬ ಶಬ್ದಕ್ಕರ್ಥ. ಆ ಜೀವನ ನಿಲವನರಸಿ ಕಂಡೆಹೆ

ನೆಂದು ಸಾಧಿಸುತ್ತಿರ್ಪವರೆಲ್ಲರೂ ಪಥವ ಕಾಣದೆ ಭ್ರಮಿಸುತ್ತಿಹರೆಂಬುದೀಗ, ಅರಸ ಪೋಗಿ ಪಲವರು ಹೊಲಬುದಪ್ಪಿ ತೊಳಲುತ್ತಿದ್ದಾರೆಂಬ ಶಬ್ದಕ್ಕರ್ಥ. ಇದನರಿವ ಶರಣನು ಶಬ್ದ ಮುಗ್ಧವಾಗಿ ಇಂದ್ರಿಯ ಮುಖ ಹೋಗಲೀಯ್ಯದಿರಲದೀಗ, ಅರಿಗೆ ಮೂರವೆ ಆಗುಸೆಯನಿಕ್ಕುವೆನೆಂಬ ಶಬ್ದಕ್ಕರ್ಥ. ಇಂತ ಇಂದ್ರಿಯ ವಿಕಾರವಳಿದು ಶರಣನು ಸದ್ಭಾವಾದಿ ಸದ್ಗುಣಂಗಳಿಂ ಮನವ ಶೋಧಿಸಿ ಜೀವನ ನಿವೃತ್ತಿ ಮುಖಕ್ಕೆ ತಂದು ಸಾಧಿಸಿಕೊಡೆಂದು ಶ್ರೀ ಗುರುವಿಂಗೆ ಬಿನ್ನೈಸುತ್ತಿರಲದೀಗ, ಜಲಗರ ಕರಯಿಸಿ ಜಲವ ತೊಳಯಿಸಿ! ಅಘಟಿತ ಘಟಿತ ನಿಜಗುರು ಭೋಗೇಶ್ವರ ಅರಸಿಕೊಂಡು ಬಾರಯ್ಯ ಎಂಬ ಶಬ್ದಕ್ಕರ್ಥ.

೭

ಕುದುರೆಯ ನಿರಿದ ರಾಹುತ ಕುದುರೆ ಕೆಟ್ಟಿತೆಂದು ಅರಸ ಹೋಗಿ ಇರುಬಿಲಿ ಬಿದ್ದಡೆ
ಬಳ್ಳು ತರುಬಿ ಕುದುರೆ-ರಾಹುತ ನಿಬ್ಬರ ನುಂಗಿತ್ತು
ಇದೇನು ಸೋಜಿಗ ಹೇಳಾ ನಿಜ ಗುರು ಭೋಗೇಶ್ವರಾ !

**ಟೀಕು:—** ಪ್ರಾಣವಾಯು ಚೈತನ್ಯವಿಡಿದಿರ್ಪ ಜೀವನೆಂಬುದೀಗ, ಕುದುರೆಯನೇರಿದ ರಾಹುತನೆಂಬ ಶಬ್ದಕ್ಕರ್ಥ. ಆ ಜೀವಾತ್ಮನು ವೃತ್ತಿಜ್ಞಾನದಿಂ ಪ್ರಾಣವಾಯು ಜಡಪ್ರಕೃತಿಯನೆಯ್ದಿತ್ತೆಂದರಿದು ಕರ್ಮಯೋಗದಿಂ ಸಾಧಿಸಿಹೆನೆಂದು ತನುದಂಡಣೆಗೊಳಗಾಗಲದೀಗ, ಕುದುರೆ ಕೆಟ್ಟಿತ್ತೆಂದು ಅರಸಹೋಗಿ ಇದುಬಿರಿ ಬಿದ್ದಡೆ ಎಂಬ ಶಬ್ದಕ್ಕರ್ಥ. ಇಂತಿ ಕರ್ಮಯೋಗಬದ್ಧವಾದ ಜೀವನ-ಪ್ರಾಣಂಗಳ ಮುಂದುವರಿಯಲಿಯ್ಯದೆ ತನ್ನೊಳಗಡಗಿಸಿಕೊಂಡು ಪರಶಿವಯೋಗಾನುಭಾವದಿಂದಿರ್ಪುದು ಸತ್ಪ್ರಾಣವು ಜ್ಞಾನವೆಂಬುದೀಗ, ಬಳ್ಳು ತರುಬಿ ಕುದುರೆ-ರಾಹುತ ನಿಬ್ಬರನುಂಗಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ಶಿವಯೋಗದ ನಿಲವ ಗುರುಮುಖದಿಂ ಬೆಸಗೊಳುತ್ತಿರ್ಪ ಶರಣನೆಂಬುದೀಗ, ಇದೇನು ಸೋಜಿಗ ಹೇಳಾ ನಿಜಗುರು ಭೋಗೇಶ್ವರಾ ಎಂಬ ಶಬ್ದಕ್ಕರ್ಥ.

೮

ಇದ್ದು ಜೀವನಲ್ಲ, ಸತ್ತು ಹೆಣನಲ್ಲ ಕತ್ತಲೆ ಮುಟ್ಟದು
ಬೆಳಗಿನಲ್ಲಿ ಸುಳಿಯದು, ಹಿಂದಾದಡೆ ಏರುವದು
ಹೇಡಿಯಲ್ಲ, ಕಲಿಯಲ್ಲ, ಇಕ್ಕಿದ ಹೆಜ್ಜೆಯ ತೆಗೆಯದು
ಮೊನೆಗೆ ನಿಲ್ಲದು, ತೆಕ್ಕಿಗೆ ಬಾರದು ಕಾದ ಬಂದ ಕಲಿಗಳನೆಲ್ಲ
ಅಗಿದಗಿದು ನುಂಗಿತ್ತು ನೋಡಾ ! ಅರಿದಿಹೆನೆಂದಡೆ ಅರಿಯ ಬಾರದು
ಇದ ಬಲ್ಲವರಾರಯ್ಯ ! ಇಹ ಪರ ನಷ್ಟವಾದ ಮಹಾವೀರ ಧೀರರಿಗಲ್ಲದೆ

ಮುಕ್ತಿಗೆ ದೂರವಾದ ಲಿಂಗಾಂಗಿಗಳ ನೆನಹೆಂಬ ಜೋಡತೊಟ್ಟು
ಅವರ ಕರುಣ ಪ್ರಸಾದವೆಂಬ ವಜ್ರ ಘುಟಿಕೆಯ ಧರಿಸಿ
ಗುರುಕರುಣವೆಂಬ ಅಗಲ ಪಿಡಿದು ಮುಂಡಬಿದ್ದುದು,
ತಲೆಯುಳ್ಳಿರಿವೆ ನಿಜ ಗುರು ಭೋಗೇಶ್ವರಾ ನಾ ನಿಮ್ಮ ಬೇಡುವನಲ್ಲ!

**ಟೀಕು:—** ಪರಮಾತ್ಮ ತತ್ವವು ಸರ್ವಚೈತನ್ಯನಾಗಿರ್ಪ ಜೀವವಿಕಾರಿಯುಳ್ಳ ಸರ್ವಗತನಾಗಿರ್ಪ ಜಡಭಾವಿಯುಳ್ಳ ಮರವೆಯುಪ್ಪೊದರ್ಪದು ಅರಿವಿನಲ್ಲಿ ಸಂಚರಿಸಲು ಅರಿಯೆನೆಂದು ಹಿಮ್ಮೆಟ್ಟಲು ಮುಂದುದೋರುವದು ಅರಿದೆನೆಂದು ಮುಂದುವರಿಯಲು ಕುರುಹು ದೋರದು ಸೋಲಲರಿಯದು ಹೃದಯಾಂತರಾಳದಲ್ಲಿ ಚಿಚ್ಛಾರಿತ್ರನಾಗಿರ್ಪದು ಧ್ಯಾನಾತೀತವಾಗಿರ್ಪುದು ಭಾವಕ್ಕೆ ಸಿಲುಕದು, ಸಾಧಕರ ಸಂಹರಿಸುತ್ತಿಹುದು, ಅರಿಗುತಿಳಿಯಬಾರದು, ಬಲ್ಲವರ ಪೂರ್ವ ಇಹ ಮುಕ್ತರಾಕಾಂಕ್ಷೆಯುರತ ಪರಮ ಜ್ಞಾನಾರೂಢವಾದ ಶರಣರಿಗಲ್ಲದೆ ಇಂತಿ ನಿಷ್ಫಲದಾಯಕರಾದ ಶಿವಜ್ಞಾನಿಗಳ ಅರಿವೆಂಬ ವಜ್ರಾಂಗಿಯಂ ಧರಿಸಿ ಅವರ ಕೃಪಾ ಪ್ರಸಾದವವೆಂಬ ಅಭೇದ್ಯವಾದ ಪರಮಾಮೃತ ಘುಟಿಕೆಯಂ ಸೇವಿಸಿ ಗುರು–ಕರುಣವೆಂಬ ಶಸ್ತ್ರಮಂ ಪಿಡಿದು ತನುಗುಣವೇನಾದರೂ ಅರಿವಿನ ಮುಖದಿಂದಾ ವಸ್ತುವ ಸಾಧಿಸುವ ಪ್ರತಿಜ್ಞೆಯಿಂ ದಿರ್ಪ ಶರಣನೆಂಬುದೀಗ, ಈ ವಚನದ ತಾತ್ಪರ್ಯ.

೯

ಮೂರು ಲೋಹದ ಕೋಟೆಗೆ, ಏಳು ಸುತ್ತಿನಗಳು ನೋಡಾ !
ಆ ಕೋಟೆಯೊಳಗೆ ಒಂಭತ್ತು ದುರ್ಗವಿಷವು ನಾಲ್ಕೈದು
ಹೆಚ್ಚಾಗಿಲಿಗಿಹವು
ಕಾವರಿಗೆ ಕಾಣಬಾರದು, ಕಂಡೆ–ಕಾಣೆನೆಂಬ ಉಭಯದ ಸಂದಳಿದು
ಉಳಿದವರಿಗಲ್ಲದೆ ಕಾಣಬಾರದು ಆ ಪಟ್ಟಣದೊಳಗೆ
ಅತಿರಥರು, ಮಹಾರಥರಿಹರು, ಸಾವಂತ ಬಲ್ಲಾಕರಿಹರು,
ಹರುಷವಾಯುವೆ ಚಕ್ರವರ್ತಿಗಳು ಹರಿದು ರಾಜ್ಯವನಾಳುತ್ತಿಹರು
ಇಪ್ಪತ್ತೆಂಟು ಲಕ್ಷ ಭೂತ ಸ್ತೋಮರಿಹರು ಆ ಪಟ್ಟಣದ ಕಾವಲು
ಕೈ ವಾಯಲ್ಲಿ ತೆಗೆದು ಅವಳ ಮೂಗು ಮೊಲೆಯ ಕೊಯ್ದು
ಮೊರಿಗೆಟ್ಟುವಾಡ ಹುಟ್ಟಿದೈವರ ಕೂಡಿ ಹಾದರ ಮಾಡಿ ನಿರದಲ್ಲಿ
ನಿಃಶೂನ್ಯವೆಂಬ ಸಿಂಹಾಸನದ ಮೇಲೆ ಸೋಂಕಿಲ್ಲದೆ
ಸೊಬಗಿನ ಮೂರ್ತಿಗೊಂಡಿಪ್ಪ ಆ ಮಹಾಪ್ರಭುವಿನ ಪಾದಕ್ಕೆ
ನಾನು ನಮೋ ನಮೋ ಎಂದು ಬದುಕಿದೆನು ನೋಡಾ ನಿಜಗುರು
ಭೋಗೇಶ್ವರಾ !

**ಟೀಕು:—** ತನುತ್ರಯ ಸಂಬಂಧವಾದಅಂಗದಲ್ಲಿ ಸಪ್ತಧಾತುಗಳ ಆವರಣವಾಗಿ ಮುಸುಕಿಕೊಂಡ ಕಾರಣವದೀಗ, ಮೂರುಲೋಕದ ಕೋಟೆಗೆ ಏಳು ಸುತ್ತಿ

ಗೆಗಳು ನೋಡಾ ಎಂಬ ಶಬ್ದಕ್ಕರ್ಥ. ತನುಮಧ್ಯದಲ್ಲಿ ಎತ್ತರೋತ್ತರವಾದ ನವ ಚಕ್ರಗಳೆಂಬವೀಗ, ಆ ಕೋಟೆಯೊಳಗೆ ಒಂಭತ್ತು ದುರ್ಗವಿಹವೆಂಬ ಶಬ್ದಕ್ಕರ್ಥ. ಅವಕ್ಕೆ ನವದ್ವಾರಂಗಳೆ ಅಗುಸೆಗಳಾಗಿಪ್ಪುದರಿಂದದೀಗ, ನಾಲ್ಕೈದು ಹೆಬ್ಬಾಗಿಲು ಇಹವೆಂಬ ಶಬ್ದಕ್ಕರ್ಥ. ಇಂತಪ್ಪ ದೇಹಸ್ವರೂಪವ ಕಂಡೆ ಕಾಣನೆಂಬ ಸಂದೇಹ ಭ್ರಾಂತಳಿದ ಸ್ವರೂಪಜ್ಞಾನಿಗಳಿಗಲ್ಲದೆ ಬರೆಯರಿವಿನಿಂದರಿದೆವೆಂಬ ಖಂಡಿತ ಜ್ಞಾನಿಗಳಿಗೆ ವಿವರಿಸಿ ನೋಡಬಾರದೆಂಬುದೀಗ, ಕಾಬವರಿಗೆ ಕಾಣಬಾರದು ಕಂಡೆ ಕಾಣನೆಂಬ ಉಭಯದ ಸಂದುಳಿದಳಿದವರಿಗಲ್ಲದೆ ಕಾಣಬಾರದೆಂಬ ಶಬ್ದಕ್ಕರ್ಥ. ಆ ಶರೀರದಲ್ಲಿ ಅತಿರಥರೆಂದೊಡೆ ಜೀವಕ್ರಿಯಂಗಳು. ಮಹಾರಥರೆಂದೊಡೆ ಮನಕ್ರಿಯಂಗಳು. ಸಾಮಂತರೆಂದೊಡೆ ಅಹಂಕಾರಕ್ರಿಯಂಗಳು. ಷಡಾಯುತ ಚಕ್ರವರ್ತಿಗಳೆಂದೊಡೆ ಷಡಾತ್ಮರುಗಳು ಇಂತಿವೆಲ್ಲವು ಸರ್ವಾಧಿಕಾರದಿಂದಿರಲೀಗ, ಕಾಣಬಂಧರ್ಥ. ಅಲ್ಲಿ ಜೀವಕ್ರಿಯಂಗಳು ಮುಖ್ಯವಾದ ಪಂಚವಿಂಶತಿ ತತ್ವಂಗಳು ವಿಪುಲತರನಾಗಿರಲದೀಗ, ಇಪ್ಪತ್ತೆಂಟು ಲಕ್ಷ ಭೂತತಂಡವಿಹರೆಂಬ ಶಬ್ದಕ್ಕರ್ಥ. ಅಲ್ಲಿ ಅಸುರ ಕರ್ಮಸಂಬಂಧಿಗಳಾದ ಅಷ್ಟಾದಶ ದೋಷಂಗಳು ಬಹುವಿಧ ರೂಪವಾಗಿರ್ದ ಕಾರಣವದೀಗ, ಹದಿನೆಂಟು ಲಕ್ಷ ರಾಕ್ಷಸಸ್ತೋಮವಿಹರೆಂಬ ಶಬ್ದಕ್ಕರ್ಥ. ಇಂತಿ ತನುಪುರ ರಕ್ಷಕಳಾದ ಮಾಯಾಶಕ್ತಿಯನು ಶಿವಯೋಗ ಪಂಚಕಮುಖದಿಂ ನಿವೃತ್ತಿ ಮುಖಕ್ಕೆ ತಂದು ದುರಭಿಮಾನ ದುರ್ವ್ಯಸನವ ಛೇದಿಸಿದ ಶರಣನೆಂಬುದೀಗ, ಆ ಪಟ್ಟಣವ ಕಾವಳ ಐವಾಯಲ್ಲಿ ತೆಗೆದು ಅವಳ ಮೂಗು ಮೊಲೆಯ ಕೊಯ್ದ ಎಂಬ ಶಬ್ದಕ್ಕರ್ಥ. ಇಂತಿ ಪರಮ ಜ್ಞಾನಾರೂಢನಾದ ಶರಣನು ತನ್ನ ಸಹಜನ್ಮಿಗಳಾದ ಪಂಚಶಕ್ತಿಯರ ಉಭಯ ಭಾವದ ನೀತಿಯಳಿದು ಕೈವಿಡಿದು ಪರಮ ಶಿವ-ರತಿ ಸಂಯೋಗಾನುಭಾವದಿಂದಿರಲದೀಗ, ಮೊರಿಗೆಟ್ಟು ಒಡಹುಟ್ಟಿದೈವರ ಕೂಡಿ ಹಾದರವ ಮಾಡಿ ಎಂಬ ಶಬ್ದಕ್ಕರ್ಥ. ಇಂತಪ್ಪ ಶರಣನು ಪರಮ ಲೀಲಾ ವಿಲಾಸಿಯಾಗಿ ನಿಶ್ಚಿಂತ ಪದವನೆಯ್ದಿ ಸರ್ವಶೂನ್ಯ ನಿರಾಲಂಬ ಸ್ಥಾನದಲ್ಲಿ ಸರ್ವಕರಣ ನಿರ್ಮುಕ್ತವಾದ ಪರಮಾನಂದ ಭಾವದಿಂ ಸ್ವಸ್ಥವಾಗಿರಲದೀಗ, ನಿರವಲ್ಲಿ ನಿಃಶೂನ್ಯವೆಂಬ ಸಿಂಹಾಸನದ ಮೇಲೆ ಸೋಂಕಿಲ್ಲದ ಸೊಬಗಿನಲಿ ಮೂರ್ತಿಗೊಂಡಿರ್ದನೆಂಬ ಶಬ್ದಕ್ಕರ್ಥ. ಇಂತಪ್ಪ ದಿವ್ಯ ಶಿವಯೋಗೀಶ್ವರ ಚರಣಕ್ಕೆ ಶರಣೆಂದವರೆ ಧನ್ಯರೆಂಬುದೀ ವಚನದ ತಾತ್ಪರ್ಯ.

೧೦

ಜಾಳೇಂದ್ರ ದೇಶದರಸು ಆನೆಯನೇರಿ ನಾಯಕ-ಪಾಯಕ,
ಮಾವತಿಗರ
ತಳ ತಂತ್ರ ಮಹರ್ಬಲ ಸಹಿತ ರಾಜಬೀದಿಯೊಳು ಬರುತ್ತಿರಲು,
ಹಜ್ಜೆಗಾಣದೆ ತಳಿತಕಾರೆಯ ಮೆಳೆಯೊಳಗಿಪ್ಪ
ಬಿಜ್ಜ ಅರಸನು ಆನೆ ಮೊದಲಾದ ತಳ ತಂತ್ರ ಮಹರ್ಬಲವ
ನುಂಗಿದ್ದ ಕಂಡೆ

ಎರಡೂರ ಬಟ್ಟೆ ಒಂದಾದ ತಲೆಪ್ರೊಲದಲ್ಲಿ ಒಬ್ಬ ತನ್ನ ತಲೆಯ
ಕೊಯ್ದು —
ಮುಂದಿರಿಸಿಕೊಂಡು ಮುಂಡದಲ್ಲಿ ಹೇನ ಕಳುವುದ ಕಂಡೆ
ಅಂಗವ ಕೈಯ್ಯಲಿ ಹಿಡಿದುಕೊಂಡು ಅರಸಿ ಬಳಲುತ್ತಿರೆ ಹಲಬರು
ನಿಜಗುರು ಭೋಗೇಶ್ವರನ ಶರಣ ಚನ್ನ ಬಸವಣ್ಣನ
ಕರುಣವುಳ್ಳವರಿಗಲ್ಲದೆ ಮಿಕ್ಕಿನ ಜಡ ಮತಿಗಳಿಗೆಂತು ಸಾಧ್ಯ
ವಪ್ಪುದು ಕೇಳಿರಣ್ಣಾ !

**ಟೀಕು:—** ಸಮಸ್ತನಾಡಿ ಪ್ರದೇಶವಪ್ಪ ದೇಹಾಧಿಪತಿಯಾದ ಜೀವನು ಮೂಲಹಂಕಾರವನು ಆಶ್ರಯಿಸಲದೀಗ, ಜಾಳೇಂದ್ರ ದೇಶಪರಸು ಆನೆಯನೇರಿ ಎಂಬ ಶಬ್ದಕ್ಕರ್ಥ. ಇಂತಪ್ಪ ಜೀವನು ತನುಗುಣವಿಡಿದು ನಡವ ಕರ್ಮೇಂದ್ರಿಯಂಗಳು ಪ್ರಾಣಗುಣವಿಡಿದು ಗಮಿಸುವ ಜ್ಞಾನೇಂದ್ರಿಯಂಗಳು ಅಹಂಭಾವ ವಿಡಿದು ಚರಿಸುವ ಕರಣಂಗಳು ಸಹಿತ ತನ್ನ ಚತುರಂಗದಳ ವಳಯಮಂ ಕೂಡಿಕೊಂಡು ಕರ್ಮಮಾರ್ಗದಲ್ಲಿ ದುರಾಭಿಮಾನದಿಂ ನಿಂದ ನಿಲವ ಕಾಣದೆ ಪ್ರವರ್ತಿಸುತ್ತಿರಲದೀಗ, ನಾಯಕ-ಪಾಯಕ-ಮಾವತಿಗರ ತಳ ತಂತ್ರ ಮಹರ್ಬಲಸಹಿತ ರಾಜಬೀದಿಯೊಳು ಬರುತ್ತಿರಲು ಪಜ್ಜೆಗಾಣದೆ ಎಂಬ ಶಬ್ದಕ್ಕರ್ಥ. ಇಂತಪ್ಪ ಜೀವನ ಮೂಲಹಂಕಾರ ಸಹದಳವಳಯನೆಲ್ಲವನು ವಿಷಯಾದಿ ಕಂಠಂಗಳಿಂ ಪಲ್ಲವಿಸಿ ತೋರುವ ಮನೋಮಧ್ಯದಲ್ಲಿರ್ದ ಮಾಯಾವಿಹಗಮೃತ್ಯುವವಗ್ರಹಿಸಿಕೊಂಡಿರ್ದ ಕಂಡ ಶರಣನೆಂಬುದೀಗ, ತಳಿರಕಾರೆಯ ಮೊಳೆಯೊಳಗಿಪ್ಪ ಬಿಜ್ಜು ಅರಸನು ಆನೆ ಮೊದಲಾದ ತಥತಂತ್ರ ಮೊದಲಾದ ಮಾರ್ಬಲವ ನುಂಗಿದ್ದ ಕಂಡೆನೆಂಬ ಶಬ್ದಕ್ಕರ್ಥ. ಉಭಯ ತನು ಗುಣವಿಡಿದು ನಡೆವ ಜ್ಞಾನಾಜ್ಞಾನ ವಿಕಲ್ಪ ಭ್ರಾಂತಿಯಲ್ಲಿ ಅಂತರಾತ್ಮನು ತನ್ನ ವೃತ್ತಿಜ್ಞಾನವ ತಾನೆ ಭಿನ್ನವ ಮಾಡಿಕೊಂಡು ಬಿಡದೆ ಸಮ್ಮುಖದಲ್ಲಿರಿಸಿ ಜಡ ಪ್ರಕೃತಿ ಗುಣಂಗಳ ನಲೆಗಳವೃತ್ತಿರ್ಪುದ ಕಂಡು ಚೋದ್ಯ ಪಡುತ್ತಿರ್ದ ಶರಣನೆಂಬುದೀಗ, ಎರಡೂರ ಬಟ್ಟೆ ಒಂದಾದ ತಲೆಹೊಲದಲ್ಲಿ ಒಬ್ಬ ತನ್ನ ತಲೆಯ ಕೊಯ್ದು ಮುಂದಿರಿಸಿಕೊಂಡು ಮುಂಡದಲ್ಲಿ ಹೇನ ಕಳವುದ ಕಂಡೆನೆಂಬ ಶಬ್ದಕ್ಕರ್ಥ. ತತ್ವಮಸ್ಯಾದಿ ವಾಕ್ಯಾರ್ಥಂಗಳ ನರಸಿ ಮನೋಹಸ್ತದಿಂ ಗ್ರಹಿಸಿ ಆತ್ಮೋಹಂ ಎಂಬ ಅದ್ವೈತ ವಿಕಳರು ನಿಜಘಟಿಸದೆ ಭ್ರಮಿಸುತ್ತಿರಲದೀಗ, ಅಂಗ ಕೈಯಲ್ಲಿ ಹಿಡಿದು ಅರಸಿ ಬಳಲುತ್ತಿರೆ ಹಲಬರು ಎಂಬ ಶಬ್ದಕ್ಕರ್ಥ. ಇಂತಪ್ಪ ಅಜ್ಞಾನಿಗಳಿಗೆ ಪರವು ಸಾಧ್ಯವಾಗದು ಗುರು-ಕರುಣವುಳ್ಳ ಶರಣರಿಗಲ್ಲದೆ ಎಂಬುದೇ ಈ ವಚನದ ಅರ್ಥವು.

## ಮೋಳಿಗೆಯ ಮಾರಯ್ಯನವರ ವಚನಗಳು

೧

ಹುಟ್ಟಿದ ಮುನ್ನವೆ ಸತ್ತಿತ್ತು ಆ ಶಿಶು, ಸಾವುದಕ್ಕೆ ಮುನ್ನವೆ
ಹುಟ್ಟಿದ ಶಿಶುವ ನೋಡಾ !
ಅಯ್ಯಾ ! ಉಭಯದ ಮಧ್ಯದಲ್ಲಿ ನಿಂದು ಸತ್ತು ಹುಟ್ಟುವರಾರೋ!
ಹುಟ್ಟಿ ಸತ್ತವರಾರೋ, ಈ ಉಭಯವೇನೆಂಬುದ ಅರಿಯದೆ
ಭಾವ ಭ್ರಮೆಯಿಂದ ನಾವು ಪ್ರಾಣಲಿಂಗಿಗಳೆಂದು ನುಡಿವುತ್ತಿಪ್ಪವರ
ಕಂಡು—
ನಾಚಿಕೆಯಾಯಿತ್ತು ನಿಷ್ಕಳಂಕ ಮಲ್ಲಿಕಾರ್ಜುನಾ !

**ಟೀಕು:**— ಚಿತ್ಕಲಾಂತಿಕನಾದ ಆತ್ಮನು ದೇಹಸಂಬಂಧವಾಗಿರ್ದಲ್ಲಿ ಶಿವಾಜ್ಞೆಯಿಂದ ಶಿವಜ್ಞಾನ ಪ್ರಭಾವಿಸಿದಾಕ್ಷಣವೆ ಜೀವಭಾವ ನಷ್ಟವಾಯಿತ್ತೆಂಬುದೀಗ, ಹುಟ್ಟಿದ ಮುನ್ನವೆ ಸತ್ತಿತ್ತು ಆ ಶಿಶುವೆಂಬ ಶಬ್ದಕ್ಕರ್ಥ. ಅಂತು ಜೀವಭಾವ ನಾಸ್ತಿಯಾದ ಕೂಡಲೆ ಶಿವಭಾವ ಘಟಿಸಿ ಗುರೋಪಾವಸ್ಥೆಯ ಮಾಡಲು ಶ್ರೀಗುರು ಕರುಣಿಸಿ ಪ್ರಸನ್ನವಾಗಿ ಆತ್ಮಾಂತರ್ಗತವಾಗಿರ್ದ ಮಹಾಘನ ಲಿಂಗವ ಭಾವ-ಮನ-ದೃಕ್ಕಂ ಬಹಿಷ್ಕರಿಸಿ ಕರಸ್ಥಲಕೆ ಇಷ್ಟಲಿಂಗ ಸ್ವರೂಪವಾಗಿ ತಂದುಕೊಡಲು ಶರಣನ ಸರ್ವಾಂಗವು ಲಿಂಗಸ್ವರೂಪವಾಯಿತ್ತೆಂಬುದೀಗ, ಸಾವುದಕ್ಕೆ ಮುನ್ನವೆ ಹುಟ್ಟಿದ ಶಿಶುವ ನೋಡಾ ಅಯ್ಯ ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಂಬಂಧದ ಭಕ್ತಿಯೋಗದಲ್ಲಿ ನಿರ್ಭರವಾಗಿ ನಿಂದನೆಂಬುದೀಗ, ಉಭಯದ ಮಧ್ಯದಲ್ಲಿ ನಿಂದು ಎಂಬ ಶಬ್ದಕ್ಕರ್ಥ. ಸದ್ರೂಪವಾದ ಪರಬ್ರಹ್ಮವೆ ಗುರುಮುಖದಿಂದ ಉದ್ಭವಿಸಿ ಚಿದ್ರೂಪನಾದ ಶಿಷ್ಯನ ಸರ್ವಾಂಗವನನುಗ್ರಹಿಸಲು ಆ ಗುರುಕರಜಾತನಾದ ಶಿಷ್ಯನು ಸದ್ರೂಪವಾದ ಪರಬ್ರಹ್ಮವೆಯಾದಳೆಂಬುದೀಗ, ಸತ್ತು ಹುಟ್ಟಿದವರಾರೋ, ಹುಟ್ಟಿ ಸತ್ತವರಾರೋ ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಮರಸದ ಭಕ್ತಿಯೋಗದ ನಾವನರಿಯದೆ ಮನೋಭ್ರಾಂತಿಯಲ್ಲಿ ತಾವು ಜೀವರಾಗಿ ಕೂಡಿರ್ದ ಇಲ್ಲದ ಪರಬ್ರಹ್ಮವ ಕಂಡೆನೆಂದು ವಾಗಾದ್ವೈತವೆಂದುಲಿವುತ್ತಿಹರು ಅದ ಕಂಡ ಲಿಂಗ ಶರಣ ಹೇಸಿ ತೊಲಗಿದನೆಂಬುದೀಗ, ಈ ಉಭಯದ ಏನೆಂಬುದರಿಯದೆ ಭಾವ ಭ್ರಮೆಯಿಂದ ನಾವು ಪ್ರಾಣಲಿಂಗಿಗಳೆಂದು ನುಡಿವುತ್ತಿಪ್ಪವರ ಕಂಡು ನಾಚಿಕೆಯಾಯಿತ್ತು ನಿಷ್ಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೨

ಒಂದು ಪಕ್ಷಿಗೆ ಐದು ತಲೆ ನೋಡಾ ! ಶಿರವೊಂದರಲ್ಲಿಯೇ
ಮೂಡಿತ್ತು—
ಒಡಲು ಒಂದಾಯಿತ್ತು, ಬಣ್ಣ ಹದಿನಾರಾಯಿತ್ತು;

ಅದರ ಛಂದ ಇಪ್ಪತ್ತೈದಾಯಿತ್ತು ಹುಟ್ಟಿದ ಗರಿ
ನೂರೊಂದಾಯಿತ್ತು
ಆ ಹಕ್ಕಿಯ ಜೀವವಿದ್ದಂತೆ ಕೊಂದು ಸುಡದ ಬೆಂಕಿಯಲ್ಲಿ ಸುಟ್ಟು,
ತಲೆಯಿಲ್ಲದ ಕಣ್ಣಿನಲ್ಲಿ ನೋಡಿ ಬಾಯಿಲ್ಲದ ನಾಲಗೆಯಲ್ಲಿ ಸವಿದು
ಸವಿವುದಕ್ಕೆ ಮೊದಲೆ ರುಚಿಯ ನರ್ಪಿತವ ಮಾಡಿದ ಜ್ಞಾನ
ಜಂಗಮನ ನೋಡಾ !
ಆತನಿರವು ತುರುಬು-ಜಡೆಯೋ, ಬೋಳೋ ಅರಿಯಬಾರದಣ್ಣ
ಎಣ್ಣೆಕೊಂಡ ಮಣ್ಣಿನಂತೆ ಅನಲಕೊಂಡ ದ್ರವ್ಯದಂತೆ
ಕುಸುಮಕೊಂಡ ಗಂಧದಂತೆ, ರಸಕೊಂಡ ಪಾಷಾಣದಂತೆ
ಹೆಸರಿಡಬಾರದಯ್ಯ, ಆ ಜಂಗಮದಿರವ ಆ ಜಂಗಮ ಬಂದು--
ಎನ್ನ ಹುಳ್ಳಿಯಂ ಒಡಿಸಿ ತಳ್ಳಿಯಂ ಹರಿದು
ನಿಷ್ಕಳಂಕ ಮಲ್ಲಿಕಾರ್ಜುನನಲ್ಲಿದಲ್ಲಿಯ್ಯಾದಾ !

ಟೀಕು:— ದೇಹಸಂಬಂಧಿಯಾಗಿರ್ದ ಜೀವಂಗೆ ಪಂಚೇಂದ್ರಿಯಂಗಳೆ ಶಿರಸ್ಸಾಗಿಹವೆಂಬುದೀಗ, ಒಂದು ಪಕ್ಷಿಗೆ ಐದು ತಲೆ ನೋಡಾ ಎಂಬ ಶಬ್ದಕ್ಕರ್ಥ. ಆ ಪಂಚೇಂದ್ರಿಯಂಗಳು ವೃತ್ತಿಜ್ಞಾನದಿಂ ತೋರಿದವೆಂಬುದೀಗ, ಶಿರವೊಂದರಲ್ಲಿಯೆ ಮಾಡಿತ್ತೆಂಬ ಶಬ್ದಕ್ಕರ್ಥ. ಆ ಜೀವಂಗೆ ಪಂಚಭೂತಾಶ್ರಯವಾದ ಒಂದೆಯಾಗಿ ತೋರುತ್ತಿಹುದೆಂಬುದೀಗ, ಒಡಲು ಒಂದಾಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಅಂತರಂಗದ ಅಷ್ಟಮದ-ಬಹಿರಂಗದ ಅಷ್ಟಮದಂಗಳು ಪ್ರತ್ಯಕ್ಷೋಪಿತವಾಗಿರುತ್ತಿಹವೆಂಬುದೀಗ, ಬಣ್ಣ ಹದಿನಾರಾಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಇಪ್ಪತ್ತೈದು ತತ್ವಂಗಳೆ ಅಲಂಕಾರವಾಗೊಪ್ಪುತ್ತಿಹವೆಂಬುದೀಗ, ಅದರ ಛಂದ ಇಪ್ಪತ್ತೈದಾಯಿತ್ತೆಂಬ ಶಬ್ದಕ್ಕರ್ಥ. ಆ ಜೀವಂಗೆ ಅಂತಃಕರಣ ಮುಖ್ಯವಾದ ಕರಣಂಗಳು ಹಲವಾಗಿಹವೆಂಬುದೀಗ, ಹುಟ್ಟಿದ ಗರಿ ನೂರೊಂದಾಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಜೀವನು ದೇಹಸಂಬಂಧಿಯಾಗಿರ್ದಲ್ಲಿ ಸುಜ್ಞಾನೋದಯವಾಗಿ ಬಂದು ಗುರೋಪಾವಸ್ಥೆಯ ಮಾಡಲು ಆ ಶ್ರೀಗುರು ದೀಕ್ಷಾತ್ರಯಂಗಳಿಂ ಜೀವ ಭಾವವ ಸಂಹರಿಸಿ ಸಜ್ಜೀವ ಸ್ವರೂಪವ ಮಾಡಿ ಲಿಂಗತ್ರಯದ ಸಾಹಿತ್ಯವ ಮಾಡಿದನೆಂಬುದೀಗ, ಆ ಹಕ್ಕಿಯ ಜೀವ ಇದ್ದಂತೆ ಕೊಂದು ಎಂಬ ಶಬ್ದಕ್ಕರ್ಥ. ಅಂತಪ್ಪ ಸಜ್ಜೀವನ ತಾಪತ್ರಯಾಗ್ನಿ ಹೊದ್ದದ ಚಿದಾಗ್ನಿಯಿಂ ಸಮರಸಪಾಕವ ಮಾಡಿ ಭಿನ್ನಾಭಿನ್ನ ಜ್ಞಾನವನಳಿದು ಅಭಿನ್ನ ಜ್ಞಾನದೃಷ್ಟಿಯಿಂ ನಿರೀಕ್ಷಿಸಿ ಆತ್ಮ ದ್ರವ್ಯವನು ಸದ್ಭಕ್ತಿಯಿಂದ ಇಷ್ಟಲಿಂಗಕ್ಕರ್ಪಿಸಿ ಆ ಪ್ರಸನ್ನ ಪ್ರಸಾದವನು ಭಿನ್ನಾಪೇಕ್ಷೆಯಿಲ್ಲದೆ ಶಿವಾಪೇಕ್ಷೆಯಿಂ ಸ್ವೀಕರಿಸುತ್ತಿಹನೆಂಬುದೀಗ, ಸುಡದ ಬೆಂಕಿಯಲ್ಲಿ ಸುಟ್ಟು ತಲೆಯಿಲ್ಲದ ಕಣ್ಣಿನಲ್ಲಿ ನೋಡಿ ಬಾಯಿಲ್ಲದ ನಾಲಗೆಯಲ್ಲಿ ಸವಿದು ಎಂಬ ಶಬ್ದಕ್ಕರ್ಥ. ಆ ಲಿಂಗಮುಖದಿಂ

ದೊದಗಿದ ಪರಮ ಪ್ರಸಾದವ ಸ್ವೀಕರಿಸಿದಾಕ್ಷಣದಿ ರೂಪಿನೊಳಗಣ ರುಚಿ ಪದಾರ್ಥವನು ಸದ್ಭಾವ ಹಸ್ತದಿಂ ಪಿಡಿದು ಪ್ರಾಣಲಿಂಗಾರ್ಪಿತವ ಮಾಡಿ ಆ ಪ್ರಸಾದವ ಸ್ವೀಕರಿಸಿ ಪರಮಾನಂದ ಸುಖದಲ್ಲಿರ್ಪಾತನೆ ಸುಜ್ಞಾನ ಸನ್ನಹಿತವಾದ ಶರಣನೆಂಬುದೀಗ, ಸವಿವುದಕ್ಕೆ ಮೊದಲೆ ರುಚಿಯನರ್ಪಿತವ ಮಾಡಿದ ಜ್ಞಾನ ಜಂಗಮವ ನೋಡಾ ಎಂಬ ಶಬ್ದಕ್ಕರ್ಥ. ಆ ಪರತತ್ವ ಪ್ರಸಾದದಲ್ಲಿ ಬೆರಸಿದ ಸುಜ್ಞಾನಿ ಶರಣನ ಚರಿತ್ರವು ತುರುಬು ಜಡೆಯೋ ಬೋಳೋ ಎಂಬ ತ್ರಿವಿಧ ಲಾಂಛನಕ್ಕೆ ಸಿಕ್ಕಿ ಕುರುಹಿಂಗೆ ಬಾರದೆಂಬುದೀಗ, ಆತನಿರುವು ತುರುಬೋ-ಜಡೆಯೋ-ಬೋಳೋ ಅರಿಯಬಾರದಣ್ಣಾ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಜಂಗಮದ ಚರಿತ್ರವು ಎಣ್ಣೆವುಣ್ಣೊಳಕೊಂಡಂತೆ, ಅಗ್ನಿ ಹವ್ಯ ಕವ್ಯಾದಿಗಳನೊಳಕೊಂಡಂತೆ, ಕುಸುಮವು ಸುಗಂಧವನೊಳಕೊಂಡಂತೆ, ಉದಕವನೊಳಕೊಂಡ ಚಂದ್ರಕಾಂತದಂತೆ, ಸುಜ್ಞಾನ ಸ್ವರೂಪವಾದ ಜಂಗಮವನು ಕುರುಹಿಂಗೆ ತರಲಿಲ್ಲ. ಅಂತಪ್ಪ ಸುಜ್ಞಾನಜಂಗಮ ಬಂದು ಅನಿತ್ಯಭಾವವ ಕೆಡಿಸಿ ನಿತ್ಯವಾದಾಚಾರ ಸಂಬಂಧವ ತೋರಿ, ಭಿನ್ನ ಭಾವ ಮೊದಲಾದ ಸಕಲ ಪ್ರಪಂಚ ನಿವೃತ್ತಿ ಮಾಡಿ ನಿಜದಲ್ಲಿ ನಿರ್ಭಯವಾದನೆಂಬುದೀಗ, ಎಣ್ಣೆ ಕೊಂಡ ಮಣ್ಣಿನಂತೆ, ಅನಲಕೊಂಡ ದ್ರವ್ಯದಂತೆ, ಕುಸುಮಕೊಂಡ ಗಂಧದಂತೆ, ರಸಕೊಂಡ ಪಾಷಾಣದಂತೆ ಹೆಸರಿಡಬಾರದಯ್ಯ ಆ ಜಂಗಮದಿರವ ಆ ಜಂಗಮ ಬಂದು ಎನ್ನ ಹುಳ್ಳಿಯಂ ಬಿಡಿಸಿ ತಳ್ಳಿಯಂ ಹರಿದು ನಿಷ್ಕಳಂಕ ಮಲ್ಲಿಕಾರ್ಜುನನಲ್ಲಿ ತಲ್ಲಿಯ್ಯವಾದನೆಂಬ ಶಬ್ದಕ್ಕರ್ಥ.

೩

ಬೆಟ್ಟದ ಮೇಲಣ ಗುಂಡು ಬೆಟ್ಟವ ನುಂಗಿತ್ತು
ಸೃಷ್ಟಿಯ ಮೇಲಣ ಜನ ಪೃಥ್ವಿಯ ನುಂಗಿತ್ತು
ಹಸುವಿನ ಬಸುರ ಶಿಶು ಹಸುವ ನುಂಗಿತ್ತು
ಹೆಸರಿಡುವದಿನ್ನೇನೋ ಕಣ್ಣೊಳಗಿನ ಎರಳೆ ಬಣ್ಣವ ನುಂಗಿತ್ತು
ಮತ್ತೆ ಬಣ್ಣಿಸಿ ಪೂಜಿಸಿ ಕೊಂಬುವದೇನೋ !
ಕಣ್ಣಾವಗಾಲದ ಹೊಳೆಯಲ್ಲಿ ಮುಳುಗಿ ಚಿನ್ನುಗೆಟ್ಟರಯ್ಯ
ಅಣ್ಣಗಳೆಲ್ಲರೂ ಮುಕ್ಕಣ್ಣನ ಪೂಜಿಸಿ ಮೂರು ಬಟ್ಟೆಯ ಸುತ್ತಿ
ಊರಹೊಕ್ಕು ಆರಯ್ದಿದರಯ್ಯ ! ನೀವಾರಾಧಿಸುವ ಲಿಂಗ
ಆ ಲಿಂಗದಲ್ಲಿ ಲಿಯ್ಯವಾದವರೆ ಸಂಗಕ್ಕೊಳಗಾದರು,
ನಮ್ಮ ನಿಸ್ಸಂಗ ನಿಷ್ಕಳಂಕ ಮಲ್ಲಿಕಾರ್ಜುನನಲ್ಲಿ ದಿಕ್ಕುಗೆಟ್ಟೆನಯ್ಯ !

ಟೀಕು:— ಚಿದಹಂಕಾರದ ಅಗ್ರದಲ್ಲಿ ಒಪ್ಪುತ್ತಿರ್ದ ಚಿದ್‌ಘನಲಿಂಗವು ಸುಜ್ಞಾನೋದಯವಾದ ಶರಣನ ಅಹಂಕಾರವ ನವಗ್ರಹಿಸಿತ್ತೆಂಬುದೀಗ, ಬೆಟ್ಟದ ಮೇಲಣ ಗುಂಡು ಬೆಟ್ಟವ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಆಚಾರಾಂಗದಲ್ಲಿರ್ಪ ಸಕಲ ಕರಣಂಗಳೆಲ್ಲವು ಅಮರ ಗಣತ್ವವ ನೆಯ್ದಿ ಜ್ಞಾನಕಾಯ

ದಲ್ಲಿ ಸಂಬಂಧವಾಗಿರ್ಪ ಇಷ್ಟಲಿಂಗವ ನವಗ್ರಹಿಸಿದವೆಂಬುದೀಗ, ಸೃಷ್ಟಿಯ ಮೇಲಣ ಜನ ಪೃಥ್ವಿಯ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತು ಜೀವಂಗೆ ಸುಜ್ಞಾನೋದಯವಾಗಿ ಚಿದ್ಗರ್ಭ ತಲೆದೋರಲು ಸುಜ್ಞಾನ ಸ್ವರೂಪವಾದ ಮಹಾ ಘನಲಿಂಗವು ಉದಯಿಸಿ ಆ ಜೀವನ ಪಶುಭಾವವ ನಷ್ಟವ ಮಾಡಿತ್ತೆಂಬುದೀಗ ಪಸುವಿನ ಬಸುರ ಶಿಶು ಪಸುವ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತು ಜೀವಭಾವ ಅಳಿದು ಶಿವಭಾವ ಘಟಿಸಿ ಸರ್ವಾಂಗ ಲಿಂಗ ಸಂಬಂಧಿಯಾಗಿರ್ಪ ಶರಣನ ಕುರುಹಿಂಗೆ ತಂದು ಹೇಳಬಾರದೆಂಬುದೀಗ, ಹೆಸರಿಡುವುದಿನ್ನೇನೋ ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣನ ಸುಜ್ಞಾನ ದೃಷ್ಟಿಯ ಮುಂದೆ ತೋರುವ ಮಹಾ ಜ್ಞಾನ ಚಿತ್ತು ಷಡ್ವರ್ಣೋಪಿತವಾದ ಮಾಯಾ ಪ್ರಪಂಚ ನವಗ್ರಹಿಸಿತ್ತೆಂಬುದೀಗ, ಕಣ್ಣೊಳಗಿನ ಎರಳೆ ಬಣ್ಣವ ನುಂಗಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಂಬಂಧದ ಸತ್ಪಥ ಮಾರ್ಗವ ನರಿಯದೆ ಲಿಂಗಾಂಗಕ್ಕೆ ಭಿನ್ನವಿಟ್ಟು ಅರ್ಚನೆ-ಪೂಜನೆಯ ಮಾಡಿ ಫಲ ಪದಂಗಳ ಪಡೆದು ಭೋಗಿಸಿ ಭವಹೇತುವಪ್ಪ ಜನ್ಮಾಂತರಕ್ಕೆ ಬಂದು ಅಜ್ಞಾನ ಸಂಬಂಧವಾದ ಭವಾಂಬುಧಿಯಲ್ಲಿ ಮುಳುಗಿ ಉತ್ಪತ್ತ್ಯ-ಸ್ಥಿತಿ-ಲಯಗಳಲ್ಲಿ ಸಿಲ್ಕಿ ತಮ್ಮ ನಿಜವಂ ಮರೆದು ದೇಹಭಾವಕ್ಕೊಳಗಾಗಿ ಕೆಟ್ಟರೆಂಬುದೀಗ, ಮತ್ತೆ ಬಣ್ಣಿಸಿ ಪೂಜಿಸಿಕೊಂಬುದುವೇನೋ ಕಣ್ಣಾವಗಾಲದ ಹೊಳೆಯಲ್ಲಿ ಮುಳುಗು ಚೆನ್ನುಗೆಟ್ಟರಯ್ಯ! ಅಣ್ಣಗಳೆಲ್ಲರು ಮುಕ್ಕಣ್ಣನ ಪೂಜಿಸಿ ಮೂರು ಬಟ್ಟೆಯ ಸುತ್ತಿ ಊರ ಹೊಕ್ಕು ಆರಯ್ದಿದಿದರಯ್ಯಾ ನೀವಾರಾಧಿಸುವ ಲಿಂಗ ಆ ಲಿಂಗದಲ್ಲಿ ಲಿಯ್ಯವಾದವರೆ ಸಂಗಕ್ಕೊಳಗಾದರು ಎಂಬ ಶಬ್ದಕ್ಕರ್ಥ. ಮಹಾ ಘನಲಿಂಗದಲ್ಲಿ ಅವಿರಳ ಸಂಬಂಧಿಯಾದ ಶರಣನು ತಾನೆಂಬ ಭಾವವಳಿದು ಚಿದ್ಘನಲಿಂಗದಲ್ಲಿ ನಿಷ್ಪತಿಯಾದನೆಂಬುದೀಗ, ನಮ್ಮ ನಿಸ್ಸಂಗ ನಿಷ್ಕಳಂಕ ಮಲ್ಲಿಕಾರ್ಜುನನಲ್ಲಿ ದಿಕ್ಕುಗೆಟ್ಟನಯ್ಯ ಎಂಬ ಶಬ್ದಕ್ಕರ್ಥ.

೪

ಆಕಾಶ ಸತ್ತಿತ್ತು, ಬಯಲತ್ತಿತ್ತು, ವಾಯು ಹೊತ್ತಿತ್ತು
ಬೆಂಕಿ ಸತ್ತ ಠಾವಿನಲ್ಲಿ ಸುಟ್ಟಿತ್ತು ಕೈಯಿಲ್ಲದ ಮೇಟ
ಹಿಡಿಕ (ಖ)ಂಡವಕೊಯ್ದು ನಾಲಗೆಯಿಲ್ಲದ ಬಾಯಲ್ಲಿ ಮೆದ್ದ—
ಪರಿಣಾಮವಿಲ್ಲದೆ ಸಂತೋಷಿಯಾದನಯ್ಯಾ!
ಆತನಿರವು ಇಹದಲ್ಲಿಯೇ ಅಜ್ಞಾನಿ, ಪರದಲ್ಲಿಯೇ ಸುಜ್ಞಾನಿ
ಇಹ ಪರವೆಂಬ ಸಂದಳಿದಲ್ಲದೆ ಲಿಂಗವಂತನಲ್ಲ!
ಲಿಂಗ ಪ್ರಾಣದ ಮೇಲೆ ನಿಂದುದಕ್ಕೆ ಸಾಕ್ಷಿ ಉರಿಕೊಂಡ
ಕರ್ಪುರದಂತೆ,
ವಿಷಕೊಂಡ ಘಟದಂತೆ, ಘಟಕೊಂಡ ಸೂತ್ರದಂತೆ

ಸೌರ್ಯಕೊಂಡ ಪ್ರಕಾಶದಂತೆ ಹಾಗಿರಬೇಕು, ಮನಲಿಂಗಕೊಂಡ ಮನಕ್ಕೆ
ಇವೇ ದೃಷ್ಟ ನಿಷ್ಕಳಂಕ ಮಲ್ಲಿಕಾರ್ಜುನನಲ್ಲಿ ಸ್ವಾನುಭಾವಿಗೆ.

**ಟೀಕು:**— ಸುಜ್ಞಾನೋದಯವಾದ ಶರಣನು ಶ್ರೀಗುರು ಕಾರುಣ್ಯದಿಂ ತ್ರಿವಿಧ ಲಿಂಗ ಸಂಬಂಧವಾಗಲು ತ್ರಿವಿಧ ಭಕ್ತಿಗಳಿಂದಾಚರಿಸಿದ ಚಿದಾತ್ಮನು ಸದ್ರೂಪವಾದ ಬ್ರಹ್ಮವೆಯಾದನೆಂಬುದೀಗ, ಆಕಾಶ ಸತ್ತಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಚಿದಾಕಾಶ ಸ್ವರೂಪವಾದ ಶರಣನ ಉನ್ಮನಿ ತತ್ವಸ್ವರೂಪವಾದ ಮನಸ್ಸು ಶಿವೋಹಂ-ಶಿವೋಹಂವೆಂದಿತ್ತೆಂಬುದೀಗ, ಬಯಲತ್ತಿತ್ತು ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣನ ಚಿತ್ ಪ್ರಣಾನಿಲನು ಶಿವೋಹಂಭಾವವ ಧರಿಸಿಕೊಂಡಿಹುದೆಂಬುದೀಗ, ವಾಯು ಹೊತ್ತಿತ್ತು ಎಂಬ ಶಬ್ದಕ್ಕರ್ಥ. ಅಂತು ತಾಪತ್ರಯಾಗ್ನಿಯು ನಷ್ಟವಾದ ಶರಣನ ನಿಜಾಂತರಂಗದಲ್ಲಿರ್ದ ಜ್ಞಾನಾಗ್ನಿ ಪ್ರಕಾಶದಿಂದ ಆ ಚಿದಾತ್ಮನು ಸಮರಸಪಾಕವಾಯಿತ್ತೆಂಬುದೀಗ, ಬೆಂಕಿಸತ್ತ ಠಾವಿನಲ್ಲಿ ಸುಟ್ಟಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಭಿನ್ನಹಸ್ತವಳಿದು ಅಭಿನ್ನ ಹಸ್ತದಿಂ ಆತ್ಮ ಸಂಬಂಧವಾದ ತ್ರಿವಿಧ ಪದಾರ್ಥವ ತ್ರಿವಿಧ ಲಿಂಗಮುಖದಲ್ಲಿ ತ್ರಿವಿಧ ಭಕ್ತಿಯಿಂದರ್ಪಿಸಿ ಭಿನ್ನಾಪೇಕ್ಷೆಯಿಲ್ಲದ ಶಿವಾಪೇಕ್ಷೆಯಿಂದ ಆ ಲಿಂಗ ಸುಖ ಪ್ರಸನ್ನ ಪ್ರಸಾದವ ಸ್ವೀಕರಿಸುತ್ತಿಹನೆಂಬುದೀಗ, ಕೈಯಿಲ್ಲದ ಮೋಟ ಹಿಡಿ ಕಂಡವ ಕೊಯಿದ ನಾಲಗೆ, ಇಲ್ಲದ ಬಾಯಲ್ಲಿ ಮೆದ್ದನೆಂಬ ಶಬ್ದಕ್ಕರ್ಥ. ಅಂತಪ್ಪ ಶರಣ ತಾನೆಂದು ಪರಿಣಾಮದೆಂದೆರಡಿಟ್ಟು ತೋರದೆ ಆ ಸುಖ ಸ್ವರೂಪವೆ ತಾನಾಗಿರ್ದನೆಂಬುದೀಗ, ಪರಿಣಾಮವಿಲ್ಲದೆ ಸಂತೋಷಿಯಾದನಯ್ಯ ಎಂಬ ಶಬ್ದಕ್ಕರ್ಥ. ಆ ಶರಣನ ಚರಿತ್ರವು ಎಲ್ಲ ಮಾನವರ ಹಾಗೆ ದೇಹಭಾವ ಸಂಬಂಧಿಯಾಗಿ ಸಂಸಾರ ಸ್ಥಿತಿಗತಿಯಲ್ಲಿರುತ್ತಿಹನೆಂಬುದೀಗ, ಆ ನಿರತವು ಇಹದಲ್ಲಿಯೆ ಅಜ್ಞಾನಿಯೆಂಬ ಶಬ್ದಕ್ಕರ್ಥ. ಆ ಪರಬ್ರಹ್ಮದಲ್ಲಿ ಸಮರಸ ಭಾವವನೆಯ್ದಿದ ಶರಣನು ಲಿಂಗಾಂಗವೆಂಬು ಭಯವಳಿದೊಂದೆ ಪರಬ್ರಹ್ಮ ಸ್ವರೂಪನಾಗಿಹನೆಂಬುದೀಗ, ಇಹ ಪರವೆಂಬ ಸಂದಳಿದಲ್ಲದೆ ಲಿಂಗವಂತನಲ್ಲವೆಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣನ ಆಚಾರಾಂಗದಲ್ಲಿರ್ದ ಇಷ್ಟಲಿಂಗವ ಚಿತ್ಕಳೆ ಅಂತರಂಗಕ್ಕೆ ಭೇದಿಸಿ ಚಿತ್ ಪ್ರಾಣನಲ್ಲಿ ಪ್ರಾಣಲಿಂಗ ಸಂಬಂಧವಾದುದಕ್ಕೆ ದೃಷ್ಟವೆಂತೆಂದೊಡೆ ಉರಿ ಕರ್ಪುರವ ಗ್ರಹಿಸಿ ಭಿನ್ನವಿಲ್ಲದಂತೆ ವಿಷ ಚರಣಾಂಗುಲದಲ್ಲಿ ಸೋಂಕಿ ಸರ್ವಾಂಗವೆಲ್ಲ ಪರವಶದಲ್ಲಿ ನಿಷ್ಕ್ರಿಯಾದಂತೆ ರತ್ನಕ್ಕೂ ಪ್ರಕಾಶಕ್ಕೂ ಹರುಕಿಲ್ಲದಂತೆ. ಬಂಟನ ಪ್ರಕಾಶವು ದಿಗ್‌ದೆಶೆಗಳಲ್ಲಿ ತೋರುವಂತೆ ಚಿದ್ರೂಪನಾದ ಶರಣನ ತನು—ಮನ—ಪ್ರಾಣೇಂದ್ರಿಯಂಗಳ ಒಳ ಹೊರಗೆ ಸರ್ವಾಂಗದಲ್ಲಿ ಮಹಾಘನಲಿಂಗವು ಅನನ್ಯ ಭಾವದಿಂದ ಇರುತ್ತಿಹನೆಂಬುದೀಗ, ಲಿಂಗ ಪ್ರಾಣದಮೇಲೆ ನಿಂದುದಕ್ಕೆ ಸಾಕ್ಷಿ ಉರಿಕೊಂಡ ಕರ್ಪುರದಂತೆ ವಿಷಕೊಂಡ ಘಟದಂತೆ, ಘಟಕೊಂಡ ಸೂತ್ರದಂತೆ ಸೌರ್ಯಕೊಂಡ ಪ್ರಕಾಶದಂತೆ ಹಾಗಿರಬೇಕು ಮನಲಿಂಗ ಕೊಂಡ ಮನಕ್ಕೆ ಇದೆ ದೃಷ್ಟ ನಿಷ್ಕಲಂಕ ಮಲ್ಲಿಕಾರ್ಜುನನಲ್ಲಿ ಸ್ವಾನುಭಾವಿಗೆ ಎಂಬ ಶಬ್ದಕ್ಕರ್ಥ.

೫

ನಾ ಬಾಹಾಗ ಎನ್ನ ಗುರು ಮೂರು ರತ್ನವ ಕೊಟ್ಟ !
ನಾನೊಲ್ಲದೆ ಒಂದು ಬ್ರಹ್ಮಂಗೆ ಕೊಟ್ಟೆ. ಒಂದ ವಿಷ್ಣುವಿಂಗೆ ಕೊಟ್ಟೆ
ಒಂದು ರುದ್ರಂಗೆ ಕೊಟ್ಟೆ, ಬ್ರಹ್ಮ ಜೆಡಗವ ನಿಕ್ಕಿ ಪವಣಿಸಿ ಕಟ್ಟಿದ,
ವಿಷ್ಣು ಕುಂದಣದಲ್ಲಿ ಕೀಲಿಸಿ ಮುಂಗಯ್ಯಲ್ಲಿಕ್ಕಿದ
ರುದ್ರದನೊಡದು ಬೆಳಗ ಬಯಲಮಾಡಿದ
ಇಂತಿ ಮೂವರು ರತ್ನದ ಹಂಗಿಗಳಾದರು
ಹಂಗನೊಲ್ಲದೆ ಸಂದೇಹ ಒಡಲಾರದೆ ಬಂದ
ಬಂದಯೋನಿಯಲ್ಲಿ ಸಂದಿಲ್ಲದೆ ತಿರುಗಲಾರದೆ ನೊಂದೆನಯ್ಯ !
ಬ್ರಹ್ಮನ ಬಲೆಯಲ್ಲಿ ಸಿಲ್ಕಿ ವಿಷ್ಣುವಿನ ಬಂಧದಲ್ಲಿ ಕಟ್ಟೊಡದು,
ರುದ್ರನ ಹಣೆಗಿಚ್ಚಿನಲ್ಲಿ ಉರಿಯಲಾರದೆ ಸಾರಿದೆನಯ್ಯ
ಕೇಡಿಲ್ಲದ ಪದವ ಗುರುವಿನ ಹಂಗಬಿಟ್ಟೆ ಅಡಿಗಡಿಗಳಲಾರದೆ
ಲಿಂಗದ ಹಂಗಬಿಟ್ಟೆ
ಮಜ್ಜನಕ್ಕೆರದ ಹಾವಸಿಗಾರದೆ ಜಂಗಮದ ಹಂಗ ಬಿಟ್ಟೆ
ಸಂದೇಹದಲ್ಲಿ ಸಾಯಲಾರದೆ, ಇದರಿಂದ ಒಂದು ಛಂದವಿಲ್ಲ
ಅಭಂಗ ನಿರ್ಲೇಪ ನಿಷ್ಕಳಂಕ ಮಲ್ಲಿಕಾರ್ಜುನಂಗೆ.

ಟೀಕು:— ಸುಜ್ಞಾನೋದಯವಾಗಿ ಸಕಲ ಪ್ರಪಂಚ ನಿವೃತ್ತಿ ಮಾಡಿ ಶ್ರೀಗುರುವಿನ ಕರಕಮಲದಿಂದ ಉಪ್ಪವಿಸಿ ಬರುವಲ್ಲಿ ಆ ಶ್ರೀಗುರು ಇಷ್ಟ-ಪ್ರಾಣ-ಭಾವವೆಂಬ ತ್ರಿವಿಧ ಜ್ಞಾನ ರತ್ನವ ಚಿದ್ರೂಪನಾದ ಶಿಷ್ಯನ ಆಚಾರಾಂಗದಲ್ಲಿ ಸಂಬಂಧವ ಮಾಡಿದನೆಂಬುದೀಗ, ನಾ ಬಾ ಹಾಗ ಎನ್ನ ಗುರು ಮೂರು ರತ್ನವ ಕೊಟ್ಟನೆಂಬ ಶಬ್ದಕ್ಕರ್ಥ. ಅಂತಪ್ಪ ತ್ರಿವಿಧಲಿಂಗದಲ್ಲಿ ಸುಜ್ಞಾನ ಕ್ರೀವಿಡಿದಾಚರಿಸುತ್ತಿರ್ದ ಶರಣನು ಭಿನ್ನಕ್ರೀವಿಡಿದಾಚರಿಸುವವನಲ್ಲವೆಂಬುದೀಗ, ನಾನೊಲ್ಲದೆ ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣನು ರಜೋಗುಣ ಸಂಬಂಧವಾದ ಸ್ಥೂಲಾಂಗದಲ್ಲಿ ಇಷ್ಟಲಿಂಗವ ಸಂಬಂಧವ ಮಾಡಿದನೆಂಬುದೀಗ, ಒಂದ ಬ್ರಹ್ಮಂಗೆ ಕೊಟ್ಟೆನೆಂಬ ಶಬ್ದಕ್ಕರ್ಥ. ಸಾತ್ವಿಕ ಗುಣ ಸಂಬಂಧವಾದ ಸೂಕ್ಷ್ಮಾಂಗದಲ್ಲಿ ಪ್ರಾಣಲಿಂಗ ಸಂಬಂಧವ ಮಾಡಿದನೆಂಬುದೀಗ, ಒಂದ ವಿಷ್ಣುವಿಂಗೆ ಕೊಟ್ಟೆನೆಂಬ ಶಬ್ದಕ್ಕರ್ಥ. ತಮೋಗುಣ ಸಂಬಂಧವಾದ ಕಾರಣಾಂಗದಲ್ಲಿ ಭಾವಲಿಂಗವ ಸಂಬಂಧವ ಮಾಡಿನೆಂಬುದೀಗ, ಒಂದು ರುದ್ರಂಗೆ ಕೊಟ್ಟೆನೆಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ವೆರಡರ ಸಮರಸೈಕ್ಯವನರಿಯದೆ ಬ್ರಹ್ಮ-ವಿಷ್ಣು-ರುದ್ರರೆಂಬ ತ್ರಿತತ್ವವು ಲಿಂಗವನಿದಿರಿಟ್ಟು ಅರ್ಚನೆ-ಪೂಜನೆಯ ಮಾಡಿ ಖಂಡಿತ ಫಲಪದಂಗಳ ಪಡದು ಫಲದಾಯಕರಾದರಲ್ಲದೆ ಸಮರಸೈಕ್ಯವನರಿದುದಿಲ್ಲವೆಂಬುದೀಗ, ಬ್ರಹ್ಮ ಬೆಡಗವನಿಕ್ಕಿ ಪವಣಿಸಿ ಕಟ್ಟಿದ, ವಿಷ್ಣು ಕುಂದಣದಲ್ಲಿ ಕೀಲಿಸಿ ಮುಂಗೈಯಲ್ಲಿಕ್ಕಿದ,

ರುದ್ರನೊಡದು ಬೆಳಗ ಬಯಲ ಮಾಡಿದ, ಇಂತಿ ಮೂರು ರತ್ನದ ಹಂಗಿಗಾದರು ಎಂಬ ಶಬ್ದಕ್ಕರ್ಥ. ಇಂತಪ್ಪ ಚಿದ್ರೂಪನಾದ ಶರಣ ಅಖಂಡಿತ ಫಲಪದವ ಮುಟ್ಟಿದಡೆ ಆ ಫಲದಿಂದ ಸಂಸಾರ ಬಂಧನವಾಗಿ ಬಂಧನದಿಂದ ಜೀವ-ಭಾವ-ಭ್ರಾಂತು; ಆ ಭ್ರಾಂತಿನಿಂದ ಎಂಭತ್ತುನಾಲ್ಕುಲಕ್ಷ ಯೋನಿಯಲ್ಲಿ ಹುಟ್ಟಿ ಬ್ರಹ್ಮನ ಉತ್ಪತ್ಯ, ವಿಷ್ಣುವಿನ ಸ್ಥಿತಿ, ರುದ್ರನ ಲಯವೆಂಬ ತಾಪತ್ರಯಾಗ್ನಿಯಲ್ಲಿ ಬೇಯಲಾರದೆ ಇವನ್ನೆಲ್ಲವ ಬಿಟ್ಟು ನಿತ್ಯವಾದ ಮಹಾಘನಲಿಂಗ ಪದದಲ್ಲಿ ತತ್ಪರನಾಗಿರ್ದ ಶರಣನೆಂಬುದೀಗ, ಹಂಗನೊಲ್ಲದೆ ಸಂದೇಹಬಡಲಾರದೆ ಬಂದ, ಬಂದ ಯೋನಿಯಲ್ಲಿ ಸಂದಿಲ್ಲದೆ ತಿರುಗಲಾರದೆ ನೊಂದೆನಯ್ಯ, ಬ್ರಹ್ಮನ ಬಲೆಯಲ್ಲಿ ಸಿಕ್ಕಿ ವಿಷ್ಣುವಿನ ಬಂಧದಲ್ಲಿ ಕಟ್ಟೊಡದು, ರುದ್ರನ ಹಣೆಗಿಚ್ಚಿನಲ್ಲಿ ಉರಿಯಲಾರದೆ ಸಾರಿದೆನಯ್ಯ ಕೇಡಿಲ್ಲದ ಪದವನೆಂಬ ಶಬ್ದಕ್ಕರ್ಥ. ಗುರುಲಿಂಗ ಜಂಗಮವನಿದಿರಟ್ಟು ತ್ರಿವಿಧ ಪದಾರ್ಥವನು ತ್ರಿವಿಧ ಭಕ್ತಿಯಿಂದರ್ಪಿಸಿದಲ್ಲಿ ಖಂಡಿತ ಫಲಪದ ಅಖಂಡಿತ ಫಲಪದಂಗಳ ಭೋಗಿಸಿದ ಆತ್ಮರುಗಳಿಗೆ ಅಜ್ಞಾನವೆಂಬ ಹಾವಸೆ ಅವಗ್ರಹಿಸಿಕೊಂಡಲ್ಲಿ ಜೀವಭಾವ ಭ್ರಾಂತಿಗೆ ದೇಹದಲ್ಲಿ ವಾವೃತ್ತಿಹರೆಂಬುದೀಗ, ಗುರುವಿನ ಹಂಗ ಬಿಟ್ಟೆ, ಅಡಿಗಡಿಗೇಳಲಾರದೆ ಲಿಂಗದ ಹಂಗ ಬಿಟ್ಟೆ, ಮಜ್ಜನಕ್ಕೆರದ ಹಾವಸೆಗಾರದೆ ಜಂಗಮದ ಹಂಗಬಿಟ್ಟೆ ಸಂದೇಹದಲ್ಲಿ ಸಾಯಲಾರದೆ ಎಂಬ ಶಬ್ದಕ್ಕರ್ಥ. ಇಂತಪ್ಪ ಅನಿತ್ಯಪದಗಳ ನಿವೃತ್ತಿ ಮಾಡಿ ನಿಷ್ಕಲ ಮಹಾಘನಲಿಂಗ ಪದಸ್ಥನಾಗಿರ್ದ ಶರಣನೆಂಬುದೀಗ, ಇವರಂದ ಒಂದೂ ಛಂದವಿಲ್ಲ ಅಭಂಗ ನಿರ್ಲೇಪ ನಿಷ್ಕಳಂಕ ಮಲ್ಲಿಕಾರ್ಜುನಂಗೆ ಎಂಬ ಶಬ್ದಕ್ಕರ್ಥ.

೬

ಕೊಡಗದ ಅಣಲಿನಲ್ಲಿ ಮೂರಗುಳ ಕಂಡೆ
ಒಂದಗುಳು ಚಿಪ್ಪೆಗಲ್ಲಿ ನಂದ, ಒಂದಗುಳು ಅಡ್ಡಗಲ್ಲಿನಂದ
ಒಂದಗುಳು ಊರ್ಧ್ವಗಲ್ಲಾಗಿ ನಿಂದಿಹುದು !
ಆ ಕಲ್ಲಿನ ತುದಿಯಲ್ಲಿ ನಿಂದು ಕೊಡಗವ ಕೊಂದೆ ಚಿಪ್ಪೆಗಲ್ಲನಪ್ಪಳಿಸಿದೆ
ಅಡ್ಡಗಲ್ಲ ಅಡ್ಡಿಗೆಯ ನಿಕ್ಕಿ ಒಡದೆ, ನಿಂದ ಕಲ್ಲ ಸಂದೇಹವಿಲ್ಲದೆ ತಳ್ಳಿದೆ
ಇದರಂದವ ತಿಳಿ, ಲಿಂಗೈಕ್ಯನಾದಡೆ ಹೊಂದದ ಬಟ್ಟೆಯೊಂದೆ,
ನಿಷ್ಕಳಂಕ ಮಲ್ಲಿಕಾರ್ಜುನಾ.

**ಟೀಕು:—** ಮನವೆಂಬ ಮರ್ಕಟನು ಸಂಕಲ್ಪವೆಂಬ ದಾಡಿಯಲ್ಲಿ ಸಂಚಿತ್ ಪ್ರಾರಾಬ್ಧಗಾಮಿಯೆಂಬ ಕರ್ಮತ್ರಯಂಗಳ ನವಗ್ರಹಿಸಿಕೊಂಡಿರುತ್ತಿಹುದೆಂಬುದೀಗ, ಕೊಡಗದ ಅಣಲಿನಲ್ಲಿ ಮೂರಗುಳ ಕಂಡೆನೆಂಬ ಶಬ್ದಕ್ಕರ್ಥ. ಸಂಚಿತ ಕರ್ಮವು ರಜೋಗುಣ ಸಂಬಂಧವಾದ ಸ್ಥೂಲತನು ಸ್ವರೂಪವಾಗಿಹುದೆಂಬುದೀಗ, ಒಂದಗುಳು ಚಿಪ್ಪೆಗಲ್ಲಿನಂದವೆಂಬ ಶಬ್ದಕ್ಕರ್ಥ. ಪ್ರಾರಾಬ್ಧ ಭೋಗವು

ಸಾತ್ವಿಕ ಗುಣ ಸಂಬಂಧವಾದ ಸೂಕ್ಷ್ಮ ತನು ಸ್ವರೂಪವಾಗಿಹುದೆಂಬುದೀಗ, ಒಂದಗುಳು ಅಡ್ಡಗಲ್ಲ ನಂಪವೆಂಬ ಶಬ್ದಕ್ಕರ್ಥ. ಆಗಾಮಿ ಕರ್ಮವೆಂಬುದು ತಮೋಗುಣ ಸಂಬಂಧವಾದ ಕಾರಣ ದೇಹ ಸ್ವರೂಪವಾಗಿಹುದೆಂಬುದೀಗ, ಒಂದಗುಳು ಊರ್ಧ್ವದಲ್ಲಾಗಿ ನಿಂದಿಹುದು ಎಂಬ ಶಬ್ದಕ್ಕರ್ಥ. ಅಂತಪ್ಪ ತನು ತ್ರಯ ಸಂಬಂಧಿಯಾಗಿರ್ದ ಆತ್ಮಂಗೆ ಶಿವಜ್ಞಾನ ಪ್ರಕಾಶಿಸಲು ಅಹಂಕಾರವಳಿದು ಚಿದಹಂಕಾರದಗ್ರದಲ್ಲಿ ಸ್ವಸ್ಥಿರವಾಗಿ ನಿಂದು ಆ ಮನೋವರ್ತನೆಯ ನಿವೃತ್ತಿ ಮಾಡಿ ಉನ್ಮನಿ ತತ್ವ ಸ್ವರೂಪವ ಮಾಡಿದನೆಂಬುದೀಗ, ಕಲ್ಲಿನ ತುದಿಯಲ್ಲಿ ಕೊಡಗವ ಕೊಂದೆನೆಂಬ ಶಬ್ದಕ್ಕರ್ಥ. ಅಂತು ಮನೋವರ್ತನೆಯಳಿದು ಗುರೋಪಾವಸ್ಥೆಯ ಮಾಡುವ ಶಿಷ್ಯಂಗೆ ಶ್ರೀಗುರು ಪ್ರಸನ್ನವಾಗಿ ಶಿಷ್ಯಂಗೆ ಕ್ರಿಯಾ ದೀಕ್ಷೆಯಿಂದ ಸ್ಥೂಲ ತನುವ ನಷ್ಟವ ಮಾಡಿ ಇಷ್ಟಲಿಂಗವ ಸಾಹಿತ್ಯವ ಮಾಡಿದನೆಂಬುದೀಗ, ಚಿಪ್ಪೆಗಲ್ಲವನಪ್ಪಳಿಸಿದೆನೆಂಬ ಶಬ್ದಕ್ಕರ್ಥ. ಶ್ರೀ ಗುರು ಮಂತ್ರ ದೀಕ್ಷೆಯಿಂದ ಸೂಕ್ಷ್ಮ ತನುವ ನಷ್ಟವ ಮಾಡಿ ಚೈತನ್ಯ ಸ್ವರೂಪವಾದ ಪ್ರಾಣಲಿಂಗವ ಸಾಹಿತ್ಯವ ಮಾಡಿದನೆಂಬುದೀಗ, ಅಡ್ಡಗಲ್ಲ ಅಡ್ಡಿಗೆಯನಿಕ್ಕಿ ಒಡೆದೆನೆಂಬ ಶಬ್ದಕ್ಕರ್ಥ. ಆ ಶ್ರೀಗುರು ವೇದ ದೀಕ್ಷೆಯಿಂದ ತಮೋಗುಣ ಸಂಬಂಧವಾದ ದೇಹವ ನಷ್ಟವ ಮಾಡಿದ ಅಖಂಡ ಪರಿಪೂರ್ಣವಾದ ಭಾವಲಿಂಗವ ಸಂಬಂಧವ ಮಾಡಿದನೆಂಬುದೀಗ, ನಿಂದಕಲ್ಲ ಸಂದೇಹವಿಲ್ಲದೆ ತಳ್ಳಿದೆನೆಂಬ ಶಬ್ದಕ್ಕರ್ಥ. ಅಂತು ಶ್ರೀಗುರುವಿನ ಸದ್ಭಾವದಿಂದೊಗೆದ ಕಾರಣ ಸಂಚಿತ ಕರ್ಮಕೆಟ್ಟಿತ್ತು ಲಿಂಗ ಭೋಗೋಪಭೋಗಿಯಾಗಿ ಕಾರಣ ಪ್ರಾರಬ್ಧ ಭೋಗ ಕೆಟ್ಟಿತ್ತು ಮಹಾಘನ ಲಿಂಗದಲ್ಲಿ ಸಮರಸೈಕ್ಯವಾದ ಕಾರಣ ಆಗಾಮಿ ಕರ್ಮ ಕೆಟ್ಟಿತ್ತು ಇಂತಿ ತ್ರಿವಿಧವಳಿದು ನಿತ್ಯ ಸ್ವರೂಪವಾದ ಶರಣಂಗೆ ಅನಿತ್ಯವಾದ ಮರಣ ಭಯವಿಲ್ಲದೆ ಹೋಯಿತ್ತೆಂಬುದೀಗ, ಇದರಿಂದ ತಿಳಿ ಲಿಂಗೈಕ್ಯನಾದಡೆ ಹೊಂದದ ಬಟ್ಟೆಯೊಂದೆ ನಿಷ್ಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೭

ನೀರ ಹೊಳೆಯಲ್ಲಿ ಹೋಗುತ್ತಿರಲಾಗಿ ಅಲ್ಲಿ ಒಬ್ಬ ಸತ್ತು ಬೇವುತ್ತಿರ್ದ
ತಲೆ ಕಾಲು ಬೇಯದು, ಕೈ ಮುರುಟದು, ಕಪಾಲ ಸಿಡಿಯದು
ಕೂದಲುಳಿಯಿತ್ತು; ಆ ಕೂದಲ ಮೊನೆಯಲ್ಲಿ
ಮೂರು ಲೋಕವೆಡೆಯಾಡುತ್ತದೆ ನಿಷ್ಕಳಂಕ ಮಲ್ಲಿಕಾರ್ಜುನಾ !

**ಟೀಕು:**— ನೀರೆಂದೊಡೆ ಮನಸ್ಸು. ಅಂತಪ್ಪ ಮನೋಧರ್ಮದಲ್ಲಿ ಚರಿಸುತ್ತಿರಲಾಗಿ ದೇಹ ಸಂಬಂಧಿಯಾದ ಆತ್ಮನು ತನ್ನ ನಿಜದರಿವ ನಷ್ಟವ ಮಾಡಿ ಜೀವನ್ಮೃತನಾಗಿ ತಾಪತ್ರಯಾಗ್ನಿಯಿಂ ಬೇವುತ್ತಿರ್ದನೆಂಬುದೀಗ, ನೀರಹೊಳೆಯಲ್ಲಿ ಹೋಗುತ್ತಿರಲಾಗಿ ಅಲ್ಲಿ ಒಬ್ಬ ಸತ್ತು ಬೇವುತ್ತಿರ್ದನೆಂಬ ಶಬ್ದಕ್ಕರ್ಥ. ಅಂತು ತಾಪತ್ರಯಾಗ್ನಿಯಿಂ ಬೇವುತ್ತಿರ್ದ ಆತ್ಮನ ವೃತ್ತಿಜ್ಞಾನವೆಂಬ ಶಿರಸ್ಸು ದುಶ್ಚರಿತ್ರವೆಂಬ ಚರಣವು ಎರಡೂ ದಗ್ಧವಾಪುದಿಲ್ಲವೆಂಬುದೀಗ, ತಲೆ ಕಾಲು ಬೇಯದು ಎಂಬ ಶಬ್ದಕ್ಕರ್ಥ. ಅಂತಪ್ಪ ತಾಪತ್ರಯಾಗ್ನಿಯಿಂ ಜೀವನಚಿತ್ತವೆಂಬ ಹಸ್ತವು

ನಷ್ಟವಾಗದೆಂಬುದೀಗ, ಕೈ ಮುರುಟಿದು ಎಂಬ ಶಬ್ದಕ್ಕರ್ಥ. ಅಂತು ಜೀವನ ಭಿನ್ನ ಜ್ಞಾನವು ನಷ್ಟವಾಗದೆ ಇಹುದೆಂಬುದೀಗ, ಕಪಾಲ ಸಿಡಿಯದು ಎಂಬ ಶಬ್ದಕ್ಕರ್ಥ. ಆ ಜೀವನ ಅಜ್ಞಾನ ಕೆಡದೆ ಇರುತ್ತಿಹುದೆಂಬುದೀಗ, ಕೂದಲುಳಿಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಅಜ್ಞಾನದಗ್ರದಲ್ಲಿ ಸ್ವರ್ಗ-ಮೃತ್ಯು-ಪಾತಾಳದಲ್ಲುಳ್ಳ ದೇವ-ದಾನ-ಮಾನವರು ದೇಹವೆಂಬ ಚೋಹವ ತೊಟ್ಟು ಉತ್ಪತ್ತಿ-ಸ್ಥಿತಿ-ಲಯಂಗಳಿಂದ ತಿರಿಗಾಡುತ್ತಿರ್ದರೆಂಬುದೀಗ, ಆ ಕೂದಲ ಮೊನೆಯಲ್ಲಿ ಮೂರು ಲೋಕವೆಡೆಯಾಡುತ್ತದೆ ನಿಷ್ಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೮

ಕಪ್ಪೆ ಸತ್ತು ಸರ್ಪನ ನುಂಗಿತ್ತು ನೋಡಾ !
ಮೊಲ ಸತ್ತು ಬಲೆಯ ಮೀರಿತ್ತು ನೋಡಾ !
ಮುತ್ತೊಡದು ಜಲವ ನುಂಗಿತ್ತು ನೋಡಾ !
ಜೀವ ಸತ್ತು ಕಾಯ ನಿಂದಿತ್ತು ನೋಡಾ !
ಉದಕ ಒಡದು ಏರಿ ತುಂಬಿತ್ತು, ರಟ್ಟೆ ಮುರಿದು ಪಕ್ಷಿ ಹಾರಿತ್ತು,
ಹಾರುವ ಪಕ್ಷಿಯು ಮೀರಿ ನುಂಗಿತ್ತು ಬಯಲುವ
ಹಿಂಗಿದ ಪಕ್ಷಿಯು ಕಂಗಳು ನುಂಗಿತ್ತು ನಿಷ್ಕಳಂಕ ಮಲ್ಲಿಕಾರ್ಜುನಾ!

**ಟೀಕು:**— ಬ್ರಹ್ಮರಂಧ್ರದಲ್ಲಿರ್ಪ ಪರಮ ಶಾಂತಿಯ ಚಿದ್ಬಿಂದು ಶ್ರೀಗುರುವಿನ ಭಾವ-ಮನ-ದೃಕ್ಕಿನಿಂದ ಉದಯಿಸಿ ಚಿದ್ರೂಪನಾದ ಶರಣನ ಕರಸ್ಥಲಕ್ಕೆ ಇಷ್ಟಲಿಂಗ ಸ್ವರೂಪವಾಗಿ ಬರಲು ಆ ಲಿಂಗದಲ್ಲಿ ಸತ್ಕ್ರಿಯೆಯಿಂದ ಆಚರಿಸುತ್ತಿರಲಾಗಿ ಚಿತ್ಕಳೆ ಅಂತರಂಗಕ್ಕೆ ಭೇದಿಸಿ ತೈಜಸನಲ್ಲಿ ಪ್ರಾಣಲಿಂಗ ಸಂಬಂಧವಾಯಿತ್ತೆಂಬುದೀಗ, ಕಪ್ಪೆ ಸತ್ತು ಸರ್ಪನ ನುಂಗಿತ್ತು ನೋಡಾ ಎಂಬ ಶಬ್ದಕ್ಕರ್ಥ. ಮೊಲವೆಂದೊಡೆ ಪ್ರಾಜ್ಞನು. ಅಂತಪ್ಪ ಪ್ರಾಜ್ಞನು ಭಾವಲಿಂಗವ ನವಗ್ರಹಿಸಿ ಸದ್ರೂಪನಾದ ಬ್ರಹ್ಮವೆಯೊಡಲ್ಲಿ ಮಾಯಾ ಪಾಶ ನಿವೃತ್ತಿಯಾಯಿತ್ತೆಂಬುದೀಗ, ಮೊಲ ಸತ್ತು ಬಲೆಯ ಮೀರಿತ್ತು ನೋಡಾ ಎಂಬ ಶಬ್ದಕ್ಕರ್ಥ. ಮುಕ್ತಿಸ್ವರೂಪವಾದ ನಿಷ್ಕಲ ಬ್ರಹ್ಮವು ಲಿಂಗಾಂಗವೆಂದೆರಡಾಗಿ ಶರಣನ ಕರಸ್ಥಲವಲ್ಲಿ ನೆಲೆಗೊಂಡು ಉನ್ಮನಿ ಸ್ವರೂಪವಾದ ಮನವ ನವಗ್ರಹಿಸಿಸಿತ್ತೆಂಬುದೀಗ, ಮುತ್ತೊಡದು ಜಲವ ನುಂಗಿತ್ತು ನೋಡಾ ಎಂಬ ಶಬ್ದಕ್ಕರ್ಥ. ಅಂತಪ್ಪ ಸಜ್ಜೀವನು ಸದ್ರೂಪವಾದ ಬ್ರಹ್ಮವಾದಲ್ಲಿ ಅನಿತ್ಯ ಕಾಯುವಳಿದು ನಿತ್ಯವಾದ ಲಿಂಗಕಾಯವಾಯಿತ್ತೆಂಬುದೀಗ, ಜೀವ ಸತ್ತು ಕಾಯ ನಿಂದಿತ್ತು ನೋಡಾ ಎಂಬ ಶಬ್ದಕ್ಕರ್ಥ. ಸರ್ವಾಂಗದಲ್ಲಿ ಸಂಸಾರ ವಿಷಯ ಜಲವರಿತು ಹೋಗಿ ಶರಣನ ತನುತ್ರಯಂಗಳೆಲ್ಲ ಪರಮಾನಂದ ಜಲವೆ ತುಂಬಿರುತ್ತಿಹುದೆಂಬುದೀಗ, ಉದಕ ಒಡದು ಏರಿ ತುಂಬಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಜ್ಞಾನಕ್ರೀಗಳು ನಿಷ್ಪತಿಯಾಗಿ ಚಿದ್ಘನ ಲಿಂಗದಲ್ಲಿ ಸಮರಸೈಕ್ಯನಾದನೆಂಬುದೀಗ, ರಟ್ಟೆ

ಮುರಿದು ಪಕ್ಷಿ ಹಾರಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಜ್ಞಾನಕ್ರೀಗಳು ನಿಷ್ಪತಿಯಾಗಿ ಚಿದ್ಘನಲಿಂಗದಲ್ಲಿ ಸಮರಸೈಕ್ಯನಾದನೆಂಬುದೀಗ, ರಟ್ಟೆಮುರಿದು ಪಕ್ಷಿ ಹಾರಿತ್ತು ಎಂಬ ಶಬ್ದಕ್ಕರ್ಥ. ತುರಿಯಾವಸ್ಥೆಯು ಮುಂದುಗೊಂಡು ಸತ್ಪಥ ಮಾರ್ಗ ಹಿಡಿದಿರ್ಪ್ಪುವ ಪರಮಾತ್ಮ ಸ್ವರೂಪನಾದ ಶರಣನ ನಿರಾಕಾರವಾದ ಪರಬ್ರಹ್ಮವ ವಗ್ರಹಿಸಿತ್ತೆಂಬುದೀಗ, ಹಾರುವ ಪಕ್ಷಿಯು ಮೀರಿ ನುಂಗಿತ್ತು ಬಯಲು ಎಂಬ ಶಬ್ದಕ್ಕರ್ಥ. ಅಂತಪ್ಪ ಮಹಾ ಘನಲಿಂಗವನು ಸಕಲ ಪ್ರಪಂಚಿಗೆ ವಿಲಕ್ಷಣನಾದ ಶರಣನು ಪರಿಪೂರ್ಣ ಜ್ಞಾನದೃಷ್ಟಿಯುವಗ್ರಹಿಸಿತ್ತೆಂಬುದೀಗ, ನುಂಗಿದ ಬಯಲುವ ಹಿಂಗಿದ ಪಕ್ಷಿಯು ಕಂಗಳು ನುಂಗಿತ್ತು ನಿಷ್ಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೬

ಬೀಜ ಹುಟ್ಟಿದಲ್ಲಿ ಒಂದೆ ಗುಣ, ನಿಂದಲ್ಲಿ ನಾನಾ ಪ್ರಕಾರಂಗಳಿಂದ,
ಭೂಮಿಯಲ್ಲಿ ಪ್ರವೇಶ್ಟಿಸಿ ಕೊಂಡಿಪ್ಪ ತೆರದಂತೆ ಆ ಮೂಲ
ಮೇಲಂಕರಿಸಿದ,
ಮತ್ತೆ ಐಯ್ದು ಗುಣದಲ್ಲಿ ಶಾಖೆ ಒಡೆಯಿತ್ತು,
ಮೂರು ಗುಣದಲ್ಲಿ ಎಲೆಯಂಕುರಿಸಿತ್ತು
ಎಂಟು ಗುಣದಲ್ಲಿ ಕುಸುಮ ಬಲಿಯಿತ್ತು, ಉಮರಿ ಹರಳು ನಿಂದಿತ್ತು
ನವಗುಣದಲ್ಲಿ ಆ ರಸ ಬಲಿದುಯಿತ್ತು ಷೋಡಶದಲ್ಲಿ ಕೊಟ್ಟು
ಬಿಟ್ಟಿತ್ತು
ಪಂಚವಿಂಶತಿಯಲ್ಲಿ ಸವಿದರು, ಸವಿದ ರುಚಿ ನಿಂದಿತ್ತು
ಶತಏಕದಲ್ಲಿ ಮರಣವಾಯಿತ್ತು, ವೃಕ್ಷದ ಬೇರು ಕಡಿಯಿತ್ತು,
ಮರ ಬಿದ್ದಿತ್ತು, ಕೊಂಬು ಹಂಗ ಬಿದ್ದಿತ್ತು, ಕೊಂಬಿನೊಳಗಣ
ಕೊಡಗ—
ಬಂಧುಗಳ ನೊಡಗೂಡಿ ಸಂದೇಹವಿಲ್ಲವಾಗಿ
ಶ್ರುತ-ದೃಷ್ಟಿ ಅನುಮಾನದಲ್ಲಿ ತಿಳಿಯಿರಣ್ಣಾ !
ಬ್ರಹ್ಮನ ಉತ್ಪತ್ತಿ, ವಿಷ್ಣುವಿನ ಸ್ಥಿತಿ, ರುದ್ರನ ಲಯ,
ಇಂತಿ ಮೂವರ ಹಿಂಗಿನಿಂದ ಬಂದ ದೇಹಕ್ಕೆ ಕಟ್ಟುವ ದೃಷ್ಟವ
ನೋಡಾ !
ಒಮ್ಮೆಗೆ ಕಾರುಕನಲ್ಲಿ, ಇಮ್ಮೆಗೆ ಹರದಿಗನಲ್ಲಿ, ತ್ರಿವಿಧ
ಮುಮ್ಮಾರಿನಲ್ಲಿ
ಆದಿಯ ಹೆಣ್ಣಿನ ತೆರದಂತೆ ಅವರ ಕಂಡು ಆಹಾ ! ಅಲ್ಲವೆಂದೆ
ನಿಷ್ಕಳಂಕ ಮಲ್ಲಿಕಾರ್ಜುನಾ !

**ಟೀಕು:**— ಮಾವಿನ ಬೀಜವ ಬಿತ್ತಿದಲ್ಲಿ ಭೂಮಿಯಲ್ಲಿ ನಿಂದು ಮೊಳೆದೋರಿ ಆ ಮೊಳೆಯಿಂದ ಅಂಕುರ, ಆ ಅಂಕುರದಿಂದ ಶಾಖೆ; ಶಾಖೆಯಿಂದ ಪರ್ಣ, ಪರ್ಣದಿಂದ ಕುಸುಮ, ಕುಸುಮದಿಂದ ಕಾಯಿ, ಕಾಯಿಂದ ಹಣ್ಣು ಇಂತಿವೆಲ್ಲವ ನಾಮೂಲ ಬುಡ ಒಂದೆ ಭೂಮಿಯಲ್ಲಿ ನಿಂದು ಪ್ರವೇಷ್ಟಿಸಿಕೊಂಡಿರ್ಪಂತೆ ಅನೇಕ ಕೋಟಿ ಬ್ರಹ್ಮಾಂಡಗಳಿಗೆ ಕಾರಣವಾದ ಮಹಾಘನ ಲಿಂಗವು ತಾನೊಂದೆಯಾಗಿರ್ದು ತನ್ನ ಸ್ವಲೀಲೆಯಿಂದ ತಾನೆ ಅಖಂಡ ಚಿತ್ತಿನ ಮಧ್ಯದಲ್ಲಿ ಸ್ವಸ್ಥಿರವಾಗಿ ನಿಂದು ಸರ್ವಾಚಾರ ಸಂಪತ್ತು ಮೊದಲಾದ ಅನೇಕ ಸ್ಥಲ ಕುಳಂಗಳನೊಳಕೊಂಡು ತೋರುತ್ತಿಹುವೆಂಬುದೀಗ, ಬೀಜ ಹುಟ್ಟಿದಲ್ಲಿ ಒಂದೇ ಗುಣ ನಿಂದಲ್ಲಿ ನಾನಾ ಪ್ರಕಾರಂಗಳಿಂದ ಭೂಮಿಯಲ್ಲಿ ಪ್ರವೇಷ್ಟಿಸಿಕೊಂಡಿರ್ಪ ತೆರವಂತೆ ಎಂಬ ಶಬ್ದಕ್ಕರ್ಥ. ಅಂತಪ್ಪ ಸಕಲ ತತ್ವಂಗಳಿಗೆ ಕಾರಣವಾದ ನಾದಬ್ರಹ್ಮ ಸ್ವರೂಪವಾದ ಮಹಾಘನ ಲಿಂಗವು ಚಿತ್ ಸ್ವರೂಪನಾದ ಶರಣನ ಶಿವಜ್ಞಾನದಲ್ಲಿ ಪ್ರಭಾವಿಸಿತ್ತೆಂಬುದೀಗ, ಆ ಮೂಲ ಮೇಲಂಕುರಿಸಿದ ಮತ್ತೆ ಎಂಬ ಶಬ್ದಕ್ಕರ್ಥ. ಆ ಮೂಲ ಮೇಲ ಪಂಚೇಂದ್ರಿಯಂಗಳ ವರ್ತನೆಯಳಿದ ಚಿದ್ರೂಪನಾದ ಶರಣನ ಪಂಚಾಚಾರವನೊಳಕೊಂಡು ತೋರುತ್ತಿಹುದು ಪರಬ್ರಹ್ಮವೆಂಬುದೀಗ, ಐಯ್ದು ಗುಣದಲ್ಲಿ ಶಾಖೆ ಒಡೆಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಪಂಚಾಚಾರ ಸಂಬಂಧವಾದ ಚಿತ್ ಸ್ವರೂಪನಾದ ಶರಣನ ತನುಕ್ರಿಯಂಗಳಳಿದು ಇಷ್ಟ-ಪ್ರಾಣ-ಭಾವ ಲಿಂಗ ಸಂಬಂಧವಾಗಿ ತ್ರಿವಿಧ ಭಕ್ತಿವಿಡಿದು ಆಚರಿಸುತ್ತಿಹನೆಂಬುದೀಗ, ಮೂರು ಗುಣದಲ್ಲಿ ಎಲೆಯಂಕುರಿಸಿತ್ತೆಂಬ ಶಬ್ದಕ್ಕರ್ಥ. ಅಂತು ತ್ರಿವಿಧ ಲಿಂಗದಲ್ಲಿ ತ್ರಿವಿಧ ಭಕ್ತಿವಿಡಿದಾಚರಿಸುತ್ತಿರ್ದ ಶರಣನ ಅಷ್ಟ ತನುವಳಿದು ಅಷ್ಟವಿಧ ಭಕ್ತಿಸ್ವರೂಪವಾದ ಸ್ವಾನುಭಾವ ಸದ್ವಾಸನೆಯು ತುಂಬಿತ್ತೆಂಬುದೀಗ, ಎಂಟುಗುಣದಲ್ಲಿ ಕುಸುಮ ಬಲಿಯಿತ್ತೆಂಬ ಶಬ್ದಕ್ಕರ್ಥ. ಅಂತು ಅಷ್ಟವಿಧ ಭಕ್ತಿಸ್ವರೂಪನಾದ ಶರಣಂಗೆ ಫಲ ಪದಂಗಳು ನಾಸ್ತಿಯಾಗಿ ಮುಕ್ತಿ ಫಳವೆ ಘಟ್ಟಿಗೊಂಡಿತ್ತೆಂಬುದೀಗ, ಉದುರಿ ಹರಳು ನಿಂದಿತ್ತೆಂಬ ಶಬ್ದಕ್ಕರ್ಥ. ಅಂತು ಮುಕ್ತಿಫಳ ಸ್ವರೂಪವನೆಯ್ದಿದ ಶರಣನ ನವದ್ವಾರಂಗಳಳಿದ ನವವಿಧ ಭಕ್ತಿಯಲ್ಲಿ ಆ ಚಿದಾಮೃತ ರಸವೆ ಘಟ್ಟಿಗೊಂಡಿತ್ತೆಂಬುದೀಗ, ನವಗುಣದಲ್ಲಿ ಆ ರಸ ಬಲಿಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ನವವಿಧ ಭಕ್ತಿಯಲ್ಲಿ ತತ್ಪರನಾದ ಶರಣಂಗೆ ಅಂತರಂಗ ವಷ್ಟಮದಂಗಳು, ಬಹಿರಂಗದಷ್ಟಮದಂಗಳಳಿದು ಶರಣನ ಷೋಡಶ ಭಕ್ತಿಯಲ್ಲಿ ತಾನೆಂಬ ಚಿದಹಂಕಾರವಡಗಿತ್ತೆಂಬುದೀಗ, ಷೋಡಶದಲ್ಲಿ ತೊಟ್ಟು ಬಿಟ್ಟಿತ್ತೆಂಬ ಶಬ್ದಕ್ಕರ್ಥ. ಅಂತು ಷೋಡಶ ಭಕ್ತಿಯಲ್ಲಿ ನಿರ್ಧರವಾಗಿ ನಿಂದು ತಾನೆಂಬ ಚಿದಹಂಕಾರವಡಗಿದ ಶರಣನ ಅಂಗತತ್ವ ಇಪ್ಪತ್ತೈದಳಿದು ಲಿಂಗ ತತ್ವ ಸ್ವರೂಪವಾದ ಶರಣನ ಇಪ್ಪತ್ತೈದು ಭಕ್ತಿಗಳಲ್ಲಿ ೨೫ ಲಿಂಗಸ್ವರೂಪವಾಗಿ ನಿಂದು ಸಕಲ ಪದಾರ್ಥವ ಶರಣ ಮುಖಲಿಂಗವಾಗಿ ಕೈಕೊಂಡು ಪರಮ ಪ್ರಸಾದವ ಕರುಣಿಸಲಾ ಪ್ರಸಾದ ಸೇವನೆಯಿಂ ತೃಪ್ತಿಯನೆಯ್ದಿಹ ಶರಣನೆಂಬುದೀಗ, ಪಂಚವಿಂಶತಿಯಲ್ಲಿ ಸವಿದ ರುಚಿ ನಿಂದಿತ್ತೆಂಬ ಶಬ್ದಕ್ಕರ್ಥ. ಆ ಲಿಂಗ ಭೋಗೋಪಭೋಗದಿಂ ತೃಪ್ತಿಯನೆಯ್ದಿಹ ಶರಣನು ಅಂಗಸ್ಥಲ ನಲವತ್ತು ನಾಲ್ಕು, ಲಿಂಗ

ಸ್ಥಲ ಐವತ್ತೇಳು ಉಭಯ ಪಿಂಡಾದಿ ಜ್ಞಾನಶೂನ್ಯಾಂತವಾದ ನೂರೊಂದು ಸ್ಥಲ ಕುಳಂಗಳಲ್ಲಿ ಜ್ಞಾನಕ್ರೀವಿಡಿದಾಚರಿಸಿ ಪರಬ್ರಹ್ಮದಲ್ಲಿ ಏಕಾರ್ಥವಾಗಿಪನೆಂಬುದೀಗ, ಶತಏಕದಲ್ಲಿ ಮರಣವಾಯಿತ್ತೆಂಬ ಶಬ್ದಕ್ಕರ್ಥ. ಅಂತು ನೂರೊಂದು ಸ್ಥಲ ನಿಡಿದು ಆಚರಿಸಿ ಮಹಾಘನಲಿಂಗದಲ್ಲಿ ಏಕಾರ್ಥವಾದ ಶರಣಂಗೆ ಮೂಲಹಂಕಾರವಿಲ್ಲದೆ ಹೋಯಿತ್ತೆಂಬುದೀಗ, ವೃಕ್ಷದ ಬೇರು ಕಡಿಯಿತ್ತೆಂಬ ಶಬ್ದಕ್ಕರ್ಥ. ಅಂತು ಮೂಲಹಂಕಾರ ನಷ್ಟವಾದ ಶರಣನಾಚಾರಾಂಗವು ಚಿದ್ಘನಲಿಂಗದಲ್ಲಿ ಲಿಯ್ಯವಾಯಿತ್ತೆಂಬುದೀಗ, ಮರಬಿತ್ತೆಂಬ ಶಬ್ದಕ್ಕರ್ಥ. ಆ ದೇಹಭಾವ ನಷ್ಟವಾಗಿ ಶಿವಭಾವ ಸನ್ನಿಹಿತವಾದ ಸದ್ಭಕ್ತಿಗೆ ಭಿನ್ನ ಫಲಪದಂಗಳ ಬಯಕೆಯಿಲ್ಲದೆ ಹೋಯಿತ್ತೆಂಬುದೀಗ, ಕೊಂಬು ಹಂಗ ಬಿಟ್ಟಿತ್ತೆಂಬ ಶಬ್ದಕ್ಕರ್ಥ. ಆ ಶಿವಾದ್ವೈತ ಭಕ್ತಿಯಲ್ಲಿ ಸನ್ನಹಿತವಾದ ಶರಣನ ಮನಸ್ಸು ಅಮರಗಣತ್ವವನೆಯ್ದಿರ್ದ ಸಕಲ ಕರಣಂಗಳನು ಸುಜ್ಞಾನ ಮುಖದಿಂ ಪರಬ್ರಹ್ಮದಲ್ಲಿ ಏಕಾರ್ಥವ ಮಾಡಿ ತಾನೆಂಬ ಸಂಕಲ್ಪವಳಿಯಿತ್ತೆಂಬುದೀಗ, ಕೊಂಬಿನೊಳಗಣ ಕೊಡಗ ಬಂಧುಗಳ ನೊಡಗೂಡಿ ಸಂದೇಹವಿಲ್ಲವಾಗಿ ಎಂಬ ಶಬ್ದಕ್ಕರ್ಥ. ಅಂತು ಸಂಕಲ್ಪವಳಿಯಿತ್ತಾಗಿ ಆದ್ಯರ ವಚನ ಪ್ರಮಾಣೆನಿಂದಲರಿವು ಗುರು ಕರುಣದಿಂ ತಿಳಿದು ಲಿಂಗಾಂಗ ಸಂಬಂಧದಿಂ ವಿವೇಕಿಸಿ ಆಚರಿಸಬೇಕು ವೀರಶೈವ ಷಟ್‌ಸ್ಥಲ ಜ್ಞಾನಿಗಳಾದ ಶರಣರೆಂಬುದೀಗ, ಶೃತದೃಷ್ಟನು ಮಾನದಲ್ಲಿ ತಿಳಿಯಿರಣ್ಣಾ ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಂಬಂಧದ ಭಕ್ತಿಯೋಗವನರಿಯದ ಭಿನ್ನ ಜ್ಞಾನಿಗಳು ಉತ್ಪತ್ತ್ಯ-ಸ್ಥಿತಿ-ಲಯಂಗಳಲ್ಲಿ ಸಿಲ್ಕಿ ದೇಹಿಗಳಾಗಿರ್ದ ಜೀವರು ಅಂಗಕ್ಕೆ ಲಿಂಗ ಸಂಬಂಧವ ಮಾಡಿಕೊಳ್ಳಬೇಕೆಂದು ಗುರುಕರುಣದಿಂದ ಉಪದೇಶವ ಪಡದರೆಂಬುದೀಗ, ಬ್ರಹ್ಮನ ಉತ್ಪತ್ತಿ, ವಿಷ್ಣುವಿನ ಸ್ಥಿತಿ, ರುದ್ರನ ಲಯ ಇಂತಿ ಮೂವರ ಹಂಗಿಂದ ಬಂದ ದೇಹಕ್ಕೆ ಕಟ್ಟಿದ ದೃಷ್ಟದ ನೋಡಾ ಒಮ್ಮೆಗೆ ಕಾರುಕನಲ್ಲಿ ಎಂಬ ಶಬ್ದಕ್ಕರ್ಥ. ಆ ಗುರು ಕರುಣದಿಂ ಸಂಬಂಧವಾದ ಇಷ್ಟಲಿಂಗಕ್ಕೆ ಭಿನ್ನವಿಟ್ಟು ಅಷ್ಟ ವಿಧಾರ್ಚನೆ ಷೋಡಶೋಪಚಾರಂಗಳ ಮಾಡಿ ಫಲಪದಂಗಳ ಪಡವುತ್ತಿಹರೆಂಬುದೀಗ, ಇಮ್ಮೆಗೆ ಹರದಿಗನಲ್ಲಿ ಎಂಬ ಶಬ್ದಕ್ಕರ್ಥ. ಜಂಗಮಕ್ಕೆ ಭಿನ್ನಭಕ್ತಿಯ ಮಾಡಿ ತಾವು ಭಿನ್ನವಾಗಿ ಹೋದರೆಂಬುದೀಗ, ತ್ರಿವಿಧಕ್ಕೆ ಮುಮ್ಮಾರಿನಲ್ಲಿ ಎಂಬ ಶಬ್ದಕ್ಕರ್ಥ. ಮತ್ತೆಯು ಹೆಣ್ಣಿನ ದೃಷ್ಟಾಂತರದಂತೆ ಗುರು-ಲಿಂಗ-ಜಂಗಮವ ಭಿನ್ನವಿಟ್ಟು ಭಕ್ತಿಯ ಮಾಡಿ ಫಲಪದಂಗಳ ಪಡವುತ್ತಿಹರು ದ್ವೈತಿಗಳು, ಅದು ಷಟಸ್ಥಲಮಾರ್ಗವಲ್ಲ ಎಂದು ನಿವೃತ್ತಿ ಮಾಡಿದನೆಂಬುದೀಗ, ಆದಿಯ ಹೆಣ್ಣಿನ ತೆರದಂತೆ ಅವರ ಕಂಡು ಆಹಾ ಅಲ್ಲವೆಂದೆ ನಿಷ್ಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೧೬

ಒಪ್ಪದ ಕಪ್ಪೆ ಸರ್ಪನ ನುಂಗಿದ್ದ ಕಂಡೆ !
ತುಪ್ಪುಳು ಬಾರದ ಮರಿ ಹೆತ್ತ ತಾಯ ನುಂಗಿದ್ದ ಕಂಡೆ
ಕೊಂಬಿನ ಮೇಲಿನ ಕೊಡಗವ ಕೊಂಬು ನುಂಗಿತ್ತು ನೋಡಾ !

ಬೀಸಿದ ಬಲೆಯು ಮತ್ಸ್ಯ ಗ್ರಾಸವ ಕೊಂಡಿತ್ತು ನೋಡಾ !
ಅರಿದಿಹೆನೆಂಬ ಅರವ, ಮರೆದಿಹೆನೆಂಬ ಮರವ ಕಳಿದುಳಿದ ಪರಿ
ಇನ್ನೆಂತೋ
ಅರಿವುದೇ ಮರವೆ, ಮರೆವುದೇ ಅರಿವು, ಅರವು-ಮರವೆಯುಳ್ಳನ್ನಕ್ಕ
ಕುರಿತು ಮಾಡುವದೇನೋ; ಕುರುಹಿಂಗೆ ನಷ್ಟ
ಆ ಕುರುಹಿನಲ್ಲಿ ಅರಿದಿಹೆನೆಂಬ ಅರಿವು ತಾನೆ ಭ್ರಮೆಆರೆಂಬುವ
ತಿಳಿದಲ್ಲಿ
ಕೂಡಿದ ಕೂಟಕ್ಕೆ ಒಳಗಿಲ್ಲ ಹೊರಗಿಲ್ಲ ನಿಷ್ಕಳಂಕ ಮಲ್ಲಿಕಾರ್ಜುನಾ.

**ಟೀಕು**:— ಸಹಸ್ರದಳ ಕಮಲ ಕರ್ಣಿಕಾಮಧ್ಯದಲ್ಲಿ ಮಹದೈಶ್ವರ್ಯ ದಿಂದೊಪ್ಪುತ್ತಿರ್ದ ಚಿದ್ಬಿಂದುವೆಂಬುದೀಗ, ಒಪ್ಪದ ಕಪ್ಪೆಯೆಂಬ ಶಬ್ದಕ್ಕರ್ಥ. ಅಂತಪ್ಪ ಪರಮ ಶಾಂತಿಯ ಚಿದ್ಬಿಂದುವೇ ಶ್ರೀಗುರು ಮುಖದಿಂದ ಇಷ್ಟಲಿಂಗ ಸ್ವರೂಪವಾಗಿ ಬಂದು ಶಂಕಾ ವಿಷಸಂಬಂಧಿಯಾದ ಜೀವನನವಗ್ರಹಿಸಿತ್ತೆಂಬು ದೀಗ, ಸರ್ಪನ ನುಂಗಿದ್ದ ಕಂಡೆನೆಂಬ ಶಬ್ದಕ್ಕರ್ಥ. ಆ ಸಕಲ ಪ್ರಪಂಚು ತೊರದ ಚಿದಾಂಶೀಕನಾದ ಜ್ಞಾನ ಕಲಾತ್ಮನು ತನಗೆ ಮಾತೃ ಸ್ಥಾನವಾದ ಚಿಚ್ಛಕ್ತಿಯ ನವಗ್ರಹಿಸಿತ್ತೆಂಬುದೀಗ, ತುಪ್ಪುಳು ಬಾರದ ಮರಿ ಹೆತ್ತ ತಾಯನುಂಗಿದ್ದ ಕಂಡೆನೆಂಬ ಶಬ್ದಕ್ಕರ್ಥ. ಆ ಚಿದಹಂಕಾರ ಸ್ವರೂಪವಾದ ಶಿವಭಾವದಲ್ಲಿರ್ಪ ಮನಸ್ಸನ್ನು ಆ ಶಿವಭಾವವೇ ಅವಗ್ರಹಿಸಿತ್ತೆಂಬುದೀಗ, ಕೊಂಬಿನಮೇಲಣ ಕೊಡಗವ ಆ ಕೊಂಬು ನುಂಗಿತ್ತು ನೋಡಾ ಎಂಬ ಶಬ್ದಕ್ಕರ್ಥ. ಭಕ್ತಿ ಪಾಶದಲ್ಲಿ ಏಕೀಕೃತವಾಗಿರ್ಪ ಪರಮಾತ್ಮನು ಸಕಲ ಪದಾರ್ಥವ ಮಹಾಘನ ಲಿಂಗ ಮುಖದಲ್ಲ ರ್ಪಿಸಿ ಲಿಂಗಭೋಗೋಪಭೋಗಿಯಾಗಿರ್ದನೆಂಬುದೀಗ, ಬೀಸಿದ ಬಲಿಯು ಮತ್ಸ್ಯಗ್ರಾಸಗೊಂಡಿತ್ತು ನೋಡಾ ಎಂಬ ಶಬ್ದಕ್ಕರ್ಥ. ಇಂತಪ್ಪ ಶಿವಾದ್ವೈತ ಭಕ್ತಿಮಾರ್ಗವನರಿಯದೆ ಲಿಂಗವ ಭಿನ್ನವಿಟ್ಟರಿಯಬೇಕೆಂಬರಿವನು ಆ ಅರಿವೆ ನಿಂದ ಮರದಿಹೆನೆಂಬ ಮರವೆಯನು ಈ ಅರಿವು ಮರವೆಯನುಳ್ಳ ಜ್ಞಾನಾಜ್ಞಾನ ದಲ್ಲಿ ಕೂಡಿರ್ಪ ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಷೋಪಚಾರಂಗಳ ಮಾಡಿ ಅರಿದೆಹೆನೆಂದೊಡೆ ಅಲ್ಲಿ ಪ್ರಯೋಜನವಿಲ್ಲವೆಂಬುದೀಗ, ಅರಿದೆಹೆನೆಂಬ ಅರಿವ, ಮರದಿಹೆನೆಂಬ ಮರೆವ ಕಳಿದುನವ ಪರಿ ಇನ್ನೆಂತೊ ಅರಿವುದೆ ಮರವೆ, ಮರೆವುದೆ ಅರವು, ಅರಿವು-ಮರವೆಯುಳ್ಳನ್ನಕ್ಕರ ಕುರಿತು ಮಾಡುವದೇನೋ ಎಂಬ ಶಬ್ದಕ್ಕರ್ಥ. ತನ್ನ ನಿಜ ಸ್ವರೂಪವನರಿಯದೆ ಎರಡಿಟ್ಟು ಲಿಂಗಕ್ಕೆ ಕ್ರಿಯಾ ಮಾಡಿದೊಡೆ ಮುಕ್ತಿ ಘಟಿಸಿತೆಂಬುದೀಗ, ಕುರುಹಿಂಗೆ ನಷ್ಟವೆಂಬ ಶಬ್ದಕ್ಕರ್ಥ. ಆ ಲಿಂಗವ ಭಿನ್ನವಿಟ್ಟು ಭಾವಿಸಿ ಮುಕ್ತಿಯ ಪಡದಿಹೆನೆಂಬುದೆಲ್ಲವು ಮಾಯಾ ಭ್ರಾಂತೆಂಬುದೀಗ, ಆ ಕುರುಹಿನಲ್ಲಿ ಅರಿದಿಹೆನೆಂಬ ಅರಿವು ತಾನೆ ಭ್ರಮೆಯೆಂಬ ಶಬ್ದಕ್ಕರ್ಥ. ತಾನಾರೆಂಬ ವಿವೇಕವು ತನ್ನಲ್ಲಿ ತಲೆದೋರಿ ಲಿಂಗಾಂಗ ಸಂಬಂಧ ಘಟಿಸಿದ ಶರಣನು ಭಿನ್ನಕ್ರಿಯಾ ನಾಚರಿಸಿ ಫಲಪದಂಗಳಿಗೊಳಗಾಗದೆ ಮಹಾ

ಘನ ಲಿಂಗಪದದಲ್ಲಿ ಭಿನ್ನವಿಲ್ಲದೆ ಅವಿರಳ ಸಂಬಂಧಿಯಾಗಿರುತ್ತಿಹನೆಂಬುದೀಗ, ಆರೆಂಬುದ ತಿಳಿದಲ್ಲಿ ಕೂಡಿದ ಕೂಟಕ್ಕೆ ಒಳಗಲ್ಲ–ಹೊರಗಲ್ಲ ನಿಷ್ಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೧೧

ಧರೆಯ ಮೇಲಣ ಮರದಲ್ಲಿ ಹಿರಿದಹ ಕೊಂಬಿನ ತುದಿಯಲ್ಲಿ
ಅರಿ ಬಿದಿರಿನ ಪಕ್ಷಿ ಬಂದಿತ್ತು ನೋಡಾ !
ಆ ಪಕ್ಷಿಯ ವರ್ಣ ಹಾರುವ ರಟ್ಟೆ ಕೆಂಪು ತೋರಿಹ ರಟ್ಟೆ ಕಪ್ಪು
ಮೀರಿಹ ರಟ್ಟೆಯ ತುತ್ತ ತುದಿಯಲ್ಲಿ ನಾನಾ ವರ್ಣದ ಬಣ್ಣ—
ಆ ಹಕ್ಕಿಯುಗಳದಲ್ಲಿ ಹೇಮವರ್ಣ, ಆ ಹಕ್ಕಿಯ ತುದಿಯಲ್ಲಿ ಧವಳವರ್ಣ
ಆ ಹಕ್ಕಿಯ ಹಾರುವ ರಟ್ಟೆಯ ಕಳದು ತೋರಿಹ ರಟ್ಟೆಯ ಮುರಿದು
ಮೀರಿಹ ರಟ್ಟೆ ಬೆಂದು ಕೊರಳಿನ ಹಳದಿ
ಕೊಕ್ಕಿನ ಬೆಳುಪು ನಿಷ್ಪತಿಯಾಗಿ ನಿಷ್ಕಳಂಕ ಮಲ್ಲಿಕಾರ್ಜುನ ಸತ್ತನೂ.

ಟೀಕು:— ಚಿತ್‌ಸ್ವರೂಪನಾದ ಶರಣನಾಚಾರಾಂಗದ ಚಿತ್ ಪ್ರಕಾಶದ ಮಧ್ಯದಲ್ಲಿ ಸದ್ವಿವೇಕ ವೃಕ್ಷ ಹುಟ್ಟಿತ್ತೆಂಬುದೀಗ, ಧರೆಯ ಮೇಲಣ ಮರದಲ್ಲಿ ಎಂಬ ಶಬ್ದಕ್ಕರ್ಥ. ಅತ್ಯಂತವಾದಹಂಕಾರದಗ್ರದಲ್ಲೆಂಬುದೀಗ, ಹಿರಿದಹ ಕೊಂಬಿನ ತುದಿಯಲ್ಲಿ ಎಂಬ ಶಬ್ದಕ್ಕರ್ಥ. ಆ ಚಿದಹಂಕಾರದಲ್ಲಿ ಅತ್ಯಂತ ಸಾಮರ್ಥ್ಯವನುಳ್ಳ ಪರಮಾತ್ಮನೆಂಬ ಪಕ್ಷಿ ಆ ಭಕ್ತಿಯೆಂಬ ಚಿದಹಂಕಾರದಲ್ಲೊಪ್ಪುತ್ತಿಹುದೆಂಬುದೀಗ, ಅರಿಬಿದಿರಿನ ಪಕ್ಷಿ ಬಂದಿತ್ತು ನೋಡಾ ಎಂಬ ಶಬ್ದಕ್ಕರ್ಥ. ಅಂತಪ್ಪ ಪರಮಾತ್ಮ ಸ್ವರೂಪನಾದ ಶರಣ ಇಷ್ಟಲಿಂಗದಲ್ಲಾಚರಿಸುವ ಅಭಿನ್ನ ಕ್ರಿಯಾಚಾರವೆಂಬುದೀಗ, ಆ ಪಕ್ಷಿಯ ವರ್ಣ ಹಾರುವ ರಟ್ಟೆ ಕೆಂಪು ಎಂಬ ಶಬ್ದಕ್ಕರ್ಥ. ಚೈತನ್ಯ ಸ್ವರೂಪವಾದ ಪ್ರಾಣಲಿಂಗ ವಿಡಿದಾಚರಿಸುವ ಅಭಿನ್ನ ಕ್ರಿಯಾಜ್ಞಾನವೆಂಬುದೀಗ, ತೋರಿಹ ರಟ್ಟೆ ಕಪ್ಪು ಎಂಬ ಶಬ್ದಕ್ಕರ್ಥ. ಅಖಂಡ ಪರಿಪೂರ್ಣ ತೃಪ್ತಿಲಿಂಗ ಸಂಬಂಧವಾದ ಭಾವಾಚರಣೆಯ ನಾನಾಸ್ಥಲ ಕುಳಂಗಳನೊಳಕೊಂಡು ಪ್ರಕಾಶಿಸುತ್ತಿಹುದೆಂಬುದೀಗ, ಮೀರಿಹ ರಟ್ಟೆಯ ತುತ್ತ ತುದಿ ನಾನಾ ವರ್ಣದ ಬಣ್ಣವೆಂಬ ಶಬ್ದಕ್ಕರ್ಥ, ಅಂತಪ್ಪ ಪರಮಾತ್ಮನ ದೃಢ ಕಂಠ ಚಿತ್‌ಪ್ರಕಾಶವಾಗಿಹುದೆಂಬುದೀಗ. ಆ ಪಕ್ಷಿಯುಗಳದಲ್ಲಿ ಹೇಮವರ್ಣವೆಂಬ ಶಬ್ದಕ್ಕರ್ಥ. ಆ ಪರಮಾತ್ಮನ ಶಿವಭಾವವು ಮಲಕ್ರಿಯಂಗಳು ಹೊದ್ದದೆ ನಿರ್ಮಲ ಸ್ವರೂಪವಾಗಿಹುದೆಂಬುದೀಗ, ಆ ಪಕ್ಷಿಯ ತುದಿಯಲ್ಲಿ ಧವಳವರ್ಣವೆಂಬ ಶಬ್ದಕ್ಕರ್ಥ. ಇಂತಪ್ಪ ಶರಣನ ಅಭಿನ್ನ ಕ್ರಿಯಾಚಾರವು ಇಷ್ಟಲಿಂಗದಲ್ಲಿ ಏಕಾರ್ಥವಾಗಿ ಅರಿವಿನಾಚರಣೆಯ ಪ್ರಾಣಲಿಂಗದಲ್ಲಿ ಸಮರಸವಾಗಿ ಭಾವಾಚರಣೆಯು ತೃಪ್ತಿಲಿಂಗದಲ್ಲಿ ನಿಷ್ಪತಿಯಾಗಿ ಆ ದೃಢಕಂಠದಲ್ಲಿ ಸಂಬಂಧವಾದ ಚಿತ್ ಪ್ರಕಾಶವು

ಪರವಸ್ತುವಿಕಲ್ಲಿ ಸಮರಸೈಕ್ಯವಾಗಲು ಆ ಶಿವಭಾವವು ಚಿದ್ಘನಲಿಂಗದಲ್ಲಿ ಏಕಾರ್ಥವಾಯಿತ್ತೆಂಬುದೀಗ, ಆ ಹಕ್ಕಿಯು ಹಾರುವ ರಟ್ಟೆಯು ಕಳದು ತೋರಿದ ಬಟ್ಟೆಯು ಮುರಿದು, ಮೀರಿದ ರಟ್ಟೆ ಬೆಂದು ಕೊರಳಿನ ಹಳದಿ ಕೊಕ್ಕಿನ ಬೆಳುಪು ನಿಷ್ಪತಿಯಾಗಿ ನಿಷ್ಕಳಂಕ ಮಲ್ಲಿಕಾರ್ಜುನ ಸತ್ತನೂ ಎಂಬ ಶಬ್ದಕ್ಕರ್ಥ.

೧೨

ತಲೆಯಿಲ್ಲದ ಹಾವುಕಚ್ಚಿ ವಿಷ ಹತ್ತುವದಕ್ಕೆ ಮೊದಲೆ ಜೀವ ಸತ್ತಿತ್ತು
ಜೀವ ಬಿದ್ದು ಘಟದ ಬಂಧುಗಳೆಲ್ಲರು ಕೂಡಿ ಶೋಕವ ಮಾಡುತ್ತಿದ್ದರು
ಅವರೊಳಗೊಬ್ಬ ನಗುತ್ತಿದ್ದ, ನಗುವನ ಕಂಡು ಒಬ್ಬ ಹೆಣನ ಬಾಯ ಹೊಯ್ದ
ಐವರ ಮೂಗ ಕೊಯ್ದು ಐವತ್ತಿಬ್ಬರ ನಾಲಗೆಯ ಕಿತ್ತು
ಕೀಳುವದ ಕಂಡಂಜಿ ಹದಿನಾರು ಮಂದಿ ಹಳು ಹಾದರು
ಎಂಟು ಬಂಟರು ಕಂಠಕ ನಾಶವಾದರು ಇಪ್ಪತ್ತೈದು ಮಂದಿ ಸೊಪ್ಪಡಗಿದರು
ಇವರೆಲ್ಲರೂ ಕಳವನ್ನಕ್ಕರ ಕತ್ತಲೆ ಹರಿದು ಬೆಳಗಾಯಿತ್ತು
ಅಂಗೈಯೊಳಡಗಿದ ಬರಿಯ ಕಂಗಳಿಗೆ ತಂದೆ ಕಂಗಳು ನುಂಗಿ ಹಿಂಗದಿರ್ದೆ
ನೀ ಸತ್ತೆ, ನಾ ನಾಯೆ; ಸಾಯುವರ ಕಂಡು ಸಾವಧಾನಿಯಾಗಿರ್ದೆ ನಯ್ಯ
ಆದ ಮತ್ತೆ ಆದೆಹೆ ಆಗೆನೆಂಬುದಿಲ್ಲ ನಿಷ್ಕಳಂಕ ಮಲ್ಲಿಕಾರ್ಜುನ ಏನೆಂದೆನಲಿಲ್ಲವಾಗಿ.

**ಟೀಕು:**— ತಲೆ ಎಂದೊಡೆ ಸುಜ್ಞಾನ ಪ್ರಕಾಶ. ಅಂತಪ್ಪ ಸುಜ್ಞಾನವಿಲ್ಲದ ಅಜ್ಞಾನ ಸ್ವರೂಪವಾದ ಮನಸ್ಸೆಂಬುದೀಗ, ತಲೆ ಇಲ್ಲದ ಹಾವು ಎಂಬ ಶಬ್ದಕ್ಕರ್ಥ. ಅಂತಪ್ಪ ಶಂಕಾ ವಿಷಸಂದಂಧವಾದ ಮನಸ್ಸು ಜೀವನನವಗ್ರಹಿಸಲೊಡನೆ ಆ ಜೀವನ ಸುಜ್ಞಾನ ನಷ್ಟವಾಗಿ ಜೀವನ್ಮೃತವಾಗಿರ್ದನೆಂಬುದೀಗ, ಕಚ್ಚಿ ವಿಷಹತ್ತುವದಕ್ಕೆ ಮೊದಲೆ ಜೀವ ಸತ್ತಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಶಿವಜ್ಞಾನ ನಷ್ಟವಾಗಿ ಅಜ್ಞಾನಿಯಾಗಿರ್ದಲ್ಲಿ ಆ ದೇಹಸಂಬಂಧವಾದ ಸಕಲ ಕರಣಂಗಳೆಲ್ಲ ದುಃಖಜೀವಿಗಳಾಗಿರ್ದರೆಂಬುದೀಗ, ಜೀವ ಬಿದ್ದು ಘಟದ ಬಂಧುಗಳೆಲ್ಲರೂ ಕೂಡಿ ಶೋಕವ ಮಾಡುತ್ತಿದ್ದರು ಎಂಬ ಶಬ್ದಕ್ಕರ್ಥ. ಅಂತು ದುಃಖಜೀವಿಗಳಾಗಿರ್ದಲ್ಲಿ ಅಂತರಾತ್ಮನ ಸದ್ವಿವೇಕ ಮುಖದಿಂದ ಆ ಜೀವನ ವರ್ತನೆಯ ಪರಮ ಹರುಷವದಿಂ ಹಾಸ್ಯವ ಮಾಡುತ್ತಿರ್ದನೆಂಬುದೀಗ, ಅವರೊಳಗೊಬ್ಬ ನಗುತ್ತಿರ್ದನೆಂಬ ಎಂಬ ಶಬ್ದಕ್ಕರ್ಥ. ಅಂತರಾತ್ಮನ ವಿವೇಕದಿಂ

ಪರಮಾತ್ಮನೆಚ್ಚತ್ತು ನೋಡಿ ಆ ಜೀವನ್ಮೃತ ಪಿಂಡದ ಭಿನ್ನಾಪೇಕ್ಷೆಯ ನಿವೃತ್ತಿ
ಮಾಡಿದನೆಂಬುದೀಗ, ನಗುವದ ಕಂಡು ಒಬ್ಬ ಹೆಣನ ಬಾಯ ಹೊಯಿದನೆಂಬ
ಶಬ್ದಕ್ಕರ್ಥ. ಪಂಚಭೂತಂಗಳ ದೇಹಾಭಿಮಾನವನು ಸುಜ್ಞಾನ ಮುಖದಿಂ
ಛೇದಿಸಿದ ಐವರ ಮೂಗು ಕೊಯ್ದು ಎಂಬ ಶಬ್ದಕ್ಕರ್ಥ. ಷಡಾಧಾರ ಚಕ್ರಂ
ಗಳಲ್ಲಿರ್ಪ ಐವತ್ತೆರಡು ಜೀವನಾಕ್ಷರಂಗಳ ಭಿನ್ನಾಪೇಕ್ಷೆಯ ಶಿವಜ್ಞಾನ ಪ್ರಕಾಶದಿಂ
ನಿವೃತ್ತಿ ಮಾಡಿದನೆಂಬುದೀಗ, ಐವತ್ತಿಬ್ಬರ ನಾಲಗೆಯ ಕಿತ್ತು ಎಂಬ ಶಬ್ದಕ್ಕರ್ಥ.
ಆ ಜೀವನಾಕ್ಷರಂಗಳು ನಿವೃತ್ತಿಯಾಗಲು ಶಿವಜ್ಞಾನ ಪ್ರಕಾಶದಿಂದ ಅಂತರಂಗದ
ಅಷ್ಟಮದ-ಬಹಿರಂಗದ ಅಷ್ಟಮದಂಗಳು ಸಕಲ ಪ್ರಪಂಚಿನೊಳೊಡನೆ ನಷ್ಟವಾಗಿ
ಹೋದವೆಂಬುದೀಗ, ಎಂಟು ಬಂಟರು ಕಂಠಕ ನಾಶವಾದರು ಎಂಬ ಶಬ್ದಕ್ಕರ್ಥ.
ಅಂತಪ್ಪ ಅಷ್ಟ ತನು ನಾಶವಾಗಲು ಉತ್ಪತ್ಯಕ್ಕೆ ಕಾರಣವಾದ ಅಷ್ಟತನುಗಳ
ಕಂಠಕಾದಿಗಳೆಲ್ಲ ನಾಸ್ತಿಯಾದವೆಂಬುದೀಗ, ಎಂಟು ಬಂಟರು ಕಂಠಕ ನಾಶವಾ
ದರು ಎಂಬ ಶಬ್ದಕ್ಕರ್ಥ. ಅಂತಪ್ಪ ಅಷ್ಟ ತನು ನಾಶವಾಗಲು ಆತ್ಮನಿಗಂಗವಾದ
ಇಪ್ಪತ್ತೈದು ತತ್ವಂಗಳು ನಷ್ಟವಾದವೆಂಬುದೀಗ, ಇಪ್ಪತ್ತೈದು ಮಂದಿ ತೊಪ್ಪಡ
ಗಿದರು ಎಂಬ ಶಬ್ದಕ್ಕರ್ಥ. ಅಂತಪ್ಪ ಸಕಲ ತತ್ವಂಗಳೆಲ್ಲವೂ ನಿವೃತ್ತಿಯಾಗಲು
ಅಜ್ಞಾನ ತಮಸ್ಸು ಹರಮ ಶಿವಜ್ಞಾನ ಪ್ರಕಾಶವಾಯಿತ್ತೆಂಬುದೀಗ, ಇವರೆಲ್ಲರ
ಕಳವನ್ನಕ್ಕರ ಕತ್ತಲೆ ಹರದು ಬೆಳಗಾಯಿತ್ತೆಂಬ ಶಬ್ದಕ್ಕರ್ಥ. ಅಂತು ಶಿವಜ್ಞಾನ
ಪ್ರಕಾಶವಾಗಲು ಷಡಕ್ಷರಿ ಮಂತ್ರ ಸ್ವರೂಪವಾದ ಪರಮ ಚಿತ್ಕಲೆಯನು
ಶ್ರೀಗುರು ಭಾವ ಮನ ದೃಕ್ಕಿಂ ಬಹಿಷ್ಕರಿಸಿ ಇಷ್ಟ ಲಿಂಗ ಸ್ವರೂಪವ ಮಾಡಿ ಇದೆ
ನಿನ್ನ ನಿಜವಪ್ಪ ಪರಬ್ರಹ್ಮವೆಂದು ಕರಸ್ಥಲದಲ್ಲಿ ಕೊಟ್ಟನೆಂಬುದೀಗ, ಅಂಗೈಯೊಳ
ಡಗಿದ ಬರಿಯ ಎಂಬ ಶಬ್ದಕ್ಕರ್ಥ. ಅಂತಪ್ಪ ಇಷ್ಟಲಿಂಗದಲ್ಲಿ ಸತ್ಕ್ರಿಯಾಚಾರ
ವಿಡಿದು ಆಚರಿಸಿದ ಶರಣನು ಇಷ್ಟಲಿಂಗದ ಚಿತ್ಕಲೆಯ ತನ್ನ ಸುಜ್ಞಾನ ದೃಷ್ಟಿ
ಯುಲ್ಲವಗ್ರಹಿಸಿ ನಿಜಾಂತರಂಗದಲ್ಲಿ ಪ್ರಾಣಲಿಂಗ ಸಾಹಿತ್ಯವ ಮಾಡಿ ಭಿನ್ನವಿಲ್ಲದೆ
ಇರ್ದನೆಂಬುದೀಗ, ಕಂಗಳಿಗೆ ತಂದೆ ಕಂಗಳು ನುಂಗಿ ಹಿಂಗದಿರ್ದನೆಂಬ ಶಬ್ದ
ಕ್ಕರ್ಥ. ಆ ಚಿದ್ರೂಪನಾದ ಶರಣನ ಕರ-ಮನ-ಭಾವಂಗಳಲ್ಲಿ ಸಂಬಂಧವಾದ
ಪರಬ್ರಹ್ಮವು ಸದ್ರೂಪವಾಗಿಹುದು ಆ ಲಿಂಗದಲ್ಲಿ ಸಮರಸವಾದ ಶರಣ, ಜನನ-
ಮರಣಂಗಳ ಜಯಿಸಿ ನಿತ್ಯನಾಗಿರ್ದನೆಂಬುದೀಗ, ನೀ ಸತ್ತೆ, ನಾ ಸಾಯೆ ಎಂಬ
ಶಬ್ದಕ್ಕರ್ಥ. ಇಂತಪ್ಪ ಪರಶಿವ ಲಿಂಗದಲ್ಲಿ ಸಮರಸೈಕ್ಯವ ನರಿಯದೆ ಮರಣ
ಬಾಧೆಗೊಳಗಾದ ದ್ವೈತಿಗಳ ಕಂಡು ಷಟ್ಸ್ಥಲಜ್ಞಾನಿ ಚೋದ್ಯಂಬಡುತ್ತಿರ್ದ
ನೆಂಬುದೀಗ, ಸಾವವರ ಕಂಡು ಎಂಬ ಶಬ್ದಕ್ಕರ್ಥ. ಅಂತಪ್ಪ ದ್ವೈತಭಾವವ
ಹೊದ್ದದೆ ಚಿದ್ಘನಲಿಂಗದಲ್ಲಿ ಸಾವಧಾನಿಯಾಗಿರ್ದನೆಂಬುದೀಗ, ಸಾವಧಾನಿ
ಯಾಗಿರ್ದೆನಯ್ಯಾ ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಂಬಂಧ ಘಟಿಸಿ
ಭಕ್ತಿಜ್ಞಾನದಿಂದಾಚರಿಸಿ ಮಹಾಘನ ಲಿಂಗದಲ್ಲಿ ಎಚ್ಚತ್ತಿಹ ಶರಣನು ಇನ್ನು
ಲಿಂಗದಲ್ಲಿ ಕೂಡಬೇಕು ಅಗಲಬೇಕು ಎಂಬ ಉಭಯ ಭಾವವಿಲ್ಲದೆ ಹೋಯಿ
ತ್ತೆಂಬುದೀಗ, ಆದ ಮತ್ತೆ ಅದೆಹೆ ಆಗೆನೆಂಬುದಿಲ್ಲ ನಿಷ್ಕಳಂಕ ಮಲ್ಲಿಕಾರ್ಜುನನ
ಏನೆಂದೂ ಏನೆನಲಿಲ್ಲವಾಗಿ ಎಂಬ ಶಬ್ದಕ್ಕರ್ಥ.

೧೩

ತ್ರಿಭುವನದಗ್ರದಲ್ಲಿ ಮೂವತ್ತಾರು ಲೋಕ, ಅದರ ಮಧ್ಯದಲ್ಲಿ—
ಇಪ್ಪತ್ತೈದು ಮಹಾ ಮೇರುವೆ, ಹದಿನಾರು ವರ್ತನದ ಕೊಂಡಿ
ಗುರು ಲಘುವೆಂಬ ತಾರಗದ ಅದಕ್ಕೆ ಅಗುಳಿ
ದಿವ ರಾತ್ರಿ ಎರಡುಂಬವೆರಡು ಅಗುಳಿಯು ಸನ್ನರ್ಧವಾಗಿ
ಬಲಿದವನ ನೋಡಾ !
ಅವನ ನಖವ ಕೊನೆಯಲ್ಲಿ ಲಕ್ಷ-ಅಲಕ್ಷವೆಂಬ, ಭೇದ-ಅಭೇದ
ವೆಂಬ,
ಜವ್ವರ-ನಿಜ್ವರವೆಂಬ, ಅಹುದಲ್ಲವೆಂಬ ಆನುಡಿಗೆ ಎಂಬ, ಚಿಂತೆ-
ಸಂತೋಷವೆಂಬ
ಕಾಂಕ್ಷೆ-ನಿಃಕಾಂಕ್ಷೆಯೆಂಬ, ಜೀವ-ಪರಮರೆಂಬ
ಇಂತಿ ದ್ವಂದಂಗಳೆಲ್ಲವು ದ್ವಾರ ಸಂಚಾರಕ್ಕವಧಿಯಾದವು
ಇವಕ್ಕಿಂದ ಮುನ್ನವೆ ಭುವನಕೆಟ್ಟಿತ್ತು, ಕೋಟೆಕೊಳು ಹೋಯಿತ್ತು
ಹಿರಿಯರಸು ಸಿಕ್ಕಿದ, ಪ್ರಧಾನನ ತಲೆ ಹೋಯಿತ್ತು
ತಳವಾರನ ಕಣ್ಣು ಕಳಯಿತ್ತು, ಎಕ್ಕಟಿಗನ ಮಕ್ಕಳೆಲ್ಲರೂ ನಷ್ಟ
ಸಂತಾನವಾದರು
ಸೃಷ್ಟಿಯೊಳಗೆಲ್ಲಾರಣಮಯವಾಗಿತ್ತು ರಣದ ಮಧ್ಯದಲೊಂದು
ವೃಕ್ಷವ ಕಂಡೆ
ಸತ್ತವನಿರ್ದ, ಇರ್ದವ ಸತ್ತು ಇವರಿಬ್ಬರ ಮಧ್ಯದಲೊಂದು
ವೃಕ್ಷವ ಕಂಡೆ, ನಿಷ್ಕಳಂಕ ಮಲ್ಲಿಕಾರ್ಜುನಾ !

**ಟೀಕು:** — ತನುತ್ರಯ ಯುಕ್ತವಾದ ಅಹಂಕಾರದಗ್ರದಲ್ಲಿ ಷಡಾಧಾರ ಚಕ್ರ, ಆ ಚಕ್ರದಲ್ಲಿ ಸೂಕ್ಷ್ಮ ರೂಪವಾದ ಮೂವತ್ತಾರು ತತ್ವಂಗಳು ತೋರುತ್ತಿಹ ವೆಂಬುದೀಗ, ತ್ರಿಭುವನದಗ್ರದಲ್ಲಿ ಮೂವತ್ತಾರು ಲೋಕವೆಂಬ ಶಬ್ದಕ್ಕರ್ಥ. ಆ ಸೂಕ್ಷ್ಮ ತತ್ವಂಗಳನೊಳಕೊಂಡ ಇಪ್ಪತ್ತೈದು ತತ್ವವ ಅಹಂಕಾರಯುಕ್ತವಾಗಿಹ ಕಾರಣ ಅದರ ಮಧ್ಯದಲ್ಲಿ ಇಪ್ಪತ್ತೈದು ಮಹಾಮೇರುವೆಯೆಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ಅಂತರಂಗದಷ್ಟಮದ-ಬಹಿರಂಗದಷ್ಟಮದಂಗಳಲ್ಲಿ ಜೀವಾತ್ಮನು ವರ್ತಿಸುತ್ತಿಹನಾಗಿ ಹದಿನಾರು ವರ್ತನದ ಕೊಂಡಿ ಎಂಬ ಶಬ್ದಕ್ಕರ್ಥ. ಇಡಪಿಂಗಳ ದ್ವಾರವೆಂಬ ಬಾಗಿಲಿಗೆ ಜ್ಞಾನಾಜ್ಞಾನವೆಂಬೆರೆಡು ಕದವಾಗಿಹವೆಂಬುದೀಗ, ಗುರು ಲಘುವೆಂಬ ತಾರಗದ ಅದಕ್ಕೆ ಅಗುಳಿ ದಿನರಾತ್ರಿಸೆಂಬೆರಡು ಅಗುಳಿಯು ಸನ್ನರ್ಧವಾಗಿ ಬಲಿಧವನನೋಡಾ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವಾತ್ಮ ಅರಿವಿನ ಗ್ರಹದಲ್ಲಿ ಲಕ್ಷವಿಟ್ಟು ತೋರುವ ಬ್ರಹ್ಮವನರಿಯದೆ ಅದು ಲಕ್ಷವೆಂದು,

ನಿರ್ಲಕ್ಷಣವೆಂದು, ಕ್ರಿಯಾ ಸ್ವರೂಪವೆಂದು, ಜ್ಞಾನಸ್ವರೂಪವೆಂದು, ಶಿವಸ್ವರೂಪವಹುದಲ್ಲವೆಂದು, ನಷ್ಟ-ತುಷ್ಟ ಎಂದು, ಚಿಂತೆ-ಸಂತೋಷವೆಂದು, ಬಯಕೆ-ಅಬಯಕೆ ಎಂದು, ಜೀವಪರಮರೆಂದು, ಇಂತಪ್ಪ ದ್ವಂದಂಗಳೆಲ್ಲವ ಉತ್ಪತ್ಯಕ್ಕೆ ಕಾರಣವಾಗಿಹವೆಂಬುದೀಗ, ಅವನ ನಖದ ಕೊನೆಯಲ್ಲಿ ಲಕ್ಷ-ಅಲಕ್ಷವೆಂಬ, ಭೇದ-ಅಭೇದವೆಂಬ, ಜ್ವರ-ನಿಜ್ವರವೆಂಬ, ಅಹುದಲ್ಲವೆಂಬ, ಆಗುಡಗೆ ಎಂಬ, ಚಿಂತೆ-ಸಂತೋಷವೆಂಬ, ಆಕಾಂಕ್ಷೆ-ನಿಃಕಾಂಕ್ಷೆಯೆಂಬ, ಜೀವ-ಪರಮರೆಂಬ ಇಂತಿ ದ್ವಂದಂಗಳೆಲ್ಲವು ದ್ವಾರ ಸಂಚಾರಕ್ಕೆ ಅವಧಿಯಾದವು ಎಂಬ ಶಬ್ದಕ್ಕರ್ಥ. ಇಂತಪ್ಪಾತ್ಮಂಗೆ ಶಿವಜ್ಞಾನೋದಯವಾದಾಕ್ಷಣವೆ ಶ್ರೀಗುರು ಕಾರುಣ್ಯದಿಂದ ಜ್ಞಾನ ಕಲಾತ್ಮನ ಸರ್ವಾಂಗವೆಲ್ಲ ಲಿಂಗಮಯವಾಗಿ ಸಕಲಕರಣಂಗಳೆಲ್ಲ ಲಿಂಗ ತತ್ವವಾಯಿತ್ತೆಂಬುದೀಗ, ಇವಕ್ಕಿಂದ ಮುನ್ನವೆ ಭುವನ ಕೆಟ್ಟಿತ್ತು ಎಂಬ ಶಬ್ದಕ್ಕರ್ಥ. ಇಂತು ಲಿಂಗತತ್ವವಾದ ಶರಣನ ಸಕಲ ಕರಣಂಗಳೆಲ್ಲ ಅಮರಗಣತ್ವವನೆಯ್ದಿ ನಿತ್ಯ ಕರಣಂಗಳಾದುವೆಂಬುದೀಗ, ಕೋಟಿ ಕೊಳು ಹೋಯಿತ್ತು ಎಂಬ ಶಬ್ದಕ್ಕರ್ಥ. ಆ ಸರ್ವಾಚಾರ ಸಂಪನ್ನನಾದ ಶರಣನು ಆ ಚಿದ್ಘನಲಿಂಗದಲ್ಲಿ ಸಮರಸೈಕ್ಯನಾದನೆಂಬುದೀಗ, ಹಿರಿಯರಸು ಸಿಕ್ಕಿದನೆಂಬ ಶಬ್ದಕ್ಕರ್ಥ. ಅಂತು ಚಿತ್ ಸ್ವರೂಪನಾದ ಶರಣ ಚಿದ್ಘನಲಿಂಗದಲ್ಲಿ ಸಮರಸೈಕ್ಯವಾಗಲು ಮನಸ್ಸಿನ ವೃತ್ತಿಜ್ಞಾನ ಅಳಿದುಹೋಯಿತ್ತು ಸುಜ್ಞಾನ ಪ್ರಕಾಶದಿಂದಲೆಂಬುದೀಗ, ಪ್ರಧಾನನ ತಲೆ ಹೋಯಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಸುಜ್ಞಾನಪ್ರಕಾಶದಿಂದ ಟ್ಟಿತ್ತಾದ ಅಜ್ಞಾನ ನಷ್ಟವಾಯಿತ್ತೆಂಬುದೀಗ, ತಳವಾರನ ಕಣ್ಣು ಕಳೆಯಿತ್ತು ಎಂಬ ಶಬ್ದಕ್ಕರ್ಥ. ಅಂತು ಅಜ್ಞಾನ ನಷ್ಟವಾದಲ್ಲಿ ಜೀವಾತ್ಮನೊಡನೆ ಜನಿಸಿದ ಸಕಲ ಕರಣಂಗಳೆಲ್ಲ ಲಯವಾದವೆಂಬುದೀಗ, ಊಕ್ತದಿಗನ ಮಕ್ಕಳೆಲ್ಲರೂ ನಷ್ಟ ಸಂತಾನವಾದರು ಎಂಬ ಶಬ್ದಕ್ಕರ್ಥ. ಆತನು ಮಧ್ಯದಲ್ಲಿ ನಿಂದು ನೋಡಲಾಗಿ ಸಕಲಕರಣಂಗಳೆಲ್ಲ ಮೃತವಾಗಿ ಸುಜ್ಞಾನಕರಣಂಗಳಾದವೆಂಬುದೀಗ, ಸೃಷ್ಟಿಯೊಳಗೆಲ್ಲ ರಣಮಯವಾಯಿತ್ತು ಎಂಬ ಶಬ್ದಕ್ಕರ್ಥ. ಆ ಸುಜ್ಞಾನದ ಮಧ್ಯದಲ್ಲಿ ಅವಿರಳ ಜ್ಞಾನ ದೃಕ್ಕಿನಿಂ ನೋಡಲಾಗಿ ಪರಬ್ರಹ್ಮವೆಂಬ ಸದ್ವಿವೇಕವೃಕ್ಷ ತಲೆದೋರಿತ್ತೆಂಬುದೀಗ, ರಣಮಧ್ಯದಲೊಂದು ವೃಕ್ಷವ ಕಂಡೆನೆಂಬಶಬ್ದಕ್ಕರ್ಥ. ಸದ್ರೂಪವಾದ ಗುರುತತ್ವವೆ ಚಿದ್ರೂಪನಾದ ಶಿಷ್ಯನನವಗ್ರಹಿಸಿ ಗುರು-ಶಿಷ್ಯರೆಂಬ ಉಭಯವು ಪರಶಿವ ತತ್ವದಲ್ಲಿ ಬೆರಸಿ ಒಂದೇಯಾಯಿತ್ತೆಂಬುದೀಗ, ಸತ್ತವನಿರ್ದ, ಇರ್ದವ ಸತ್ತ ಎಂಬ ಶಬ್ದಕ್ಕರ್ಥ. ಆ ಗುರುಶಿಷ್ಯರ ಸಮರಸದ ಮಧ್ಯದಲ್ಲಿ ಪರಬ್ರಹ್ಮವೃಕ್ಷ ತೋರುತ್ತಿಹುದು ಚಿದ್ರೂಪನಾದ ಶರಣ ಅಖಂಡ ಜ್ಞಾನದೃಕ್ಕಿಂದ ಕಂಡನೆಂಬುದೀಗ, ಇವರಿಬ್ಬರ ಮಧ್ಯದಲೊಂದು ವೃಕ್ಷವ ಕಂಡೆ ನಿಷ್ಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೧೪

ಊರೊಳಗಣ ಉಡು ಕೇರಿಯ ನುಂಗಿತ್ತು,
ಜೆಗಟೆದೊಳಗಣ ಧ್ವನಿ ಅಜೆಗಟೆವ ನುಂಗಿತ್ತು,
ಸಾರ ಬಂದ ಧೀರನ ಬಾರಿಕಕೊಂದ, ನಾಡು ಹಾಳಾಯಿತ್ತು

ಪಟ್ಟಣ ಸೂರೆಹೋಯಿತ್ತು, ಕಟ್ಟರಸು ಸಿಕ್ಕಿದ ಪ್ರಧಾನ ತಪ್ಪಿದ,
ಎಕ್ಕಟಿಗನ ಮಕ್ಕಳು ಕೆಟ್ಟೋಡಿದರು,
ತಪ್ಪಿದ ಪ್ರಧಾನ ಒಬ್ಬ ಬಿಟ್ಟ ರಾಜ್ಯವ ಸಿಕ್ಕಿದರಸ ಬಿಡಿಸಿ
ಎಕ್ಕಡಿಗನ ಮಕ್ಕಳ ಸಂತೈಸಿ ಹರಿಯುರಸನ ಕೈಸೆರೆಯ ಬಿಡಿಸಿ
ತಾ ಕೈಯೊಳಗಾಗಿ ಕೆಟ್ಟ, ಪ್ರಧಾನಿ ಸಿಕ್ಕದೆ ಕೆಟ್ಟ ಅರಸು
ಇವರೆಲ್ಲರು ಕೆಟ್ಟ ಕೇಡ ನೋಡಿ ತಪ್ಪಿದೆನಯ್ಯಾ !
ಈ ಮಾಟದ ಕೂಟದ ಹೊರಟೆಗಂಜಿ ಬಿರಿದಿನದ ಬಿಟ್ಟ ಮೇಲೆ
ಅಲಗಿನ ಹಂಗೇಕೆ? ನಾಡಬಿಟ್ಟು ತೊಲಗಿದವಂಗೆ,
ಒಂದೂರ ಸುದ್ದಿ ಏಕೆ, ನಿಷ್ಕಳಂಕ ಮಲ್ಲಿಕಾರ್ಜುನಾ ?

**ಟೀಕು:**—ಚಿದ್ರೂಪನಾದ ಶರಣನ ನಿಜಾಂತರಂಗದಲ್ಲುದಯವಾದ ಸೂಕ್ಷ್ಮವಾದ ಸಮ್ಯಜ್ಞಾನ ಪ್ರಕಾಶವು ಅಷ್ಟತನುವಿಧಗಳನವಗ್ರಹಿಸಿತ್ತೆಂಬುದೀಗ, ಊರೊಳಗಣ ಉಡು ಕೇರಿಯ ನುಂಗಿತ್ತು ಎಂಬ ಶಬ್ದಕ್ಕರ್ಥ. ಅಜ್ಞಾನಸಂಬಂಧವಾದ ದೇಹದ ಮಧ್ಯದಲ್ಲಿ ಹುಟ್ಟಿದ ಶಿವೋಹಂ-ಶಿವೋಹಂ ಎಂಬ ಕ್ರಿರೂಪ ನಾದವು ಆ ದೇಹವನವಗ್ರಹಿಸಿತ್ತೆಂಬುದೀಗ, ಜಗಟೆಯೊಳಗಣ ಧ್ವನಿ ಆ ಜಗಟೆಯ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಪ್ರಣವ ನಾದವೆ ಅಂಗವಾಗಿರ್ದ ಶರಣನ ಮಹಾನುಭಾವಾಂತರಂಗದ ಜ್ಞಾನ ಗುರುವೆ ಕ್ರಿಯಾಘನ ಗುರು ಸ್ವರೂಪವಾಗಿ ಬಂದು ತನು-ಮನ-ಧನವ, ಗುರು-ಲಿಂಗಜಂಗಮಕ್ಕೆ ಸಮರ್ಪಿಸಿ ತ್ರಿವಿಧ ಪ್ರಸಾದವ ಸ್ವೀಕರಿಸಿ ನಿಜದಲ್ಲಿ ಸಮರಸೈಕ್ಯವನೆಯ್ದು ಎಂದು ಸುಜ್ಞಾನಬೋಧೆಯ ಬೋಧಿಸುತ್ತಿರ್ದನೆಂಬುದೀಗ, ಸಾರಬಂದ ಧೀರನ ಎಂಬ ಶಬ್ದಕ್ಕರ್ಥ. ಅಂತು ದೇಹ ಸಂಬಂಧಿಯಾಗಿರ್ದ ಜೀವಂಗೆ ಶಿವಜ್ಞಾನ ತಲೆದೋರಿ ಆ ಶ್ರೀಗುರುತತ್ವವನವಗ್ರಹಿಸಿದನೆಂಬುದೀಗ, ಸಾರಬಂದ ಧೀರನ ಬಾರಿಕ ಕೊಂಡನೆಂಬ ಶಬ್ದಕ್ಕರ್ಥ. ಆ ಸಜ್ಜೀವರು ಗುರುತತ್ವರದಲ್ಲಿ ಸಮರಸವಾಗಲು ಸಕಲ ಕರಣಂಗಳ ಶಬ್ದ ಜಾಲಂಗಳಡಗಿ ನಿಃಶಬ್ದವಾಗಲು ಕಾಯಪುರವೆಂಬ ಪಟ್ಟಣದ ಸಕಲ ತತ್ವ ಕರಣಂಗಳೆಲ್ಲವು ಅಮರಗಣತ್ವವನೆಯ್ದಿ ಚಿದ್ಘನಲಿಂಗದಲ್ಲಿ ಬೆರಸಿದ ಶರಣಂಗೆ ತತ್ವಭಾವವಡಗಿತ್ತೆಂಬುದೀಗ, ನಾಡು ಹಾಳಾಯಿತ್ತು ಪಟ್ಟಣ ಸೂರೆಹೋಯಿತ್ತೆಂಬ ಶಬ್ದಕ್ಕರ್ಥ. ಕಟ್ಟರಸೆಂದೊಡೆ ಪರಮಾತ್ಮನು. ಅಂತಪ್ಪ ಪರಮಾತ್ಮನು ಭಾವಲಿಂಗದಲ್ಲೇಕಾರ್ಥವಾದನೆಂಬುದೀಗ, ಕಟ್ಟರಸು ಸಿಕ್ಕಿದನೆಂಬ ಶಬ್ದಕ್ಕರ್ಥ. ಅಂತು ಪರಮಾತ್ಮನು ಲಿಂಗದಲ್ಲಿ ಏಕಾರ್ಥವಾಗಲು ಆ ಸದ್ವಿವೇಕ ಸ್ವರೂಪವಾದ ಮನಸ್ಸು ಸಕಲ ಪ್ರಪಂಚಿಗೆ ವಿಲಕ್ಷಣವಾಯಿತ್ತೆಂಬುದೀಗ, ಪ್ರಧಾನ ತಪ್ಪಿದನೆಂಬ ಶಬ್ದಕ್ಕರ್ಥ. ಜೀವಾತ್ಮನಿಂದ ಉದಯಿಸಿದ ವಿಶ್ವ-ತೈಜಸ-ಪ್ರಾಜ್ಞರೆಂಬ ಜೀವತ್ರಯಂಗಳ ತ್ರಿವಿಧಾವಸ್ಥೆಯ ದುಶ್ಚರಿತ್ರ ಕೆಟ್ಟಿತ್ತೆಂಬುದೀಗ, ಎಕ್ಕಟಿಗನ ಮಕ್ಕಳು ಕೆಟ್ಟೋಡಿದರು ಎಂಬ ಶಬ್ದಕ್ಕರ್ಥ. ಸಕಲ ಪ್ರಪಂಚಿಗೆ ವಿಲಕ್ಷಣವಾದ ಮನಸ್ಸು ಸರ್ವಾಂಗವನು ಶಿವಭಾವದಿಂ ಲಿಂಗದಲ್ಲಿ ಏಕಾರ್ಥವ ಮಾಡಿತ್ತೆಂಬು

ದೀಗ, ತಪ್ಪಿದ ಪ್ರಧಾನ ಒಬ್ಬವಿಟ್ಟರಾಜ್ಯವವೆಂಬ ಶಬ್ದಕ್ಕರ್ಥ. ಸರ್ವಾಚಾರ ಸಂಪತ್ತಿನಲ್ಲಿ ಸಿಲ್ಕಿಕ್ರಿಯೆ ಪರವಾಗಿ ಆಚರಿಸುವ ಶರಣಂಗೆ ಆ ಮನಸ್ಸು ಸದ್ವಿವೇಕ ಮುಖದಿಂ ಶಿವಜ್ಞಾನವ ಪ್ರಭಾವಿಸಿ ಕೊಟ್ಟು ಮೀರಿದ ಕ್ರಿಯಾಚಾರದಲ್ಲಿ ನಿಲಿಸಿತ್ತೆಂಬುದೀಗ, ಸಿಕ್ಕಿದರಸ ಎಂಬ ಶಬ್ದಕ್ಕರ್ಥ. ಆ ಶಿವಭಾವ ಘಟಿಸಿದ ಸಜ್ಜೀವನು ಸಕಲಕರಣಂಗಳ ಸುಜ್ಞಾನ ಮುಖದಿಂ ಸಂತೈಸಿ ಚಿದ್ಘನಲಿಂಗದಲ್ಲಿ ಒಡಗೂಡುತ್ತಿಹುದೆಂಬುದೀಗ, ಎಕ್ಕಟಿಗನ ಮಕ್ಕಳ ಸಂತೈಸಿ ಎಂಬ ಶಬ್ದಕ್ಕರ್ಥ. ಸದ್ಭಾವ ಸನ್ನಹಿತವಾದ ಪರಮಾತ್ಮನು ಮಹಾಘನಲಿಂಗದಲ್ಲಿ ಸಮರಸೈಕ್ಯದ ಭೇದವನರುಹಿ ಕೊಟ್ಟಿತ್ತು ಮನಸ್ಸೆಂಬುದೀಗ, ಹಿರಿಯರಸನ ಕೈಸೆರೆಯ ಬಿಡಿಸಿ ಎಂಬ ಶಬ್ದಕ್ಕರ್ಥ. ಆ ಉನ್ಮನಿ ತತ್ವಸ್ವರೂಪವಾದ ಮನಸ್ಸು ಸದ್ಭಾವ ಲಿಂಗದಲ್ಲಿ ಸಮರಸವನೆಯ್ದಿ ನಿಷ್ಪತ್ತಿಯಾಯಿತ್ತೆಂಬುದೀಗ, ತಾ ಕೈಯೊಳಗಾಗಿ ಕೆಟ್ಟ ಪ್ರಧಾನಿ ಎಂಬ ಶಬ್ದಕ್ಕರ್ಥ. ಅಂತು ಲಿಂಗದಲ್ಲಿ ಸಮರಸವಾಗಿರ್ದ ಶರಣನು ಭಿನ್ನಕ್ರಿಯಾಚಾರ ಮೊದಲಾದ ಸಕಲ ಪ್ರಪಂಚಿಗೆ ಸಿಲ್ಕದೆ ಚಿದ್ಘನಲಿಂಗದಲ್ಲಿ ತದ್ಗತವಾದನೆಂಬುದೀಗ, ಸಿಕ್ಕಿದೆ ಕೆಟ್ಟ ಅರಸು ಎಂಬ ಶಬ್ದಕ್ಕರ್ಥ. ಸರ್ವಾಚಾರ ಸಂಪತ್ತು ವಿಡಿದಾಚರಿಸುತ್ತಿರ್ದ ಶರಣನ ಸಕಲ ತತ್ವ ಕರಣಂಗಳೆಲ್ಲವೂ ಲಿಂಗತತ್ವವಾಗಿ ಸಮರಸೈಕ್ಯವಾದ ಭೇದವ ಸುಜ್ಞಾನ ದೃಷ್ಟಿಯಿಂ ಕಂಡು ಎರಡಿಟ್ಟು ಮಾಡುವ ತ್ರಿವಿಧ ಭಕ್ತಿಗಳಿಂ ಫಲಪದಂಗಳು ಉಂಟೆಂದು ಅರಿದು ಅದ ನಿವೃತ್ತಿ ಮಾಡಿದನೆಂಬುದೀಗ, ಇವರೆಲ್ಲರೂ ಕೆಟ್ಟ ಕೇಡ ನೋಡಿ ತಪ್ಪಿದೆನಯ್ಯ ಎಂಬ ಶಬ್ದಕ್ಕರ್ಥ. ಬಿರಿದಬಿಟ್ಟ ಭಟ್ಟಂಗಿ ಅಲಗ ಹಿಡಿದು ಕಾದಲಿಲ್ಲದ ಹಾಗೆ ನಾಡಬಿಟ್ಟವಂಗೆ ಒಂದೂರ ಸುದ್ದಿಯು ಕೇಳಲಿಲ್ಲವೆಂಬ ದೃಷ್ಟಾಂತರದಂತೆ ಕ್ರಿಯಾಚಾರ ನಿಷ್ಪತ್ತಿಯಾದ ಶರಣನು ಮುಂದೆ ಕ್ರಿಯಾಚಾರವಿಡಿದು ಆಚರಿಸಲಿಲ್ಲವೆಂಬುದೀಗ, ಈ ಮಾಟ ಕೂಟದ ಹೊರಟೆಗಂಜಿ ಬಿರಿದಬಿಟ್ಟಮೇಲೆ ಅಲಗಿನ ಹಂಗೇಕೆ, ನಾಡ ಬಿಟ್ಟು ತೊಲಗಿದವರಿಗೆ ಒಂದೂರ ಸುದ್ದಿ ಏಕೆ ನಿಷ್ಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೧೫

ಈರೇಳು ಲೋಕವ ಕೊಡಗ ನುಂಗಿದ್ದ ಕಂಡೆ
ನುಂಗಿದ ಕೊಡಗವ ಗುಂಗುರು ನುಂಗಿತ್ತು—
ಗುಂಗುರು ಬಂದು ಕಣ್ಣ ಕಾಡಲಾಗಿ, ಕಣ್ಣಿನ ಕಾಡಿಗೆ ಅಳಿಯಲಾಗಿ
ಕಣ್ಣಿನ ಬಣ್ಣ ಕೆಟ್ಟಿತ್ತು; ಕಣ್ಣಿನ ಒಡೆಯ ನೋಡಿ ಆ ಗುಂಗುರ ಮರಸಲಾಗಿ
ಆ ಗುಂಗುರು ಸತ್ತು ಕೊಡಗ ಉಳಿಯಿತ್ತು
ಆ ಕೊಡಗವ ನಾಡಿಸಿ ಕೊಂಬುಂಡ ಜೋಗಿಗಳಿಕೇಕೆ
ಆರೂಢನ ಸುದ್ದಿ ನಿಷ್ಕಳಂಕ ಮಲ್ಲಿಕಾರ್ಜುನಾ !

**ಟೀಕು:**— ಪ್ರಪಂಚು ರೂಪವಾದ ಮನಸ್ಸು ಚತುರ್ದಶ ಭುವನಂಗಳಲ್ಲಿ ವ್ಯಾಪ್ತಿಯನೆಯ್ದಿರುತ್ತಿಹುದೆಂಬುದೀಗ, ಈರೇಳು ಲೋಕವ ಕೊಡಗ ನುಂಗಿದ್ದ

ಕಂಡೆನೆಂಬ ಶಬ್ದಕ್ಕರ್ಥ. ಆ ಪ್ರಪಂಚು ಬ್ರಹ್ಮಾಂಡವನೊಳಕೊಂಡಿರ್ದ ಮ ಸ್ಸನು ಅತಿ ಸೂಕ್ಷ್ಮವಾದ ಮಾಯೆಯುವಗ್ರಹಿಸಿತ್ತೆಂಬುದೀಗ, ನುಂಗಿದ ಕೊಡಗ ಗುಂಗುರು ನುಂಗಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಸೂಕ್ಷ್ಮವಾದ ಮಾಯೆ ಅಜ್ಞಾನ ಸ್ವರೂಪವಾಗಿ ಬಂದು ಆತ್ಮನ ಸುಜ್ಞಾನ ದೃಷ್ಟಿಯನವಗ್ರಹಿಸಲು ಶಿವಜ್ಞಾನ ಪ್ರಕಾಶವ ನಷ್ಟವಾಗಿ ಮರವೆಯು ನೆಯ್ದಿತ್ತೆಂಬುದೀಗ, ಗುಂಗುರು ಬಂದು ಕಂಣ ಕಾಡಲಾಗಿ ಕಣ್ಣಿನ ಕಾಡಿಗೆ ಅಳಿಯಲಾಗಿ ಕಣ್ಣಿನ ಬಣ್ಣ ಕೆಟ್ಟಿತ್ತೆಂಬ ಶಬ್ದಕ್ಕರ್ಥ. ಆ ಸುಜ್ಞಾನಕ್ಕೆ ಕರ್ತೃವಾದ ಜ್ಞಾನ ಕಲಾತ್ಮನು ತನ್ನ ನಿಜವನೆಚ್ಚತ್ತು ನೋಡಲು ಆ ಮಾಯೆ ಅಳಿಯಿತ್ತೆಂಬುದೀಗ, ಕಣ್ಣಿನ ಒಡೆಯ ನೋಡಿ ಆ ಗುಂಗುರ ಒರಸಲಾಗಿ ಆ ಗುಂಗುರು ಸತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆ ನಿವೃತ್ತಿಯಾದಲ್ಲಿ ಮನೋ ವರ್ತನೆಯು ನಿವೃತ್ತಿಯು ಮಾಡಲರಿಯದೆ ಮನೋ ವರ್ತನೆಯನುಂಟು ಮಾಡಿಕೊಂಡು ಜೀವರೆನಿಸಿ ಆಶಾಲಾಂಛನವ ತೊಟ್ಟು ದೇಹೇಂದ್ರಿಯ ವಿಷಯ ಸುಖವನನುಭವಿಸುತ್ತಿರ್ದ ಖಂಡಿತ ಜ್ಞಾನಿಗಳೆಲ್ಲರು ಸರ್ವಾಂಗ ಲಿಂಗ ಸಂಬಂಧಿಯಾಗಿರ್ದ ವೀರ ಮಾಹೇಶ್ವರನ ಚಾರಿತ್ರವು ಅವರಿಗಸಾಧ್ಯವೆಂಬುದೀಗ, ಕೊಡಗ ಉಳಿಯಿತ್ತು ಆ ಕೊಡಗವ ನಾಡಿಸಿಕೊಂಡುಂಬ ಜೋಗಿಗಳಿಗೇಕೆ ಆರೂಢನ ಸುದ್ದಿ ನಿಷ್ಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೧೬

ತಮಂಧವೆಂಬ ಕೊಪ್ಪರಿಗೆಯಲ್ಲಿ ತಾರಾ ಮಂಡಲದ ಉದಕವ ತು
ಮಹಂಧಕರದಿಂದುರುಹಲಾಗಿ ದಾವಾನಲವೆದ್ದಿತ್ತು
ವಿಶ್ವಾಸ ಭಕ್ತಿಯೆಂಬ ಅಟ್ಟೆ ಕಳಿಯನಿಕ್ಕಿ ಚಿತ್ತಶುದ್ಧದ ಕೈಯಲ್ಲಿ ಒರಸಲಾಗಿ
ರುದ್ರನ ಜಡೆಯು ಮಣ್ಣು ಬಿಟ್ಟಿತ್ತು, ಮಂದಿರಕ್ಕೊಳಗಾಯಿತ್ತು,
ಮಣ್ಣು ಬಿಟ್ಟು ಮಂಡೆ ಚೆನ್ನಾಯಿತ್ತು, ಮಂಡೆಯ ಹತ್ತಿ ನೋಡಲು
ಮೂರು ಮಂಡಲ ಕಾಣಲಾಯಿತ್ತು;
ಒಂದು ಮಂಡಲ ಉಪದೇಶವ ಹೇಳುವ ಗುರುವಿನ ಬಾಯ ನುಂಗಿತ್ತು,
ಮಧ್ಯದ ಮಂಡಲ ಶುದ್ಧವೆಂದು ಕೊಟ್ಟ ಲಿಂಗವ ಗರ್ಭೀಕರಿಸಿತ್ತು
ಬಟ್ಟಬಯಲ ಕಟ್ಟಕಡೆಯ ಮಂಡಲ ಸುತ್ತಿತ್ತು
ಜಂಗಮವ ನಿಷ್ಠೆಯಿಂದ ಪೂಜಿಸುವ ಭಕ್ತರ ಬಟ್ಟೆಯ ಹಳು ಹತ್ತಿತ್ತು
ಆ ಬಟ್ಟೆಯ ಹೊಲಬು ತಪ್ಪಿ ಸುತ್ತಿಯಾಡುತ್ತಿಹ—
ಸದ್ಭಕ್ತರಿಗಿನ್ನೆತ್ತಣ ಮುಕ್ತಿಯೊ ನಿಷ್ಕಳಂಕ ಮಲ್ಲಿಕಾರ್ಜುನಾ !

ಟೀಕು:— ಅಜ್ಞಾನ ಸ್ವರೂಪವಾದ ದೇಹದಲ್ಲಿರ್ದ ಆತ್ಮಂಗೆ ಶಿವಜ್ಞಾನೋದಯವಾಗಲು ಚಿದಾಕಾಶದಲ್ಲಿರ್ದ ಪರಮಾನಂದ ಜಲವು ಆ ದೇಹದಲ್ಲಿ ಪರಿ

ಪೂರ್ಣವಾಗಿ ವೇದಿಸಿತ್ತೆಂಬುದೀಗ, ತಮಂಧವೆಂಬ ಕೊಪ್ಪರಿಗೆಯಲ್ಲಿ ತಾರಾಮಂಡಲದ ಉದಕವ ತುಂಬಿ ಎಂಬ ಶಬ್ದಕ್ಕರ್ಥ. ಅಂತು ತನ್ನ ಸರ್ವಾಂಗದಲ್ಲಿ ಪರಮಾನಂದ ಜಲವನೊಳಕೊಂಡಿರ್ದ ಶರಣನು ಪರಿಪೂರ್ಣ ಜ್ಞಾನದ ಪರವಶದಿಂ ತನ್ನ ನಿಜಸ್ವರೂಪವ ಅರಿಯುತ್ತಿರಲಾಗಿ ಜ್ಞಾನಾಗ್ನಿ ಸ್ವರೂಪವಾದ ಮಹಾಘನ ಲಿಂಗವು ಪ್ರಭಾವಿಸಿತ್ತೆಂಬುದೀಗ, ಮಹಾಂಧಕಾರದಿಂದುರುಹಲಾಗಿ ದಾವಾನಲ ವೆದ್ದಿತ್ತು ಎಂಬ ಶಬ್ದಕ್ಕರ್ಥ. ಆ ಸಚ್ಚಿದಾನಂದ ಸ್ವರೂಪವಾದ ಪರಬ್ರಹ್ಮವೆ ಗುರು-ಲಿಂಗ-ಜಂಗಮ ಸ್ವರೂಪವಾಯಿತ್ತೆಂಬುದೆ ವಿಶ್ವಾಸ-ತನು-ಮನ-ಧನವ ತ್ರಿವಿಧ ಮುಖದಲ್ಲರ್ಪಿಸುವದೆ ಭಕ್ತಿ; ಇಂತಪ್ಪ ಭಕ್ತಿ-ವಿಶ್ವಾಸವಿಡಿದು ಆಚರಿಸುತ್ತಿರ್ದ ಶರಣನೆಂಬುದೀಗ, ವಿಶ್ವಾಸ ಭಕ್ತಿಯೆಂಬ ಅಟ್ಟಕಳಿಯನಿಕ್ಕಿ ಎಂಬ ಶಬ್ದಕ್ಕರ್ಥ. ಅಂತು ಭಕ್ತಿವಿಡಿದಾಚರಿಸುತ್ತಿರ್ದ ಶರಣನು ಕುಚಿತ್ತವಳಿದು ಸುಚಿತ್ತವೆಂಬ ಪಸ್ತದ ಒರಸಲಾಗಿ ರುದ್ರನೆಂದೊಡೆ ತಮೋಗುಣ ಸಂಬಂಧವಾದ ಜೀವನು; ಅಂತಪ್ಪ ಜೀವನ ಜೀವೋಹಂ ಭಾವದ ಅಜ್ಞಾನವು ನಷ್ಟವಾಯಿತ್ತು ಮರ್ದಿಸಿದನೆಂಬುದೀಗ, ಚಿತ್ತ ಶುದ್ಧದ ಕೈಯಲ್ಲಿ ಒರಸಲಾಗಿ ರುದ್ರನ ಜಡೆಯು ನುಣ್ಣಬಿಟ್ಟಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹಭಾವವಳಿದ ಜ್ಞಾನಲಾತ್ಮನು ಮಹಾನುಭಾವಾಂತರಂಗದಲ್ಲಿ ಚೈತನ್ಯಸ್ವರೂಪವಾದ ಪ್ರಾಣಲಿಂಗದಲ್ಲಿ ವಿಶ್ರಾಂತಿಯ ನೆಯ್ದಿತ್ತೆಂಬುದೀಗ, ಮಂದಿರಕ್ಕೊಳಗೊಳಗಾಯಿತ್ತು ಎಂಬ ಶಬ್ದಕ್ಕರ್ಥ. ಅಂತು ಅಜ್ಞಾನ ನಿವೃತ್ತಿಯಾಗಿ ನಿರ್ಮಲವಾದ ಸುಜ್ಞಾನವೇ ಪ್ರಭಾವಿಸುತ್ತಿಹದೆಂಬುದೀಗ, ಮಣ್ಣುಬಿಟ್ಟು ಮಂಡೆ ಚನ್ನಾಯಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಪರಿಪೂರ್ಣ ಜ್ಞಾನಾರೂಢನಾದ ಶರಣನು ಸುಜ್ಞಾನ ದೃಷ್ಟಿಯಿಂದ ನೋಡುತ್ತಿರಲು ತ್ಯಾಗಾಂಗ-ಭೋಗಾಂಗಯೋಗಾಂಗವೆಂಬ ತ್ರಯಾಂಗದಲ್ಲಿ ಸಂಬಂಧವಾದ ಇಷ್ಟ-ಪ್ರಾಣ-ಭಾವ ಲಿಂಗವ ಸುಜ್ಞಾನ ದೃಕ್ಕಿಂದ ನಿರೀಕ್ಷಿಸುತ್ತಿರ್ದನೆಂಬುದೀಗ, ಮಂಡೆಯ ಹತ್ತಿ ನೋಡಲಾಗಿ ಮೂರು ಮಂಡಲ ಕಾಣಲಾಯಿತ್ತು ಎಂಬ ಶಬ್ದಕ್ಕರ್ಥ. ತ್ಯಾಗಾಂಗವು ಸುಜ್ಞಾನ ಬೋಧೆಯ ಬೋಧಿಸುವ ಜ್ಞಾನಗುರುವಿನ ಶಿವಾಪೇಕ್ಷೆಯನವಗ್ರಹಿಸಿಕೊಂಡು ತೋರುತ್ತಿಹುದೆಂಬುದೀಗ, ಒಂದು ಮಂಡಲ ಉಪದೇಶವ ಹೇಳುವ ಗುರುವಿನ ಬಾಯನುಂಗಿತ್ತು ಎಂಬ ಶಬ್ದಕ್ಕರ್ಥ. ಭೋಗಾಂಗವು ಶ್ರೀಗುರು ನಿರ್ಮಲವೆಂದು ಕೊಟ್ಟ ಮಹಾಘನಲಿಂಗವನೊಳಕೊಂಡು ತೋರುತ್ತಿಹುದೆಂಬುದೀಗ, ಮಧ್ಯದ ಮಂಡಲ ಶುದ್ಧವೆಂದು ಕೊಟ್ಟ ಲಿಂಗವ ಗರ್ಭೀಕರಿಸಿತ್ತು ಎಂಬ ಶಬ್ದಕ್ಕರ್ಥ. ನಿರಾಕಾರವಾದ ಕಟ್ಟಕಡೆಯ ಯೋಗಾಂಗ ಸ್ಥಲವು ಚೈತನ್ಯ ಸ್ವರೂಪವಾದ ಸುಜ್ಞಾನ ಜಂಗಮ ಲಿಂಗವ ನವಗ್ರಹಿಸಿತ್ತೆಂಬುದೀಗ, ಬಟ್ಟಬಯಲಕಟ್ಟಕಡೆಯ ಮಂಡಲ ಸುತ್ತಿತ್ತು ಜಂಗಮವ ನಿಷ್ಠೆಯಿಂದಲೆಂಬ ಶಬ್ದಕ್ಕರ್ಥ. ಇಂತಪ್ಪ ಗುರು-ಲಿಂಗ-ಜಂಗಮದಲ್ಲಿ ಭಕ್ತಿ ನೈಷ್ಠೆಯಿಂದಾಚರಿಸಲರಿಯದೆ ಗುರು-ಲಿಂಗ-ಜಂಗಮವ ಭಿನ್ನವಿಟ್ಟರ್ಚನೆಯ ಪೂಜನೆಯ ದಾಸೋಹವ ಮಾಡಿ ಖಂಡಿತ ಫಲಂಗಳ ಭಿನ್ನ ಭಕ್ತರೆಲ್ಲರೂ ಸಂಸಾರ ಪ್ರಪಂಚೆಂಬ ಹಳುಹಿನಲ್ಲಿ ಸಿಲ್ಕಿ ಸತ್ಪಥ ಮಾರ್ಗಕ್ಕೆ ತಪ್ಪಿ ಭವರಾಟಳದಲ್ಲಿ ತಿರುಗಾಡುತ್ತಿಹ ದ್ವೈತಿಗಳಿಗೆ ನಿಜಮೋಕ್ಷವಿಲ್ಲವೆಂಬುದೀಗ,

ಪೂಜಿಸುವ ಭಕ್ತರ ಬಟ್ಟೆ ಹುಳುಪತ್ತಿತ್ತು ಆ ಬಟ್ಟೆಯು ಹೊಲಬು ತಪ್ಪಿ ಸುತ್ತಿಯಾಡುತ್ತಿಹ ಸದ್ಭಕ್ತರಿಗಿನ್ನೆತ್ತಣ ಮುಕ್ತಿಯೋ ನಿಷ್ಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೧೭

ಮಡಕೆ ಕಾವುದಕ್ಕೆ ಮುನ್ನವೆ ಜಲ ಕಾದುಕ್ಕಿತ್ತು,
ಜಲ ಉಕ್ಕುವದಕ್ಕೆ ಮುನ್ನವೆ ಅಕ್ಕಿ ಬೆಂದಿತ್ತು,
ಉಂಬುದಕ್ಕೆ ಮುನ್ನವೆ ವಾಗರಮಿಕ್ಕಿತ್ತು
ಮಿಕ್ಕೋಗರವ ನಾರೋಗಿಸಿದವರು ಹೊಲಬುಗೆಟ್ಟರು
ಎನಗಿನ್ನು ಹೊಲಬಾವುದೋ ಎನಗಾದರಿಲ್ಲ ನಿಷ್ಕಳಂಕ
ಮಲ್ಲಿಕಾರ್ಜುನಾ !

**ಟೀಕು:**— ಪರಿಪೂರ್ಣ ಜ್ಞಾನಾಗ್ನಿಯಿಂ ಚಿತ್ಸ್ವರೂಪನಾದ ಶರಣನ ಸರ್ವಾಂಗವು ದಗ್ಧವಾದಾಕ್ಷಣವೆಂಬುದೀಗ, ಮಡಕೆ ಕಾವುದಕ್ಕೆ ಮುನ್ನವೆ ಎಂಬ ಶಬ್ದಕ್ಕರ್ಥ. ಅಂತು ಸರ್ವಾಂಗವು ದಗ್ಧವಾದ ಶರಣನ ಮನಸ್ಸು ಸುಜ್ಞಾನ ಪ್ರಕಾಶದಲ್ಲಿ ಸಮರಸವಾಗಲೊಡನೆ ಆ ಸತ್ತೆಂಬ ತಂಡಿಲು ಸುಜ್ಞಾನಾಗ್ನಿಯಲ್ಲಿ ಸಮರಸಪಾಕ-ವಾಯಿತ್ತೆಂಬುದೀಗ, ಜಲಕಾದುಕ್ಕಿತ್ತು ಜಲ ಉಕ್ಕುವದಕ್ಕೆ ಮುನ್ನವೆ ಅಕ್ಕಿ ಬೆಂದಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ರೂಪವಾದ ಪರತತ್ತ್ವ ಪ್ರಸಾದವನು ಶರಣ ಸ್ವೀಕರಿಸಿದಾಕ್ಷಣವೆ ಶರಣ ಸತಿ ಲಿಂಗ ಪತಿಯೆಂಬು ಭಯು ಳಿದು ಒಂದೆ ಪರಬ್ರಹ್ಮವಾಗಿ ತೋರುತ್ತಿಹನೆಂಬುದೀಗ, ಉಂಬುದಕ್ಕೆ ಮೊದ ವಾಗರ ಮಿಕ್ಕಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಉಳಿಮೆಯು ಸ್ವರೂಪವಾದ ಪ ತತ್ತ್ವ ಪ್ರಸಾದವನು ಶಿವಭಾವ ಘಟಿಸಿದ ಸಲಕರಣಂಗಳು ಸದ್ವಿವೇಕಮುಖದಿ ಸ್ವೀಕರಿಸಲು ಅಲ್ಲಿ ಖಂಡಿತ ಹೊಲಬು ನಾಸ್ತಿಯಾಗಿ ಮೋಕ್ಷಾಪೇಕ್ಷನಾ ಮೋಕ್ಷಾಪೇಕ್ಷನಾಗಿರ್ದನೆಂಬುದೀಗ, ಮಿಕ್ಕೋಗರವ ನಾರೋಗಿಸಿದವರು ಹೊ ಬುಗೆಟ್ಟರು ಎನಗಿನ್ನು ಹೊಲಬಾವುದೊ ಎನಗಾಪಕರಿಲ್ಲ ನಿಷ್ಕಳಂಕ ಮಲ್ಲಿ ಜುರ್ನಾ ಎಂಬ ಶಬ್ದಕ್ಕರ್ಥ.

೧೮

ಏರಿ ನೀರು ಕುಡಿಯಿತ್ತು ಬೇರು ಬೀಜವ ನುಂಗಿತ್ತು
ಆರೈಕೆಯ ಮಾಡುವ ತಾಯಿ ಧಾರುಣಿಯಲ್ಲಿ ಕೊರಳ ಕೊಯಿದಳು
ಮಗು ಸತ್ತು ಆ ಗೊರಳು ಬಿಡದು ನಿಷ್ಕಳಂಕ ಮಲ್ಲಿಕಾರ್ಜುನಾ !

**ಟೀಕು:**— ಚಿತ್ ಸ್ವರೂಪನಾದ ಶರಣನ ಆಚಾರಾಂಗದಲ್ಲಿ ಪರಮಾನಂದ ಜಲವೆ ತುಂಬಿತ್ತೆಂಬುದೀಗ, ಏರಿ ನೀರು ಕುಡಿಯಿತ್ತು ಎಂಬ ಶಬ್ದಕ್ಕರ್ಥ. ಅಂತು ಪರಮಾನಂದ ಜಲವನೊಳಕೊಂಡ ಶರಣನ ಬೇರೆಂದೊಡೆ ಮೂಲಜ್ಞಾನ. ಪ್ರಕಾಶಬೀಜವೆಂದೊಡೆ ಸಕಲ ತತ್ತ್ವಂಗಳಿಗೆ ಕಾರಣವಾದ ಮಹಾ ಘನಲಿಂಗವು ಅಂತಪ್ಪ ಮಹಾಘನ ಲಿಂಗವನು ಆ ಮೂಲಜ್ಞಾನ ಪ್ರಕಾಶವವಗ್ರಹಿಸಿತ್ತೆಂಬುದೀಗ, ಬೇರು ಬೀಜವ ನುಂಗಿತ್ತು ಎಂಬ ಶಬ್ದಕ್ಕರ್ಥ. ಅಂತು ಮೂಲ ಜ್ಞಾನ ಪ್ರಕಾಶವವಗ್ರಹಿಸಲು ಸಕಲ ಪ್ರಪಂಚು ನಿವೃತ್ತಿಮಾಡಿ ಲಿಂಗಾಂಗ ಸಂಬಂಧದ

ಭಕ್ತಿಯೋಗವ ತೋರಿ ರಕ್ಷಿಸುತ್ತಿರ್ದ ಚಿತ್ ಸ್ವರೂಪವಾದ ಶ್ರೀಗುರು ಆ ದೇಹ ಸಂಬಂಧಿಯಾಗಿರ್ದ ಆತ್ಮನ ಅಪೃಥ ಕಂಠವ ಛೇದಿಸಿ ಪೃಥಭಾವವ ನೆಲೆಗೊಳಿಸಿದನೆಂಬುದೀಗ, ಆರೈಕೆಯ ಮಾಡುವ ತಾಯಿ ಧಾರುಣಿಯಲ್ಲಿ ಕೊರಳ ಕೊಯಿದಳು ಎಂಬ ಶಬ್ದಕ್ಕರ್ಥ. ಅಂತು ಶರಣನ ಮನೋವರ್ತನೆಯಳಿದು ಉನ್ಮನಿ ತತ್ವ ಸ್ವರೂಪವನೆಯ್ದಿ ಶಿವೋಹಂ ಎನುತ್ತಿಹುದೆಂಬುದೀಗ, ಮಗು ಸತ್ತು ಆ ಗೊರಳು ಬಿಡದು ನಿಷ್ಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೧೯

ಮಹಾ ಜಗವು ಪ್ರಳಯವಹಲ್ಲಿ ಮಣ್ಣ ಮೊರಡಿ ಕದಡಿದುದಿಲ್ಲ
ಮಹಾ ಹೇತು ದಹನದವಲ್ಲಿ ಹುಲ್ಲು ಮೊದೆ ಬೆಂದುದಿಲ್ಲ,
ಬಲ್ಲಿದರೆಲ್ಲರು ಕಾದಿ ಮಡಿವಲ್ಲಿ ಹಂದೆ ಹುಯ್ಯಲಲ್ಲಿರ್ದು ಅಂಜಿದುದಿಲ್ಲ
ಲಿಂಗವ ಹಿಡಿದವರೆಲ್ಲರೂ ಒಂದ ಮೆಟ್ಟಿ ಒಂದ ನರಿದು ಸಂಗವ ಮಾಡುವಾಗ
ಇದರಂದವನೇನೆಂದರಿಯೆ, ನಿಷ್ಕಳಂಕ ಮಲ್ಲಿಕಾರ್ಜುನಾ !

**ಟೀಕು:**— ಶಿವಜ್ಞಾನೋದಯವಾದ ಶರಣನು ಸಕಲಕರಣಂಗಳ ಸುಜ್ಞಾನ ಪ್ರಕಾಶದಿಂ ಸಂಪರಿಸಿ ಶ್ರೀಗುರು ಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧವಾಗಿ ಸಕಲ ಕರಣಂಗಳ ಚಿದ್ಘನಲಿಂಗದಲ್ಲಿ ಸಮರಸೈಕ್ಯವ ಮಾಡಿದನೆಂಬುದೀಗ, ಮಹಾ ಗವು ಪ್ರಳಯವಹಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಚಿತ್‌ಪ್ರಕಾಶವಾದ ಕಿವಂಗದಲ್ಲಿ ತೋರುವ ಚಿದಹಂಕಾರವೆಂಬ ಮೊರಡಿ ಭಿನ್ನವಾದುದಿಲ್ಲವೆಂಬುದೀಗ ಮಣ್ಣಮೊರಡಿ ಕದಡಿದುದಿಲ್ಲವೆಂಬ ಶಬ್ದಕ್ಕರ್ಥ. ಆ ಚಿದಹಂಕಾರ ಸ್ವರೂಪನಾದ ರಣನ ಮಹಾಜ್ಞಾನಾಗ್ನಿ ಪ್ರಕಾಶದಿಂ ಭವಾರಣ್ಯದ ಸ್ಥಲವದಲ್ಲಿ ಪಂಚ ವಿಷಯ ಬಂಧನದ ದೇಹವು ಭಕ್ತಿಯಿಂದ ಲಿಂಗಕ್ಕರ್ಪಿತವಾಗಿ ಪ್ರಸಾದಕಾಯವಾಗುಳಿತ್ತಾಗಿ ತಾಪತ್ರಯಾಗ್ನಿಯಿಂ ದಗ್ಧವಾಗದೆಂಬುದೀಗ, ಮಹಾಹೇತು ದಹನಹಲ್ಲಿ ಹುಲ್ಲ ಮೊದೆ ಬೆಂದುದಿಲ್ಲವೆಂಬ ಶಬ್ದಕ್ಕರ್ಥ. ಅಂತು ನಾ ಬಲ್ಲೆ ಬಲ್ಲಿದರೆಂಬ ಾಗಾದ್ವೈತಿಗಳೆಲ್ಲರು ಅಹಂಬ್ರಹ್ಮವೆಂಬ ದ್ವೈತಜ್ಞಾನದಿಂದೊಲಿದು ದೇಹಾದಿ ಪ್ರಪಂಚಿನಲ್ಲಿ ಲಯವನೆಯ್ದುವಲ್ಲಿ ಸರ್ವ ಭಯ-ಭೀತಿ-ಭೃತ್ಯಾಕಾರದಿಂದೊಪ್ಪುತ್ತಿರ್ದ ಶರಣ ಕಾಲ-ಕಾಮಾದಿಗಳ ಜಯಿಸಿ ನಿಷ್ಟಾಸ್ವರೂಪವಾಗಿರ್ದನೆಂಬುದೀಗ, ಬಲ್ಲಿದರೆಲ್ಲರು ಕಾದಿ ಮಡಿವಲ್ಲಿ ಹಂದೆಹುಯ್ಯಲಲ್ಲಿರ್ದು ಅಂಜಿದುದಿಲ್ಲವೆಂಬ ಶಬ್ದಕ್ಕರ್ಥ. ಕರಸ್ಥಲದಲ್ಲಿ ಲಿಂಗವ ಭಿನ್ನವಿಟ್ಟು ಧರಿಸಿದವರೆಲ್ಲರು ಹೃದಯ ಕಮಲ ಕರ್ಣಿಕಾಮಧ್ಯದಲ್ಲಿ ಚೈತನ್ಯಸ್ವರೂಪವಾದ ಪ್ರಾಣಲಿಂಗದಲ್ಲಿ ಬೆಳಸಿಹೆನೆಂದು ಲಕ್ಷವಿಟ್ಟು ಅರಸುತ್ತಿಹರು ಅವರಿಗೆ ನಿರ್ಲಕ್ಷವಾಯಿತ್ತು, ಪರಬ್ರಹ್ಮವೆಂಬುದೀಗ, ಲಿಂಗವ ಹಿಡಿದವರೆಲ್ಲರೂ ಒಂದಮೆಟ್ಟಿ ಒಂದನರಿದು ಸಂಗವ ಮಾಡುವಾಗ ಎಂಬ ಶಬ್ದಕ್ಕರ್ಥ. ಇಂತಪ್ಪ ದ್ವೈತವ ನಿವೃತ್ತಿಮಾಡಿ ಸರ್ವಾಂಗಲಿಂಗ ಸಂಬಂಧಿಯಾಗಿ ಮಹಾಘನ ಲಿಂಗದಲ್ಲಿ ಸಮರಸೈಕ್ಯವಾದನೆಂಬುದೀಗ, ಇದರಂದವನೇನೆಂದು ಅರಿಯೆ ನಿಷ್ಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ,

## ೨೦

ಮಗು ಸತ್ತು ಕೊರಳ ಕುಗ್ಗದು, ಅಂಗಳಾರದು ಬಾಯು ಬಗೆ ಹಿಂಗದು
ಇನ್ನಾವ ನೇಣ ಹಾಕುವೆ ಕೊರಳಿಂಗೆ ?
ಒಂದು ನೇಣಿನಲ್ಲಿ ಸಂದೇಹ ಬಿಡದು, ಎರಡು ನೇಣಿನಲ್ಲಿ ಹಿಂಗಿ ಹೋಗದು,
ಮೂರು ನೇಣಿನಲ್ಲಿ ಮುಗುತಾಯಾಗುವಾಗದು ಹಲವು ನೇಣಿನಲ್ಲಿ-
ಕಟ್ಟ್ಯು ಒಡದ ಕೂಸು ಅದಕ್ಕೆ ಒಲವರವೇಕೆ ನಿಷ್ಕಳಂಕ ಮಲ್ಲಿಕಾರ್ಜುನಾ ?

**ಟೀಕು:** — ಸುಜ್ಞಾನೋದಯವಾಗಿ ಶ್ರೀ ಗುರು ಕಾರುಣ್ಯದಿಂದ ಸರ್ವಾಂಗ ಲಿಂಗ ಸಂಬಂಧವಾದ ಶರಣನ ಮನವಳಿದು ಉನ್ಮನಿ ತತ್ವ ಸ್ವರೂಪವನೆಯ್ದಲು ಅಂತಪ್ಪ ಉನ್ಮನಿ ತತ್ವಸ್ವರೂಪವಾದ ಮನಸ್ಸು ನಿಜದಲ್ಲಿ ನಿಂದಿತ್ತೆಂಬುದೀಗ, ಮಗು ಸತ್ತು ಎಂಬ ಶಬ್ದಕ್ಕರ್ಥ. ಅಂತು ನಿಜದಲ್ಲಿ ನಿಂದ ಮನಸ್ಸಿನ ಶಿವೋಹಂ-ಶಿವೋಹಂ ಎಂಬ ವೃಥಕಂಠ ನಿರ್ಧರವಾಯಿತ್ತೆಂಬುದೀಗ, ಕೊರಳು ಕುಗ್ಗದು ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣನು ಪರಶಿವ ತತ್ವದಲ್ಲಿ ಸಮರಸೈಕ್ಯವನೆಯ್ದಬೇಕೆಂಬ ಶಿವಾಪೇಕ್ಷೆಯು ಮುಂದುಗೊಂಡಿರ್ದನೆಂಬುದೀಗ, ಅಂಗುಳಾರದು ಎಂಬ ಶಬ್ದಕ್ಕರ್ಥ. ಅಂತು ಶಿವಾಪೇಕ್ಷೆಯು ಮುಂದುಗೊಂಡಿರ್ದ ಶರಣನ ಜಿಹ್ವಾಗ್ರದಲ್ಲುಚ್ಚರಿಸುವ ಶಿವಮಂತ್ರ ಸ್ಮರಣೆಯು ಉನ್ಮನಿಗೆ ಸಹ ಹರುಷಾನಂದದಲ್ಲಿರ್ದಿತ್ತೆಂಬುದೀಗ, ಬಾಯು ಬಗೆ ಹಿಂಗದು ಎಂಬ ಶಬ್ದಕ್ಕರ್ಥ. ಆ ಹರುಷಾನಂದದಲ್ಲಿರ್ದ ಸದ್ವಿವೇಕ ಸ್ವರೂಪವಾದ ಮನಸ್ಸಿನ ವೃಥಕಂಠದಲ್ಲಿ ಶಿವಾದ್ವೈತ ಭಕ್ತಿಯು ಸಂಬಂಧವ ಮಾಡಿದ ಶರಣನೆಂಬುದೀಗ, ಇನ್ನಾವ ನೇಣ ಹಾಕುವೆ ಕೊರಳಿಂಗೆ ಎಂಬ ಶಬ್ದಕ್ಕರ್ಥ. ಅಂತಪ್ಪ ಶಿವಾದ್ವೈತ ಭಕ್ತಿಯಲ್ಲಿ ಸಂಬಂಧವಾದ ಮನಸ್ಸಿನಲ್ಲಿ ನಾನೇ ಶಿವನೆಂಬ ಸಂಕಲ್ಪ ತೋರುತ್ತಿಹುದೆಂಬುದೀಗ, ಒಂದು ನೇಣಿನಲ್ಲಿ ಸಂದೇಹ ಬಿಡದು ಎಂಬ ಶಬ್ದಕ್ಕರ್ಥ. ಅಂತಪ್ಪ ಮನಸ್ಸು ಇಷ್ಟ-ಪ್ರಾಣಲಿಂಗದಲ್ಲಿ ಕ್ರಿಯಾಜ್ಞಾನವಿಡಿದಾಚರಿಸುತ್ತಿಹದಲ್ಲದೆ ನಿಷ್ಪತ್ತಿಯಾಗದೆಂಬುದೀಗ, ಎರಡು ನೇಣಿನಲ್ಲಿ ಹಿಂಗಿ ಹೋಗದು ಎಂಬ ಶಬ್ದಕ್ಕರ್ಥ. ಆ ಸದ್ವಿವೇಕ ಸ್ವರೂಪವಾದ ಮನಸ್ಸು ತ್ರಿವಿಧ ಲಿಂಗದಲ್ಲಿ ಕ್ರಿಯಾಜ್ಞಾನವಿಡಿದು ಆಚರಿಸುತ್ತಿಹುದಲ್ಲದೆ ಅವು ನಿಷ್ಪತ್ತಿಯಾಗಲಿಲ್ಲವೆಂಬುದೀಗ, ಮೂರು ನೇಣಿನಲ್ಲಿ ಮುಗತಾಯವಾಗದು ಎಂಬ ಶಬ್ದಕ್ಕರ್ಥ. ಅಂತಪ್ಪ ಉನ್ಮನಿ ತತ್ವ ಸ್ವರೂಪವಾದ ಮನಸ್ಸು ಅಂಗಸ್ಥಲ ನಲವತ್ತುನಾಲ್ಕು, ಲಿಂಗಸ್ಥಲ ಐವತ್ತೇಳು ಅಂತು ಪಿಂಡಾದಿ ಜ್ಞಾನ ಶೂನ್ಯಾಂತವಾದ ನೂರೊಂದು ಸ್ಥಲಕುಳಂಗಳಲ್ಲಿ ಚರಿಸುತ್ತಿಹುದು ಅದಕ್ಕೆ ಫಲಪದಂಗಳು ನಾಸ್ತಿಯಾಗಿ ಮಹಾಘನಲಿಂಗದಲ್ಲಿ ಏಕಾರ್ಥವಾಯಿತ್ತೆಂಬುದೀಗ, ಹಲವು ನೇಣಿನಲ್ಲಿ ಕಟ್ಟ್ಯು ಒಡದು ಕೂಸು ಅದಕ್ಕೆ ಒಲವರವೇಕೆ ನಿಷ್ಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

**ಇತಿ ಶಿವಂ**